ವಿಷಯಾನುಕ್ರಮಣಿಕೆ

ಅಧ್ಯಾತ್ಮಗ್ರಂಥಾವಳಿ

# ಶಾಂಕರವೇದಾಂತಸಾರ

ಶ್ರೀಶಂಕರಭಗವತ್ಪಾದರವರ ವೇದಾಂತಪ್ರಕ್ರಿಯೆಯ ಸಾರವನ್ನು ಪ್ರಸ್ಥಾನತ್ರಯಭಾಷ್ಯಗಳ ಆಧಾರದಿಂದ ಹಿಂಡಿಟ್ಟಿರುವ ಗ್ರಂಥ

ಬರೆದವರು :

ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ : ೯೮

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ

೨೦೦೦

# ಮುನ್ನುಡಿ

ಈ ಗ್ರಂಥವನ್ನು ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ತುರೀಯಾಶ್ರಮವನ್ನು ಸ್ವೀಕರಿಸಿದ (1948) ಮೊದಲನೆಯ ಚಾತುರ್ಮಾಸ್ಯದಲ್ಲಿ ಬರೆಯುವದಕ್ಕೆ ಪ್ರಾರಂಭಿಸಿದರು. ಆಗ್ಗೆ ಅವರು ಬಹಳಮಟ್ಟಿಗೆ ಮೌನದಲ್ಲಿಯೇ ಇರುತ್ತಿದ್ದರು; ವೇದಾಂತಪಾಠ, ಭಾನುವಾರದ ಉಪನ್ಯಾಸಗಳು - ಇವುಗಳಲ್ಲದೆ ಅವರು ಮಾತಾಡುವ ಸಂದರ್ಭವೇ ಇರುತ್ತಿರಲಿಲ್ಲ. ಬೆಳಗಿನ ಆಹ್ನಿಕವಾದ ಬಳಿಕ ವೇದಾಂತಪಾಠಗಳನ್ನು ತಮ್ಮ ಮನನಕ್ಕಾಗಿಯೇ ಬರೆದುಕೊಳ್ಳುತ್ತಿದ್ದರು. ಗ್ರಂಥವು ವಿರೋಧಿಸಂವತ್ಸರದ ಚೈತ್ರ ಶುದ್ಧದಲ್ಲಿ ಮುಗಿಯಿತಾದರೂ ಅದನ್ನು ಪ್ರಕಾಶಗೊಳಿಸುವ ಯೋಚನೆಯೇ ಬರಲಿಲ್ಲ. ಇತ್ತೀಚಿಗೆ ಶ್ರೀಗಳವರು **'ಶಂಕರಭಗವತ್ಪಾದರ ಸರ್ವಸಮ್ಮತೋಪದೇಶಗಳು'** ಎಂಬ ಹೆಸರಿನಿಂದ ಹುಬ್ಬಳ್ಳಿಯಲ್ಲಿ ಚಾತುರ್ಮಾಸ್ಯದಲ್ಲಿ ಮಾಡಿದ ಉಪದೇಶಭಾಷಣಗಳು ಪ್ರಕಟವಾದವು. ಅದರಿಂದೀಚೆಗೆ ದಾವಣಗೆರೆಯ ಚಾತುರ್ಮಾಸ್ಯವಾಸದಲ್ಲಿ ಬರೆದ **'ಶಾಂಕರವೇದಾಂತಪ್ರಕ್ರಿಯೆ'** ಎಂಬ ಗ್ರಂಥವೂ ಹೊರಕ್ಕೆ ಬಂದಿದೆ. ಆದರೆ ಇನ್ನೂ **'ಶಾಂಕರವೇದಾಂತಸಾರ'**ಕ್ಕೆ ಅಸಾಧಾರಣ ಸ್ಥಾನವಿದೆಯೆಂದು ತೋರಿದ್ದರಿಂದ ಜಿಜ್ಞಾಸುಗಳ ಉಪಯೋಗಕ್ಕಾಗಿ ಇದನ್ನು ಬೆಳಕಿಗೆ ಹಿಡಿದಿರುತ್ತೇವೆ.

ಶಂಕರವೇದಾಂತಸಿದ್ಧಾಂತದ ವಿಷಯದಲ್ಲಿರಬಹುದಾದ ತೊಡಕುಗಳನ್ನೆಲ್ಲ ಬಿಚ್ಚಿ ಅವಶ್ಯವಾಗಿ ನೆನಪಿಡಬೇಕಾದ ವಿಷಯಗಳನ್ನು ಓದುಗರ ಲಕ್ಷ್ಯಕ್ಕೆ ಬರುವಂತೆ ಮಾಡಿರುವದೊಂದು ಈ ಗ್ರಂಥದ ವೈಶಿಷ್ಟ್ಯವು. ಒಂದೊಂದು ವಿಷಯಕ್ಕೂ ಪ್ರಸ್ಥಾನತ್ರಯಭಾಷ್ಯಗಳಿಂದ ಪ್ರಮಾಣವಚನಗಳನ್ನು ಆರಿಸಿ ಸ್ಥಾನಸೂಚನೆಗಳೊಡನೆ ಮಾಡಿರುವದು ಮತ್ತೊಂದು ವೈಶಿಷ್ಟ್ಯವು. ಈ ವಚನಗಳನ್ನು ಹೀಗೆ ಒಕ್ಕಡೆಗೆ ನೇರಿಸಿರುವ ಪ್ರಯತ್ನವು ಇದೇ ಮೊದಲನೆಯದೆನ್ನಬಹುದು. ಇದರಿಂದ ವೇದಾಂತಜಿಜ್ಞಾಸುಗಳಿಗೇ ಅಲ್ಲದೆ ವಿದ್ವಾಂಸರುಗಳಿಗೂ ಮನನಕ್ಕೂ ವಿಚಾರಪ್ರಚೋದನೆಗೂ ಸಾಧನವಾಗಿರುತ್ತದೆ ಎಂದು ನಂಬಲಾಗಿದೆ.

ಗ್ರಂಥಕರ್ತರು ತಮ್ಮ ವ್ಯಾಸಂಗ-ವಿಚಾರ ಚಿಂತನೆಗಳಿಂದ ಕಂಡುಕೊಂಡ ಪರಿಶುದ್ಧ ಶಾಂಕರವೇದಾಂತೋಪದೇಶಗಳನ್ನೂ, ಪ್ರಸ್ಥಾನತ್ರಯಭಾಷ್ಯಗಳನ್ನೆಲ್ಲ ಗುರುಮುಖದಿಂದ ಅಭ್ಯಾಸಮಾಡಿ ಶಂಕರವೇದಾಂತದ ಮಜಲನ್ನು ಮುಟ್ಟಲು ಅವಕಾಶವಿಲ್ಲದಂಥ ಜಿಜ್ಞಾಸುಗಳ ಉಪಯೋಗಕ್ಕಾಗಿಯೇ ಈ ಗ್ರಂಥವನ್ನು ತಮ್ಮ ಸ್ವಾನುಭವ, ವಿಚಾರ

ಮಂಥನಗಳಿಂದ ಪರಿಷ್ಕರಿಸಿ ಇಲ್ಲಿ ನಿರೂಪಿಸಿದ್ದಾರೆ. ಆದರೆ ಭಾಷ್ಯಕಾರರ ಕಾಲದಿಂದೀಚೆಗೆ ತರ್ಕಪ್ರಧಾನವಾಗಿದ್ದು, ಶಾಂಕರೇತರ ವೇದಾಂತಗಳ ಆಚಾರ್ಯರುಗಳು ಅದ್ವೈತಸಿದ್ಧಾಂತದ ಮೇಲೆ ಆರೋಪಿಸಿರುವ ದೋಷಗಳನ್ನು ಖಂಡಿಸುವದಕ್ಕಾಗಿ ಅದೇ ತರ್ಕಸರಣಿಯಿಂದ ಉತ್ತರಿಸಿರುವ ಶಂಕರವೇದಾಂತಾನುಯಾಯಿಗಳಾದ ವ್ಯಾಖ್ಯಾನಕಾರರುಗಳ ವಿಚಾರಸರಣಿಯನ್ನೂ ಈ ಗ್ರಂಥದಲ್ಲಿ ಪರಾಮರ್ಶಿಸಿರುವದಿಲ್ಲ. ಇದರಿಂದ ಕೇವಲ ಮುಮುಕ್ಷುಗಳಾದ ತತ್ತ್ವಜಿಜ್ಞಾಸುಗಳಿಗೆ ಅನುಭವಪರ್ಯಂತವಾಗಿ ಆತ್ಮಜ್ಞಾನವನ್ನು ಪಡೆಯಲು ಈ ಗ್ರಂಥದಲ್ಲಿರುವ ವಿಚಾರಸರಣಿಯು ರಾಜಮಾರ್ಗವಾಗಿದೆ.

**ಇನ್ನು ಈ ಗ್ರಂಥವನ್ನು ಓದುವವರು ಕೇವಲ ಕುತೂಹಲ ಅಥವಾ ಪರಮತಖಂಡನೆಯ ದೃಷ್ಟಿಯಿಂದ ಅಭ್ಯಾಸಮಾಡದೆ, ತಮ್ಮ ಆತ್ಮೋದ್ಧಾರ ಹಾಗೂ ತತ್ತ್ವಜ್ಞಾನನಿಷ್ಠೆಯನ್ನು ಗುರಿಯಾಗಿರಿಸಿಕೊಂಡು ಮತ್ತೆ ಮತ್ತೆ ಅಭ್ಯಾಸಮಾಡಿದರೆ ಶ್ರೀ ಭಗವತ್ಪಾದರ ಅನುಗ್ರಹದಿಂದ ನಿಜವಾದ ನೆಲೆಯನ್ನೂ ತಲುಪಿ ಅಧ್ಯಾತ್ಮಜ್ಞಾನ ಸಂಪನ್ನರಾಗಿ ಜೀವನ್ಮುಕ್ತರಾಗಲು ಸಾಧ್ಯವಿದೆ.** ಸಂಸ್ಕೃತಭಾಷೆಯ ಪರಿಚಯವಿಲ್ಲದವರೂ-ಗ್ರಂಥಕರ್ತರು ಮೊದಲೇ ಬರೆದಿರುವ ಕನ್ನಡ ವಿವರಣೆಯನ್ನೇ ಓದಿ ಅನುಸಂಧಾನ ಮಾಡಿದರೂ ಕೃತಾರ್ಥರಾಗುವದರಲ್ಲಿ ಸಂಶಯವಿಲ್ಲ. ಹೀಗೆ ವ್ಯಾಸಂಗ ಮಾಡುವಾಗ ಒಂದೇ ಅಭಿಪ್ರಾಯದ ಇಬ್ಬರು ಸಾಧಕರು ಒಟ್ಟುಗೂಡಿ ಅಭ್ಯಾಸಮಾಡಿದರೆ ''ಏಕಸ್ತಪೋದ್ವಿರಧ್ಯಾಯೀ'' ಎಂಬ ಸುಭಾಷಿತದಂತೆ ಪರಮಪುರುಷಾರ್ಥ ಭಾಗಿಗಳಾಗುವದರಲ್ಲಿ ಸಂಶಯವಿಲ್ಲ.

ಈ ಗ್ರಂಥದ ಎರಡನೆಯ ಮುದ್ರಣದ ಪ್ರತಿಗಳೆಲ್ಲವೂ ಮಾರಾಟವಾಗಿ ಬಿಟ್ಟಿದ್ದರಿಂದ ಮತ್ತೊಮ್ಮೆ ಇದನ್ನು ಶೋಧಿಸಿ ಹಿಂದಿನಂತೆಯೇ ಪ್ರಕಟಿಸಲಾಗಿದೆ. 'ಅಧ್ಯಾತ್ಮಪ್ರಕಾಶ' ಪತ್ರಿಕೆಯಲ್ಲಿ ಭಾಗಭಾಗವಾಗಿ ಹಿಂದೆ ಪ್ರಕಟವಾಗಿದ್ದ ಈ ಗ್ರಂಥವನ್ನು ಈಗ ಡೆಮ್ಮಿ ೧/೮ ಪುಟಗಳ ಆಕಾರಕ್ಕೆ ಪರಿವರ್ತಿಸಲಾಗಿದೆ. ವೇ|| ಹೆಚ್.ಎಸ್. ಲಕ್ಷ್ಮೀ-ನರಸಿಂಹಮೂರ್ತಿಗಳು ಈ ಗ್ರಂಥದ ಪುನರ್ಮುದ್ರಣ ಕಾಲಕ್ಕೆ ಸಲಹೆಗಳನ್ನು ನೀಡಿ ಪರಿಷ್ಕರಿಸಿ ಸಹಕರಿಸಿದ್ದಾರೆ. ಎಂದಿನಂತೆ ವಾಚಕರು ಗ್ರಂಥವನ್ನು ಪ್ರೋತ್ಸಾಹಿಸುವರಾಗಿ ನಂಬಿದೆ.

ಶ್ರೀ ವಿಕ್ರಮ ಸಂವತ್ಸರ,
ಆಷಾಢ ಬಹುಳ ತ್ರಯೋದಶಿ
ಶನಿವಾರ, ತಾ|| 29-7-2000

**ಪ್ರಕಾಶಕರು**

# ವಿಷಯಗಳ ಪರಿವಿಡಿ



---------

# ಸಂಕೇತಾಕ್ಷರಗಳ ವಿವರಣೆ

| ಸಂಕೇತ | ವಿವರಣೆ |
|---|---|
| ಅ. ಭಾ. ; ಅಧ್ಯಾ. ಭಾ. | ಅಧ್ಯಾಸಭಾಷ್ಯ (ಶಾಂಕರಬ್ರಹ್ಮಸೂತ್ರಭಾಷ್ಯ) |
| ಅವ. | ಅವತರಣಿಕೆ |
| ಆ. ಧ. ಸೂ. | ಆಪಸ್ತಂಬಧರ್ಮಸೂತ್ರ |
| ಈ., ಈಶ. | ಈಶಾವಾಸ್ಯೋಪನಿಷತ್ತು |
| ಈ. ಭಾ. | ಈಶಾವಾಸ್ಯೋಪನಿಷಚ್ಛಾಂಕರಭಾಷ್ಯ |
| ಉಪ. ಸಾ. ಗದ್ಯ | ಉಪದೇಶಸಾಹಸ್ರಿ ಗದ್ಯಭಾಗ |
| ಉಪ., ಉಪ. ಸಾ. ಪದ್ಯ | ,, ಪದ್ಯಭಾಗ |
| ಐ | ಐತರೇಯೋಪನಿಷತ್ತು |
| ಐ ಭಾ. | ಐತರೇಯೋಪನಿಷದ್ಭಾಷ್ಯ |
| ಐ. ಸಂ. ಭಾ. | ಐತರೇಯಸಂಬಂಧಭಾಷ್ಯ |
| ಕ. | ಕಠೋಪನಿಷತ್ತು |
| ಕ. ಭಾ. | ಕಠೋಪನಿಷದ್ಭಾಷ್ಯ |
| ಕೇ. | ಕೇನೋಪನಿಷತ್ತು |
| ಕೇ. ಭಾ | ಕೇನೋಪನಿಷದ್ಭಾಷ್ಯ |
| ಗೀ. | ಭಗವದ್ಗೀತೆ |
| ಗೀ. ಭಾ. | ಭಗವದ್ಗೀತಾಭಾಷ್ಯ |
| ಗೌ. ಕಾ. | ಗೌಡಪಾದಕಾರಿಕೆ |
| ಗೌ. ಧ. | ಗೌತಮಧರ್ಮಸೂತ್ರ |
| ಛಾಂ. | ಛಾಂದೋಗ್ಯೋಪನಿಷತ್ತು |
| ಛಾಂ. ಭಾ. | ಛಾಂದೋಗ್ಯೋಪನಿಷದ್ಭಾಷ್ಯ |
| ಜಾ. | ಜಾಬಾಲೋಪನಿಷತ್ತು |
| ತೈ | ತೈತ್ತಿರೀಯೋಪನಿಷತ್ತು |
| ತೈ. ಆ. | ತೈತ್ತಿರೀಯಾರಣ್ಯಕ |

| | |
|---|---|
| ತೈ. ಭಾ. | ತೈತ್ತಿರೀಯೋಪನಿಷದ್ಭಾಷ್ಯ |
| ತೈ. ಭಾ. ಶೀ | ತೈತ್ತಿರೀಯಭಾಷ್ಯ ಶೀಕ್ಷಾವಲ್ಲಿ |
| ಪ್ರ. | ಪ್ರಶ್ನೋಪನಿಷತ್ತು |
| ಪ್ರ. ಭಾ. | ಪ್ರಶ್ನೋಪನಿಷದ್ಭಾಷ್ಯ |
| ಬೃ. | ಬೃಹದಾರಣ್ಯಕೋಪನಿಷತ್ತು |
| ಬೃ. ಭಾ. | ಬೃಹದಾರಣ್ಯಕೋಪನಿಷದ್ಭಾಶ್ಯ |
| ಬ್ರ. ಸೂ. | ಬಾದರಾಯಣಕೃತವೇದಾಂತಸೂತ್ರಗಳು (ಬ್ರಹ್ಮಸೂತ್ರಗಳು) |
| ಮನು. | ಮನುಸ್ಮೃತಿ |
| ಮಾಂ. | ಮಾಂಡೂಕ್ಯೋಪನಿಷತ್ತು |
| ಮಾಂ. ಕಾ. ಅ. | ಮಾಂಡೂಕ್ಯಕಾರಿಕಾ ಅಲಾತಶಾಂತಿಪ್ರಕರಣ |
| ಮಾಂ. ಕಾ. ಭಾ. ; ಕಾ. ಭಾ. | ಮಾಂಡೂಕ್ಯಕಾರಿಕಾಭಾಷ್ಯ |
| ಮುಂ. | ಮುಂಡಕೋಪನಿಷತ್ತು |
| ಮುಂ. ಭಾ. | ಮುಂಡಕೋಪನಿಷದ್ಭಾಷ್ಯ |
| ಶತ. ಬ್ರಾ. | ಶತಪಥಬ್ರಾಹ್ಮಣ |
| ಶ್ವೇ. | ಶ್ವೇತಾಶ್ವತರೋಪನಿಷತ್ತು |
| ಸೂ. ಭಾ. | ಬ್ರಹ್ಮಸೂತ್ರಶಾಂಕರಭಾಷ್ಯ |
| ಸೂ. | ಬ್ರಹ್ಮಸೂತ್ರಗಳು (ವೇದಾಂತಸೂತ್ರಗಳು) |

**ವಿ. ಸೂ. :-** ಪ್ರಸ್ಥಾನತ್ರಯ ಭಾಷ್ಯದ ಪ್ರಮಾಣವಚನಗಳ ಕೊನೆಯಲ್ಲಿ ಹಾಕಿರುವ ಸಂಖ್ಯೆಯು ಆಯಾ ಗ್ರಂಥದ ಭಾಷ್ಯ ಭಾಗವನ್ನು ಸೂಚಿಸುತ್ತದೆ.

# ಶಾಂಕರ ವೇದಾಂತ ಸಾರ

(ಗ್ರಂಥ ಪ್ರಕಟನೆಗೆ ಧನಸಹಾಯ ಮಾಡಿದ ಮಹನೀಯರುಗಳು)

ಶ್ರೀಯುತರುಗಳಾದ,

| | | | |
|---|---|---|---|
| 1. | ಅಂತರಂಗಭಕ್ತರು | ಬೆಂಗಳೂರು | ರೂ. 10,000 |
| 2. | ಶ್ರೀ ಮನೋಹರ ಯರೇಹಳ್ಳಿ (ದಾವಣಗೆರೆಯಲ್ಲಿರುವ ಎಸ್. ಗಾಯತ್ರಮ್ಮನವರ ಮೂಲಕ) | ಯು.ಎಸ್.ಎ. | ರೂ. 9,000 |
| 3. | ಕೆ.ಪಿ. ಗೋಪಾಲಕೃಷ್ಣಭಟ್ಟ (ಮಾತಾಪಿತೃಗಳಾದ ಕೆ.ಎನ್. ಪುಟ್ಟಣ್ಣಯ್ಯ ಮತ್ತು ವೆಂಕಟಸುಬ್ಬಮ್ಮ ಸ್ಮರಣಾರ್ಥ) | ಬೆಂಗಳೂರು | ರೂ. 750 |
| 4. | ಬಿ. ಪದ್ಮನಾಭಅಡಿಗ | ಬೆಂಗಳೂರು | ರೂ. 501 |
| 5. | ವೈ. ಅನಂತನಾರಾಯಣ | ಮೈಸೂರು | ರೂ. 500 |
| | | ಒಟ್ಟು | ರೂ. 20,751 |

**ಮೇಲ್ಕಂಡಂತೆ ಧನಸಹಾಯ ಮಾಡಿದ ದಾನಿಗಳಿಗೆಲ್ಲ ಕಾರ್ಯಾಲಯದ ಪರವಾಗಿ ಕೃತಜ್ಞತಾ ಪೂರ್ವಕವಾದ ವಂದನೆಗಳು.**

|| ಶ್ರೀ ||

# ಶಾಂಕರವೇದಾಂತಸಾರ

|| ಓಂ ನಮೋ ಬ್ರಹ್ಮವಿದ್ಯಾಸಂಪ್ರದಾಯಕರ್ತೃಭ್ಯೋ ನಮೋ ಗುರುಭ್ಯಃ ||

## ೧. ಮೊದಲ ಮಾತು

೧. ಶ್ರೀಶಂಕರಭಗವತ್ಪಾದರವರಿಗೆ ಸಮ್ಮತವಾದ ವೇದಾಂತದ ಸಾರವನ್ನು ಈ ಪ್ರಕರಣದಲ್ಲಿ ಬರೆಯಬೇಕೆಂದು ಸಂಕಲ್ಪಿಸಿರುವೆವು. ಭರತಖಂಡದಲ್ಲಿ ಅನೇಕ ವೇದಾಂತಿಗಳು ಆ ಮಹನೀಯರ ಹಿಂದೆಯೂ ಅವರ ಅನಂತರವೂ ವೇದಾಂತ ಗ್ರಂಥಗಳನ್ನು ರಚಿಸಿರುತ್ತಾರೆ. ಆದರೆ ಈ ಆಚಾರ್ಯರ ಸಿದ್ಧಾಂತದ ಅಸಾಧಾರಣ ಧರ್ಮಗಳು ಇಂದಿಗೂ ಅದಕ್ಕೇ ಮೀಸಲಾಗಿರುತ್ತವೆ. ಇವರ ವೇದಾಂತಸಿದ್ಧಾಂತವು ಇಂದಿಗೂ ಜೀವಂತವಾಗಿರುತ್ತದೆ, ಇಂದಿಗೂ ಜನರಿಗೆ ಇಹಪರಗಳಿಗೆ ಬೇಕಾಗಿರುವ ದಿವ್ಯ ವಿಚಾರಗಳನ್ನು ಒದಗಿಸಿಕೊಡುತ್ತಿದೆ.

ಶ್ರೀಶಂಕರಾಚಾರ್ಯರು ಮಿಕ್ಕ ಸನಾತನಾರ್ಯರಂತೆ ವೇದಪ್ರಮಾಣವನ್ನು ಒಪ್ಪಿಕೊಂಡೇ ತಮ್ಮ ಗ್ರಂಥಗಳನ್ನು ಬರೆದಿರುತ್ತಾರೆ. ಅವರ ಬರವಣಿಗೆಯು ಉಪನಿಷತ್ತುಗಳ ವ್ಯಾಖ್ಯಾನರೂಪವಾಗಿಯೇ ಇರುತ್ತದೆ. ಆದರೆ **ವೇದಾಂತವು ಈಗಲೇ ಇಲ್ಲಿಯೇ ಅನುಭವಕ್ಕೆ ಬರುವ ತತ್ತ್ವವನ್ನು ಉಪದೇಶಿಸುತ್ತದೆ** ಎಂದು ಅವರು ಹೇಳಿರುತ್ತಾರೆ; ಸಾರ್ವತ್ರಿಕವಾದ ಯುಕ್ತ್ಯನುಭವಗಳಿಗೆ ಹೊಂದುವ ತತ್ತ್ವವೇ ವೇದಾಂತದಲ್ಲಿ ಉಪದಿಷ್ಟವಾಗಿರುತ್ತದೆ- ಎಂಬುದು ಅವರ ಅಸಾಧಾರಣ ವಾದ ಅಭಿಪ್ರಾಯವು. ವೇದಾಂತಜ್ಞಾನದಿಂದ ಸಂಸಾರದ ಅನರ್ಥಗಳು ಸಂಪೂರ್ಣ ವಾಗಿ ಕಣ್ಮರೆಯಾಗುವವೆಂದು ಅವರು ಪ್ರತಿಜ್ಞೆಮಾಡಿರುತ್ತಾರೆ; ಆದ್ದರಿಂದ ಎಲ್ಲರೂ ಈ ಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಮಾಡಬಹುದು. ಈ ಆಚಾರ್ಯವರ್ಯರಿಗೆ ಶ್ರೀಗೌಡಪಾದರು, ದ್ರವಿಡಾಚಾರ್ಯರು, ಬ್ರಹ್ಮನಂದಿ-ಮುಂತಾದ ಸತ್ಸಂಪ್ರದಾಯದ ಗುರುಪರಂಪರೆಯ ಬೆಂಬಲವೂ ಇದೆ ; ಆದರೆ ಇವರು ಬರಿಯ ಸಂಪ್ರದಾಯದ ಬಲದಿಂದ ಯಾವದೊಂದು ಅರ್ಥವನ್ನೂ

ನಂಬಬೇಕೆಂದು ಎಲ್ಲಿಯೂ ಹೇಳಿಲ್ಲ. ದೋಷಯುಕ್ತವಾದ, ಅನುಭವ ವಿರುದ್ಧವಾದ, ಯಾವ ಮತವಾದರೂ ತಿರಸ್ಕರಣೀಯವು; ನಿರ್ದಿಷ್ಟವಾದ ಸರ್ವಾನುಭವಸಮ್ಮತವಾದ ಯಾವ ಮತವಾದರೂ ಆದರಣೀಯವು- ಎಂಬುದೇ ಇವರ ಅಭಿಪ್ರಾಯವು. ಹೀಗೆ ಎಲ್ಲಾ ಬಗೆಯಿಂದಲೂ ಈಗಿನ ಜಿಜ್ಞಾಸುಗಳಿಗೆ ಮೆಚ್ಚಾಗಬಹುದಾದ ಈ ಮಹನೀಯರ ವೇದಾಂತಸಿದ್ಧಾಂತದ ಸಾರವನ್ನು ಈ ಸಣ್ಣ ಗ್ರಂಥದಲ್ಲಿಟ್ಟಿರುತ್ತೇವೆ. ನೇರಾಗಿ ಶಂಕರಾಚಾರ್ಯರ ಗ್ರಂಥಗಳನ್ನೇ ಓದಿ ತಿಳಿದು ಕೊಳ್ಳಲಾರದ ಜಿಜ್ಞಾಸುಗಳಿಗೆ ಈ ಪ್ರಕರಣವು ಆದರಣೀಯವಾಗಿರುವದೆಂದು ನಮ್ಮ ನಂಬಿಕೆ.

೨. ಶ್ರೀಶಂಕರಚಾರ್ಯರವರ ವೇದಾಂತಪ್ರಕ್ರಿಯೆಯನ್ನು ಸಂಗ್ರಹಿಸಿರುವ ಹಲವು **ಪ್ರಕರಣಗಳು** ಆಗಲೆ ಸಿದ್ಧವಾಗಿರುತ್ತವೆ. ಅವುಗಳಲ್ಲಿ ಕೆಲವು ಆ ಆಚಾರ್ಯರವರೇ ಬರೆದವುಗಳೆಂದು ಪ್ರಸಿದ್ಧವಾಗಿವೆ; ಇನ್ನು ಕೆಲವು ಅವರ ಗ್ರಂಥಗಳ ವ್ಯಾಖ್ಯಾನಕಾರರ ಅನುಯಾಯಿಗಳು ರಚಿಸಿದವುಗಳಾಗಿವೆ. ಅವು ಸಂಸ್ಕೃತ ಭಾಷೆಯಲ್ಲಿರುವದರಿಂದ ಆ ಭಾಷೆಯನ್ನರಿಯದವರಿಗೆ ಅವುಗಳಿಂದ ಪ್ರಯೋಜನ ವಿಲ್ಲ. ಸಂಸ್ಕೃತವನ್ನು ಬಲ್ಲವರಿಗೂ ಅವು ನಿಸ್ಸಂದಿಗ್ಧವಾಗಿ ಶಾಂಕರವೇದಾಂತವನ್ನು ತಿಳಿಸುವಂತಿಲ್ಲ. ಏಕೆಂದರೆ ಅವುಗಳು ಒಂದಕ್ಕೊಂದು ವಿರುದ್ಧವಾದ ನಾನಾಪ್ರಕ್ರಿಯೆ ಗಳನ್ನೊಳಗೊಂಡಿವೆ; ಕೆಲವು ತರ್ಕ ಕರ್ಕಶವಾಗಿರುವ ಶೈಲಿಯಿಂದ ಕೂಡಿ ಅಲ್ಪಮತಿಗಳಿಗೆ ದುರವಗಾಹ್ಯವಾಗಿರುತ್ತವೆ. ಕನ್ನಡದಲ್ಲಿ ಈವರೆಗೆ ಬರೆದಿರುವ ಅನೇಕ ಗ್ರಂಥಗಳು ಅವುಗಳ ಪರಿವರ್ತನೆಯಾಗಿರುವದರಿಂದ ಅವುಗಳಲ್ಲಿಯೂ ಈ ದೋಷಗಳೇ ತುಂಬಿತುಳುಕುತ್ತಿವೆ. ಮತ್ತೆ ಕೆಲವು ಸ್ವತಂತ್ರವಾಗಿಯೇ ಬರೆದವುಗಳಾಗಿದ್ದರೂ ಸಂಸ್ಕೃತಪ್ರಕರಣಗಳ ನೆರಳಿನಂತೆ ಅವನ್ನೇ ಅನುಸರಿಸಿ ಬರೆದವುಗಳಾಗಿವೆ. ಈ ಯಾವ ಗ್ರಂಥಗಳಲ್ಲಿಯೂ ಶಂಕರಾಚಾರ್ಯರ ಭಾಷ್ಯ ಗಳಿಂದ ಆರಿಸಿದ ಮುಖ್ಯಾಭಿಪ್ರಾಯಗಳಿರುವದಿಲ್ಲ. ಶಾಂಕರವೇದಾಂತದ ಪ್ರಧಾನ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ತಿಳಿಸಿಕೊಡುವ ಗ್ರಂಥವಂತೂ ಈವರೆಗೆ ಯಾವ ಭಾಷೆಯಲ್ಲಿಯೂ ರಚಿತವಾಗಿಯೇ ಇರುವದಿಲ್ಲ. ಈ ಕೊರತೆಯನ್ನು ನೀಗುವದ ಕ್ಕಾಗಿ ಈ ''ಶಾಂಕರವೇದಾಂತಸಾರ'' ಗ್ರಂಥವು ರಚಿತವಾಗಿದೆ.

೩. ಈ ಗ್ರಂಥದಲ್ಲಿ ಶ್ರೀಶಂಕರಾಚಾರ್ಯರವರ ಪ್ರಸ್ಥಾನತ್ರಯಭಾಷ್ಯಗಳಿಂದ ಸಂಗ್ರಹಿಸಿರುವ ವಾಕ್ಯಗಳ ಆಧಾರದ ಮೇಲೆ ಬೇರೆಬೇರೆಯ ವಿಷಯಗಳನ್ನು ಕುರಿತು ಅನುಕ್ರಮವಾಗಿ ಬರೆದಿರುವ ಕೆಲವು ಪಾಠಗಳಿರುತ್ತವೆ. ಉಪನಿಷತ್ತುಗಳು ವೇದಾಂತ ಸಿದ್ಧಾಂತಕ್ಕೆ ಮೂಲವು; ಅವು ವೇದದಲ್ಲಿ ಒಂದು ಭಾಗವಾಗಿರುವದರಿಂದ **ಶ್ರುತಿ**

ಎನಿಸಿವೆ. ಭಗವದ್ಗೀತೆಯು ಶ್ರುತ್ಯರ್ಥವನ್ನು ವಿಶದಗೊಳಿಸುವದಕ್ಕಾಗಿ ವೇದವ್ಯಾಸರು ಬರೆದಿರುವ ಮಹಾಭಾರತದೊಳಗಿನ ಗ್ರಂಥವು; ಶ್ರುತ್ಯರ್ಥವನ್ನು ನೆನಪಿಟ್ಟು ಬರೆದದ್ದಾದ್ದರಿಂದ ಅದು **ಸ್ಮೃತಿ** ಎನಿಸಿದೆ. ವೇದಾಂತಮೀಮಾಂಸಾ ಶಾಸ್ತ್ರವು ಉಪನಿಷತ್ತುಗಳ ಸಿದ್ಧಾಂತವನ್ನು ಗೀತೆಯ ಸಮ್ಮತಿಯೊಡನೆ ಯುಕ್ತಿಯಿಂದ ನಿರ್ಣಯಿಸುವದಕ್ಕಾಗಿ ಬಾದರಾಯಣರು ಬರೆದಿರುವ ಸೂತ್ರರೂಪವಾದ ಗ್ರಂಥವು; ಆದ್ದರಿಂದ ಅದು **ನ್ಯಾಯ**ವೆನಿಸಿರುತ್ತದೆ. ಈ ಶ್ರುತಿಸ್ಮೃತಿನ್ಯಾಯಗಳು ಬೇರೆಬೇರೆಯ ಒಂದೊಂದು ದೃಷ್ಟಿಕೋಣದಿಂದ ವೇದಾಂತಸಿದ್ಧಾಂತವನ್ನು ತಿಳಿಯಪಡಿಸುವದಕ್ಕೆ ಹೊರಟಿರುವದರಿಂದ ಇವನ್ನು **ಪ್ರಸ್ಥಾನತ್ರಯ** ಎಂದು ಕರೆಯುವ ವಾಡಿಕೆಯುಂಟಾಗಿರುತ್ತದೆ. ಈ ಪ್ರಕರಣದಲ್ಲಿ ನಾವು ಪ್ರಸ್ಥಾನತ್ರಯ ಭಾಷ್ಯಗಳನ್ನೇ ಮುಖ್ಯವಾಗಿ ಪ್ರಮಾಣವಾಗಿ ಹಿಡಿದಿರುತ್ತೇವೆ. ಈ ಭಾಷ್ಯಗಳಲ್ಲಿರುವ ಉಪದೇಶಕ್ಕೆ ವಿರುದ್ಧವಾದ ಉಪದೇಶವು ಯಾವ ಗ್ರಂಥದಲ್ಲಿದ್ದರೂ ಅದು ಶಾಂಕರ ವೇದಾಂತವಲ್ಲವೆಂದು ಓದುಗರು ನಿಶ್ಚಯಿಸಬಹುದು.

೪. ಈಗಿನ ಕಾಲದಲ್ಲಿ ವೇದಾಂತವನ್ನು ಜನರಿಗೆ ತಿಳಿಸುವವರು ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸೆ- ಮುಂತಾದ **ಬೇರೆಯ ದರ್ಶನಗಳ ಪ್ರಕ್ರಿಯೆ**ಗಳನ್ನು ಬೆರೆಯಿಸಿ ಬೋಧಿಸುವದು ಹೆಚ್ಚಾಗಿ ಕಂಡುಬರುತ್ತಿದೆ. ಶಂಕರಾಚಾರ್ಯರೂ ತಮ್ಮ ಭಾಷ್ಯಗಳಲ್ಲಿ ಹೀಗೆ ಅಲ್ಲಲ್ಲಿ ಮಿಕ್ಕ ದರ್ಶನಗಳ ಮಾರ್ಗ ವನ್ನು ವೇದಾಂತದಲ್ಲಿ ಸೇರಿಸಿಕೊಂಡು ಬರೆದಿರುವದುಂಟು. **''ಪರಮತಮ್ ಅಪ್ರತಿಷಿದ್ಧಮ್ ಅನುಮತಂ ಭವತಿ''** (ಸೂ.ಭಾ.೨-೪-೧೨) ನಾವು ಸರಿಯಲ್ಲ ವೆಂದು ಖಂಡಿಸದೆ ಇರುವ ಪರಮತವನ್ನು ಒಪ್ಪಿದಂತೆ ಭಾವಿಸಬಹುದು -ಎಂಬ ತಂತ್ರಯುಕ್ತಿಯನ್ನು ಅವರು ಉಪಯೋಗಿಸಿಕೊಂಡಿರುತ್ತಾರೆ. ಆದ್ದರಿಂದ ಸಾರ ಗ್ರಹಣದೃಷ್ಟಿಯಿಂದ ಮಿಕ್ಕ ಪ್ರಕ್ರಿಯೆಗಳನ್ನು ಉಪಯೋಗಿಸುವದೇನೂ ತಪ್ಪಲ್ಲ. ಆದರೆ ವೇದಾಂತತತ್ತ್ವವನ್ನು ಬದಿಗೊತ್ತಿ ಮಿಕ್ಕ ಶಾಸ್ತ್ರಗಳನ್ನೇ ವೇದಾಂತ ವೆಂದು ಭಾವಿಸುವದಾಗಲಿ, ವೇದಾಂತಪ್ರಕ್ರಿಯೆಗೆ ವಿರುದ್ಧವಾದ ಪ್ರಕ್ರಿಯೆಗಳನ್ನು ಒಪ್ಪಿಕೊಳ್ಳುವದಾಗಲಿ ಎಂದಿಗೂ ಸರಿಯಲ್ಲ. ಆದ್ದರಿಂದ ಪ್ರಸ್ಥಾನತ್ರಯಭಾಷ್ಯದಲ್ಲಿ ಖಂಡಿಸಿರುವ ಮಿಕ್ಕ ದರ್ಶನಗಳ ಯುಕ್ತಿಗಳನ್ನು ಅಲ್ಲಲ್ಲಿ ನಾವು ತಿಳಿಸುತ್ತಾ ಹೋಗುವೆವು.

೫. ಆಚಾರ್ಯರವರ ಭಾಷ್ಯಗಳ ಅಭಿಪ್ರಾಯವನ್ನು ವಿವರಿಸುವದಕ್ಕೆ ವ್ಯಾಖ್ಯಾನಗಳೂ ಇವೆ. ಆದರೆ ಆ **ವ್ಯಾಖ್ಯಾನಗಳು** ಭಾಷ್ಯವಿರುದ್ಧವಾದ ಪ್ರಕ್ರಿಯೆ ಗಳನ್ನೂ ಬಳಸಿಕೊಂಡಿರುತ್ತವೆ. ಬೃಹದಾರಣ್ಯಕ, ತೈತ್ತಿರೀಯ-ಈ ಉಪನಿಷತ್ತುಗಳ

ಭಾಷ್ಯಗಳಿಗೆ ವಿವರಣೆಯಾಗಿ ಬರೆದಿರುವ **ವಾರ್ತಿಕ,** ವೇದಾಂತಮೀಮಾಂಸಾ ಭಾಷ್ಯಕ್ಕೆ ದೊರಕುವ **ಪಂಚಪಾದಿಕೆ, ಭಾಮತಿ** - ಎಂಬ ಹೆಸರಿನ ಟೀಕೆಗಳು ಇಂಥ ವ್ಯಾಖ್ಯಾನಗಳಲ್ಲಿ ಪ್ರಧಾನವಾಗಿರುತ್ತವೆ. ಈ ವ್ಯಾಖ್ಯಾನಗಳು ಮೂರೂ ಪರಸ್ಪರ ವಿರುದ್ಧವಾಗಿರುವದರಿಂದ ಅವುಗಳನ್ನು ನಾವು ಈ ಗ್ರಂಥದಲ್ಲಿ ವಿಮರ್ಶೆಗೆ ತೆಗೆದು ಕೊಂಡಿರುವದಿಲ್ಲ. ಈಗ ನಾವು ಒಪ್ಪಿರುವ ಪ್ರಕ್ರಿಯೆಗೆ ವಿರುದ್ಧವಲ್ಲದ ಉಪದೇಶ ಗಳನ್ನು ಜಿಜ್ಞಾಸುಗಳು ವ್ಯಾಖ್ಯಾನಗ್ರಂಥಗಳಿಂದಲೂ ಸಾರಗ್ರಹಣದೃಷ್ಟಿಯಿಂದ ಗ್ರಹಿಸುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಆದರೆ ಶುದ್ಧವಾದ ಶಾಂಕರ ವೇದಾಂತವನ್ನೇ ಅರಿತುಕೊಳ್ಳಬೇಕೆನ್ನುವವರಿಗಾಗಿ ಬರೆದಿರುವ ಈ ಗ್ರಂಥದಲ್ಲಿ ನಾವು ವ್ಯಾಖ್ಯಾನಗಳನ್ನು ಉದ್ದೇಶಪೂರ್ವಕವಾಗಿಯೇ ಕೈಬಿಟ್ಟಿರುತ್ತೇವೆ.

೬. ಆಚಾರ್ಯರವರು ಕೆಲವು **ಪಾರಿಭಾಷಿಕಶಬ್ದ**ಗಳನ್ನೂ **ದೃಷ್ಟಾಂತ**ಗಳನ್ನೂ **ನ್ಯಾಯ**ಗಳನ್ನೂ ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿರುತ್ತಾರೆ. ಈಚಿನ ವೇದಾಂತಿ ಗಳು ಆ ಶಬ್ದಗಳಲ್ಲದೆ ಬೇರೆಯಾಗಿ ಇನ್ನೂ ಕೆಲವು ಪಾರಿಭಾಷಿಕಶಬ್ದಗಳನ್ನೂ ಕಲ್ಪಿಸಿಕೊಂಡಿರುತ್ತಾರೆ ; ಆಚಾರ್ಯರು ಬಳಸಿರುವ ಪಾರಿಭಾಷಿಕಶಬ್ದಗಳನ್ನೂ ದೃಷ್ಟಾಂತಗಳನ್ನೂ ಆಚಾರ್ಯರಿಗಿಂತ ಬೇರೆಯ ರೀತಿಯಲ್ಲಿ ಉಪಯೋಗಿಸಿ ಬೇರೆಯ ತೀರ್ಮಾನಗಳನ್ನು ಮಾಡಿಕೊಂಡಿರುತ್ತಾರೆ ; ಆ ನ್ಯಾಯಗಳನ್ನು ಅಷ್ಟಾಗಿ ಲೆಕ್ಕಕ್ಕೆ ತರದೆ ಅಥವಾ ಲೆಕ್ಕಕ್ಕೆ ತಂದುಕೊಂಡರೂ ಅವಕ್ಕೆ ಬೇರೊಂದು ಅರ್ಥವನ್ನು ಕಲ್ಪಿಸಿಕೊಂಡು ಇರುತ್ತಾರೆ. ಇದನ್ನು ಜಿಜ್ಞಾಸುಗಳಿಗೆ ಮನದಟ್ಟುಮಾಡಿಸುವದಕ್ಕಾಗಿ ನಾವು ಆಚಾರ್ಯರು ಉಪಯೋಗಿಸಿರುವ ಪಾರಿಭಾಷಿಕಶಬ್ದಗಳನ್ನೇ ಈ ಗ್ರಂಥದಲ್ಲಿ ಹೆಚ್ಚಾಗಿ ಬಳಸಿರುತ್ತೇವೆ; ಅವುಗಳ ಪರ್ಯಾಯಗಳನ್ನು ಅಲ್ಲಲ್ಲಿ ಕೊಟ್ಟಿರುವದಲ್ಲದೆ ಅವಶ್ಯವೆಂದು ಕಂಡಾಗ ಈಚಿನವರು ಆ ಶಬ್ದಗಳಿಗೆ ಬೇರೊಂದು ಅರ್ಥವನ್ನು ಕಲ್ಪಿಸಿದ್ದರೆ ಸ್ವಲ್ಪದರಲ್ಲಿ ಅದನ್ನೂ ತಿಳಿಸಿರುತ್ತೇವೆ. ದೃಷ್ಟಾಂತಗಳನ್ನು ಯಾವ ಅಂಶದಲ್ಲಿ ಉಪಯೋಗಿಸುವದು ಸರಿ ಎಂಬುದನ್ನು ತಿಳಿಸಿರುವದಲ್ಲದೆ ಅವನ್ನು ಹೇಗೆ ಉಪಯೋಗಿಸ ಬಾರದೆಂಬುದನ್ನೂ ಅವಶ್ಯವಾದ ಕಡೆಯಲ್ಲಿ ತಿಳಿಸಿರುತ್ತೇವೆ. ಆಯಾ ನ್ಯಾಯಗಳನ್ನು ಸಂಗ್ರಹವಾಗಿ ತಿಳಿಸಿ, ಅವುಗಳನ್ನು ನೆನಪಿಡಬೇಕಾದ ಅವಶ್ಯಕತೆಯನ್ನು ಮನಗಾಣಿಸಿಕೊಟ್ಟಿರುತ್ತೇವೆ. ಇದರಿಂದ ಆಚಾರ್ಯರವರ ವಿಚಾರಶೈಲಿಯ ಪರಿಚಯವಾಗುವದಲ್ಲದೆ ಅವರ ಪ್ರಕ್ರಿಯೆಯ ಬೆಲೆಯೂ ಎದ್ದುಕಾಣುವದು. ಇಂಥ ಪಾರಿಭಾಷಿಕ ಶಬ್ದಗಳನ್ನೂ ದೃಷ್ಟಾಂತಗಳನ್ನೂ ನ್ಯಾಯ ಗಳನ್ನೂ ಬೇರೆಯ ಅರ್ಥದಲ್ಲಿ ಉಪಯೋಗಿಸಿರುವ, ಅಥವಾ ಇವನ್ನು ಬಿಟ್ಟು ಬೇರೆಯ ಪಾರಿಭಾಷಿಕಪದಗಳನ್ನೇ ಬಳಸಿರುವ, ಗ್ರಂಥಗಳು ಆಚಾರ್ಯರ

ಹೆಸರಿನಲ್ಲಿದ್ದರೂ ಅವು ನಿಜವಾಗಿ ಆಚಾರ್ಯಕೃತವಾಗಿರಲಾರವೆಂದು ಊಹಿಸುವದಕ್ಕೂ ಇದರಿಂದ ಸಹಾಯವಾಗುತ್ತದೆ.

೭. ಇಲ್ಲಿ ಉದಾಹರಿಸಿರುವ ಭಾಷ್ಯವಾಕ್ಯಗಳಿಗೆ ನಾವು ಕನ್ನಡದ ಅರ್ಥವನ್ನು ಬರೆದಿರುವದಿಲ್ಲ. ಏಕೆಂದರೆ ಅವುಗಳ ಅಭಿಪ್ರಾಯವು ಬಲುಮಟ್ಟಿಗೆ ನಾವು ಬರೆದಿರುವ ಕನ್ನಡವಾಕ್ಯಗಳಲ್ಲಿಯೇ ಅಡಕವಾಗಿರುತ್ತದೆ. ಆ ವಾಕ್ಯಗಳನ್ನು ಸ್ವಲ್ಪಮಟ್ಟಿಗೆ ಸಂಸ್ಕೃತವನ್ನು ಬಲ್ಲವರು ಓದಿ ತಿಳಿದ ವೇದಾಂತಿಗಳಿಂದ ಅವುಗಳ ಪೂರ್ಣಾಭಿಪ್ರಾಯವನ್ನು ಗ್ರಹಿಸಬಹುದು; ಅಥವಾ ಪ್ರಸ್ಥಾನತ್ರಯಭಾಷ್ಯಗಳನ್ನು ಸಮೂಲವಾಗಿ ಕನ್ನಡಿಸಿರುವ ಗ್ರಂಥಗಳ ಮೂಲಕವಾದರೂ ತಿಳಿದುಕೊಳ್ಳಬಹುದು[1]. ಶಂಕರವೇದಾಂತದ ಸಾರವನ್ನು ತಿಳಿಯಬೇಕೆನ್ನುವವರಿಗೆಲ್ಲ ಈ ಗ್ರಂಥದಲ್ಲಿರುವ ಕನ್ನಡಭಾಗವು ಕುತೂಹಲನಿವೃತ್ತಿಯನ್ನು ಪೂರ್ಣವಾಗಿ ಮಾಡುವಂತಿದೆ. ಶಾಂಕರ ಭಾಷ್ಯಗಳನ್ನೇ ಅಭ್ಯಾಸಮಾಡಬೇಕೆಂದು ಬಯಸುವ ವಿದ್ಯಾರ್ಥಿಗಳು ಈ ಗ್ರಂಥವನ್ನು ಗುರುಗಳ ಉಪದೇಶದ್ವಾರದಿಂದ ಸಮಗ್ರವಾಗಿ ಓದಿ ಚಿಂತನೆಮಾಡಿಕೊಂಡರೆ, ಭಾಷ್ಯಕಾರರ ಪ್ರಧಾನೋಪದೇಶದ ತತ್ತ್ವವು ವಶವಾಗುವದು. ಆ ಬಳಿಕ ಭಾಷ್ಯಗಳನ್ನು ವಿಸ್ತಾರವಾಗಿ ಓದಿದರೆ ಸಮಾಸವ್ಯಾಸವಾಗಿ ಭಾಷ್ಯವನ್ನು ಅಭ್ಯಾಸಮಾಡಿದಂತೆ ಆಗುವದು. ಪ್ರಸ್ಥಾನತ್ರಯಭಾಷ್ಯಗಳನ್ನು ಓದಿದ ಬಳಿಕ ಅವುಗಳಿಗೆ ಏಕವಾಕ್ಯತೆಯನ್ನು ಮಾಡಿಕೊಳ್ಳಬೇಕೆಂಬ ಅಭಿಲಾಷೆಯುಳ್ಳ ಪ್ರೌಢವಿದ್ಯಾರ್ಥಿಗಳಿಗೆ ಈ ಗ್ರಂಥದ ಪಾಠದಿಂದ ಹೆಚ್ಚಿನ ಸಹಾಯವಾಗುವದು. ಭಾಷ್ಯಗಳನ್ನೆಲ್ಲ ಓದುವದಕ್ಕೆ ಅವಕಾಶವಾಗಲಿ ಶಕ್ತಿಯಾಗಲಿ ಇಲ್ಲದಿದ್ದರೂ ಭಾಷ್ಯಕಾರರಿಗೆ ಸಮ್ಮತವಾದ ವೇದಾಂತದ ಮುಖ್ಯೋಪದೇಶಗಳನ್ನು ದಿನದಿನದ ಮನನಕ್ಕೆ ಇಟ್ಟುಕೊಳ್ಳಬೇಕೆಂದು ಹವಣಿಸುವ ಮುಮುಕ್ಷುಗಳಿಗೆ ಈ ಗ್ರಂಥಕ್ಕೆ ಸಮಾನವಾದ ಬೇರೊಂದು ಅಮೂಲ್ಯಸಾಧನವು ಸಿಕ್ಕಲಾರದು. ಹೀಗೆ ಬಗೆಬಗೆಯ ಓದುಗರಿಗಾಗಿ ಈ ಗ್ರಂಥವು ರಚಿತವಾಗಿರುತ್ತದೆ.

## ೨. ವೇದಾಂತ

೮. ಪ್ರತಿಯೊಂದು ಗ್ರಂಥಕ್ಕೂ ಅಭಿಧೇಯ, ಸಂಬಂಧ, ಪ್ರಯೋಜನ-ಇವುಗಳನ್ನು ಮೊದಲು ಹೇಳಬೇಕು. ಏಕೆಂದರೆ ಗ್ರಂಥದ ವಿಷಯವನ್ನೂ ಅದರ ಜ್ಞಾನದಿಂದಾಗುವ ಪ್ರಯೋಜನವನ್ನೂ ಆ ವಿಷಯಪ್ರಯೋಜನಗಳಿಗೆ ಇರುವ

1. ಅಧ್ಯಾತ್ಮಗ್ರಂಥಾವಳಿಯಲ್ಲಿ ಆಚಾರ್ಯರ ಗ್ರಂಥರತ್ನಗಳೆಲ್ಲವನ್ನೂ ಸಮೂಲವಾಗಿ ಈ ಗ್ರಂಥಕರ್ತರೇ ಕನ್ನಡಿಸಿರುತ್ತಾರೆ.

ಸಂಬಂಧವನ್ನೂ ತಿಳಿದಲ್ಲದೆ ಯಾವನೂ ಗ್ರಂಥಶ್ರವಣದಲ್ಲಿ ತೊಡಗುವದಿಲ್ಲ. ಯಾವನಿಗಾಗಿ ಗ್ರಂಥವನ್ನು ಹೇಳಿದೆಯೋ ಅವನೇ ಗ್ರಂಥಕ್ಕೆ **ಅಧಿಕಾರಿ** ಎನಿಸುವನು. ಅಧಿಕಾರಿ, ಅಭಿಧೇಯ (ವಿಷಯ), ಸಂಬಂಧ, ಪ್ರಯೋಜನ- ಈ ನಾಲ್ಕನ್ನೂ **ಅನುಬಂಧಚತುಷ್ಟಯ**ವೆಂದು ಕರೆಯುವ ವಾಡಿಕೆಯಿದೆ. ಉಪನಿಷತ್ತಿಗೂ ಉಪನಿಷತ್ತಿನಲ್ಲಿರುವ ದರ್ಶನಕ್ಕೂ **ವೇದಾಂತ**ವೆಂಬ ಹೆಸರನ್ನು ಬಲ್ಲವರು ಕೊಟ್ಟಿರುತ್ತಾರೆ. ಆದ್ದರಿಂದ ಉಪನಿಷತ್ತಿಗೆ ಅಥವಾ ಅದರಲ್ಲಿರುವ ವೇದಾಂತದರ್ಶನಕ್ಕೆ ಅನುಬಂಧಚತುಷ್ಟಯವನ್ನು ಮೊದಲು ನಿರೂಪಿಸಬೇಕಾಗಿದೆ.

೯. ವೇದಾಂತಸಿದ್ಧಾಂತಗಳು ಅನೇಕವಾಗಿರುವವು. ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದಿರುವವರು ಬಹಳ ಜನರಿದ್ದಾರೆ. ದಕ್ಷಿಣಭಾರತದಲ್ಲಿ ಈಗ್ಗೆ ಮಧ್ವ, ರಾಮಾನುಜ, ಶಂಕರ- ಎಂಬ ಮೂವರು ಆಚಾರ್ಯರುಗಳ ಭಾಷ್ಯಗಳು ಪ್ರಚಾರದಲ್ಲಿವೆ. ಈಗ ನಾವು ಬರೆಯುತ್ತಿರುವದು ಶಂಕರಾಚಾರ್ಯರವರಿಗೆ ಸಮ್ಮತವಾದ ವೇದಾಂತವು. ಈ ವೇದಾಂತದ ವಿಶೇಷವನ್ನು ಆಗಲೆ (೧)[1] ನಾವು ಸಂಕ್ಷೇಪವಾಗಿ ತಿಳಿಸಿರುತ್ತೇವೆ. ಇನ್ನುಮುಂದೆ ನಾವು 'ವೇದಾಂತ'ವೆಂಬ ಹೆಸರನ್ನು ಶಾಂಕರವೇದಾಂತ ಎಂಬ ಅರ್ಥದಲ್ಲಿಯೇ ಉಪಯೋಗಿಸುವೆವು. ಈಗ ನಾವು ಬರೆಯುತ್ತಿರುವ ಗ್ರಂಥಕ್ಕೆ **''ಶಾಂಕರವೇದಾಂತಸಾರ''**ವೆಂದು ಹೆಸರು. ಶಂಕರಾಚಾರ್ಯರವರಿಗೆ ಒಪ್ಪಾದ ವೇದಾಂತದ ಸಾರವನ್ನು ತಿಳಿಸುವದರಿಂದಲೂ ಶಂಕರವಾದ, ಎಂದರೆ ಜೀವರುಗಳಿಗೆ ಕಲ್ಯಾಣವನ್ನುಂಟುಮಾಡುವ, ವೇದಾಂತ ದರ್ಶನದ ಸಾರವೇ ಇದರಲ್ಲಿರುವದ ರಿಂದಲೂ ಇದಕ್ಕೆ ಈ ಹೆಸರನ್ನು ಕೊಟ್ಟರುತ್ತೇವೆ.

೧೦. ವೇದಾಂತಕ್ಕೆ **ಅಭಿಧೇಯವು** ಬ್ರಹ್ಮವು. ಬ್ರಹ್ಮವಿದ್ಯೆಯು ತನ್ನನ್ನು ಭಕ್ತಿಯಿಂದ ಪರಿಶೀಲಿಸುವವರ ಸಂಸಾರಬಂಧವನ್ನು ನಾಶಮಾಡಿ ಅವರನ್ನು ಬ್ರಹ್ಮವನ್ನು ಮುಟ್ಟಿಸುವದರಿಂದ ಆ ವಿದ್ಯೆಗೆ **ಉಪನಿಷತ್ತು** ಎಂದು ಹೆಸರು. **ಉಪನಿಷತ್ತು** ಎಂಬ ಶಬ್ದಕ್ಕೆ ಇದೇ ಮುಖ್ಯಾರ್ಥವು. ಬ್ರಹ್ಮವಿದ್ಯೆಗೆ ಸಾಧನವಾಗಿರುವ ಗ್ರಂಥಗಳನ್ನೂ ಉಪನಿಷತ್ತುಗಳು ಎಂದು ಗೌಣವೃತ್ತಿಯಿಂದ ಕರೆಯುತ್ತಾರೆ. ಈ ಉಪನಿಷತ್ತುಗಳ ವಚನಗಳನ್ನೇ ಶಂಕರಾಚಾರ್ಯರು ತಮ್ಮ ಭಾಷ್ಯಗಳಲ್ಲಿ ವ್ಯಾಖ್ಯಾನಮಾಡಿರುವದು. ಅವುಗಳೇ ವೇದಾಂತವಿಚಾರಕ್ಕೆ ಮೂಲಾಧಾರ. ಅವುಗಳನ್ನು, ಅಥವಾ ಅವುಗಳ

[1] ಹೀಗೆ ಕಂಸದಲ್ಲಿ ಹಾಕಿರುವ ಸಂಖ್ಯೆಗಳು ಈ ಗ್ರಂಥದ ಖಂಡಗಳ ಅನುಕ್ರಮಸಂಖ್ಯೆಯನ್ನು ಸೂಚಿಸುವವು.

ಮೇಲಿನ ಭಾಷ್ಯವಚನಗಳನ್ನು, ನಾವು ಸಂದರ್ಭಾನುಸಾರವಾಗಿ ಅಲ್ಲಲ್ಲಿ ಉದಾಹರಿಸುತ್ತಾ ಹೋಗುವೆವು.

(೧) ಯೇ ಇಮಾಂ ಬ್ರಹ್ಮವಿದ್ಯಾಮ್ ಉಪಯನ್ತಿ ಆತ್ಮಭಾವೇನ ಶ್ರದ್ಧಾಭಕ್ತಿಪುರಃಸರಾಃ ಸನ್ತಃ ತೇಷಾಂ ಗರ್ಭಜನ್ಮಜರಾರೋಗಾದ್ಯನರ್ಥಪೂಗಂ ನಿಶಾತಯತಿ । ಪರಂ ವಾ ಬ್ರಹ್ಮ ಗಮಯತಿ । ಅವಿದ್ಯಾದಿ ಸಂಸಾರಕಾರಣಂ ವಾ ಅತ್ಯನ್ತಮ್ ಅವಸಾದಯತಿ ವಿನಾಶಯತಿ ಇತಿ ಉಪನಿಷತ್। ಉಪನಿಪೂರ್ವಸ್ಯ ಸದೇರೇವಮರ್ಥಸ್ಮರಣಾತ್॥ -ಮುಂ. ಭಾ. ಅವ.-೬

(೨) ಗ್ರನ್ಥಸ್ಯಾಪಿ ತಾದರ್ಥ್ಯೇನ ತಚ್ಛಬ್ದತ್ವೋಪಪತ್ತೇಃ । ''ಆಯುರ್ವೈ ಘೃತಮ್'' ಇತ್ಯಾದಿವತ್ । ತಸ್ಮಾತ್, ವಿದ್ಯಾಯಾಂ ಮುಖ್ಯಯಾ ವೃತ್ತ್ಯಾ ಉಪನಿಷಚ್ಛಬ್ದೋ ವರ್ತತೇ, ಗ್ರನ್ಥೇ ತು ಭಕ್ತ್ಯಾ ಇತಿ ॥ - ಕ. ಭಾ. ಅವ.-೫

೧೧. ಅವಿದ್ಯೆಯೇ ಮುಂತಾದ ಸಂಸಾರಬೀಜವನ್ನು ನಾಶಗೊಳಿಸುವದು, ಬ್ರಹ್ಮವನ್ನು ಪಡೆಯಿಸುವದು-ಎಂಬುದೇ ಉಪನಿಷತ್ತಿನ, ಎಂದರೆ ಬ್ರಹ್ಮವಿದ್ಯೆಯ, **ಪ್ರಯೋಜನವು** ಎಂದು ಮೇಲ್ಕಿನ ಅಭಿಧೇಯವರ್ಣನೆಯಿಂದಲೇ ಏರ್ಪಡುತ್ತದೆ. ಬ್ರಹ್ಮವು ನಮ್ಮ ಆತ್ಮನೇ ಆಗಿರುತ್ತದೆ; ದ್ವೈತಪ್ರಪಂಚರೂಪವಾದ ಸಂಸಾರವು ಅದರಲ್ಲಿ ಅವಿದ್ಯೆಯಿಂದ ತೋರುತ್ತಿರುತ್ತದೆ. ಆದ್ದರಿಂದ ಅವಿದ್ಯೆಯನ್ನು ಕಳೆಯುವ ಬ್ರಹ್ಮವಿದ್ಯೆಯನ್ನು ತಿಳಿಸುವದರಿಂದ ವೇದಾಂತಶಾಸ್ತ್ರಕ್ಕೂ ಅನರ್ಥರೂಪವಾದ ದ್ವೈತಪ್ರಪಂಚವನ್ನು ನಾಶಮಾಡಿ ಬ್ರಹ್ಮರೂಪವಾದ ಆತ್ಮನ ಪ್ರಾಪ್ತಿಯನ್ನು ಮಾಡಿಸುವದೇ ಪರಂಪರೆಯಿಂದ ಪ್ರಯೋಜನವೆಂದು ಏರ್ಪಡುತ್ತದೆ. ರೋಗದಿಂದ ನರಳುತ್ತಿರುವವನಿಗೆ ರೋಗವು ತೊಲಗಲು ಸ್ವಸ್ಥತೆಯುಂಟಾಗುವಂತೆ ಅವಿದ್ಯೆಯಿಂದಾದ ದುಃಖವು ಹೋಗಲು ಅದ್ವೈತನಾದ ತನ್ನ ರೂಪದಿಂದ ನಿಲ್ಲುವ **ಸ್ವಸ್ಥತೆಯೇ** ಶಾಸ್ತ್ರಕ್ಕೆ ಪರಮಪ್ರಯೋಜನವು. (ಸ್ವಸ್ಥತಾ, ಸ್ವಾತ್ಮನಿ ಅವಸ್ಥಾನಮ್-ಸ್ವಾತ್ಮಪ್ರತಿಷ್ಠಾ, ಸ್ವರೂಪಾವಸ್ಥಾನಮ್- ಇವೆಲ್ಲ ಪರ್ಯಾಯಶಬ್ದಗಳು.)

(೧) ತತ್ರ ಪ್ರಯೋಜನವತ್ಸಾಧನಾಭಿವ್ಯಞ್ಜಕತ್ವೇನ ಅಭಿಧೇಯಸಂಬದ್ಧಂ ಶಾಸ್ತ್ರಂ ಪಾರಂಪರ್ಯೇಣ ವಿಶಿಷ್ಟಸಂಬನ್ಧಾಭಿಧೇಯಪ್ರಯೋಜನವದ್ ಭವತಿ। ಕಿಂ ಪುನಸ್ತತ್ ಪ್ರಯೋಜನಮಿತಿ ? ಉಚ್ಯತೇ । ರೋಗಾರ್ತಸ್ಯೇವ ರೋಗನಿವೃತ್ತೌ ಸ್ವಸ್ಥತಾ ; ತಥಾ ದುಃಖಾತ್ಮಕಸ್ಯ ಆತ್ಮನಃ ದ್ವೈತಪ್ರಪಞ್ಚೋಪಶಮೇ ಸ್ವಸ್ಥತಾ, ಅದ್ವೈತಭಾವಃ ಪ್ರಯೋಜನಮ್ । ದ್ವೈತಪ್ರಪಞ್ಚಸ್ಯ ಅವಿದ್ಯಾಕೃತತ್ವಾತ್ ವಿದ್ಯಯಾ ತದುಪಶಮಃ ಸ್ಯಾತ್ ಇತಿ ಬ್ರಹ್ಮವಿದ್ಯಾಪ್ರಕಾಶನಾಯ ಅಸ್ಯ ಆರಮ್ಭಃ ಕ್ರಿಯತೇ ॥ -ಮಾಂ. ಭಾ. ಅವ.-೨

(೨) ಆತ್ಮಾ ಹಿ ಬ್ರಹ್ಮ ॥ -ತೈ. ಭಾ. ಅವ.

(೩) ಆತ್ಮಾ ಚ ಬ್ರಹ್ಮ ॥ -ಸೂ. ಭಾ.೧-೧-೧

೧೨. ಬ್ರಹ್ಮವಿದ್ಯೆಗೂ ಸ್ವಸ್ಥತಾರೂಪವಾದ ಬ್ರಹ್ಮಪ್ರಾಪ್ತಿಗೂ ಸಾಧ್ಯ ಸಾಧನಭಾವಸಂಬಂಧವಿದೆ ; ಏಕೆಂದರೆ ಬ್ರಹ್ಮವಿದ್ಯೆಯು ಸಾಧನ, ಬ್ರಹ್ಮಪ್ರಾಪ್ತಿಯು ಸಾಧ್ಯ. ವೇದಾಂತಶಾಸ್ತ್ರಕ್ಕೂ ಬ್ರಹ್ಮವಿದ್ಯೆಗೂ ಪ್ರತಿಪಾದ್ಯಪ್ರತಿಪಾದಕಭಾವ ಸಂಬಂಧ ವಿದೆ; ಏಕೆಂದರೆ ಶಾಸ್ತ್ರವು ಬ್ರಹ್ಮವಿದ್ಯೆಯನ್ನು ಪ್ರತಿಪಾದಿಸುತ್ತದೆ ವಿದ್ಯೆಯು ಅದರಿಂದ ಪ್ರತಿಪಾದ್ಯವಾಗಿರುತ್ತದೆ. ಇಷ್ಟನ್ನೂ ಮೇಲೆ ಹೇಳಿರುತ್ತೇವೆ.

ಉಪನಿಷತ್ತುಗಳಿರುವ ವೇದಭಾಗವಾದ ಜ್ಞಾನಕಾಂಡಕ್ಕೂ ಅದರ ಹಿಂದಿನ ಭಾಗವಾದ ಕರ್ಮಕಾಂಡಕ್ಕೂ ಇರುವ ಸಂಬಂಧವನ್ನು ತಿಳಿದುಕೊಂಡರೆ ಉಪನಿಷತ್ತುಗಳಲ್ಲಿ ಯಾವ ಹೊಸ ವಿಷಯವನ್ನು ತಿಳಿಸಿದೆ ಎಂಬುದು ಗೊತ್ತಾಗುತ್ತದೆ. ಆತ್ಮನಿಗೆ ದೇಹಾಂತರದಲ್ಲೊದಗುವ ಇಷ್ಟಗಳನ್ನು ಪಡೆದುಕೊಳ್ಳುವ ಮತ್ತು ಅನಿಷ್ಟಗಳನ್ನು ತೊಲಗಿಸಿಕೊಳ್ಳುವ ಉಪಾಯವನ್ನು ಹೇಳುವದು ಕರ್ಮಕಾಂಡವು. ಇಷ್ಟಪ್ರಾಪ್ತಿಯನ್ನೂ ಅನಿಷ್ಟನಿವೃತ್ತಿಯನ್ನೂ ಬಯಸುವದಕ್ಕೆ ಕಾರಣವಾಗಿರುವ ಈ ವಿದ್ಯಾವಿದ್ಯೆಗಳ ವಿಷಯವನ್ನು ಮುಂದೆ (೩೦, ೩೧....) ವಿವರಿಸಲಾಗುವದು.

(೧) ನಿತ್ಯಾನ್ಯಧಿಗತಾನಿ ಕರ್ಮಾಣಿ ಉಪಾತ್ತದುರಿತಕ್ಷಯಾರ್ಥಾನಿ, ಕಾಮ್ಯಾನಿ ಚ ಫಲಾರ್ಥಿನಾಂ, ಪೂರ್ವಸ್ಮಿನ್ ಗ್ರನ್ಥೇ । ಇದಾನೀಂ ಕರ್ಮೋಪಾದಾನಹೇತುಪರಿಹಾರಾಯ ಬ್ರಹ್ಮವಿದ್ಯಾ ಪ್ರಸ್ತೂಯತೇ ॥ - ತೈ. ಭಾ. ಅವ.-೧

(೨) ಸರ್ವಥಾಪಿ ಅಸ್ತ್ಯಾತ್ಮಾ ದೇಹಾನ್ತರಸಂಬನ್ಧೀ ಇತ್ಯೇವಂ ಪ್ರತಿಪತ್ತುಃ ದೇಹಾನ್ತರ ಗತೇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯವಿಶೇಷಾರ್ಥಿನಃ ತದ್ವಿಶೇಷಜ್ಞಾಪನಾಯ ಕರ್ಮಕಾಣ್ಡಮ್ ಆರಬ್ಧಮ್ । ನ ತು ಆತ್ಮನಃ ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛಾಕಾರಣಂ ಆತ್ಮ ವಿಷಯಮಜ್ಞಾನಂ ಕರ್ತೃಭೋಕ್ತೃಸ್ವರೂಪಾಭಿಮಾನಲಕ್ಷಣಂ ತದ್ವಿಪರೀತಬ್ರಹ್ಮಾತ್ಮ ಸ್ವರೂಪವಿಜ್ಞಾನೇನ ಅಪನೀತಮ್...ಸ ಏಷ ಬೀಜಾಙ್ಕುರಾದಿವತ್ ಅವಿದ್ಯಾಕೃತಃ ಸಂಸಾರಃ ಆತ್ಮನಿ ಕ್ರಿಯಾಕಾರಕಫಲಾಧ್ಯಾರೋಪಲಕ್ಷಣಃ ಅನಾದಿರನನ್ತೋಽನರ್ಥಃ ಇತ್ಯೇತಸ್ಮಾತ್ ವಿರಕ್ತಸ್ಯ ಅವಿದ್ಯಾನಿವೃತ್ತಯೇ ತದ್ವಿಪರೀತಬ್ರಹ್ಮವಿದ್ಯಾಪ್ರತಿಪತ್ತ್ಯರ್ಥಾ ಉಪನಿಷದ್ ಆರಭ್ಯತೇ॥ - ಬೃ. ಭಾ. ಅವ.-೬

೧೩. ಅವಿದ್ಯೆಯನ್ನು ತೊಲಗಿಸಿಕೊಂಡು ತಮ್ಮ ಆತ್ಮಸ್ವರೂಪದಲ್ಲಿ ನೆಲೆ ನಿಲ್ಲಬೇಕೆನ್ನುವವರೇ ಈ ಶಾಸ್ತ್ರಕ್ಕೆ **ಅಧಿಕಾರಿ**ಗಳೆಂದು ತಾನೇ ಏರ್ಪಡುತ್ತದೆ. ಆದರೆ ಸುಮ್ಮನೆ ಬಯಸಿದಮಾತ್ರಕ್ಕೆ ಪ್ರಯೋಜನವು ದೊರೆಯದಾದ್ದರಿಂದ ಯಾವ ಯೋಗ್ಯತೆಯನ್ನು ಪಡೆದುಕೊಂಡಿರುವವರು ವೇದಾಂತಕ್ಕೆ ಅಧಿಕಾರಿಗಳಾಗುವರು?- ಎಂಬುದನ್ನು ವಿಶೇಷವಾಗಿ ತಿಳಿಯಬೇಕಾಗುತ್ತದೆ. ವೇದಾಂತವು ಉಪನಿಷತ್ತುಗಳಲ್ಲಿರುವದರಿಂದಲೂ ಉಪನಿಷತ್ತುಗಳು ವೇದಭಾಗವಾಗಿರುವದರಿಂದಲೂ ವೇದಾಧ್ಯಯನಕ್ಕೆ ಅಧಿಕಾರಿಗಳಾಗಿರುವ ದ್ವಿಜರೇ ವೇದಮೂಲಕವಾಗಿ

ಬ್ರಹ್ಮವಿದ್ಯೆಯನ್ನು ಸಂಪಾದಿಸುವದಕ್ಕೆ ತಕ್ಕವರೆಂದು ಸ್ಪಷ್ಟವಾಗಿದೆ. ಅಧ್ಯಯನ, ವೇದೋಕ್ತಕರ್ಮಗಳು- ಎಲ್ಲವೂ ಪರಂಪರೆಯಿಂದ ಬ್ರಹ್ಮವಿದ್ಯೆಗೆ ಕಾರಣವೆಂಬುದನ್ನು ಮುಂದೆ ಈ ಗ್ರಂಥದಲ್ಲಿ ತಿಳಿಸಲಾಗುವದು. ಆದ್ದರಿಂದ ವರ್ಣಾಶ್ರಮಧರ್ಮಗಳನ್ನು ಆಚರಿಸುವದೂ ಒಂದು ಅಧಿಕಾರಕಾರಣವಾಗುತ್ತದೆ. ಆದರೆ ವೇದಾಧ್ಯಯನವಿಲ್ಲದ **ವಿದುರ,** ಧರ್ಮವ್ಯಾಧ, ಮೈತ್ರೇಯಿ- ಮುಂತಾದವರೂ ಆಶ್ರಮಧರ್ಮವಿಲ್ಲದ ಸಂವರ್ತಾದಿಗಳೂ ಜ್ಞಾನಿಗಳಾಗಿದ್ದರೆಂದು ಪುರಾಣಗಳಿಂದ ತಿಳಿಯಬರುತ್ತದೆ; ವೇದಾರ್ಥವನ್ನೇ ತಿಳಿಸುವ ಇತಿಹಾಸಪುರಾಣಗಳನ್ನು ನಾಲ್ಕು ವರ್ಣದವರೂ ಶ್ರವಣಮಾಡಬೇಕೆಂದು ಭಾರತದಲ್ಲಿ ವಿಧಿಸಿದೆ. ಆಶ್ರಮಕರ್ಮಗಳನ್ನು ಅನಾದರಮಾಡಿದ್ದ ಸಂವರ್ತನೇ ಮುಂತಾದವರೂ ಮಹಾಯೋಗಿಗಳಾಗಿದ್ದರೆಂದು ಇತಿಹಾಸದಲ್ಲಿ ಹೇಳಿರುತ್ತದೆ. ಈ ಎಲ್ಲಾ ಕಾರಣಗಳಿಂದ (೧) ವೇದಾಧ್ಯಯನವನ್ನು ಮಾಡಿ ಸ್ವವರ್ಣಾಶ್ರಮಕರ್ಮಗಳನ್ನು ಮಾಡಿಕೊಂಡಿರುವವರು ವೇದಮೂಲಕವಾಗಿ ತತ್ತ್ವಜ್ಞಾನವನ್ನು ಪಡೆಯುವದಕ್ಕೆ ಅಧಿಕಾರಿಗಳು; (೨) ಅಧ್ಯಯನಮಾಡಿದ್ದರೂ ಆಶ್ರಮಧರ್ಮವಿಲ್ಲದ ವಿಧುರಾದಿಗಳೂ ವೇದಮೂಲಕವಾದ ಜ್ಞಾನಕ್ಕೆ ಅಧಿಕಾರಿಗಳು; ೩) ಅಧ್ಯಯನವಿಲ್ಲದ ಶೂದ್ರಾದಿಗಳು ಇತಿಹಾಸಪುರಾಣಗಳ ಶ್ರವಣಮೂಲಕವಾಗಿ ಅಧಿಕಾರಿಗಳು; (೪) ಆಶ್ರಮಕರ್ಮಗಳಿಲ್ಲದವರೂ ಭಾಷಾಂತರಗ್ರಂಥಗಳ ಮೂಲಕವಾಗಿ ವಿದ್ಯೆಯನ್ನು ಪಡೆದುಕೊಳ್ಳಬಹುದು.

(೧) ಅನಾಶ್ರಮಿತ್ವೇನ ವರ್ತಮಾನೋಽಪಿ ವಿದ್ಯಾಯಾಮ್ ಅಧಿಕ್ರಿಯತೇ । ಕುತಃ ? ತದ್ದೃಷ್ಟೇಃ । ರೈಕ್ವವಾಚಕ್ನವೀಪ್ರಭೃತೀನಾಮ್ ಏವಂಭೂತಾನಾಮಪಿ ಬ್ರಹ್ಮವಿತ್ತ್ವಶ್ರುತ್ಯುಪಲಬ್ಧೇಃ॥ - ಸೂ. ಭಾ. ೩-೪-೩೬-೪೮೦

(೨) ಸಂವರ್ತಪ್ರಭೃತೀನಾಂ ಚ ನಗ್ನಚರ್ಯಾದಿಯೋಗಾತ್ ಅನಪೇಕ್ಷಿತಾಶ್ರಮಕರ್ಮಣಾಮಪಿ ಮಹಾಯೋಗಿತ್ವಂ ಸ್ಮರ್ಯತೇ ಇತಿಹಾಸೇ ॥ - ಸೂ. ಭಾ. ೩-೪-೩೭-೪೮೧

(೩) ನ ಶೂದ್ರಸ್ಯಾಧಿಕಾರಃ । ವೇದಾಧ್ಯಯನಾಭಾವಾತ್ । ಅಧೀತವೇದೋ ಹಿ ವಿದಿತವೇದಾರ್ಥೋ ವೇದಾರ್ಥೇಷು ಅಧಿಕ್ರಿಯತೇ । ನ ಚ ಶೂದ್ರಸ್ಯ ವೇದಾಧ್ಯಯನಮ್ ಅಸ್ತಿ । ಉಪನಯನಪೂರ್ವಕತ್ವಾತ್ ವೇದಾಧ್ಯಯನಸ್ಯ । ಉಪನಯನಸ್ಯ ಚ ವರ್ಣತ್ರಯವಿಷಯತ್ವಾತ್॥ - ಸೂ. ಭಾ. ೧-೩-೩೪-೩೦೭

(೪) ಯೇಷಾಂ ಪುನಃ ಪೂರ್ವಕೃತಸಂಸ್ಕಾರವಶಾತ್ ವಿದುರಧರ್ಮವ್ಯಾಧಪ್ರಭೃತೀನಾಂ ಜ್ಞಾನೋತ್ಪತ್ತಿಃ, ತೇಷಾಂ ನ ಶಕ್ಯತೇ ಫಲಪ್ರಾಪ್ತಿಃ ಪ್ರತಿಷೇದ್ಧುಮ್ । ಜ್ಞಾನಸ್ಯ ಐಕಾನ್ತಿಕಫಲತ್ವಾತ್ । ''ಶ್ರಾವಯೇತ್ ಚತುರೋ ವರ್ಣಾನ್'' (ಮೋ. ಧ. ೩೨೭-೪೯) ಇತಿ ಚ ಇತಿಹಾಸಪುರಾಣಾಧಿಗಮೇ ಚಾತುರ್ವರ್ಣ್ಯಸ್ಯ ಅಧಿಕಾರಸ್ಮರಣಾತ್ । ವೇದಪೂರ್ವಕಸ್ತು ನಾಸ್ತ್ಯಧಿಕಾರಃ ಶೂದ್ರಾಣಾಮ್ ಇತಿ ಸ್ಥಿತಮ್ ॥ - ಸೂ. ಭಾ. ೧-೩-೩೮-೩೧೩

೧೪. ಅಧ್ಯಯನವೆಂಬುದು ಕರ್ಮವಿಚಾರಕ್ಕೂ ಬ್ರಹ್ಮವಿಚಾರಕ್ಕೂ ಸಮಾನವಾಗಿಯೇ ಬೇಕಾಗಿರುವ ಯೋಗ್ಯತೆಯು. ಬ್ರಹ್ಮವಿಚಾರಕ್ಕೆ ಅವಶ್ಯವಾಗಿರಲೇಬೇಕಾದ ಅಧಿಕಾರಕಾರಣಗಳು ಯಾವವೆಂದರೆ : (೧) ನಿತ್ಯಾನಿತ್ಯವಸ್ತುವಿವೇಕ, (೨) ಇಹಾಮುತ್ರಾರ್ಥಫಲಭೋಗವಿರಾಗ, (೩) ಶಮದಮಾದಿ ಸಾಧನಸಂಪತ್ತು, (೪) ಮುಮುಕ್ಷುತ್ವ - ಈ ನಾಲ್ಕು ಸಾಧನಗಳಿದ್ದರೆ ಕರ್ಮವಿಚಾರವನ್ನು ಮಾಡಿರಲಿ, ಮಾಡದಿರಲಿ, ಬ್ರಹ್ಮವಿಚಾರವನ್ನು ಮಾಡಬಹುದು ; ಇವಿಲ್ಲದಿದ್ದವನಿಗೆ ಬ್ರಹ್ಮವಿಚಾರವನ್ನು ಮಾಡಿ ಅದನ್ನು ಅರಿತುಕೊಳ್ಳುವ ಅಧಿಕಾರವು ಇರುವದಿಲ್ಲ. ಆದ್ದರಿಂದಲೇ ಬ್ರಹ್ಮಜಿಜ್ಞಾಸೆಯ ಫಲವಾದ ಮೋಕ್ಷವು ಕರ್ಮಸಂನ್ಯಾಸಸಹಿತವಾದ ಬ್ರಹ್ಮವಿದ್ಯೆಯಿಂದಲೇ ದೊರಕುವದೆಂತಲೂ ಜ್ಞಾನಮಾತ್ರಕ್ಕೆ ಎಲ್ಲಾ ಆಶ್ರಮದವರಿಗೂ ಅಧಿಕಾರವುಂಟೆಂತಲೂ ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಬರೆದಿರುತ್ತಾರೆ.

(೧) ಸ್ವಾಧ್ಯಾಯಾನನ್ತರ್ಯಂ ತು ಸಮಾನಮ್ ॥ - ಸೂ. ಭಾ. ೧-೧-೧-೧೧

(೨) ತಸ್ಮಾತ್ ಕಿಮಪಿ ವಕ್ತವ್ಯಂ ಯದನನ್ತರಂ ಬ್ರಹ್ಮಜಿಜ್ಞಾಸಾ ಉಪದಿಶ್ಯತೇ ಇತಿ । ಉಚ್ಯತೇ । ನಿತ್ಯಾನಿತ್ಯವಸ್ತುವಿವೇಕಃ, ಇಹಾಮುತ್ರಾರ್ಥಫಲಭೋಗವಿರಾಗಃ, ಶಮದಮಾದಿ-ಸಾಧನಸಂಪತ್, ಮುಮುಕ್ಷುತ್ವಂ ಚ । ತೇಷು ಹಿ ಸತ್ಸು ಪ್ರಾಗಪಿ ಧರ್ಮಜಿಜ್ಞಾಸಾಯಾಃ ಊರ್ಧ್ವಂ ಚ ಶಕ್ಯತೇ ಬ್ರಹ್ಮ ಜಿಜ್ಞಾಸಿತುಂ ಜ್ಞಾತುಂ ಚ ನ ವಿಪರ್ಯಯೇ ॥ - ಸೂ. ಭಾ. ೧-೧-೧-೧೩

(೩) ಜ್ಞಾನಮಾತ್ರೇ ಯದ್ಯಪಿ ಸರ್ವಾಶ್ರಮಿಣಾಮ್ ಅಧಿಕಾರಃ, ತಥಾಪಿ ಸಂನ್ಯಾಸನಿಷ್ಠೈವ ಬ್ರಹ್ಮವಿದ್ಯಾ ಮೋಕ್ಷಸಾಧನಮ್, ನ ಕರ್ಮಸಹಿತಾ ಇತಿ ''ಭೈಕ್ಷ್ಯಚರ್ಯಾಂ ಚರನ್ತಃ'' ''ಸಂನ್ಯಾಸಯೋಗಾತ್'' ಇತಿ ಚ ಬ್ರುವನ್ ದರ್ಶಯತಿ। - ಮುಂ. ಭಾ. ಅವ.-೪

೧೫. **ನಿತ್ಯಾನಿತ್ಯವಸ್ತುವಿವೇಕ**ವೆಂದರೆ ಕರ್ಮ, ಉಪಾಸನೆ- ಮುಂತಾದ ಸಾಧನೆಗಳ ಫಲವೆಲ್ಲವೂ ಅನಿತ್ಯವೆಂತಲೂ, ಪರಮಾತ್ಮಪ್ರಾಪ್ತಿರೂಪವಾದ ಮೋಕ್ಷವೊಂದೇ ನಿತ್ಯವೆಂತಲೂ ವಿಂಗಡಿಸಿ ಅರಿತುಕೊಳ್ಳುವದು. ಕೃತಕವಾದದ್ದು ಅನಿತ್ಯವೆಂದು ಈ ಲೋಕದಲ್ಲಿ ಕಂಡಿರುತ್ತದೆ. ಇದರಂತೆಯೇ ಪರಲೋಕದಲ್ಲಿ ಉಂಟಾಗುವ ಫಲವೂ ಅನಿತ್ಯವಾದದ್ದೇ ; ಆದ್ದರಿಂದ ಮಾಡುವ ಯಾವದೊಂದು ಸಾಧನದಿಂದಲೂ ನಿತ್ಯವಾದದ್ದು ದೊರಕಲಾರದು- ಎಂದು ಶ್ರುತಿಯು ಸಾರುತ್ತಿದೆ. **ಇಹಾಮುತ್ರಾರ್ಥಫಲಭೋಗವಿರಾಗ** ಎಂದರೆ ಈ ಲೋಕದ ವಿಷಯಗಳನ್ನು ಭೋಗಿಸುವದರಲ್ಲಿಯೂ ಪರಲೋಕದ ವಿಷಯಗಳನ್ನು ಭೋಗಿಸುವದರಲ್ಲಿಯೂ ದೋಷವನ್ನೂ ದುಃಖವನ್ನೂ ಕಂಡು ಅದರಲ್ಲಿ ಅನುರಕ್ತನಾಗದ ಬೇಸತ್ತಿರುವದು. **ಶಮದಮಾದಿಸಾಧನಸಂಪತ್ತು** ಎಂದರೆ ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಾನ- ಎಂಬ ಆರು ಸಾಧನಗಳನ್ನು ಅಳವಡಿಸಿಕೊಂಡಿರುವದು.

**ಮುಮುಕ್ಷುತ್ವ**ವೆಂದರೆ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಲೇ ಬೇಕೆಂದು ತೀವ್ರವಾದ ಇಚ್ಛೆಯುಳ್ಳವನಾಗಿರುವದು. ಇವುಗಳನ್ನು ಸಾಧನವಿಚಾರದ ಸಂದರ್ಭದಲ್ಲಿ ವಿವರಿಸಲಾಗುವದು.

(೧) ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ॥ - ಛಾಂ. ೮-೧-೬.

ತತ್ ತತ್ರ ಯಥಾ ಇಹಲೋಕೇ ತಾಸಾಮೇವ ಸ್ವಾಮ್ಯನುಶಾಸನಾನುವರ್ತಿನೀನಾಂ ಪ್ರಜಾನಾಂ ಸೇವಾದಿಜಿತೋ ಲೋಕಃ ಪರಾಧೀನೋಪಭೋಗಃ ಕ್ಷೀಯತೇ ಅನ್ತವಾನ್ ಭವತಿ। ಅಥೇದಾನೀಂ ದಾರ್ಷ್ಟಾನ್ತಿಕಮ್ ಉಪಸಂಹರತಿ । ಏವಮೇವ ಅಮುತ್ರ ಅಗ್ನಿಹೋತ್ರಾದಿ ಪುಣ್ಯಜಿತೋ ಲೋಕಃ ಪರಾಧೀನೋಪಭೋಗಃ ಕ್ಷೀಯತ ಏವ ಇತಿ ॥

- ಛಾಂ. ಭಾ. ೮-೧-೬.-೬೧೪

(೨) ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾ-ನ್ನಾಸ್ತ್ಯಕೃತಃ ಕೃತೇನ ॥ -ಮುಂ. ೧-೨-೧೨

ಅಥೇದಾನೀಮ್ ಅಸ್ಮಾತ್ ಸಾಧ್ಯಸಾಧನರೂಪಾತ್ ಸರ್ವಸ್ಮಾತ್ ಸಂಸಾರಾತ್ ವಿರಕ್ತಸ್ಯ ಪರಸ್ಯಾಂ ವಿದ್ಯಾಯಾಮ್ ಅಧಿಕಾರಪ್ರದರ್ಶನಾರ್ಥಮ್ ಇದಮುಚ್ಯತೇ ॥

- ಮುಂ. ಭಾ. ೧-೨-೧೨-೪೪

**ಈ ಮಂತ್ರದ ಭಾಷ್ಯವನ್ನು ಪೂರ್ಣವಾಗಿ ನೋಡಿರಿ.**

(೩) ಜಾನಾಮ್ಯಹಗ್ಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್॥

ಕ. ೧-೨-೧೦

ಜಾನಾಮ್ಯಹಂ ಶೇವಧಿಃ ನಿಧಿಃ ಕರ್ಮಫಲಲಕ್ಷಣಃ ನಿಧಿರಿವ ಪ್ರಾರ್ಥ್ಯತೇ ಇತಿ । ಅಸೌ ಅನಿತ್ಯಮ್ ಅನಿತ್ಯಃ ಇತಿ ಜಾನಾಮಿ । ನ ಹಿ ಯಸ್ಮಾತ್ ಅನಿತ್ಯೈಃ ಅಧ್ರುವೈಃ ಯತ್ ನಿತ್ಯಂ ಧ್ರುವಂ ತತ್ ಪ್ರಾಪ್ಯತೇ ಪರಮಾತ್ಮಾಖ್ಯಃ ಶೇವಧಿಃ। ಯಸ್ತು ಅನಿತ್ಯಸುಖಾತ್ಮಕಃ ಶೇವಧಿಃ ಸ ಏವ ಅನಿತ್ಯೈಃ ದ್ರವ್ಯೈಃ ಪ್ರಾಪ್ಯತೇ ॥ - ಕ. ಭಾ. ೧-೨-೧೦-೬೨

(೪) ತಸ್ಮಾಜ್ಜುಗುಪ್ಸೇತ ॥ - ಛಾಂ. ಭಾ-೫-೧೦-೮.

ಯಸ್ಮಾದೇವಂ ಕಷ್ಟಾ ಸಂಸಾರಗತಿಃ । ತಸ್ಮಾತ್ ಜುಗುಪ್ಸೇತ । ಯಸ್ಮಾಚ್ಚ ಜನ್ಮ ಮರಣಜನಿತವೇದನಾನುಭವಕೃತಕ್ಷಣಾಃ ಕ್ಷುದ್ರಜನ್ತವೋ ಧ್ವಾನ್ತೇ ಚ ಘೋರೇ ದುಸ್ತರೇ ಪ್ರವೇಶಿತಾಃ ಸಾಗರ ಇವ ಅಗಾಧೇ ಅಪ್ಲವೇ ನಿರಾಶಾಶ್ಚ ಉತ್ತರಣಂ ಪ್ರತಿ ತಸ್ಮಾಚ್ಚ ಏವಂವಿಧಾಂ ಸಂಸಾರಗತಿಂ ಜುಗುಪ್ಸೇತ ಬೀಭತ್ಸೇತ, ಘೃಣೀ ಭವೇತ್, ಮಾ ಭೂತ್ ಏವಂವಿಧೇ ಸಂಸಾರಮಹೋದಧೌ ಘೋರೇ' ಪಾತಃ ಇತಿ ॥ -ಛಾಂ ಭಾ. ೫-೧೦-೮-೪೧೭

(೫) ತಸ್ಮಾದೇವಂವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾಽಽತ್ಮನ್ಯೇವಾಽಽತ್ಮಾನಂ ಪಶ್ಯತಿ ॥ - ಬೃ. ೪-೪-೨೩

## ೩. ಶಾಂಕರವೇದಾಂತದ ವಿಶೇಷಗಳು

೧೬. ವೇದಾಂತಕ್ಕೆ ಅಭಿಧೇಯಾದಿಗಳು ಇರುವದರಿಂದ ವೇದಾಂತದರ್ಶನ ವನ್ನು ಕುರಿತು ವಿಚಾರಮಾಡಬೇಕು ಎಂದು ಸಿದ್ಧವಾದರೂ ಶಾಂಕರವೇದಾಂತ ವನ್ನೇ ಏತಕ್ಕೆ ವಿಚಾರಮಾಡಬೇಕು? ಎಂದರೆ : ಶಾಂಕರಸಿದ್ಧಾಂತದ ವಿಶೇಷವನ್ನು ಆಗಲೇ (೧) ಸಂಗ್ರಹವಾಗಿ ಹೇಳಿದೆ. ಆದರೂ ಅದನ್ನು ಕುರಿತು ಸ್ವಲ್ಪ ವಿಶೇಷವಾದ ಚರ್ಚೆಯು ಇಲ್ಲಿ ಅವಶ್ಯವಾಗಿರುತ್ತದೆ. ಶಂಕರಾಚಾರ್ಯರಿಗಿಂತ ಹಿಂದೆ ಯಾರೂ ವೇದಾಂತಿಗಳಿರಲಿಲ್ಲವೆ? ಈಗಲೂ ಅನೇಕರು ಇರುವರಲ್ಲ ! ಶಾಂಕರ ವೇದಾಂತವನ್ನೇ ಪರಿಶೀಲಿಸುವದರಲ್ಲಿ ಯಾವ ವಿಶೇಷ ಪ್ರಯೋಜನವಿದೆ?- ಎಂದು ವಾಚಕರು ಕೇಳಬಹುದು. ಆಚಾರ್ಯರ ಪರಮಗುರುಗಳಾಗಿದ್ದ ಗೌಡಪಾದಾಚಾರ್ಯರ ಮಾಂಡೂಕ್ಯಕಾರಿಕೆಯನ್ನು ಬಿಟ್ಟರೆ ಅದಕ್ಕಿಂತ ಪ್ರಾಚೀನ ವಾದ ವೇದಾಂತಗ್ರಂಥಗಳು ನಮಗೆ ಯಾವವೂ ಪೂರ್ಣವಾಗಿ ಸಿಕ್ಕಿಲ್ಲ. ಆಚಾರ್ಯ ರಿಂದೀಚೆಗೆ ಮಂಡನಮಿಶ್ರನೆಂಬ ವೇದಾಂತಿಯು ಬರೆದ **"ಬ್ರಹ್ಮಸಿದ್ಧಿ"** ಎಂಬ ಅದ್ವೈತಗ್ರಂಥವೊಂದು ಕೆಲವು ವರ್ಷಗಳ ಕೆಳಗೆ ಬೆಳಕಿಗೆ ಬಂತು. ಈಗ ರಾಮಾನುಜ, ಮಧ್ವ- ಮುಂತಾದ ದ್ವೈತಸಿದ್ಧಾಂತವನ್ನವಲಂಬಿಸಿದ ಕೆಲವು ಭಾಷ್ಯಕಾರರುಗಳ ವೇದಾಂತಪ್ರಕ್ರಿಯೆಗಳೂ ಇರುತ್ತವೆ. ಆದರೆ ಶಾಂಕರ ಸಂಪ್ರದಾಯವನ್ನವಲಂಬಿಸಿದ ವೇದಾಂತಿಗಳ ಪ್ರಕ್ರಿಯೆಯಲ್ಲಿರುವ ವಿಶೇಷ ವೇನೆಂದರೆ ವೇದಾಂತವಾಕ್ಯಜನ್ಯವಾದ ಆತ್ಮಜ್ಞಾನದಿಂದ **ಸದ್ಯೋಮುಕ್ತಿ**ಯಾಗುವ ದೆಂಬ ಉಪದೇಶವು. ಮಿಕ್ಕ ವೇದಾಂತಿಗಳೆಲ್ಲರೂ ಜ್ಞಾನಕಾಂಡವನ್ನು ವಿಧಿಪ್ರಧಾನ ವಾಗಿ ಮಾಡಿರುತ್ತಾರೆ. ಈಗ್ಗೆ ಶಂಕರಾಚಾರ್ಯರ ಅನುಯಾಯಿಗಳೆಂದು ಹೇಳಿಕೊಳ್ಳುವವರೂ ಸಾಂಖ್ಯಯೋಗಾದಿಪ್ರಕ್ರಿಯೆಗಳನ್ನು ಕಲೆಬೆರಕೆಮಾಡಿಕೊಂಡು ಜ್ಞಾನಕಾಂಡಕ್ಕೆ ಹೇಗಾದರೂಮಾಡಿ ವಿಧಿಯ ಸಂಬಂಧವನ್ನು ಗಂಟುಹಾಕುವ ಪ್ರಯತ್ನವನ್ನು ಮಾಡುತ್ತಾರೆ. ಈ ವೇದಾಂತದರ್ಶನಗಳೆಲ್ಲ, ವೇದಾಂತವಲ್ಲದ ದರ್ಶನಗಳಂತೆಯೇ, ಪರಸ್ಪರ ವಿರುದ್ಧವಾಗಿರುತ್ತವೆ ; ಪೂರ್ವಾಪರವಿರುದ್ಧ ವಾಗಿಯೂ ಇವೆ. ಅವು ವೇದಾಂತವಾಕ್ಯವನ್ನೇ ಪ್ರಮಾಣವಾಗಿ ಹಿಡಿದು ತತ್ತ್ವವನ್ನು ನಿರೂಪಿಸುವದೂ ಇಲ್ಲ. ಯಾವದೊಂದು **ವಿವಾದಕ್ಕಾಗಲಿ ವಿರೋಧಕ್ಕಾಗಲಿ ಎಡಗೊಡದ ಅದ್ವೈತದರ್ಶನವು** ತಮ್ಮದೆಂದು ಆಚಾರ್ಯರವರೇ ಮಾಂಡೂಕ್ಯ ಕಾರಿಕೆಯ ಭಾಷ್ಯದಲ್ಲಿ ಹೇಳಿಕೊಂಡಿರುತ್ತಾರೆ.

(೧) ಅಸ್ಪರ್ಶಯೋಗೋ ವೈ ನಾಮ ಸರ್ವಸತ್ತ್ವಸುಖೋ ಹಿತಃ ।
ಅವಿವಾದೋಽವಿರುದ್ಧಶ್ಚ ದೇಶಿತಸ್ತಂ ನಮಾಮ್ಯಹಮ್ ॥ - ಮಾಂ. ಕಾ. ೪-೨

ಅಧುನಾ ಅದ್ವೈತದರ್ಶನಯೋಗಸ್ಯ ನಮಸ್ಕಾರಃ ತತ್ ಸ್ತುತಯೇ । ಸ್ಪರ್ಶನಂ ಸ್ಪರ್ಶಃ ಸಂಬನ್ಧಃ ನ ವಿದ್ಯತೇ ಯಸ್ಯ ಯೋಗಸ್ಯ ಕೇನಚಿತ್ ಕದಾಚಿದಪಿ ಸೋಽಸ್ಪರ್ಶಯೋಗಃ, ಬ್ರಹ್ಮಸ್ವಭಾವ ಏವ । ವೈ ನಾಮ ಇತಿ । ಬ್ರಹ್ಮವಿದಾಮ್ ಅಸ್ಪರ್ಶಯೋಗಃ ಇತ್ಯೇವಂ ಪ್ರಸಿದ್ಧಃ ಇತ್ಯರ್ಥಃ । ಸ ಚ ಸರ್ವಸತ್ತ್ವಸುಖೋ ಭವತಿ । ಕಶ್ಚಿತ್ ಅತ್ಯನ್ತಸುಖಸಾಧನವಿಶಿಷ್ಟೋಽಪಿ ದುಃಖರೂಪಃ ಯಥಾ ತಪಃ । ಅಯಂ ತು ನ ತಥಾ । ಕಿಂ ತರ್ಹಿ ? ಸರ್ವಸತ್ತ್ವಾನಾಂ ಸುಖಂ । ತಥಾ ಇಹ ಭವತಿ ಕಶ್ಚಿತ್ ವಿಷಯೋಪಭೋಗಃ ಸುಖಃ, ನ ಹಿತಃ । ಅಯಂ ತು ಸುಖಃ ಹಿತಶ್ಚ । ನಿತ್ಯಮ್ ಅಪ್ರಚಲಿತಸ್ವಭಾವತ್ವಾತ್ । ಕಿಂ ಚ ಅವಿವಾದಃ ವಿರುದ್ಧಂ ವದನಂ ವಿವಾದಃ ಪಕ್ಷಪ್ರತಿಪಕ್ಷಪರಿಗ್ರಹೇಣ ಯಸ್ಮಿನ್ ನ ವಿದ್ಯತೇ ಸೋಽವಿವಾದಃ । ಕಸ್ಮಾತ್? ಯತೋಽವಿರುದ್ಧಶ್ಚ। ಯಃ ಈದೃಶೋ ಯೋಗೋ ದೇಶಿತಃ ಉಪದಿಷ್ಟಃ ಶಾಸ್ತ್ರೇಣ ತಂ ನಮಾಮ್ಯಹಮ್ । ಪ್ರಣಮಾಮಿ ಇತ್ಯರ್ಥಃ ॥ - ಮಾಂ. ಕಾ ಭಾ. ೪-೨-೨೧೫

೧೭. ಮಿಕ್ಕ ವೇದಾಂತಮತಗಳಾಗಲಿ ಇತರ ದರ್ಶನಗಳಾಗಲಿ ಒಂದಕ್ಕೊಂದು ವಿರುದ್ಧವಾಗಿರುತ್ತವೆ ಎಂಬುದೇ ಅವುಗಳ ದೋಷವಾದರೆ ಶಾಂಕರ ದರ್ಶನವು ಅವುಗಳೆಲ್ಲಕ್ಕೂ ವಿರುದ್ಧವಾಗಿರುವದರಿಂದ ಇದೂ ದುಷ್ಟವೆಂದೇ ಆಗುತ್ತದೆ. ಶಾಂಕರಮತವನ್ನು ತಿಳಿಸುವದಕ್ಕೆ ಹೊರಟಿರುವ ವ್ಯಾಖ್ಯಾನಪ್ರಕಾರಗಳು ಒಂದಕ್ಕೊಂದು ವಿರುದ್ಧವಾಗಿರುವದು ಅವುಗಳ ದೋಷವಾದರೆ ಈ ಗ್ರಂಥದಲ್ಲಿ ಪ್ರತಿಪಾದಿಸಿರುವ ಪ್ರಕಾರವು ಅವುಗಳೆಲ್ಲಕ್ಕೂ ವಿರುದ್ಧವಾಗಿರುವದರಿಂದ ಇದರಲ್ಲಿಯೂ ದೋಷವಿದೆಯೆಂದೇ ಆಗುತ್ತದೆ. ಹೀಗಿರುವಲ್ಲಿ ಇಲ್ಲಿ ಹೇಳಿರುವದೇ ಶಾಂಕರಪ್ರಕ್ರಿಯೆಯೆಂದಾಗಲಿ, ಇದು ಯಾವ ದೋಷಗಳೂ ಇಲ್ಲದ್ದೆಂದಾಗಲಿ ಹೇಗೆ ನಿರ್ಣಯಿಸುವದು ?- ಎಂದು ಜಿಜ್ಞಾಸುಗಳು ಶಂಕಿಸಬಹುದು.

ಇದಕ್ಕೆ ಪರಿಹಾರವೇನೆಂದರೆ : ಆಚಾರ್ಯರವರ ಗ್ರಂಥಗಳೆಂದು ಎಲ್ಲರೂ ಒಪ್ಪಿರುವ ಪ್ರಸ್ಥಾನತ್ರಯಭಾಷ್ಯಗಳನ್ನೇ ಪ್ರಮಾಣವಾಗಿ ಹಿಡಿದು **ಭಾಷ್ಯವಾಕ್ಯಗಳಿಗೆ ಏಕವಾಕ್ಯತೆಯನ್ನು** ಮಾಡಿ ಅವುಗಳ ಆಧಾರದಿಂದಲೇ ವೇದಾಂತಸಿದ್ಧಾಂತವನ್ನು ಸ್ಥಾಪಿಸಿರುವದು ಈ ಗ್ರಂಥದಲ್ಲಿಯೇ ವಿಮರ್ಶಕರಿಗೆ ಕಾಣುತ್ತದೆ. ಆದ್ದರಿಂದ ಇಲ್ಲಿ ತಿಳಿಸಿರುವದೇ ಶಾಂಕರದರ್ಶನವು. ಮಿಕ್ಕ ವ್ಯಾಖ್ಯಾನಗಳು ಒಂದಕ್ಕೊಂದು ವಿರುದ್ಧವಾಗಿವೆ. ಪೂರ್ವಾಪರವಿರುದ್ಧವಾದ ಅಭಿಪ್ರಾಯಗಳಿಂದಲೂ ಕೂಡಿರುತ್ತವೆ, ಭಾಷ್ಯಕ್ಕೂ ವಿರುದ್ಧವಾಗಿವೆ. ಆದ್ದರಿಂದ ಅವು ಶುದ್ಧವಾದ ಶಾಂಕರವೇದಾಂತ ಪ್ರಕ್ರಿಯೆಗಳನ್ನು ತಿಳಿಸುವದಿಲ್ಲ. ಶಾಂಕರದರ್ಶನವು ಯಾವ ವಿರೋಧವೂ ಇಲ್ಲದ ಆತ್ಮೈಕತ್ವವನ್ನು ಶಾಸ್ತ್ರದಿಂದಲೂ ಯುಕ್ತಿಯಿಂದಲೂ ನಿಶ್ಚಯಿಸುವದರಿಂದ ಸಮ್ಯಗ್ದರ್ಶನವು. ಶ್ರುತಿಗೂ ಯುಕ್ತಿಗೂ ವಿರುದ್ಧವಾಗಿರುವದರಿಂದಲೂ ಒಂದಕ್ಕೊಂದು ವಿರುದ್ಧವಾಗಿರುವ ಯುಕ್ತಿಗಳನ್ನು ಆಶ್ರಯಿಸಿ ರಾಗದ್ವೇಷಾದಿಗಳಿಗೆ ಎಡೆಯನ್ನು

ಕೊಡುವ ದ್ವೈತವನ್ನೇ ಪ್ರತಿಪಾದಿಸುತ್ತಿರುವದರಿಂದಲೂ ಮಿಕ್ಕ ದರ್ಶನಗಳು ಮಿಥ್ಯಾದರ್ಶನಗಳು. ಇದಲ್ಲದೆ ದ್ವೈತವು ಅದ್ವೈತದಲ್ಲಿ ಕಲ್ಪಿತವಾಗಿರುತ್ತದೆ; **ಅದ್ವೈತವು ಅಕಲ್ಪಿತ**ವಾಗಿರುವದರಿಂದ ಪರಮಾರ್ಥವಾಗಿರುತ್ತದೆ. ಇಂಥ ಅದ್ವೈತ ವನ್ನು ಹೇಳಿರುವದರಿಂದಲೂ ಶಾಂಕರದರ್ಶನವು ಸಮ್ಯಗ್ದರ್ಶನವು. ಇದನ್ನು ಆಚಾರ್ಯರು ಶ್ರೀಗೌಡಪಾದರ ಮಾಂಡೂಕ್ಯಕಾರಿಕೆಯ ಭಾಷ್ಯದಲ್ಲಿ (೩-೧೭, ೧೮) ಸ್ಪಷ್ಟಪಡಿಸಿರುತ್ತಾರೆ. ಈಗಿನ ವೇದಾಂತಿಗಳು ಒಪ್ಪುತ್ತಿರುವ ಪ್ರಕ್ರಿಯೆಗಳೆಲ್ಲವೂ ನೇರಾಗಿಯೋ ಪರಂಪರೆಯಿಂದಲೋ ದ್ವೈತದಲ್ಲಿಯೇ ಕೊನೆಗಾಣುತ್ತಿರುವ ದರಿಂದ ಅವರ ದರ್ಶನಗಳೆಲ್ಲವೂ ಮಿಥ್ಯಾದರ್ಶನಗಳೇ. ಈ ಗ್ರಂಥದಲ್ಲಿ ನಾವು ತಿಳಿಸುವ ಪ್ರಕ್ರಿಯೆಯೊಂದೇ ನಿರ್ದುಷ್ಟವಾದ ಅದ್ವೈತಸಿದ್ಧಾಂತವನ್ನು ಹೊರ ಪಡಿಸುವದರಿಂದ ಶ್ರೇಯಸ್ಕಾಮಿಗಳಾದ ಜಿಜ್ಞಾಸುಗಳು ಇದನ್ನೇ ಆದರಿಸಬೇಕು. ಈ ಸ್ಪಷ್ಟೋಕ್ತಿಯನ್ನು ನಾವು ಖ್ಯಾತಿಲಾಭಪೂಜಾದಿಗಳ ಆಶೆಯಿಂದಲಾಗಲಿ ಮತ್ತೊಬ್ಬರಲ್ಲಿರುವ ಅಸೂಯಾಮಾತ್ಸರ್ಯಗಳಿಂದಾಗಲಿ ಬರೆದಿರುವದಿಲ್ಲ. ತತ್ತ್ವ ಪಕ್ಷಪಾತಿಗಳಾದ ಜಿಜ್ಞಾಸುಗಳಿಗೆ ನಿಜವನ್ನು ತಿಳಿಸುವದಕ್ಕಾಗಿ ಬರೆದಿರುತ್ತೇವೆ.

(೧) ಸ್ವಸಿದ್ಧಾನ್ತವ್ಯವಸ್ಥಾಸು ಸ್ವಸಿದ್ಧಾನ್ತರಚನಾನಿಯಮೇಷು ಕಪಿಲಕಣಾದ ಬುದ್ಧಾರ್ಹತಾದಿದೃಷ್ಟ್ಯನುಸಾರಿಣೋ ದ್ವೈತಿನೋ ನಿಶ್ಚಿತಾಃ । ಏವಮೇವೈಷ ಪರಮಾರ್ಥಃ ನಾನ್ಯಥಾ ಇತಿ ತತ್ರ ತತ್ರ ಅನುರಕ್ತಾಃ । ಪ್ರತಿಪಕ್ಷಂ ಚ ಆತ್ಮನಃ ಪಶ್ಯನ್ತಃ ತಂ ದ್ವಿಷನ್ತಃ ಇತ್ಯೇವಂ ರಾಗದ್ವೇಷೋಪೇತಾಃ ಸ್ವಸಿದ್ಧಾನ್ತದರ್ಶನನಿಮಿತ್ತಮೇವ ಪರಸ್ಪರಮ್ ಅನ್ಯೋನ್ಯಂ ವಿರುಧ್ಯನ್ತೇ । ತೈಃ ಅನ್ಯೋನ್ಯವಿರೋಧಿಭಿಃ ಅಸ್ಮದೀಯಃ ಅಯಂ ವೈದಿಕಃ ಸರ್ವಾನನ್ಯತ್ವಾತ್ ಆತ್ಮೈಕತ್ವದರ್ಶನಪಕ್ಷಃ ನ ವಿರುಧ್ಯತೇ । ಯಥಾ ಸ್ವಹಸ್ತಪಾದಾದಿಭಿಃ । ಏವಂ ರಾಗದ್ವೇಷಾದಿ ದೋಷಾನಾಸ್ಪದತ್ವಾತ್ ಆತ್ಮೈಕತ್ವಬುದ್ಧಿರೇವ ಸಮ್ಯಗ್ದರ್ಶನಮ್ ಇತ್ಯಭಿಪ್ರಾಯಃ ॥

- ಮಾಂ. ಕಾ. ಭಾ. ೩-೧೭-೧೬೧

(೨) ಯದಿ ಚ ತೇಷಾಂ ಭ್ರಾನ್ತಾನಾಂ ದ್ವೈತದೃಷ್ಟಿಃ, ಅಸ್ಮಾಕಮ್ ಅದ್ವೈತ ದೃಷ್ಟಿರಭ್ರಾನ್ತಾನಾಮ್ । ತೇನಾಯಂ ಹೇತುನಾ ಅಸ್ಮತ್ಪಕ್ಷಃ ನ ವಿರುಧ್ಯತೇ ತೈಃ । "ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ" (ಬೃ. ೨-೫-೧೯), "ನ ತು ತದ್ದ್ವಿತೀಯಮಸ್ತಿ" (ಬೃ. ೪-೩-೨೩) ಇತಿ ಶ್ರುತೇಃ । ಯಥಾ ಮತ್ತಗಜಾರೂಢಃ ಉನ್ಮತ್ತಂ ಭೂಮಿಷ್ಠಂ. "ಗಜಾರೂಢೋಽಹಮ್, ವಾಹಯ ಮಾಂ ಪ್ರತಿ" ಇತಿ ಬ್ರುವಾಣಮಪಿ ತಂ ಪ್ರತಿ ನ ವಾಹಯತಿ ಅವಿರೋಧಬುದ್ಧ್ಯಾ, ತದ್ವತ್ ॥ - ಮಾಂ. ಕಾ. ಭಾ. ೩-೧೮-೧೬೩

೧೮. ಶಾಸ್ತ್ರವನ್ನು ಮಿಕ್ಕ ದರ್ಶನಕಾರರೂ ಅವಲಂಬಿಸುತ್ತಾರೆ. ಆದರೆ ಶಾಸ್ತ್ರವನ್ನೇ ಪ್ರಧಾನವಾಗಿ ನಂಬಿರುವದಿಲ್ಲ ; ತಮ್ಮ ತಮ್ಮ ಸಿದ್ಧಾಂತಕ್ಕೆ ಬೇಕಾದ ಅಸಾಧಾರಣತರ್ಕವನ್ನೂ ನಂಬಿರುತ್ತಾರೆ. ಇದಲ್ಲದೆ ಅವರು ತಮ್ಮ ತರ್ಕವನ್ನೇ ಮುಖ್ಯವಾಗಿ ನಂಬಿ ಶಾಸ್ತ್ರವನ್ನು ಅದಕ್ಕೆ ಹೊಂದುವಂತೆ ಎಳೆಯುತ್ತಿರುವದರಿಂದ

ಅವರ ಮತದಲ್ಲಿ ತರ್ಕಕ್ಕೆ ಅಗ್ರಸ್ಥಾನವಿದೆ, ಶಾಸ್ತ್ರಕ್ಕೆ ಎರಡನೆಯ ಸ್ಥಾನವಿದೆ. ಆದ್ದರಿಂದ ಅವರು **ತಾರ್ಕಿಕರು,** ವೇದಾಂತಿಗಳಲ್ಲ. ಆದರೆ ಆಚಾರ್ಯರ ಮತದಲ್ಲಿ ಅಭಿಧೇಯವಾದ **ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣ**ವಾಗಿರುತ್ತದೆ. ಶಾಸ್ತ್ರವೇ ಬ್ರಹ್ಮಕ್ಕೆ ಪ್ರಮಾಣವೆಂಬ ಆಚಾರ್ಯರ ಮತವು ''ಶಾಸ್ತ್ರಯೋನಿತ್ವಾತ್'' (೧-೧-೩) ಎಂಬ ವೇದಾಂತಮೀಮಾಂಸಾಸೂತ್ರಕ್ಕೆ ಅನುಗುಣವಾಗಿರುತ್ತದೆ. ಈ ಕಾರಣದಿಂದ ಅವರದೇ ನಿಜವಾದ ವೇದಾಂತದರ್ಶನವು. ಶಾಸ್ತ್ರ, ವೇದ, ಶ್ರುತಿ, ವೇದಾಂತ, ಉಪನಿಷತ್ತು, ಆಗಮ- ಇವೆಲ್ಲ ಪರ್ಯಾಯಶಬ್ದಗಳು.

(೧) ಯಥೋಕ್ತಂ ಋಗ್ವೇದಾದಿಶಾಸ್ತ್ರಂ ಯೋನಿಃ ಕಾರಣಂ ಪ್ರಮಾಣಮ್ ಅಸ್ಯ ಬ್ರಹ್ಮಣಃ ಯಥಾವತ್ ಸ್ವರೂಪಾಧಿಗಮೇ । ಶಾಸ್ತ್ರಾದೇವ ಪ್ರಮಾಣಾತ್ ಜಗತೋ ಜನ್ಮಾದಿಕಾರಣಂ ಬ್ರಹ್ಮ ಅಧಿಗಮ್ಯತೇ ಇತ್ಯಭಿಪ್ರಾಯಃ ॥ - ಸೂ. ಭಾ. ೧-೧-೩-೩೩

(೨) ನ ಹಿ ಇದಮತಿಗಮ್ಭೀರಂ ಭಾವಯಾಥಾತ್ಮ್ಯಂ ಮುಕ್ತಿನಿಬನ್ಧನಮ್ ಆಗಮಮನ್ತರೇಣ ಉತ್ಪ್ರೇಕ್ಷಿತುಮಪಿ ಶಕ್ಯಮ್ ॥ - ಸೂ. ಭಾ. ೨-೧-೧೧-೪೨೮

೧೯. ಶಂಕರಾಚಾರ್ಯರು ನಂಬಿರುವ ಶಾಸ್ತ್ರವನ್ನೇ ಅವರ ಹಿಂದಿನ ವೇದಾಂತಿಗಳೂ ತಮ್ಮ ಸಿದ್ಧಾಂತಕ್ಕೆ ಪ್ರಮಾಣವೆಂದು ನಂಬಿದ್ದರು. ಹೀಗಿರುವಲ್ಲಿ ಆ ಆಚಾರ್ಯರು ಮಾತ್ರ ಶಾಸ್ತ್ರಪ್ರಮಾಣವನ್ನು ಹಿಡಿದಿರುತ್ತಾರೆಂಬುದರಲ್ಲಿ ಹೆಚ್ಚುಗಾರಿಕೆ ಏನಿದ್ದೀತು?- ಎಂದು ಕೆಲವರಿಗೆ ಯೋಚನೆ ಬರಬಹುದು.

ಆಚಾರ್ಯರು ಮಿಕ್ಕವರಂತೆ ಶಾಸ್ತ್ರವನ್ನು ಬರಿಯ ನಂಬಿಕೆಯ ಆಧಾರದ ಮೇಲೆ ಪ್ರಮಾಣವೆಂದು ಹಿಡಿದಿಲ್ಲ. ಕರ್ಮಕಾಂಡದಲ್ಲಿ ವೇದವಾಕ್ಯವು ಹೇಳಿರುವದಕ್ಕೆ ಬಾಧಕವಾದ ಪ್ರಮಾಣವಿಲ್ಲದ್ದರಿಂದಲೂ ವೇದವು ಅಪೌರುಷೇಯವಾದ್ದರಿಂದಲೂ ಆ ವಾಕ್ಯಗಳು ಪ್ರಮಾಣ ಎಂದು ಪೂರ್ವಮೀಮಾಂಸಕರು ನಂಬಿರುತ್ತಾರೆ. ಜ್ಞಾನಕಾಂಡದ ವಾಕ್ಯಗಳ ಪ್ರಾಮಾಣ್ಯವೂ ಹೀಗೆಯೇ ಎಂದು ಮಿಕ್ಕ ವೇದಾಂತಿಗಳ ಮತವು. ಆದರೆ ಈ ಆಚಾರ್ಯರು ಹೇಳುವದೇನೆಂದರೆ : ಕರ್ಮಫಲವು ನಿಜವಾಗಿ ಆಗುವದೊ, ಇಲ್ಲವೊ - ಎಂಬ ಶಂಕೆಯುಂಟಾದರೂ ಆಗಬಹುದು. ಏಕೆಂದರೆ ಆ ಫಲವು ಪರೋಕ್ಷವಾಗಿರುತ್ತದೆ. ಆದರೆ **ವೇದಾಂತವಾಕ್ಯಜನ್ಯವಾದ ಫಲವು ಅನುಭವಾರೂಢ**ವಾಗಿರುವದರಿಂದ ಅದರ ವಿಷಯಕ್ಕೆ ಇಂಥ ಶಂಕೆಯುಂಟಾಗಲು ಕಾರಣವಿರುವದಿಲ್ಲ ಎಂದು ಆಚಾರ್ಯರು ಹೇಳುತ್ತಾರೆ. ಈ ಪ್ರಕ್ರಿಯೆಯಲ್ಲಿ ಒಪ್ಪಿರುವ ವಾಕ್ಯಪ್ರಾಮಾಣ್ಯದ ವಿಶೇಷವೇನೆಂದರೆ: ಧರ್ಮಜಿಜ್ಞಾಸೆಯಲ್ಲಿ ಬರಿಯ ಶ್ರುತ್ಯಾದಿಗಳೇ ಪ್ರಮಾಣವು; ಆದರೆ **ಬ್ರಹ್ಮಜಿಜ್ಞಾಸೆಯಲ್ಲಿ ಶ್ರುತ್ಯಾದಿಗಳೂ ಅನುಭವಾದಿಗಳೂ ಯಥಾಸಂಭವವಾಗಿ ಪ್ರಮಾಣವಾಗಿರುತ್ತವೆ.**

(೧) ನ ಧರ್ಮಜಿಜ್ಞಾಸಾಯಾಮಿವ ಶ್ರುತ್ಯಾದಯ ಏವ ಪ್ರಮಾಣಂ ಬ್ರಹ್ಮಜಿಜ್ಞಾಸಾಯಾಮ್, ಕಿಂ ತು ಶ್ರುತ್ಯಾದಯೋಽನುಭವಾದಯಶ್ಚ- ಯಥಾಸಂಭವಮ್ ಇಹ ಪ್ರಮಾಣಮ್ ॥
- ಸೂ. ಭಾ. ೧-೧-೨-೨೮

(೨) ಕರ್ಮಫಲೇ ಹಿ ಸ್ವರ್ಗಾದೌ ಅನುಭವಾನಾರೂಢೇ ಸ್ಯಾದಾಶಙ್ಕಾ ಭವೇದ್ವಾ ನ ವಾ ಇತಿ। ಅನುಭವಾರೂಢಂ ತು ಜ್ಞಾನಫಲಮ್ । ''ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ'' (ಬೃ.೩-೪-೧) ಇತಿ ಶ್ರುತೇಃ। ''ತತ್ತ್ವಮಸಿ'' ಇತಿ ಚ ಸಿದ್ಧವತ್ ಉಪದೇಶಾತ್॥
- ಸೂ. ಭಾ. ೩-೩-೩೨-೩೮೧

೨೦. ಬೇರೆಯ ಮತದ ವೇದಾಂತಿಗಳೂ ಶಾಸ್ತ್ರವನ್ನು ಪ್ರಮಾಣವಾಗಿ ಹಿಡಿದೇ ಶಾಂಕರಮತವನ್ನು ಖಂಡಿಸುತ್ತಾರೆ. ವ್ಯಾಖ್ಯಾನಪ್ರಸ್ಥಾನದವರೂ ಶಾಸ್ತ್ರ ಪ್ರಮಾಣವನ್ನು ಹಿಡಿದೇ ತಮ್ಮ ತಮ್ಮ ಪ್ರಕ್ರಿಯೆಯನ್ನು ಪ್ರತಿಪಾದಿಸುತ್ತಾ ಮಿಕ್ಕವರ ಮತಗಳನ್ನು ಖಂಡಿಸುತ್ತಾರೆ. ಆದ್ದರಿಂದ ಈ ಗ್ರಂಥದಲ್ಲಿ ತಿಳಿಸುವ ಪ್ರಕ್ರಿಯೆಯು ಅನೇಕ ವೇದಾಂತಪ್ರಕ್ರಿಯೆಗಳಲ್ಲಿ ಒಂದಾದೀತೇ ಹೊರತು ಇದರಲ್ಲಿ ಅವುಗಳಲ್ಲಿಲ್ಲದ ಬೇರೆಯ ವಿಶೇಷವೇನೂ ಇರಲಾರದು- ಎಂದು ತಟಕ್ಕನೆ ತೋರಬಹುದು. ಆದರೆ ವೇದಾಂತವಿಚಾರವು ಅನುಭವಾವಸಾನವಾಗಿರುವದೆಂದು ನಾವು ಮೇಲೆ ಹೇಳಿರುವದನ್ನು ನೆನಪಿಟ್ಟವರಿಗೆ ಈ ಅಭಿಪ್ರಾಯವು ಅಯುಕ್ತವೆಂದು ತಾನೇ ಸ್ಫುಟವಾಗುತ್ತದೆ. ಏಕೆಂದರೆ ಉಪಕ್ರಮೋಪಸಂಹಾರಾದಿ ಲಿಂಗಗಳನ್ನು ಕಲ್ಪಿಸಿಕೊಂಡು ವೇದಾಂತತಾತ್ಪರ್ಯವನ್ನು ನಿರ್ಣಯಿಸುವ ಪ್ರಕ್ರಿಯೆಗಳು ಬೇಕಾದಷ್ಟು ಇರಬಹುದು; ಆದರೆ ಅನುಭವವು ಎಲ್ಲರಿಗೂ ಸಮಾನವಾಗಿರುವದರಿಂದ ಅನುಭವಾನುಸಾರವಾಗಿ ವಸ್ತುವನ್ನು ನಿರ್ಧಾರಮಾಡುವ ಪ್ರಕ್ರಿಯೆಗಳು ಒಂದಕ್ಕಿಂತ ಹೆಚ್ಚು ಇರಲು ಸಾಧ್ಯವೇ ಇಲ್ಲ. ವೇದಾಂತಶಾಸ್ತ್ರವು ಮುಖ್ಯವಾಗಿ ಭೂತವಸ್ತುವಾದ ಬ್ರಹ್ಮವನ್ನು ಹೇಳುತ್ತದೆ ; **ವಸ್ತುವು ಹೀಗೂ ಇದೆ, ಹಾಗೂ ಇದೆ; ಇದ್ದೂ ಇದೆ, ಇಲ್ಲವೂ ಇಲ್ಲ- ಎಂದು ವಿಕಲ್ಪಿಸುವದಕ್ಕೆ ಬರಲಾರದು. ವಸ್ತು**ನಿರ್ಧಾರಣವನ್ನು ಮಾಡುವದಕ್ಕೆ ಅವಲಂಬಿಸಿರುವ ದೃಷ್ಟಿಭೇದಗಳು ಅನೇಕವಾಗಿರಬಾರದೆಂದೇನೂ ಅಭಿಪ್ರಾಯವಲ್ಲ; ಆದರೆ ಒಂದಕ್ಕೊಂದು ವಿರುದ್ಧವಾಗಿರುವ ವಿಚಾರಭೇದಗಳನ್ನು ಈ ಅರ್ಥದಲ್ಲಿ ದೃಷ್ಟಿಭೇದಗಳೆಂದು ಕಲ್ಪಿಸುವದಕ್ಕೆ ಎಂದಿಗೂ ಬರಲಾರದು. ಅನುಭವವಿರುದ್ಧವಾಗಿ 'ಬೆಂಕಿಯು ತಣ್ಣಗಿದೆ, ಅದರಲ್ಲಿ ಬೆಳಕಿಲ್ಲ' ಎಂದು ನೂರು ವಚನಗಳು ಹೇಳಿದರೂ ಅವು ಪ್ರಮಾಣವೆನಿಸಲಾರವಾದ್ದರಿಂದ ಬರಿಯ ಶಾಸ್ತ್ರ ಪ್ರಾಮಾಣ್ಯವನ್ನು ಇಟ್ಟುಕೊಂಡಿರುವ ಇತರಪ್ರಕ್ರಿಯೆಗಳಿಗೂ ಶಾಸ್ತ್ರಸಿದ್ಧಾಂತವನ್ನು ಅನುಭವಕ್ಕೆ ಹೊಂದಿಸಿಕೊಡುವ ಶಾಂಕರಪ್ರಕ್ರಿಯೆಗೂ ಬಹಳ ತಾರತಮ್ಯವಿರುತ್ತದೆ.

(೧) ಅನುಭವಾವಸಾನತ್ವಾತ್, ಭೂತವಸ್ತು ವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ॥
- ಸೂ. ಭಾ. ೧-೧-೨-೨೮

(೨) ನ ತು ವಸ್ತು 'ಏವಮ್, ನೈವಮ್', 'ಅಸ್ತಿ, ನಾಸ್ತಿ' ಇತಿ ವಾ ವಿಕಲ್ಪ್ಯತೇ ॥
- ಸೂ. ಭಾ. ೧-೧-೨-೨೮

(೩) ನ ಹಿ ಶ್ರುತಿಶತಮಪಿ 'ಶೀತೋಽಗ್ನಿಃ ಅಪ್ರಕಾಶೋವಾ' ಇತಿ ಬ್ರುವತ್ ಪ್ರಾಮಾಣ್ಯಮ್ ಉಪೈತಿ । ಯದಿ ಬ್ರೂಯಾತ್ ಶೀತೋಽಗ್ನಿಃ ಅಪ್ರಕಾಶೋ ವಾ ಇತಿ ತಥಾಪಿ ಅರ್ಥಾನ್ತರಂ ಶ್ರುತೇರ್ವಿವಕ್ಷಿತಂ ಕಲ್ಪ್ಯಮ್ । ಪ್ರಾಮಾಣ್ಯಾನ್ಯಥಾನುಪಪತ್ತೇಃ । ನ ತು ಪ್ರಮಾಣಾನ್ತರವಿರುದ್ಧಮ್, ಸ್ವವಚನವಿರುದ್ಧಂ ವಾ ॥ - ಗೀ. ಭಾ. ೧೮- ೬೬-೧೧೪೦

೨೧. ಅನುಭವವೂ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿರಬಹುದು. ಆದ್ದರಿಂದ ಶಾಸ್ತ್ರವನ್ನು ನಮ್ಮ ಅನುಭವಕ್ಕೆ ಹೊಂದಿಸಿಕೊಂಡು ಅರ್ಥಮಾಡುವದು ಹೇಗೆ ಸರಿಯಾದೀತು? - ಎಂದು ಕೆಲವರ ಶಂಕೆ. ಆದರೆ ಭ್ರಾಂತಿಯ ಅನುಭವವನ್ನಾಗಲಿ, ಯಾರೋ ಒಬ್ಬೊಬ್ಬರಿಗೆ ಯೋಗ, ಮಂತ್ರಶಕ್ತಿ- ಮುಂತಾದ ನಿಮಿತ್ತದಿಂದ ಆಗುವ ವಿಶೇಷಾನುಭವವನ್ನಾಗಲಿ ನಾವು ಇಲ್ಲಿ ಅನುಭವವೆಂದು ಕರೆದಿರುವದಿಲ್ಲ. ದೇಶಕಾಲನಿಮಿತ್ತಗಳಿಗೆ ಕಟ್ಟುಬೀಳದ **ಸಾರ್ವತ್ರಿಕಾನುಭವವೇ** ನಿಜವಾದ ಅನುಭವವು. ಯಾವದು ಸ್ವರೂಪದಲ್ಲಿ ಹೆಚ್ಚುಕಡಿಮೆಯಾಗದೆ ಯಾವಾಗಲೂ ಒಂದೇ ರೂಪದಲ್ಲಿರಬಲ್ಲದೋ ಅದೇ ಪರಮಾರ್ಥವು ಅಥವಾ ಸತ್ಯವು; ಅದರ ವಿಷಯದ ಜ್ಞಾನವೇ ಸಮ್ಯಗ್ದರ್ಶನವು. ವೇದಾಂತದರ್ಶನವು ಪರಮಾರ್ಥ ಸತ್ಯವಾಗಿರುವ ಬ್ರಹ್ಮದ ಜ್ಞಾನವನ್ನು ಅನುಭವಾನುಸಾರವಾಗಿ ತಿಳಿಸುತ್ತದೆಯಾದ್ದರಿಂದ ಇಲ್ಲಿ ಅನುಭವಭೇದಕ್ಕೆ ಯಾವ ಅವಕಾಶವೂ ಇರುವದಿಲ್ಲ.

(೧) ಏಕರೂಪೇಣ ಹಿ ಅವಸ್ಥಿತೋ ಯೋಽರ್ಥಃ ಸ ಪರಮಾರ್ಥಃ। ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್ಜ್ಞಾನಮ್ ಇತ್ಯುಚ್ಯತೇ । ಯಥಾ ಅಗ್ನಿರುಷ್ಣಃ ಇತಿ ॥ ತತ್ರೈವಂ ಸತಿ ಸಮ್ಯಗ್ಜ್ಞಾನೇ ಪುರುಷಾಣಾಂ ವಿಪ್ರತಿಪತ್ತಿಃ ಅನುಪಪನ್ನಾ ॥ - ಸೂ. ಭಾ. ೨-೧-೧೧-೪೨೯

(೨) ಯದ್ವಿಷಯಾ ಬುದ್ಧಿಃ ನ ವ್ಯಭಿಚರತಿ ತತ್ ಸತ್, ಯದ್ವಿಷಯಾ ವ್ಯಭಿಚರತಿ ತತ್ ಅಸತ್॥ - ಗೀ. ಭಾ. ೨-೧೬-೨೭

(೩) ಸತ್ಯಮಿತಿ ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ನ ವ್ಯಭಿಚರತಿ ತತ್ ಸತ್ಯಮ್॥
- ತೈ. ಭಾ. ೨-೧-೯೮

೨೨. ಮಿಕ್ಕವರ ದರ್ಶನಗಳು ಒಂದಕ್ಕೊಂದು ವಿರುದ್ಧವಾಗಿರುವ ಮಾತ್ರದಿಂದ ಅವುಗಳೆಲ್ಲ ತಪ್ಪೆಂದು ತಿಳಿಯುವದು ಸರಿಯಲ್ಲ. ಅವುಗಳಲ್ಲಿ ಯಾವದೋ ಒಂದು ಸರಿಯೆಂದೇಕೆ ನಂಬಬಾರದು? ಶಾಂಕರವೇದಾಂತವು ಮಾತ್ರವೇ ಸರಿಯೆಂದು ನಂಬುವದೂ ಸರಿಯಾಗಿ ಕಾಣುವದಿಲ್ಲ ; ಏಕೆಂದರೆ ಹಿಂದೆ

ಸರಿಯೆಂದು ಜನರು ನಂಬಿದ್ದ ದರ್ಶನಗಳನ್ನು ಶಾಂಕರವೇದಾಂತಿಗಳು ಖಂಡಿಸಿ ಸರಿಯಲ್ಲವೆಂದು ತೋರಿಸಿರುವಂತೆ ಮುಂದೆ ಯಾವಾಗಲಾದರೂ ಒಬ್ಬರು ಶಾಂಕರದರ್ಶನವೂ ತಪ್ಪೆಂದು ತೋರಿಸಿಕೊಡಬಹುದು- ಎಂಬುದೊಂದು ಕೆಲವರ ಶಂಕೆ.

ಈ ಶಂಕೆಯು ಸರಿಯಲ್ಲ. ಏಕೆಂದರೆ ದ್ವೈತದರ್ಶನಗಳಲ್ಲಿ ಯಾವದೊಂದಕ್ಕೂ ಪ್ರತಿಪಕ್ಷವಿಲ್ಲವೆನ್ನುವ ಹಾಗೆ ಇಲ್ಲ. ಅವುಗಳಲ್ಲಿ ಒಂದು ಪಕ್ಷದವರು ಮತ್ತೊಂದು ಪಕ್ಷದ ಮೇಲೆ ಹಾಕುವ ದೋಷಗಳನ್ನು ಆ ಪಕ್ಷದವರು ಉದ್ಧರಿಸುವದಕ್ಕೆ ಆಗುವದೇ ಇಲ್ಲ. ದ್ವೈತದರ್ಶನಗಳು ಒಂದಕ್ಕೊಂದು ವಿರುದ್ಧವಾಗಿ ರಾಗದ್ವೇಷಗಳಿಗೆ ಎಡೆಗೊಡುತ್ತಿರುವದರಿಂದ ಅವು ಮಿಥ್ಯಾದರ್ಶನಗಳೆಂದು ಹಿಂದೆ (೧೬) ತಿಳಿಸಿದ್ದೆವು. ಆ ಪಕ್ಷಗಳು ತಪ್ಪೆಂಬುದಕ್ಕೆ ಮತ್ತೊಂದು ದರ್ಶನವು ಎದುರಾಳಿಯಾಗಿರವದೊಂದೇ ಕಾರಣವಲ್ಲ. ಅವುಗಳೆಲ್ಲವೂ ಸ್ವಭಾವದಿಂದಲೇ ತಪ್ಪುತಿಳಿವಳಿಕೆಯಿಂದ ಹುಟ್ಟಿದ ದರ್ಶನಗಳಾಗಿರುತ್ತವೆ. ಏಕೆಂದರೆ ಅವು ಪೂರ್ಣಾನುಭವದ ಆಧಾರದಮೇಲೆ ಹುಟ್ಟಿಲ್ಲ; ತಮತಮಗೆ ತೋರಿದಷ್ಟು ವಿಷಯಗಳ ಅನುಭವವನ್ನು ತೋರಿಸುವ ದರ್ಶನವೊಂದು ಹುಟ್ಟಬಾರದೇಕೆ ?- ಎಂದು ಯಾರಾದರೂ ಶಂಕಿಸಬಹುದು. ಆದರೆ ಅದು ಸಾಧ್ಯವಿಲ್ಲ; ಏಕೆಂದರೆ ಅದ್ವೈತದರ್ಶನವು ಪರಮಾರ್ಥತತ್ತ್ವವು ಆತ್ಮನೇ, ಅದಕ್ಕಿಂತ ಎರಡನೆಯದಿಲ್ಲ- ಎಂಬ ಅನುಭವವನ್ನು ಕೊಡುತ್ತದೆ, ಈ ಅನುಭವವುಂಟಾದಮೇಲೆ ದ್ವಿತೀಯವೆಂಬುದೇ ಇಲ್ಲವಾದ್ದರಿಂದ ಮತ್ತೊಂದು ಬಾಧಕದರ್ಶನವು ಇರುವ ಸಂಭವವೇ ಇಲ್ಲ. ಆತ್ಮೈಕತ್ವವನ್ನು ಒಪ್ಪಿದರೆ ಅದ್ವೈತವೇ ಪರಮಾರ್ಥವಾಗುವದರಿಂದ ಅದರ ಮೇಲೆ ಯಾವ ದೋಷವನ್ನೂ ಹೇಳುವದಕ್ಕೆ ಆಗುವಂತಿರುವದಿಲ್ಲ. ಏಕೆಂದರೆ ಆಗ ದೋಷವೆಂಬ ದ್ವಿತೀಯವೂ ಇಲ್ಲವೆಂದು ಒಪ್ಪಿರುತ್ತದೆ. ಆದ್ದರಿಂದ ಇದು ನಿರ್ವಿವಾದವಾದ ದರ್ಶನವೆಂದು (೧೬) ನಾವು ಹೇಳಿದ್ದು ಯುಕ್ತವಾಗಿದೆ. ಈ ವೈದಿಕಸಿದ್ಧಾಂತವನ್ನು ಬಲ್ಲವನು ವಾದಕ್ಕೆ ಕಾರಣವಾಗಿರುವ ದ್ವೈತದೋಷವನ್ನು ಆಯಾ ವಾದಿಗಳ ಪಾಲಿಗೇ ಬಿಟ್ಟು ತಾನು ಸುಖವಾಗಿರುತ್ತಾನೆ. ಅವನು ಅವರ ಮತಗಳನ್ನು ಖಂಡಿಸುವದು ಕೂಡ ಅವುಗಳ ಅಸಾರತೆಯನ್ನು ತೋರಿಸುವದಕ್ಕೇ ಹೊರತು ಅವರಂತೆ ವಾದದ ಚಟದಿಂದಲ್ಲ.

**(೧) ಏವಂ ಪರಸ್ಪರವಿರುದ್ಧಾರ್ಥಕಲ್ಪನಾತಃ ಆಮಿಷಾರ್ಥಿನ ಇವ ಪ್ರಾಣಿನಃ ಅನ್ಯೋನ್ಯವಿರುಧ್ಯಮಾನಾರ್ಥದರ್ಶಿತ್ವಾತ್ ಪರಮಾರ್ಥತತ್ತ್ವಾತ್ ದೂರಮೇವ ಅಪಕೃಷ್ಯನ್ತೇ। ಅತಸ್ತನ್ಮತಮನಾದೃತ್ಯ ವೇದಾನ್ತಾರ್ಥತತ್ತ್ವಮೇಕತ್ವದರ್ಶನಂ ಪ್ರತಿ ಆದರವನ್ತೋ ಮುಮುಕ್ಷವಃ**

ಸ್ಯಃ ಇತಿ ತಾರ್ಕಿಕಮತದೋಷಪ್ರದರ್ಶನಂ ಕಿಂಚಿತ್ ಉಚ್ಯತೇ ಅಸ್ಮಾಭಿಃ । ನ ತು ತಾರ್ಕಿಕವತ್ ತಾತ್ಪರ್ಯೇಣ । ತಥೈತದತ್ರೋಕ್ತಮ್-

ವಿವದತ್ಸ್ವೇವ ನಿಕ್ಷಿಪ್ಯ ವಿರೋಧೋದ್ಭವಕಾರಣಮ್ ।

ತೈಃ ಸಂರಕ್ಷಿತಸದ್ಬುದ್ಧಿಃ ಸುಖಂ ನಿರ್ವಾತಿ ವೇದವಿತ್ ॥ - ಪ್ರ. ಭಾ. ೬-೩-೧೦೪

(೨) ಅಭ್ಯುಪಗತೇ ಆತ್ಮೈಕತ್ವೇ ಪ್ರಮಾಣಾರ್ಥಶ್ಚ ಅಭ್ಯುಪಗತೋ ಭವತಾ ಯದಾತ್ಮೈಕತ್ವಮಭ್ಯುಪಗಚ್ಛತಾ । ತದಭ್ಯುಪಗಮೇ ಚ ವಿಕಲ್ಪಾನುಪಪತ್ತಿಮಾಹ ಶಾಸ್ತ್ರಮ್ ''ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ '' ಇತ್ಯಾದಿ ॥

- ಪ್ರ. ಭಾ. ೬-೩-೧೦೯

# ೪. ಅಧ್ಯಾಸ

೨೩. ವೇದಾಂತದ ಉಪದೇಶದ ಸಾರವು ಇಷ್ಟು : ''ಇದೆಲ್ಲವೂ ಬ್ರಹ್ಮವೇ; ನಮ್ಮ ಆತ್ಮನು ಬ್ರಹ್ಮವೇ'' (ಮಾಂ.೨). ಬ್ರಹ್ಮದಲ್ಲಿ ಯಾವ ಪ್ರಪಂಚವೂ ಇರುವದಿಲ್ಲ. ಬ್ರಹ್ಮವೆಂಬ ಮಾತಿಗೆ ದೊಡ್ಡದು ಎಂದರ್ಥ. ನಮ್ಮ ಆತ್ಮನು ಯಾವ ಪ್ರಪಂಚವೂ ಇಲ್ಲದ ಅಪರಿಚ್ಛಿನ್ನವಸ್ತು ಎಂಬುದು **ಶಾಸ್ತ್ರದೃಷ್ಟಿಯಿಂದ** (ಸೂ. ಭಾ. ೧-೧-೩೦) ನೋಡಿದಾಗ ಗೊತ್ತಾಗುವದು. ಆದರೆ ಈಗಿನ ನಮ್ಮ ದೃಷ್ಟಿಯಿಂದ ನೋಡಿದರೆ ನಾನು, ಪ್ರಪಂಚ- ಎಂದು ಬೇರೆ ಬೇರೆಯಾಗಿ ಕಾಣುತ್ತಿರುವದು ; ಪ್ರಪಂಚದಲ್ಲಿ ಅನೇಕರು ಆತ್ಮರಿರುವಂತೆಯೂ ಅವರು ರಾಗದ್ವೇಷಾದಿಗಳಿಂದ ಕೂಡಿ ಸಂಸಾರದುಃಖವನ್ನು ಅನುಭವಿಸುತ್ತಿರುವಂತೆಯೂ ಕಾಣುತ್ತಿರುವರು. ಈ ನಮ್ಮ ದೃಷ್ಟಿಯನ್ನು ವೇದಾಂತಿಗಳು **ಅವಿದ್ಯಾದೃಷ್ಟಿ, ತಪ್ಪುತಿಳಿವಳಿಕೆಯ ದೃಷ್ಟಿ** ಎಂದು ಕರೆಯುತ್ತಾರೆ. ಶಾಸ್ತ್ರದೃಷ್ಟಿ, ಆರ್ಷದರ್ಶನ, ತತ್ತ್ವದರ್ಶಿದೃಷ್ಟಿ, ವಿದ್ವದ್ದೃಷ್ಟಿ- ಇವೆಲ್ಲ ಪರ್ಯಾಯಶಬ್ದಗಳು ; ಲೋಕದೃಷ್ಟಿ (ಸೂ.ಭಾ. ೨-೨-೩), ವ್ಯಾವಹಾರಿಕದೃಷ್ಟಿ, ಸ್ವಾಭಾವಿಕದೃಷ್ಟಿ, ಅವಿದ್ಯಾದೃಷ್ಟಿ- ಇವೆಲ್ಲ ಪರ್ಯಾಯಶಬ್ದಗಳು.

(೧) ಸರ್ವಂ ಹ್ಯೇತದ್ ಬ್ರಹ್ಮಾಯಮಾತ್ಮಾ ಬ್ರಹ್ಮ ॥ - ಮಾಂ. ೨.

(೨) ಅಹಮಿದಂ, ಮಮೇದಮಿತಿ ನೈಸರ್ಗಿಕೋಽಯಂ ಲೋಕವ್ಯವಹಾರಃ ॥

- ಸೂ. ಭಾ. ಅ. ಭಾ-೧

೨೪. ನಮಗೆ ಆಗಿರುವ ಸಂಸಾರದ ಅನರ್ಥಗಳೆಲ್ಲವೂ ಅವಿದ್ಯಾದೃಷ್ಟಿ ಯಿಂದಲೇ ಉಂಟಾಗಿರುತ್ತವೆ. ಪರಮಾರ್ಥವಾಗಿರುವದೆಲ್ಲವೂ ಬ್ರಹ್ಮವಾಗಿರುವ, ಎಂದರೆ ಅಪರಿಚ್ಛಿನ್ನವಾಗಿ ಅದ್ವಿತೀಯವಾಗಿರುವ, ನಮ್ಮಗಳ ಆತ್ಮನೇ. ಈ ಬ್ರಹ್ಮದಲ್ಲಿ ಚೇತನಾಚೇತನವಿಭಾಗದಿಂದ ಕೂಡಿದ ಜಗತ್ತು ಇರುವದೇ ಇಲ್ಲ- ಎಂಬುದು

ವೇದಾಂತಸಿದ್ಧಾಂತವು. ಯಾವಾಗ ಶ್ರುತ್ಯಾಚಾರ್ಯರ ಉಪದೇಶವನ್ನನುಸರಿಸಿ ಈ ಬ್ರಹ್ಮದಲ್ಲಿ ಒಂದಿಷ್ಟೂ ನಾನಾತ್ವವಿಲ್ಲವೆಂಬುದನ್ನು ನಮ್ಮ ಮನಸ್ಸಿನಲ್ಲಿಯೇ ಕಂಡುಕೊಳ್ಳುವೆವೋ ಆಗ ನಮ್ಮ ಶೋಕಮೋಹಗಳೆಲ್ಲವೂ ತೊಲಗುವವು. ಆಗ ನಮ್ಮ ಹೃದಯದಲ್ಲಿರುವ ಕಾಮಗಳೆಲ್ಲವೂ ತೊಲಗುವವು, ಇಲ್ಲಿಯೇ ಬ್ರಹ್ಮಪ್ರಾಪ್ತಿಯಾಗಿ ಮರ್ತ್ಯರಾದ ನಾವೇ ಅಮೃತರಾಗುವೆವು; ನಮ್ಮ ಸಂಶಯಗಳೆಲ್ಲವೂ ಕತ್ತರಿಸಿ ಹೋಗುವವು. ನಾವು ಇನ್ನುಮುಂದೆ ಯಾವದಾದರೊಂದು ಕರ್ಮವನ್ನು ಮಾಡಿ ಯಾವದಾದರೊಂದು ಪುರುಷಾರ್ಥವನ್ನು ಪಡೆಯಬೇಕಾದದ್ದಿರುವದಿಲ್ಲ, ಕೃತಕೃತ್ಯರಾಗಿರುವೆವು- ಎಂದು ಉಪನಿಷತ್ತುಗಳು ಸಾರುತ್ತಿವೆ. ಯಾವನು ಆತ್ಮನಲ್ಲಿ ಇಲ್ಲದೆ ಇರುವ ನಾನಾತ್ವವನ್ನು ಕಾಣುವ ಅವಿದ್ಯಾದೃಷ್ಟಿಯನ್ನೇ ಇಟ್ಟುಕೊಂಡಿರುವನೋ ಅವನು ಸಾವಿನಮೇಲೆ ಸಾವನ್ನು ಪಡೆಯುತ್ತಿರುವನೆಂದು ಶ್ರುತಿಯು ಅವಿದ್ಯಾದೃಷ್ಟಿಯನ್ನು ನಿಂದಿಸುತ್ತದೆ.

(೧) ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।
ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ - ಕ. ೨-೧-೧೧.

ಪ್ರಾಗೇಕತ್ವವಿಜ್ಞಾನಾತ್ ಆಚಾರ್ಯಾಗಮಸಂಸ್ಕೃತೇನ ಮನಸೈವ ಇದಂ ಬ್ರಹ್ಮ ಏಕರಸಮಾಪ್ತವ್ಯಮ್ 'ಆತ್ಮೈವ ನಾನ್ಯದಸ್ತಿ' ಇತಿ । ಆಪ್ತೇ ಚ ನಾನಾತ್ವಪ್ರತ್ಯುಪಸ್ಥಾಪಿಕಾಯಾ ಅವಿದ್ಯಾಯಾ ನಿವೃತ್ತತ್ವಾತ್ ಇಹ ಬ್ರಹ್ಮಣಿ ನಾನಾ ನಾಸ್ತಿ ಕಿಂಚನ ಅಣುಮಾತ್ರಮಪಿ। ಯಸ್ತು ಪುನಃ ಅವಿದ್ಯಾತಿಮಿರದೃಷ್ಟಿಂ ನ ಮುಞ್ಚತಿ ಇಹ ಬ್ರಹ್ಮಣಿ ನಾನೇವ ಪಶ್ಯತಿ, ಸ ಮೃತ್ಯೋರ್ಮೃತ್ಯುಂ ಗಚ್ಛತ್ಯೇವ ಸ್ವಲ್ಪಮಪಿ ಭೇದಮ್ ಅಧ್ಯಾರೋಪಯನ್ ಇತ್ಯರ್ಥಃ ॥

- ಕ. ಭಾ. ೨-೧-೧೧-೧೨೬

(೨) ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ॥ -ಈ. ೭-೧೭

ಶೋಕಶ್ಚ ಮೋಹಶ್ಚ ಕಾಮಕರ್ಮಬೀಜಮ್ ಅಜಾನತೋ ಭವತಿ ನ ತು ಆತ್ಮೈಕತ್ವಂ ವಿಶುದ್ಧಂ ಗಗನೋಪಮಂ ಪಶ್ಯತಃ 'ಕೋ ಮೋಹಃ ಕಃ ಶೋಕಃ' ? ಇತಿ ಶೋಕಮೋಹಯೋಃ ಅವಿದ್ಯಾಕಾರ್ಯಯೋಃ ಆಕ್ಷೇಪೇಣ ಅಸಂಭವಪ್ರದರ್ಶನಾತ್, ಸಕಾರಣಸ್ಯ ಸಂಸಾರಸ್ಯ ಅತ್ಯನ್ತಮೇವ ಉಚ್ಛೇದಃ ಪ್ರದರ್ಶಿತೋ ಭವತಿ॥ - ಈ. ಭಾ. ೭-೧೭

(೩) ಯದಾ ಸರ್ವೇಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ -ಕ. ೨-೩-೧೪

(೪) ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ ।
ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ - ಮುಂ. ೨-೨-೮

೨೫. ಅವಿದ್ಯೆಯನ್ನು ಕಳೆಯುವದಕ್ಕೆ ಸರಿಯಾದ ಜ್ಞಾನವನ್ನು ಉಪದೇಶಿಸುವ ಉದ್ದೇಶದಿಂದ ಹೊರಟಿರುವ ಬೇರೆಯ ದರ್ಶನಗಳೂ ಉಂಟು. ಆದರೆ ಅವರು ಹೇಳುವ ವಿದ್ಯಾವಿದ್ಯೆಗಳೆರಡೂ ಅವಿದ್ಯಾಕೃತವಾದ ದ್ವೈತಪ್ರಪಂಚದಲ್ಲಿಯೇ ಇರುತ್ತವೆ ಎಂದು ವೇದಾಂತಿಗಳು ಹೇಳುತ್ತಾರೆ. ಅವಿದ್ಯಾಸ್ವರೂಪವನ್ನು ವೇದಾಂತಿಗಳಂತೆ ಮಿಕ್ಕ ದರ್ಶನಕಾರರು ಯಾರೂ ವಿವೇಚನೆಮಾಡಿರುವದಿಲ್ಲ. ಅವಿದ್ಯೆಯೆಂದರೆ ಒಂದನ್ನು ಇನ್ನೊಂದೆಂದು ಭಾವಿಸುವ ತಪ್ಪುತಿಳಿವಳಿಕೆ - ಎಂಬುದು ಎಲ್ಲರಿಗೂ ತಿಳಿದಿದೆ. ಈ ತಪ್ಪು ತಿಳಿವಳಿಕೆಯು ಒಂದು ಪದಾರ್ಥದಲ್ಲಿಲ್ಲದ ಸ್ವಭಾವವನ್ನು ಅದರಲ್ಲಿ ಕಲ್ಪಿಸುವದರಿಂದ ಆಗುತ್ತದೆ. ಈ ಕಲ್ಪನೆಗೆ **ಅಧ್ಯಾಸ**ವೆಂದು ಹೆಸರು. ಉದಾಹರಣೆಗೆ ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದೂ, ಒಬ್ಬ ಚಂದ್ರನನ್ನು ಇಬ್ಬರೆಂದೂ ತಿಳಿಯುವದು ಅಧ್ಯಾಸರೂಪವಾದ ಅವಿದ್ಯೆ. ಇಂಥ ಅಧ್ಯಾಸಗಳು ಲೋಕದಲ್ಲಿ ಹಲವು ಆಗುತ್ತಿರುತ್ತವೆ. ಆದರೆ ವೇದಾಂತಿಗಳು ಹೇಳುವದೇನೆಂದರೆ: ನಮ್ಮ ಆತ್ಮನು ಅದ್ವಿತೀಯವಾದ ಬ್ರಹ್ಮವು ; ಇವನಲ್ಲಿ ಸ್ವಲ್ಪವೂ ಇಲ್ಲದ ದ್ವೈತಪ್ರಪಂಚವನ್ನು ಅಧ್ಯಾಸಮಾಡಿಕೊಂಡಿರುವ ಅವಿದ್ಯೆಯೊಂದಿದೆ. ಈ ಅವಿದ್ಯೆಯು ಆತ್ಮನಲ್ಲಿ ಅನಾತ್ಮವನ್ನೂ, ಅನಾತ್ಮಧರ್ಮಗಳನ್ನೂ ಕಲ್ಪಿಸುವದಲ್ಲದೆ , ಅನಾತ್ಮದಲ್ಲಿ ಆತ್ಮತ್ವವನ್ನೂ ಆತ್ಮಧರ್ಮಗಳನ್ನೂ ಕಲ್ಪಿಸುತ್ತದೆ. ಅದರಿಂದಲೇ ಆತ್ಮನಲ್ಲಿ ಪ್ರಮಾತೃಪ್ರಮಾಣಪ್ರಮೇಯವಿಭಾಗವು ಕಲ್ಪಿತವಾಗಿರುತ್ತದೆ; ಅದರಿಂದಲೇ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರಾನರ್ಥವು ಕಲ್ಪಿತವಾಗಿದೆ. ಈ ಅವಿದ್ಯೆಯನ್ನು ತೊಲಗಿಸುವದರ ಮೂಲಕ ಆತ್ಮೈಕತ್ವವಿದ್ಯೆಯನ್ನು ಉಪದೇಶಿಸುವದಕ್ಕೆಂದೇ ಎಲ್ಲಾ ಉಪನಿಷತ್ತುಗಳೂ ಹೊರಟಿರುತ್ತವೆ.

(೧) ಅಧ್ಯಾಸೋ ನಾಮ ಅತಸ್ಮಿಂಸ್ತದ್ಬುದ್ಧಿರಿತ್ಯವೋಚಾಮ ॥ - ಅಧ್ಯಾ. ಭಾ-೮

(೨) ಸರ್ವಥಾಪಿ ತು ಅನ್ಯಸ್ಯ ಅನ್ಯಧರ್ಮಾವಭಾಸತಾಂ ನ ವ್ಯಭಿಚರತಿ । ತಥಾ ಚ ಲೋಕೇ ಅನುಭವಃ ಶುಕ್ತಿಕಾ ಹಿ ರಜತವತ್ ಅವಭಾಸತೇ, ಏಕಶ್ಚನ್ದ್ರಃ ಸದ್ವಿತೀಯವತ್ ಇತಿ॥

- ಅಧ್ಯಾ. ಭಾ-೨

(೩) ತಮೇತಮೇವಂಲಕ್ಷಣಮ್ ಅಧ್ಯಾಸಂ ಪಣ್ಡಿತಾ ಅವಿದ್ಯೇತಿ ಮನ್ಯನ್ತೇ॥

- ಅಧ್ಯಾ. ಭಾ-೪

(೪) ತಮೇತಮ್ ಅವಿದ್ಯಾಖ್ಯಮ್ ಆತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ ॥ - ಅಧ್ಯಾ. ಭಾ-೫

(೫) ಅಧ್ಯಾಸೋ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವಭೋಕ್ತೃತ್ವಪ್ರವರ್ತಕಃ ಸರ್ವಲೋಕಪ್ರತ್ಯಕ್ಷಃ। ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾ ಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ ॥ - ಅಧ್ಯಾ. ಭಾ-೯

೨೬. ವೇದಾಂತಿಗಳು ಹೇಳುವ ಆತ್ಮಾನಾತ್ಮಾಧ್ಯಾಸದಲ್ಲಿ ಕೆಲವರಿಗೆ ಒಂದು ಅನುಪಪತ್ತಿಯು ತೋರಬಹುದು. ಶುಕ್ತಿಯಲ್ಲಿ ರಜತವನ್ನೂ, ಸ್ಥಾಣುವಿನಲ್ಲ ಪುರುಷನನ್ನೂ ಅಧ್ಯಾಸಮಾಡುವದು ಲೋಕದಲ್ಲಿ ಕಂಡಿದೆಯಾದರೂ ಅಲ್ಲಿ ಒಂದು ಜ್ಞೇಯದಲ್ಲಿ ಇನ್ನೊಂದು ಜ್ಞೇಯವನ್ನು ಅಧ್ಯಾಸಮಾಡಿರುತ್ತದೆ. ಜ್ಞೇಯವೆಂದರೆ ಜ್ಞಾತೃವಿನ ಜ್ಞಾನಕ್ಕೆ ವಿಷಯವಾದದ್ದು. ಶುಕ್ತಿ, ಸ್ಥಾಣು- ಮುಂತಾದವುಗಳು ಎದುರಿಗಿರುವ ಪ್ರತ್ಯಕ್ಷವಿಷಯಗಳಾದ್ದರಿಂದ ಅವುಗಳಲ್ಲಿ ಮತ್ತೊಂದು ವಿಷಯ ವನ್ನು ಅಧ್ಯಾಸಮಾಡಬಹುದು. ಏಕೆಂದರೆ ಅಧ್ಯಾಸವೆಂದರೆ ಎದುರಿಗಿರುವ ಒಂದನ್ನು ಇನ್ನೊಂದು ಎಂದು ತಿಳಿಯುವ ಭ್ರಾಂತಿ ಆದರೆ ಆತ್ಮನು ಪ್ರತ್ಯಕ್ಷನಲ್ಲ, ವಿಷಯನೂ ಅಲ್ಲ; ಅವನು ವಿಷಯಿ, ಜ್ಞಾತೃ, ಅರಿಯುವವನು. ಅರಿಯುವ ಆತ್ಮನು ತನ್ನನ್ನೇ ಅರಿಯಲ್ಪಡುವ ವಿಷಯವೆಂದು ಭ್ರಾಂತಿಗೊಂಡು ಅದರ ಧರ್ಮಗಳನ್ನು ತನ್ನಲ್ಲಿ ಹುಟ್ಟುಗಟ್ಟಿ ಕೊಳ್ಳುತ್ತಾನೆಂದು ನಂಬುವದು ಹೇಗೆ?

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ ಪ್ರತ್ಯಕ್ಷವಾದ ವಿಷಯದಲ್ಲಿಯೇ ಅಧ್ಯಾಸಮಾಡುತ್ತಾರೆಂಬ ನಿಯಮವೇನೂ ಇಲ್ಲ. ಅಪ್ರತ್ಯಕ್ಷವಾದ ಆಕಾಶವನ್ನೇ ಇದರ ತಲವು ಮಲಿನವಾಗಿದೆ ಎಂದು ಅವಿವೇಕಿಗಳು ಅಧ್ಯಾಸಮಾಡುತ್ತಾರೆ. ಇದಲ್ಲದೆ ವಿಷಯವನ್ನೇ ವಿಷಯದಲ್ಲಿಯೇ ಅಧ್ಯಾಸಮಾಡುತ್ತಾರೆಂಬ ನಿಯಮ ವೇನೂ ಇಲ್ಲ. ವಿಷಯಿಯಾದ, ಜ್ಞಾತೃವಾದ ಆತ್ಮನನ್ನು ದೇಹದಲ್ಲಿಯೂ ವಿಷಯ ವಾದ ದೇಹಧರ್ಮಗಳನ್ನು ವಿಷಯಿಯಾದ ಆತ್ಮನಲ್ಲಿಯೂ ಅಧ್ಯಾಸಮಾಡಿ 'ನಾನು ಬೆಳ್ಳಗೆ ಇದ್ದೇನೆ', 'ಕಪ್ಪಗೆ ಇದ್ದೇನೆ', 'ಮುದುಕನು'- ಎಂದು ಮುಂತಾಗಿ ಅಧ್ಯಾಸ ಮಾಡುತ್ತಾರೆಂಬುದನ್ನು ನೈಯಾಯಿಕರೇ ಮುಂತಾದವರೂ ಒಪ್ಪುತ್ತಾರೆ. ದೇಹಾದಿ ಗಳನ್ನು ನಾನು ಎಂದು ತಿಳಿಯುವದು ಗೌಣವೇ ಹೊರತು ತಪ್ಪುತಿಳಿವಳಿಕೆಯಲ್ಲ ಎಂದು ಮೀಮಾಂಸಕರೇ ಮುಂತಾದವರೂ ತಿಳಿಯುತ್ತಾರಾದರೂ ದೇಹವೂ ಆತ್ಮನೂ ಬೇರೆ ಬೇರೆಯಾಗಿ ಯಾರಿಗೂ ತಿಳಿದುಬರುವದಿಲ್ಲವಾದ್ದರಿಂದ ಈ ತಿಳಿವಳಿಕೆಯು ಅಧ್ಯಾಸವೇ ಎಂದು ಎಲ್ಲರೂ ಒಪ್ಪಬೇಕು. ಆತ್ಮನು ಅಪರೋಕ್ಷ ನಾಗಿರುವದರಿಂದಲೂ ಸ್ವಭಾವಪ್ರಸಿದ್ಧನಾಗಿರುತ್ತಾನಾದ್ದರಿಂದಲೂ ಆತ್ಮಾನಾತ್ಮಗಳ ಅಧ್ಯಾಸಕ್ಕೆ ಯಾವ ಆಕ್ಷೇಪವೂ ಇಲ್ಲ. ಆದ್ದರಿಂದ ಆತ್ಮಾನಾತ್ಮಗಳನ್ನು ಒಂದರ ಲ್ಲೊಂದನ್ನೂ ಒಂದರಲ್ಲಿ ಇನ್ನೊಂದರ ಧರ್ಮವನ್ನೂ ಅಧ್ಯಾಸಮಾಡುತ್ತಾರೆಂಬುದು ಯಾವ ದೂಷಣೆಗೂ ತಕ್ಕದ್ದಲ್ಲ. ಅಧ್ಯಾಸ, ಅಧ್ಯಾರೋಪ, ವಿಪರ್ಯಾಸ, ಭ್ರಾಂತಿ, ವಿಪರೀತಪ್ರತ್ಯಯ, ಅನ್ಯಥಾಜ್ಞಾನ, ಮಿಥ್ಯಾ ಜ್ಞಾನ- ಇವೆಲ್ಲ ಪರ್ಯಾಯಶಬ್ದಗಳೇ.

(೧) ನ ಚಾಯಮಸ್ತಿ ನಿಯಮಃ। ಪುರೋಽವಸ್ಥಿತ ಏವ ವಿಷಯೇ ವಿಷಯಾನ್ತರಮ್ ಅಧ್ಯಸಿತವ್ಯಮ್ ಇತಿ । ಅಪ್ರತ್ಯಕ್ಷೇಽಪಿ ಹಿ ಆಕಾಶೇ ಬಾಲಾಸ್ತಲಮಲಿನತಾದಿ ಅಧ್ಯಸ್ಯನ್ತಿ॥

- ಅಧ್ಯಾ. ಭಾ-೩

(೨) ನ ಹಿ ವಸ್ತು, ಪ್ರಸಿದ್ಧಂ ಪ್ರಸಿದ್ಧೇ ಏವ ಅಧ್ಯಾರೋಪಯತಿ ಇತಿ ನಿಯನ್ತುಂ ಶಕ್ಯಮ್ । ಆತ್ಮನಿ ಅಧ್ಯಾರೋಪಣದರ್ಶನಾತ್ ।'ಗೌರೋಽಹಮ್', 'ಕೃಷ್ಣೋಽಹಮಿತಿ' ॥

- ಉಪ. ಸಾ. ಗದ್ಯ-೨-೩೭

(೩) ಯತ್ತು ಉಕ್ತಮ್ ನ ಸಮೋ ದೃಷ್ಟಾನ್ತಃ ಇತಿ । ತದಸತ್। ಕಥಮ್? ಅವಿದ್ಯಾಧ್ಯಾಸಮಾತ್ರಂ ಹಿ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಸಾಧರ್ಮ್ಯಂ ವಿವಕ್ಷಿತಮ್ । ತನ್ನ ವ್ಯಭಿಚರತಿ । ಯತ್ತು ಜ್ಞಾತರಿ ವ್ಯಭಿಚರತಿ ಇತಿ ಮನಸ್ಯೇ, ತಸ್ಯಾಪಿ ಅನೈಕಾನ್ತಿಕತ್ವಂ ದರ್ಶಿತಂ ಜರಾದಿಭಿಃ ॥ - ಗೀ. ಭಾ. ೧೩-೨-೭೬೦

(೪) ಸತ್ಯಂ ಪ್ರಸಿದ್ಧೌ ದೇಹಾತ್ಮಾನೌ । ನ ತು ಸ್ಥಾಣುಪುರುಷಾವಿವ ವಿವಿಕ್ತ ಪ್ರತ್ಯಯವಿಷಯತಯಾ ಸರ್ವಲೋಕಪ್ರಸಿದ್ಧೌ । ಕಥಂ ತರ್ಹಿ, ನಿತ್ಯಮೇವ ನಿರನ್ತರಾವಿವಿಕ್ತ ಪ್ರತ್ಯಯವಿಷಯತಯಾ। ನ ಹಿ 'ಅಯಂ ದೇಹಃ', 'ಅಯಮ್ ಆತ್ಮಾ' ಇತಿ ವಿವಿಕ್ತಾಭ್ಯಾಂ ಪ್ರತ್ಯಯಾಭ್ಯಾಂ ದೇಹಾತ್ಮಾನೌ ಗೃಹ್ಣಾತಿ ಯಃ ಕಶ್ಚಿತ್ ॥ -ಉಪ. ಸಾ. ಗದ್ಯ-೨-೩೯

(೫) ಯಸ್ಯ ಹಿ ಪ್ರಸಿದ್ಧೋ ವಸ್ತುಭೇದಃ- ಯಥಾ ಕೇಸರಾದಿಮಾನ್ ಆಕೃತಿವಿಶೇಷಃ ಅನ್ವಯವ್ಯತಿರೇಕಾಭ್ಯಾಂ ಸಿಂಹಶಬ್ದಪ್ರತ್ಯಯಭಾಕ್ ಮುಖ್ಯೋಽನ್ಯಃ ಪ್ರಸಿದ್ಧಃ, ತತಶ್ಚ ಅನ್ಯಃ ಪುರುಷಃ ಪ್ರಾಯಿಕೈಃ ಕ್ರೌರ್ಯಶೌರ್ಯಾದಿಭಿಃ ಸಿಂಹಗುಣೈಃ ಸಂಪನ್ನಃ ಸಿದ್ಧಃ, ತಸ್ಯ ಪುರುಷೇ ಸಿಂಹಶಬ್ದಪ್ರತ್ಯಯೌ ಗೌಣೌ ಭವತಃ, ನ ಅಪ್ರಸಿದ್ಧವಸ್ತುಭೇದಸ್ಯ। ತಸ್ಯ ತು ಅನ್ಯತ್ರ ಅನ್ಯಶಬ್ದಪ್ರತ್ಯಯೌ ಭ್ರಾನ್ತಿನಿಮಿತ್ತಾವೇವ ಭವತಃ, ನ ಗೌಣೌ । ಯಥಾ ಮನ್ದಾನ್ಧಕಾರೇ 'ಸ್ಥಾಣುರಯಮ್' ಇತಿ ಅಗೃಹ್ಯಮಾಣವಿಶೇಷೇ ಪುರುಷಶಬ್ದಪ್ರತ್ಯಯೌ ಸ್ಥಾಣುವಿಷಯೌ, ಯಥಾ ವಾ ಶುಕ್ತಿಕಾಯಾಮ್ ಅಕಸ್ಮಾತ್ ರಜತಮ್ ಇತಿ ನಿಶ್ಚಿತೌ ಶಬ್ದಪ್ರತ್ಯಯೌ। ತದ್ವತ್ ದೇಹಾದಿಸಙ್ಘಾತೇ ಅಹಮ್ ಇತಿ ನಿರುಪಚಾರೇಣ ಶಬ್ದಪ್ರತ್ಯಯೌ ಆತ್ಮಾನಾತ್ಮಾವಿವೇಕೇನ ಉತ್ಪದ್ಯಮಾನೌ ಕಥಂ ಗೌಣೌ ಶಕ್ಯೌ ವದಿತುಮ್ ? ಆತ್ಮಾನಾತ್ಮವಿವೇಕಿನಾಮಪಿ ಪಣ್ಡಿತಾನಾಮ್ ಅಜಾವಿಪಾಲಾನಾಮಿವ ಅವಿವಿಕ್ತೌ ಶಬ್ದಪ್ರತ್ಯಯೌ ಭವತಃ। ತಸ್ಮಾತ್ ದೇಹಾದಿವ್ಯತಿರಿಕ್ತಾತ್ಮಾಸ್ತಿತ್ವ ವಾದಿನಾಂ ದೇಹಾದೌ ಅಹಂಪ್ರತ್ಯಯೋ ಮಿಥ್ಯೈವ ನ ಗೌಣಃ ॥ - ಸೂ. ಭಾ. ೧-೧-೪-೫೯

(೬) ಕಥಂ ತರ್ಹಿ ಪ್ರತ್ಯಕ್ಷಾದ್ಯಪ್ರಸಿದ್ಧಾತ್ಮನಿ ದೇಹಾಧ್ಯಾರೋಪಣಾ, ದೇಹೇ ಚ ಆತ್ಮಾ (ಧ್ಯಾ)ರೋಪಣಾ? ನಾಯಂ ದೋಷಃ । ಸ್ವಭಾವಪ್ರಸಿದ್ಧತ್ವಾತ್ ಆತ್ಮನಃ ॥

- ಉಪ ಸಾ. ಗದ್ಯ-೨-೪೩

(೭) ಅಪರೋಕ್ಷತ್ವಾಚ್ಚ ಪ್ರತ್ಯಗಾತ್ಮಪ್ರಸಿದ್ಧೇಃ ॥ - ಅಧ್ಯಾ. ಭಾ-೩

೨೭. ಯಾವದರಲ್ಲಿ ಯಾವದನ್ನು ಅಧ್ಯಾಸಮಾಡುತ್ತಾರೋ ಅದು ಅಲ್ಲಿ ನಿಜವಾಗಿರುವದಿಲ್ಲ, ಹುಸಿತೋರಿಕೆಯಾಗಿರುತ್ತದೆ. ಉದಾಹರಣೆಗೆ ಕಪ್ಪೆಯ ಚಿಪ್ಪಿನಲ್ಲಿ ತೋರುವ ಬೆಳ್ಳಿ, ಹಗ್ಗದಲ್ಲಿ ತೋರುವ ಹಾವು, ಮೋಟುಮರದಲ್ಲಿ ಕಾಣುವ

ಮನುಷ್ಯ, ಆಕಾಶದಲ್ಲಿ ತೋರುವ ಮಾಲಿನ್ಯ- ಇವೆಲ್ಲ ಅತ್ಯಂತವಾಗಿ ಅಸತ್ತಾಗಿರುತ್ತವೆ ಎಂಬುದು ಎಲ್ಲರಿಗೂ ತಿಳಿದಿದೆ. ಆತ್ಮನೂ ಅನಾತ್ಮವೂ ಒಂದರಲ್ಲೊಂದು ಅಧ್ಯಸ್ತವಾಗಿದ್ದರೆ ಆಗ ಅಧ್ಯಸ್ತವಾಗಿರುವ ಅವೆರಡೂ ಅಸತ್ತೇ ಆಗಬೇಕಾಗುವದು. ಅನಾತ್ಮವಾದ ದೇಹಾದಿಗಳು ಆತ್ಮನಲ್ಲಿ ಅಧ್ಯಸ್ತವಾಗಿರುವವೆಂಬುದು ಪ್ರತ್ಯಕ್ಷಾದಿಗಳಿಗೆ ವಿರುದ್ಧವಾಗಿರುತ್ತದೆ. ಆದ್ದರಿಂದ ಆತ್ಮನಿಗೂ ದೇಹಾದಿಗಳಿಗೂ ಒಂದಾನೊಂದು ಸಂಬಂಧವಿರಬೇಕು- ಎಂದು ಕೆಲವರು ಯೋಚಿಸಿಕೊಳ್ಳಬಹುದು.

ಆದರೆ ಈ ವಿಚಾರಸರಣಿಯು ಸರಿಯಲ್ಲ. ಏಕೆಂದರೆ ಆತ್ಮನಲ್ಲಿ ದೇಹಾದಿಗಳಿವೆ- ಎಂಬುದು ಪ್ರತ್ಯಕ್ಷಾದಿಗಳಿಗೆ ಗೋಚರವಲ್ಲ. ಆತ್ಮನೂ ಅನಾತ್ಮವೂ ಬೇರೆಬೇರೆಯಾಗಿ ಯಾರಿಗೂ ಪ್ರತ್ಯಕ್ಷಾದಿಗಳಿಂದ ತಿಳಿದುಬಂದಿಲ್ಲವಾದ್ದರಿಂದ ಅವೆರಡಕ್ಕೂ ಯಾವದೊಂದು ಸಂಬಂಧವನ್ನೂ ಕಲ್ಪಿಸುವದಕ್ಕೂ ಆಗುವದಿಲ್ಲ. ಒಂದುವೇಳೆ ದೇಹಾದಿಗಳೂ ಆತ್ಮನೂ ಒಂದಕ್ಕೊಂದು ಕೂಡಿಕೊಂಡಿರುವವೆಂದು ಕಲ್ಪಿಸಿದರೂ ಅವೆರಡೂ ಕೂಡಿಕೊಂಡಿರುವದನ್ನು ನೋಡಿ ಅರಿಯುವ, ಅವುಗಳೊಡನೆ ಸಂಹತನಾಗದ ಪರಿಶುದ್ಧನಾದ ಆತ್ಮನು ಇದ್ದಾನೆಂದೇ ಏರ್ಪಡುತ್ತದೆ. ಗೋಡೆ, ಕಂಬಗಳು, ಹೆಂಚು- ಮುಂತಾದವುಗಳು ಒಂದಕ್ಕೊಂದು ಕೂಡಿಕೊಂಡಿದ್ದು, ತಮ್ಮೊಡನೆ ಕೂಡಿಕೊಳ್ಳದೆ ಇರುವ ಯಜಮಾನನ ಉಪಯೋಗಕ್ಕಾಗಿ ಇರುವಂತೆ, ದೇಹಾದಿಸಂಘಾತವು ಅಸಂಹತನಾದ ತನಗಿಂತ ಭಿನ್ನನಾದ ಆತ್ಮನಿಗಾಗಿಯೇ ಕೆಲಸಮಾಡುತ್ತಿರುವದೆಂಬುದು ಯುಕ್ತಿಗೂ ಹೊಂದುತ್ತದೆ. ಆತ್ಮನಲ್ಲಿ ಕಲ್ಪಿತವಾದ ಅನಾತ್ಮವು ಆಕಾಶದಲ್ಲಿ ಕಲ್ಪಿತವಾದ ನೀಲವರ್ಣದಂತೆ ಅಸತ್ತಾಗಿದೆ. ಎಂದರೆ ಯಾವ ದೋಷವೂ ಇಲ್ಲ; ಅನಾತ್ಮದಲ್ಲಿ ಕಲ್ಪಿತವಾಗಿರುವ ಆತ್ಮನು ಆ ರೂಪದಿಂದ ಅಸತ್ತಾದರೂ ತನ್ನ ರೂಪದಿಂದ ಸತ್ಯವೇ ಆಗಿರುತ್ತಾನೆ. ಆದ್ದರಿಂದ ನಾವು ಹೇಳಿರುವ ಅಧ್ಯಾಸವು ಸತ್ಯವಾಗಿರುವ ಆತ್ಮನನ್ನೂ ಅನೃತವಾಗಿರುವ ಅನಾತ್ಮಗಳನ್ನೂ ವಿಂಗಡಿಸಿಕೊಳ್ಳದೆ ಎರಡನ್ನೂ ಕಲಬೆರಕೆ ಮಾಡಿಕೊಂಡಿರುವ ಜ್ಞಾನವೆಂದೇ ಏರ್ಪಡುತ್ತದೆ. ಅಸತ್, ಅಸತ್ಯ, ಅನೃತ, ಮಿಥ್ಯೆ, ವಿತಥ, ಮೃಷಾ- ಇವೆಲ್ಲ ಹುಸಿ ತೋರಿಕೆಯನ್ನು ತಿಳಿಸುವ ಪರ್ಯಾಯಶಬ್ದಗಳು.

(೧) ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮ್ ಅನ್ಯೋನ್ಯಧರ್ಮಾಂಶ್ಚ ಅಧ್ಯಸ್ಯ ಇತರೇತರಾವಿವೇಕೇನ ಅತ್ಯನ್ತವಿವಿಕ್ತಯೋರ್ಧರ್ಮಧರ್ಮಿಣೋಃ ಮಿಥ್ಯಾಜ್ಞಾನನಿಮಿತ್ತಃ ಸತ್ಯಾನೃತೇ ಮಿಥುನೀಕೃತ್ಯ 'ಅಹಮಿದಮ್', 'ಮಮೇದಮ್' ಇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ ॥ - ಅಧ್ಯಾ. ಭಾ-೧

(೨) ಕಃ ಪುನರಯಂ ಕ್ಷೇತ್ರಕ್ಷೇತ್ರಜ್ಞಯೋಃ ಸಂಯೋಗೋಽಭಿಪ್ರೇತಃ? ನ ತಾವದ್ ರಜ್ಜ್ವಾ ಇವ ಘಟಸ್ಯ ಅವಯವಸಂಶ್ಲೇಷದ್ವಾರಕಃ ಸಂಬನ್ಧವಿಶೇಷಃ ಸಂಯೋಗಃ ಕ್ಷೇತ್ರೇಣ ಕ್ಷೇತ್ರಜ್ಞಸ್ಯ ಸಂಭವತಿ । ಆಕಾಶವನ್ನಿರವಯವತ್ವಾತ್। ನಾಪಿ ಸಮವಾಯಲಕ್ಷಣಃ ತನ್ತುಪಟಯೋರಿವ। ಕ್ಷೇತ್ರಕ್ಷೇತ್ರಜ್ಞಯೋಃ ಇತರೇತರಕಾರ್ಯಕಾರಣಭಾವಾನಭ್ಯುಪಗಮಾತ್ ಇತಿ । ಉಚ್ಯತೇ । ಕ್ಷೇತ್ರಕ್ಷೇತ್ರಜ್ಞಯೋಃ ವಿಷಯವಿಷಯಿಣೋರ್ಭಿನ್ನಸ್ವಭಾವಯೋಃ ಇತರೇತರ-ತದ್ಧರ್ಮಾಧ್ಯಾಸಲಕ್ಷಣಃ ಸಂಯೋಗಃ ಕ್ಷೇತ್ರಕ್ಷೇತ್ರಜ್ಞಸ್ವರೂಪವಿವೇಕಾಭಾವನಿಬನ್ಧನಃ, ರಜ್ಜು-ಶುಕ್ತಿಕಾದೀನಾಂ ತದ್ವಿವೇಕಜ್ಞಾನಾಭಾವಾತ್ ಅಧ್ಯಾರೋಪಿತಸರ್ಪರಜತಾದಿ ಸಂಯೋಗವತ್ ॥

- ಗೀ. ಭಾ. ೧೩-೨೬-೮೨೬

(೩) ಯತ್ತುಪುನರುಕ್ತಮ್, ದೇಹಸ್ಯ ಆತ್ಮನ್ಯಸತ್ತ್ವೇ ಪ್ರತ್ಯಕ್ಷಾದಿವಿರೋಧಃ ಸ್ಯಾತ್ ಇತಿ। ತನ್ನ। ಪ್ರತ್ಯಕ್ಷಾದಿಭಿಃ ಆತ್ಮನಿ ದೇಹಸ್ಯ ಸತ್ತ್ವಾನುಪಲಬ್ಧೇಃ । ನ ಹಿ ಆತ್ಮನಿ ಕುಣ್ಡೇ ಬದರಮ್, ಕ್ಷೀರೇ ಸರ್ಪಿಃ, ತಿಲೇ ತೈಲಮ್, ಭಿತ್ತೌ ಚಿತ್ರಮಿವ ಚ ಪ್ರತ್ಯಕ್ಷಾದಿಭಿಃ ದೇಹ ಉಪಲಭ್ಯತೇ। ತಸ್ಮಾತ್ ನ ಪ್ರತ್ಯಕ್ಷಾದಿವಿರೋಧಃ ॥ - ಉಪ. ಸಾ. ಗದ್ಯ-೨-೪೨

(೪) ಯಸ್ತು ಪರೈರ್ದೇಹೇನ ಸಂಹತಃ ಕಲ್ಪಿತಃ ಆತ್ಮಾ, ಸ ಸಂಹತತ್ವಾತ್ ಪರಾರ್ಥಃ । ತೇನ ಅಸಂಹತಃ ಪರೋಽನ್ಯೋಽನಿತ್ಯಃ ಸಿದ್ಧಸ್ತಾವತ್ ॥ - ಉಪ. ಸಾ. ಗದ್ಯ-೨-೪೧

(೫) ಸರ್ವೇಣ ಅಸಂಹತಿಃ ನ ಚ ಆತ್ಮಾ ಇತಿ ನ ನಿರಾತ್ಮಕೋ ದೇಹಾದಿಃ ಸರ್ವಃ ಸ್ಯಾತ್ । ಯಥಾ ಚ ಆಕಾಶಂ ಸರ್ವೇಣ ಅಸಂಹತಮ್ ಇತಿ ಸರ್ವಂ ನ ನಿರಾಕಾಶಂ ಭವತಿ, ಏವಮ್ ॥

- ಉಪ. ಸಾ. ಗದ್ಯ-೨-೪೧

(೬) ಅಸ್ತಿ ಹಿ ಶ್ರೋತ್ರಾದಿಭಿರಸಂಹತಃ ಯತ್ಪ್ರಯೋಜನಪ್ರಯುಕ್ತಃ ಶ್ರೋತ್ರಾದಿಕಲಾಪಃ ಗೃಹಾದಿವತ್ ಇತಿ ಸಂಹತಾನಾಂ ಪರಾರ್ಥತ್ವಾತ್ ಅವಗಮ್ಯತೇ ಶ್ರೋತ್ರಾದೀನಾಂ ಪ್ರಯೋಕ್ತಾ॥

- ಕೇನ. ೧-೨-೧೬

(೭) ಅಪ್ರತ್ಯಕ್ಷೇಽಪಿ ಹ್ಯಾಕಾಶೇ ಬಾಲಾಸ್ತಲಮಲಿನತಾದ್ಯಧ್ಯಸ್ಯನ್ತಿ ॥ -ಅಧ್ಯಾ. ಭಾ.-೩

೨೮. ಪ್ರಮಾಣಗಳೆಲ್ಲವೂ ಅಧ್ಯಾಸಪೂರ್ವಕವೆಂದಾದರೆ ಪ್ರಮಾಣಗಳಿಗೂ ಅಪ್ರಮಾಣಗಳಿಗೂ ತಾರತಮ್ಯವು ಅಳಿಸಿಹೋಗಬೇಕಾಗುತ್ತದೆ. ಇದಲ್ಲದೆ ಪ್ರಮಾಣಗಳು ಅಧ್ಯಾಸಪೂರ್ವಕವೆಂಬುದನ್ನು ವೇದಾಂತಿಗಳು ಹೇಳಿದ ಮಾತ್ರದಿಂದ ನಂಬುವದಕ್ಕೂ ಆಗುವದಿಲ್ಲ. ಇದು ನಿಜವಾದರೆ ಶಾಸ್ತ್ರವೂ ಪ್ರತ್ಯಕ್ಷಾದಿಗಳಂತೆ ಒಂದು ಪ್ರಮಾಣವೇ ಆದ್ದರಿಂದ ಅದು ಅಧ್ಯಾಸಪೂರ್ವಕವೇ ಎಂದು ಹೇಳಬೇಕಾಗುವದು. ನಿರ್ದುಷ್ಟವಾದ ಶಾಸ್ತ್ರವು ಹೇಳುವದು ಸುಳ್ಳೆಂದಾಗಲಿ, ಶಾಸ್ತ್ರೀಯ ಕರ್ಮಗಳನ್ನು ಮಾಡುವವರಿಗೆ ದೇಹಕ್ಕಿಂತ ಬೇರೆಯಾದ ಆತ್ಮನೊಬ್ಬನು ಇದಾನೆಂಬ ತಿಳಿವಳಿಕೆಯಿರುವದಿಲ್ಲವೆಂದಾಗಲಿ ಹೇಳುವದು ಸಾಹಸವಾಗುತ್ತದೆ. ಆದ್ದರಿಂದ ಪ್ರಮಾಣಗಳನ್ನೇ ನಿರಾಕರಿಸುವ ವೇದಾಂತವನ್ನು ವಿವೇಕಿಗಳಾದವರು ಹೇಗೆತಾನೆ ಒಪ್ಪಲಾದೀತು? - ಎಂದು ಪ್ರಮಾಣವಾದಿಗಳು ಆಕ್ಷೇಪಿಸಬಹುದು.

ಆದರೆ ವ್ಯಾವಹಾರಿಕದೃಷ್ಟಿಯಿಂದ ನೋಡಿದಾಗ ಪ್ರಮಾಣಪ್ರಮೇಯ ವ್ಯವಹಾರವು ಸರಿಯಲ್ಲವೆಂದೇನೂ ವೇದಾಂತಿಗಳು ಹೇಳುವದಿಲ್ಲ. ದೇಹವೇ ನಾನು ಎಂಬ ತಿಳಿವಳಿಕೆಯು ದೇಹಕ್ಕಿಂತ ಬೇರೆಯಾದ ಆತ್ಮನಿದ್ದಾನೆ ಎಂಬ ಶಾಸ್ತ್ರೀಯ ಜ್ಞಾನವಾಗುವವರೆಗೆ ಪ್ರಮಾಣವಾಗಿರುವಂತೆ ಆತ್ಮನ ಅದ್ವಿತೀಯ ಸ್ವರೂಪದ ನಿಶ್ಚಯವುಂಟಾಗುವವರೆಗೆ ಪ್ರತ್ಯಕ್ಷಾದಿಗಳು ಪ್ರಮಾಣವಾಗಿರುವವು ಎಂದೇ ವೇದಾಂತಿಗಳು ಹೇಳುತ್ತಾರೆ. ಯಾವ ಪ್ರಮಾಣವೇ ಆಗಲಿ ಪ್ರಮಾತೃವನ್ನಾಶ್ರಯಿಸದೆ ತನ್ನ ಪ್ರಮೇಯದಲ್ಲಿ ಪ್ರವರ್ತಿಸಲಾರದು. ಆದರೆ ದೇಹವು ತಾನೆಂದೂ, ಇಂದ್ರಿಯಗಳು ತನ್ನವೆಂದೂ ಅಧ್ಯಾಸಮಾಡಿಕೊಂಡ ಹೊರತು ಯಾವನೂ ಪ್ರಮಾತೃವಾಗಲಾರನು. ಆದ್ದರಿಂದ ಪ್ರಮಾತೃತ್ವವು ಅಧ್ಯಾಸಪೂರ್ವಕವೆಂಬುದನ್ನು ಅಲ್ಲಗಳೆಯುವದಕ್ಕೆ ಯಾರಿಂದಲೂ ಆಗಲಾರದು. ಆದ್ದರಿಂದ ಪ್ರಮಾತೃವನ್ನು ಅವಲಂಬಿಸಿಯೇ ಉಂಟಾಗುವ ಪ್ರಮಾಣಪ್ರಮೇಯವ್ಯವಹಾರವು ಪರಮಾರ್ಥ ದೃಷ್ಟಿಯಿಂದ ನೋಡಿದಾಗ ಆಧ್ಯಾಸಿಕವೇ, ಎಂದರೆ ಭ್ರಾಂತಿಯೇ, ಎಂಬುದು ನಿರ್ವಿವಾದವಾಗಿರುತ್ತದೆ. ಇದಲ್ಲದೆ ಮನುಷ್ಯನ ಪ್ರತ್ಯಕ್ಷಾದಿವ್ಯವಹಾರಕ್ಕೂ ಪಶ್ವಾದಿಗಳ ಪ್ರತ್ಯಕ್ಷಾದಿವ್ಯವಹಾರಕ್ಕೂ ಯಾವ ತಾರತಮ್ಯವೂ ಇರುವದಿಲ್ಲ. ಶಬ್ದಾದಿಗಳು ಅನುಕೂಲವೆಂದು ತೋರಿದರೆ ಅವುಗಳನ್ನು ಬಯಸಿ ಅವುಗಳ ಕಡೆಗೆ ಮುನ್ನುಗ್ಗುವದು, ಅವು ಪ್ರತಿಕೂಲವೆಂದು ಕಂಡರೆ ಅವುಗಳಿಂದ ಹಿಂದಕ್ಕೆ ಸರಿಯುವದು- ಇವೆರಡೂ ವ್ಯವಹಾರಕಾಲದಲ್ಲಿ ಮನುಷ್ಯರಿಗೂ ಪಶ್ವಾದಿಗಳಿಗೂ ಸಮಾನವಾಗಿರುತ್ತವೆ. ಪಶ್ವಾದಿಗಳು ವಿವೇಕದಿಂದ ವ್ಯವಹಾರಮಾಡುತ್ತವೆ ಎಂದು ಯಾರೂ ಹೇಳುವದಿಲ್ಲ; ಆದ್ದರಿಂದ ಅವುಗಳಂತೆ ವ್ಯವಹರಿಸುವ ಮನುಷ್ಯನ ಪ್ರಮಾಣ ಪ್ರಮೇಯವ್ಯವಹಾರವೂ ಅವಿವೇಕಪುರಃಸ್ಸರವೇ, ಆದ್ದರಿಂದ ಅಧ್ಯಾಸಪೂರ್ವಕವಾದದ್ದೇ ಎಂದು ಧಾರಾಳವಾಗಿ ಹೇಳಬಹುದು. ಶಾಸ್ತ್ರವೂ ಅಧ್ಯಾಸಪೂರ್ವಕವೇ ಆದರೂ ಅದರಲ್ಲಿರುವ ವಿಶೇಷವನ್ನು ಮುಂದೆ (೫೧) ವಿವರಿಸುವೆವು. ಪ್ರಮಾಣವೆಂದರೆ ಸರಿಯಾದ **ತಿಳಿವಳಿಕೆಗೆ ಕರಣವು ;** ಪ್ರಮೇಯವೆಂದರೆ ಪ್ರಮಾಣದಿಂದ ಅರಿಯಲ್ಪಡುವ **ವಿಷಯವು;** ಪ್ರಮಾತೃವೆಂದರೆ ಪ್ರಮಾಣದಿಂದ ಅರಿಯುವಾತನು; ಪ್ರಮಿತಿ ಎಂದರೆ ಪ್ರಮಾಣದಿಂದಾದ ಸರಿಯಾದ ತಿಳಿವಳಿಕೆ. ಜ್ಞಾನ (ತಿಳಿಯುವದಕ್ಕೆ ಸಾಧನ), ಜ್ಞೇಯ (ತಿಳಿಯಲ್ಪಡುವ ವಿಷಯ), ಜ್ಞಾತೃ (ತಿಳಿಯುವಾತನು), ಜ್ಞಪ್ತಿ (ತಿಳಿವಳಿಕೆ) - ಎಂಬ ಮಾತುಗಳನ್ನು ಬಳಸುವಾಗ ಅಲ್ಲಿ ಆಗುವ ತಿಳಿವಳಿಕೆಯು ಯಥಾರ್ಥವೆಂಬ ನಿರ್ಬಂಧವೇನೂ ಇಲ್ಲದೆ ಬಳಸುತ್ತಾರೆ. ಪ್ರಮಾಣಪ್ರಮೇಯ ವ್ಯವಹಾರವನ್ನು ಏಳನೆಯ ಪಾಠದಲ್ಲಿ (೪೭...೫೬) ವಿಸ್ತಾರವಾಗಿ ಚರ್ಚಿಸಲಾಗುವದು.

(೧) ದೇಹಾತ್ಮಪ್ರತ್ಯಯೋ ಯದ್ವತ್ ಪ್ರಮಾಣತ್ವೇನ ಕಲ್ಪಿತಃ।

ಲೌಕಿಕಂ ತದ್ವದೇವೇದಂ ಪ್ರಮಾಣಂ ತ್ವಾತ್ಮನಿಶ್ಚಯಾತ್॥

- ೧-೧-೪ರ ಸೂತ್ರಭಾಷ್ಯದ ಕೊನೆಯಲ್ಲಿ ಆಚಾರ್ಯರು ಉದಾಹರಿಸಿರುವ ಸಾಂಪ್ರದಾಯಿಕ ಶ್ಲೋಕ

(೨) ದೇಹೇನ್ದ್ರಿಯಾದಿಷು ಅಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ । ನ ಹಿ ಇನ್ದ್ರಿಯಾಣಿ ಅನುಪಾದಾಯ ಪ್ರತ್ಯಕ್ಷಾದಿವ್ಯವಹಾರಃ ಸಂಭವತಿ । ನ ಚ ಅಧಿಷ್ಠಾನಮನ್ತರೇಣ ಇನ್ದ್ರಿಯಾಣಾಂ ವ್ಯವಹಾರಃ ಸಂಭವತಿ । ನ ಚ ಅನಧ್ಯಸ್ತಾತ್ಮಭಾವೇನ ದೇಹೇನ ಕಶ್ಚಿದ್ವ್ಯಾಪ್ರಿಯತೇ । ನ ಚ ಏತಸ್ಮಿನ್ ಸರ್ವಸ್ಮಿನ್ನಸತಿ ಅಸಙ್ಗಸ್ಯ ಆತ್ಮನಃ ಪ್ರಮಾತೃತ್ವಮ್ ಉಪಪದ್ಯತೇ । ನ ಚ ಪ್ರಮಾತೃತ್ವಮ್ ಅನ್ತರೇಣಪ್ರಮಾಣ ಪ್ರವೃತ್ತಿರಸ್ತಿ। ತಸ್ಮಾತ್ ಅವಿದ್ಯಾವದ್ವಿಷಯಾಣ್ಯೇವ ಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿಚ ॥

- ಅಧ್ಯಾ. ಭಾ-೫

(೩) ಪಶ್ವಾದಿಭಿಶ್ಚ ಅವಿಶೇಷಾತ್ । ಯಥಾ ಹಿ ಪಶ್ವಾದಯಃ ಶಬ್ದಾದಿಭಿಃ ಶ್ರೋತ್ರಾದೀನಾಂ ಸಂಬನ್ಧೇ ಸತಿ ಶಬ್ದಾದಿವಿಜ್ಞಾನೇ ಪ್ರತಿಕೂಲೇ ಜಾತೇ ತತೋ ನಿವರ್ತನ್ತೇ, ಅನುಕೂಲೇ ಚ ಪ್ರವರ್ತನ್ತೇ । ಯಥಾ ದಣ್ಡೋದ್ಯತಕರಂ ಪುರುಷಮ್ ಅಭಿಮುಖಮ್ ಉಪಲಭ್ಯ ಮಾಂ ಹನ್ತುಮ್ ಅಯಮಿಚ್ಛತಿ ಇತಿ ಪಲಾಯಿತುಮಾರಭನ್ತೇ, ಹರಿತತೃಣಪೂರ್ಣಪಾಣಿಮ್ ಉಪಲಭ್ಯ ತಂ ಪ್ರತಿ ಅಭಿಮುಖೀಭವನ್ತಿ- ಏವಂ ಪುರುಷಾ ಅಪಿ ವ್ಯುತ್ಪನ್ನಚಿತ್ತಾಃ ಕ್ರೂರದೃಷ್ಟೀನ್ ಆಕ್ರೋಶತಃ ಖಡ್ಗೋದ್ಯತಕರಾನ್ ಬಲವತಃ ಉಪಲಭ್ಯ ತತೋ ನಿವರ್ತನ್ತೇ, ತದ್ವಿಪರೀತಾನ್ ಪ್ರತಿ ಪ್ರವರ್ತನ್ತೇ । ಅತಃ ಸಮಾನಃ ಪಶ್ವಾದಿಭಿಃ ಪುರುಷಾಣಾಂ ಪ್ರಮಾಣಪ್ರಮೇಯವ್ಯವಹಾರಃ । ಪಶ್ವಾದೀನಾಂ ಚ ಪ್ರಸಿದ್ಧಃ ಅವಿವೇಕಪುರಃಸರಃ ಪ್ರತ್ಯಕ್ಷಾದಿವ್ಯವಹಾರಃ । ತತ್ಸಾಮಾನ್ಯದರ್ಶನಾತ್ ವ್ಯುತ್ಪತ್ತಿಮತಾಮಪಿ ಪುರುಷಾಣಾಂ ಪ್ರತ್ಯಕ್ಷಾದಿವ್ಯವಹಾರಃ ತತ್ಕಾಲಃ ಸಮಾನಃ ಇತಿ ನಿಶ್ಚೀಯತೇ ॥ - ಅಧ್ಯಾ. ಭಾ-೬

೨೯. ಶಾಂಕರವೇದಾಂತದಲ್ಲಿ ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸಕ್ಕಿಂತ **ಬೇರೆಯಾದ ಅವಿದ್ಯೆ**ಯಿಲ್ಲ. ಈ ಅಧ್ಯಾಸವನ್ನು ಕಳೆಯುವದಕ್ಕೆ ಆತ್ಮಾನಾತ್ಮರನ್ನು ವಿಂಗಡಿಸಿ, ಆತ್ಮಸ್ವರೂಪವು ನಿಜವಾಗಿ ನಿರ್ವಿಶೇಷವಾದ ಅದ್ವಿತೀಯಬ್ರಹ್ಮವೇ, ಅನಾತ್ಮವು ಮಾಯೆಯಿಂದ ಸೃಷ್ಟವಾಗಿರುವ ಆನೆಯಂತೆಯೂ ಕನಸಿನಲ್ಲಿ ಕಾಣುವ ವಸ್ತುಗಳಂತೆಯೂ ಗಂಧರ್ವನಗರದಂತೆಯೂ ಅಸತ್ತೇ ಆಗಿದ್ದು ಸತ್ತಿನಂತೆ ಕಾಣುತ್ತಿರುವದು- ಎಂಬ ನಿಶ್ಚಿತವಾದ ತಿಳಿವಳಿಕೆ ಬೇಕು. ಹೀಗೆ ವಸ್ತುಸ್ವರೂಪವನ್ನು ವಿಂಗಡಿಸಿಕೊಂಡು ತಿಳಿಯುವದೇ **ವಿದ್ಯೆ.** ಆತ್ಮನನ್ನು **ಕ್ಷೇತ್ರಜ್ಞ**ನೆಂದೂ ಅನಾತ್ಮವನ್ನು **ಕ್ಷೇತ್ರ**ವೆಂದೂ ಕರೆಯುವದುಂಟು. ಕ್ಷೇತ್ರಕ್ಷೇತ್ರಜ್ಞರನ್ನು ವಿಂಗಡಿಸಿ ಅರಿತುಕೊಳ್ಳುವವರೆಗೆ ಅಧ್ಯಾಸವು ಸ್ವಾಭಾವಿಕವಾಗಿ ಎಲ್ಲರಿಗೂ ಇದ್ದುಕೊಂಡಿರುವದು; ಇದು ಯಾವಾಗ ಉಂಟಾಯಿತು, ಎಂದಿಗೆ ಮುಗಿಯುವದು? ಎಂಬುದು ಗೊತ್ತಾಗುವದಿಲ್ಲ. ಈ ತಪ್ಪು ತಿಳಿವಳಿಕೆಯಿಂದಲೇ ಆತ್ಮನಲ್ಲಿ ಕರ್ತೃತ್ವಭೋಕ್ತೃತ್ವವು ತೋರುತ್ತಿರು

ವದು. ಅವಿದ್ಯೆ, ಅಜ್ಞಾನ, ಮಿಥ್ಯಾಜ್ಞಾನ, ಅನ್ಯಥಾಜ್ಞಾನ, ಮೃಷಾಜ್ಞಾನ, ವಿಪರೀತ ಜ್ಞಾನ, 'ಮಿಥ್ಯಾಪ್ರತ್ಯಯ, ಅನವಬೋಧ, ಅಪ್ರತಿಬೋಧ, ಅನವಗಮ- ಮುಂತಾದ ಪರ್ಯಾಯಶಬ್ದಗಳೆಲ್ಲ ಅಧ್ಯಾಸಕ್ಕೇ ಹೆಸರುಗಳು. ಬ್ರಹ್ಮವಿದ್ಯೆ, ಆತ್ಮವಿದ್ಯೆ, ಅಧ್ಯಾತ್ಮ ವಿದ್ಯೆ, ಆತ್ಮೈಕತ್ವವಿದ್ಯೆ, ಬ್ರಹ್ಮಾತ್ಮೈಕತ್ವವಿದ್ಯೆ, ಪರಮಾತ್ಮವಿದ್ಯೆ, ಪರಮಾತ್ಮವಿಜ್ಞಾನ- ಮುಂತಾದ ಜ್ಞಾನಪರ್ಯಾಯಶಬ್ದಗಳೆಲ್ಲ ಆತ್ಮವಸ್ತುಸ್ವರೂಪವನ್ನು ನಿರ್ಧಾರಣ ಮಾಡುವ ತಿಳಿವಳಿಕೆಗೇ ಹೆಸರುಗಳು. ವಿದ್ಯಾವಿದ್ಯೆಗಳ ಈ ಸ್ವರೂಪವನ್ನು ನೆನಪಿಟ್ಟರೆ, ಅಧ್ಯಾಸರೂಪವಾದ ಅವಿದ್ಯೆಯಿಂದ ಆತ್ಮನಲ್ಲಿ ಜನರು ಹುಟ್ಟುಗಟ್ಟುವ ಅನಾತ್ಮತದ್ಧರ್ಮಗಳ ದೋಷವು, ಅಥವಾ ಅನಾತ್ಮನಲ್ಲಿ ಜನರು ಹುಟ್ಟುಗಟ್ಟುವ ಆತ್ಮತದ್ಧರ್ಮಗಳ ಗುಣವು, ಆ ಅಧ್ಯಾಸಕ್ಕೆ ಆಸ್ಪದವಾಗಿರುವ ಆತ್ಮನಿಗಾಗಲಿ ಅನಾತ್ಮ ಕ್ಕಾಗಲಿ ಒಂದಿಷ್ಟೂ ಅಂಟಿರುವದಿಲ್ಲವೆಂದೂ ಇದನ್ನು ಸರಿಯಾಗಿ ತಿಳಿದುಕೊಳ್ಳು ವದೇ ಅವಿದ್ಯೆಯ ನಾಶವೆಂದೂ ಏರ್ಪಡುತ್ತದೆ. ಈ ತಿಳಿವಳಿಕೆಯನ್ನುಂಟುಮಾಡಿ ಕೊಡುವ **ಆತ್ಮೈಕತ್ವವಿದ್ಯೆಯನ್ನು ತಂದುಕೊಡುವದಕ್ಕಾಗಿಯೇ ಎಲ್ಲಾ ಉಪನಿಷತ್ತು ಗಳೂ ಹೊರಟಿರುತ್ತವೆ.**

(೧) ತಮೇತಮ್ ಏವಂಲಕ್ಷಣಮ್ ಅಧ್ಯಾಸಂ ಪಣ್ಡಿತಾ ಅವಿದ್ಯೇತಿ ಮನ್ಯನ್ತೇ । ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಾಮ್ ಆಹುಃ॥ -ಅಧ್ಯಾ. ಭಾ. ೪

(೨) ಯಥಾಶಾಸ್ತ್ರಂ ಕ್ಷೇತ್ರಕ್ಷೇತ್ರಜ್ಞಲಕ್ಷಣಭೇದಪರಿಜ್ಞಾನಪೂರ್ವಕಂ ಪ್ರಾಗ್‌ದರ್ಶಿತ ರೂಪಾತ್ ಕ್ಷೇತ್ರಾತ್ ಮುಞ್ಜಾದಿವ ಇಷೀಕಾಂ ಯಥೋಕ್ತಲಕ್ಷಣಂ ಕ್ಷೇತ್ರಜ್ಞಂ ಪ್ರವಿಭಜ್ಯ 'ನ ಸತ್ತನ್ನಾಸದುಚ್ಯತೇ ' (ಗೀ. ೧೩-೧೨) ಇತ್ಯನೇನ ನಿರಸ್ತಸರ್ವೋಪಾಧಿವಿಶೇಷಂ ಜ್ಞೇಯಂ ಬ್ರಹ್ಮ ಸ್ವರೂಪೇಣ ಯಃ ಪಶ್ಯತಿ, ಕ್ಷೇತ್ರಂ ಚ ಮಾಯಾನಿರ್ಮಿತಹಸ್ತಿಸ್ವಪ್ನದೃಷ್ಟವಸ್ತುಗನ್ಧರ್ವನಗರಾದಿ- ವತ್ ಅಸದೇವ ಸದಿವ ಅವಭಾಸತೇ 'ಇತ್ಯೇವಂನಿಶ್ಚಿತವಿಜ್ಞಾನೋ ಯಃ' ತಸ್ಯ ಯಥೋಕ್ತ ಸಮ್ಯಗ್ದರ್ಶನವಿರೋಧಾತ್ ಅಪಗಚ್ಛತಿ ಮಿಥ್ಯಾಜ್ಞಾನಮ್॥ - ಗೀ. ಭಾ. ೧೩-೨೬-೮೨೬

(೩) ಏವಮಯಮ್ ಅನಾದಿಃ, ಅನನ್ತಃ, ನೈಸರ್ಗಿಕೋಽಧ್ಯಾಸಃ, ಮಿಥ್ಯಾಪ್ರತ್ಯಯ ರೂಪಃ ಕರ್ತೃತ್ವಭೋಕ್ತೃತ್ವಪ್ರವರ್ತಕಃ ಸರ್ವಲೋಕಪ್ರತ್ಯಕ್ಷಃ ॥ -ಅಧ್ಯಾ. ಭಾ-೯

(೪) ತತ್ರ ಏವಂ ಸತಿ ಯತ್ರ ಯದಧ್ಯಾಸಃ ತತ್ಕೃತೇನ ದೋಷೇಣ ಗುಣೇನ ವಾ ಅಣುಮಾತ್ರೇಣಾಪಿ ಸ ನ ಸಂಬಧ್ಯತೇ ॥ - ಅಧ್ಯಾ. ಭಾ-೪

(೫) ಅಸ್ಯ ಅನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ ॥ - ಅಧ್ಯಾ. ಭಾ-೯

(೬) ಅತೋ ವಿಲಕ್ಷಣಃ ಅನಾಮರೂಪಕರ್ಮಾತ್ಮಕಃ, ಅದ್ವಯಃ, ನಿತ್ಯಶುದ್ಧಬುದ್ಧ ಮುಕ್ತಸ್ವಭಾವೋಽಪಿ ಕ್ರಿಯಾಕಾರಕಫಲಭೇದಾದಿವಿಪರ್ಯಯೇಣ ಅವಭಾಸತೇ । ಅತಃ ಅಸ್ಮಾತ್ ಕ್ರಿಯಾಕಾರಕಫಲಭೇದಸ್ವರೂಪಾತ್ ಏತಾವದಿದಮ್ ಇತಿ ಸಾಧ್ಯಸಾಧನರೂಪಾತ್ ವಿರಕ್ತಸ್ಯ ಕಾಮಾದಿದೋಷಕರ್ಮಬೀಜಭೂತಅವಿದ್ಯಾನಿವೃತ್ತಯೇ ರಜ್ಜ್ವಾಮಿವ ಸರ್ಪ ವಿಜ್ಞಾನಾಪನ- ಯಾಯ ಬ್ರಹ್ಮವಿದ್ಯಾ ಆರಭ್ಯತೇ ॥ - ಬೃ ಭಾ. ಅವ-೭

# ೫. ಅವಿದ್ಯೆ

೩೦. ಅವಿದ್ಯೆ ಎಂದರೆ ಆತ್ಮಾನಾತ್ಮರ ಪರಸ್ಪರಾಧ್ಯಾಸವೇ ಎಂದು ಹಿಂದೆ (೨೫) ಹೇಳಿರುತ್ತೇವಷ್ಟೆ, ಆದರೆ ಅವಿದ್ಯೆ ಎಂಬ ಶಬ್ದವು ಅಧ್ಯಾಸವೆಂಬ ಶಬ್ದಕ್ಕಿಂತ ಹೆಚ್ಚು ವ್ಯಾಪಕವಾಗಿರುತ್ತದೆ. ಏಕೆಂದರೆ ವಿದ್ಯೆಯಿಂದ, ಎಂದರೆ - ಆತ್ಮಾನಾತ್ಮರ ವಿವೇಕದ ಬೆಳಕಿನಿಂದ- ಯಾವಯಾವದು ತೊಲಗುವದೋ, ವಿದ್ಯೆಯುಂಟಾಗುವ ವರೆಗೆ ಯಾವ ಯಾವದು ವಸ್ತುವನ್ನು ತಿಳಿಯಗೊಡದೆ ಮುಸುಕಿಕೊಂಡಿರುವದೋ ಅಂಥ ತಾಮಸಪ್ರತ್ಯಯವೆಲ್ಲವೂ **'ಅವಿದ್ಯೆ'** ಎಂಬ ಹೆಸರಿಗೆ ತಕ್ಕದ್ದಾಗಿರುವದು. ಆದ್ದರಿಂದ ತಪ್ಪಾಗಿ ತಿಳಿಯುವ, ಅಥವಾ ಸಂಶಯವನ್ನು ತಂದೊಡ್ಡುವ, ಅಥವಾ ವಸ್ತುವನ್ನು ಅರಿಯದಿರುವ, ಪ್ರತ್ಯಯಗಳೆಲ್ಲವೂ ಈ ಅರ್ಥದಲ್ಲಿ ಅವಿದ್ಯೆಯೇ ಆಗಿರುತ್ತವೆ. ಈ ಅವಿದ್ಯಾತ್ರಯಕ್ಕಿಂತ ಬೇರೆಯಾದ ಅವಿದ್ಯೆಯು ಲೋಕದಲ್ಲಿರುವದಿಲ್ಲ. ಉದಾಹರಣೆಗೆ ಕಣ್ಣಿನಲ್ಲಿ ಯಾವದಾದರೊಂದು ದೋಷವಿರುವವನಿಗೆ ಎದುರಿಗಿರುವ ವಸ್ತು ಕಾಣದೆ ಹೋಗಬಹುದು, ಮರೆಮರೆಯಾಗಿ ಕಂಡು ಅದು ಏನಿರಬಹುದೆಂಬ ಸಂಶಯವನ್ನೊಡ್ಡಬಹುದು, ಅಥವಾ ಅದನ್ನು ಬೇರೆಯಾಗಿಯೇ ತಪ್ಪಾಗಿ ಕಾಣುವಂತೆ ಮಾಡಬಹುದು. ಈ ಮೂರು ಬಗೆಯ ಅವಿದ್ಯೆಗಳೂ ಕಣ್ಣಿನ ದೋಷವು ಹೋದರೆ ವಸ್ತುಜ್ಞಾನವಾದಕೂಡಲೆ ತೊಲಗುತ್ತವೆ; ಜ್ಞಾನ ಹೊರತು ಮತ್ತೆ ಏತರಿಂದಲೂ ಅವು ಹೋಗುವದಿಲ್ಲ. ಇದರಂತೆ ಆತ್ಮಸ್ವರೂಪದ **ಅಗ್ರಹಣ, ಸಂಶಯ, ವಿಪರೀತಪ್ರತ್ಯಯ-** ಈ ಮೂರು ಅವಿದ್ಯೆಗಳೂ ಆತ್ಮೈಕತ್ವ ವಿದ್ಯೆಯಿಂದಲೇ ತೊಲಗುವವು. ಈಚಿನ ಕೆಲವರು ವ್ಯಾಖ್ಯಾನಪ್ರಸ್ಥಾನದ ವೇದಾಂತಿಗಳು ಈ ಮೂರರಕ್ಕಿಂತ ಬೇರೆಯಾಗಿ ಮತ್ತೊಂದು ಅವಿದ್ಯೆಯುಂಟೆಂದು ಕಲ್ಪಿಸಿರುತ್ತಾರೆ. ಆ **ಮೂಲಾವಿದ್ಯೆಯು** ಜಗತ್ತಿಗೆ ಉಪಾದಾನಕಾರಣವೆಂದೂ ಅದರ ಅಂಶವಾದ ಅಥವಾ ಅವಸ್ಥಾವಿಶೇಷವಾದ ತೂಲಾವಿದ್ಯೆಯು ಹಗ್ಗದ ಹಾವು ಮುಂತಾದ ತೋರಿಕೆಯ ಪದಾರ್ಥಗಳಿಗೆ ಉಪಾದಾನವೆಂದೂ ಕಲ್ಪಿಸಿರುತ್ತಾರೆ. ಆದರೆ ಅದನ್ನು ಭಾಷ್ಯಕಾರರು ಹೇಳಿಯೂ ಇರುವದಿಲ್ಲ; ಅದು ಲೋಕದಲ್ಲಿ ಯಾರ ಅನುಭವದಲ್ಲಿಯೂ ಇರುವದೂ ಇಲ್ಲ. ಅವರ ಈ ವಾದವು ವೇದಾಂತಸಿದ್ಧಾಂತಕ್ಕೆ ತೀರ ವಿರುದ್ಧವಾಗಿಯೂ ಇರುತ್ತದೆ.

(೧) ತಾಮಸೋ ಹಿ ಪ್ರತ್ಯಯಃ ಆವರಣಾತ್ಮಕತ್ವಾತ್ ಅವಿದ್ಯಾ ವಿಪರೀತಗ್ರಾಹಕಃ, ಸಂಶಯೋಪಸ್ಥಾಪಕೋ ವಾ ಅಗ್ರಹಣಾತ್ಮಕೋ ವಾ । ವಿವೇಕಪ್ರಕಾಶಭಾವೇ ತದಭಾವಾತ್। ತಾಮಸೇ ಚ ಆವರಣಾತ್ಮಕೇ ತಿಮಿರಾದಿದೋಷೇ ಸತಿ, ಅಗ್ರಹಣಾದೇರವಿದ್ಯಾತ್ರಯಸ್ಯ ಉಪಲಬ್ಧೇಃ ॥ - ಗೀ. ಭಾ. ೧೩-೨-೭೬೧

(೨) ವಿದ್ಯೋತ್ಪತ್ತೌ ಅವಿದ್ಯಾಯಾ ಹಿ ಅಸ್ತತ್ವಾತ್ ತದಾಶ್ರಯೇ ಅವಿದ್ಯಾನುಪಪತ್ತೇಃ। ನ ಹಿ 'ಅಗ್ನಿರುಷ್ಣಃ ಪ್ರಕಾಶಶ್ಚ' ಇತಿ ವಿಜ್ಞಾನೋತ್ಪತ್ತೌ ಯಸ್ಮಿನ್ ಆಶ್ರಯೇ ತದುತ್ಪನ್ನಂ ತಸ್ಮಿನ್ನೇವ, ಆಶ್ರಯೇ 'ಶೀತೋಽಗ್ನಿಃ ಅಪ್ರಕಾಶೋ ವಾ' ಇತಿ ಅವಿದ್ಯಾಯಾ ಉತ್ಪತ್ತಿಃ । ನಾಪಿ ಸಂಶಯಃ, ಅಜ್ಞಾನಂ ವಾ॥ - ಈ. ಭಾ-೧೮-೪೨

(೩)ಯಥಾ ಲೋಕೇ ದ್ರಷ್ಟುಶ್ಚಕ್ಷುಷ ಆಲೋಕೇನ ಸಂಯೋಗೋ ಯತ್ಕಾಲಃ ತತ್ಕಾಲ ಏವ ರೂಪಾಭಿವ್ಯಕ್ತಿಃ, ಏವಮ್ ಆತ್ಮವಿಷಯಂ ವಿಜ್ಞಾನಂ ಯತ್ಕಾಲಂ ತತ್ಕಾಲ ಏವ ತದ್ವಿಷಯಾಜ್ಞಾನ ತಿರೋಭಾವಃ ಸ್ಯಾತ್ ॥ - ಬೃ.ಭಾ - ೧-೪-೧೦-೧೬೦

(೪) ಯದಿ ಜ್ಞಾನಾಭಾವೋ, ಯದಿ ಸಂಶಯಜ್ಞಾನಮ್, ಯದಿ ವಿಪರೀತಜ್ಞಾನಂ ವಾ ಉಚ್ಯತೇ 'ಅಜ್ಞಾನಮ್' ಇತಿ ಸರ್ವಂ ಹಿ ತತ್ ಜ್ಞಾನೇನೈವ ನಿವರ್ತ್ಯತೇ ॥ - ಬೃ-. ಭಾ. ೩-೩-೧-೩೨

೩೧. ಲೋಕದಲ್ಲಿ ವಸ್ತುವಿನ ಅವಿದ್ಯೆಯು 'ನಾನು ಅದನ್ನು ಅರಿಯೆನು' ಎಂಬ ರೂಪದಲ್ಲಿ ಅವರವರ ಅನುಭವದಲ್ಲಿಯೇ ಇರುತ್ತದೆ. ಇದರಂತೆ 'ಅದ್ವಿತೀಯಾತ್ಮನನ್ನು ನಾನು ಅರಿಯೆನು' ಎಂಬ ಅವಿದ್ಯೆಯೂ ಅನುಭವದಲ್ಲಿಯೇ ಇರುತ್ತದೆ. ವಿಚಾರವನ್ನು ಪೂರ ಮಾಡದವರಿಗೆ ಆತ್ಮಸ್ವರೂಪವು ಹೀಗೊ, ಹಾಗೊ, ಎಂಬ ಸಂಶಯವಿರುತ್ತದೆ. ವ್ಯವಹಾರದಲ್ಲಿ ಎಲ್ಲರಿಗೂ ದೇಹಾದಿಗಳಲ್ಲಿ ಆತ್ಮಬುದ್ಧಿಯಿರುವದರಿಂದ ವಿಪರೀತಪ್ರತ್ಯಯರೂಪವಾದ ಅಧ್ಯಾಸವೂ ಇದ್ದೇ ಇರುತ್ತದೆ. ಹೀಗೆ ಅವಿದ್ಯೆಯು ಎಲ್ಲರಿಗೂ ಅನುಭವದಲ್ಲಿಯೇ ಇರುತ್ತದೆಯಾದನೂ 'ಅವಿದ್ಯೆಗೆ ಪ್ರಮಾಣವೇನು?' ಎಂದು ಕೆಲವರು ಕುಚೋದ್ಯವನ್ನು ಮಾಡುತ್ತಿರುವದು ನಗೆಗೀಡಾದ ಮಾತೆಂಬುದು ಸ್ಪಷ್ಟವಾಗಿದೆ. ಅವಿದ್ಯಾಪೂರ್ವಕವಾಗಿಯೇ ಸಕಲಪ್ರಮಾಣಪ್ರಮೇಯವ್ಯವಹಾರಗಳೂ ಆಗಿರುವದರಿಂದ ಪ್ರಕೃತವಾದ ಅಧ್ಯಾಸ ರೂಪವಾದ ಆತ್ಮಾವಿದ್ಯೆಗೆ ಪ್ರಮಾಣವನ್ನು ಕೇಳುವದಂತೂ ತೀರ ಸಾಹಸದ ಮಾತೆಂಬುದನ್ನು ಹೇಳಬೇಕಾಗಿಲ್ಲ. ಹೀಗಿದ್ದರೂ ಕೆಲವರು ಅದ್ವೈತಿಗಳೂ ಕತ್ತಲೆಯನ್ನು ದೀಪದಿಂದ ತೋರಿಸುವದಕ್ಕೆ ಹೊರಡುವವರಂತೆ ಅವಿದ್ಯೆಗೂ ಪ್ರಮಾಣವನ್ನು ತೋರಿಸುವದಕ್ಕೆ ಹೊರಟಿರುತ್ತಾರೆ !

(೧) ಏವಮಯಮನಾದಿರನನ್ತಃ ನೈಸರ್ಗಿಕೋಽಧ್ಯಾಸಃ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವಭೋಕ್ತೃತ್ವ ಪ್ರವರ್ತಕಃ ಸರ್ವಲೋಕಪ್ರತ್ಯಕ್ಷಃ ॥ - ಅಧ್ಯಾ. ಭಾ:-೯

(೨) ತಮೇತಮವಿದ್ಯಾಖ್ಯಮ್ ಆತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾಃ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ ॥ - ಅಧ್ಯಾ. ಭಾ.-೫

೩೨. ಲೋಕದಲ್ಲಿ ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿಯುವದಕ್ಕೂ ಒಬ್ಬ ಚಂದ್ರನನ್ನು ಇಬ್ಬರೆಂದು ತಿಳಿಯುವದಕ್ಕೂ ಕರಣದೋಷ, ವಿಷಯವು ದೂರ

ವಾಗಿರುವದೇ ಮುಂತಾದ ದೋಷ - ಇವೇ ಮುಂತಾದ ಕಾರಣಗಳು ಇರುತ್ತವೆ; ಆದರೆ ಆತ್ಮಾನಾತ್ಮರ ಅಧ್ಯಾಸಕ್ಕೆ ಕಾರಣವೇನು?- ಎಂದು ಕೆಲವರು ಕೇಳುತ್ತಾರೆ. ''ಅವಿದ್ಯೆಯು ಯಾವ ಉಪಾದಾನಕಾರಣದಿಂದ ಆಗಿರುತ್ತದೆ? ಮಡಕೆಗೆ ಮಣ್ಣಿನಂತೆ ಇದಕ್ಕೂ ಒಂದು ಕಾರಣವು ಬೇಡವೆ?'' ಎಂದು ಕೂಡ ಕೆಲವರು ಕೇಳುತ್ತಾರೆ! ಆದರೆ ಈ ಪ್ರಶ್ನೆಯು ಅಸಂಗತವಾದದ್ದು. ಏಕೆಂದರೆ ಕಾರ್ಯಕಾರಣಭಾವವು ಸತ್ಯವೆಂದಾಗಲಿ ಆತ್ಮನಲ್ಲಿರುವ ಅಧ್ಯಾಸವು ಕಾರ್ಯವೆಂದಾಗಲಿ ವೇದಾಂತಿಗಳು ಒಪ್ಪಿರುವದಿಲ್ಲ. ಆತ್ಮನೊಬ್ಬನೇ ಸತ್ಯವು; ಮಿಕ್ಕದ್ದೆಲ್ಲವೂ ಅಸತ್ಯವು, ಹುಸಿತೋರಿಕೆ- ಎಂದು ಅವರು ಹೇಳುತ್ತಾರೆ. **ಕಾರ್ಯಕಾರಣಭಾವವೂ ಅಸತ್ಯವೆಂದೇ ಇದರಿಂದ ಏರ್ಪಡುತ್ತದೆ.** ವ್ಯವಹಾರದೃಷ್ಟಿಯಿಂದ ಅಧ್ಯಾಸವು ಅನಾದಿಯೂ ಅನಂತವೂ ಆಗಿರುತ್ತದೆ; ಆದ್ದರಿಂದಲೂ ಇದಕ್ಕೆ ಕಾರಣವನ್ನು ಕೇಳುವದು ಸರಿಯಲ್ಲ. ಕಾರ್ಯಕಾರಣಭಾವಕ್ಕೆ ಕಾಲದ ಅಪೇಕ್ಷೆಯಿದೆ; ಕಾರಣವು ಮೊದಲು ಕಾರ್ಯವು ಆಮೇಲೂ ಇರುತ್ತದೆ ಎಂಬುದು ಕಾರ್ಯಕಾರಣವಾದಿಗಳ ಮತವು. ಆದರೆ ಕಾಲವೂ ಅಧ್ಯಸ್ತವೆಂದೇ ವೇದಾಂತಿಗಳು ಹೇಳುತ್ತಾರೆ. ಇದು ಮುಂದೆ (೧೦೫) ಸ್ಫುಟವಾಗುತ್ತದೆ. ಆದ್ದರಿಂದ ಅಧ್ಯಾಸವೆಂಬುದು ಘಟಾದಿಗಳಂತೆ ಒಂದು ಕಾರ್ಯವೆಂದು ಕಲ್ಪಿಸಿ ಅದಕ್ಕೆ ಕಾರಣವನ್ನು ಕೇಳುವದು ಸರಿಯಲ್ಲ. ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿಯುವವರು, ನಿಜವನ್ನು ಅರಿತಾಗ 'ಇದು ಕಪ್ಪೆಯಚಿಪ್ಪೇ, ಬೆಳ್ಳಿಯೆಂದು ತಪ್ಪಾಗಿ ಭಾವಿಸಿಕೊಂಡೆನು' ಎನ್ನುತ್ತಾರೆಯೇ ಹೊರತು ನಿಜವಾಗಿ ಶುಕ್ತಿರಜತವೆಂಬ ಬೆಳ್ಳಿಯು ಆಗ್ಗೆ ಹುಟ್ಟಿತ್ತು ಎಂದೇನೂ ತಿಳಿಯುವದಿಲ್ಲ. ಆದ್ದರಿಂದ ಶುಕ್ತಿರಜತಕ್ಕೆ ತೂಲಾವಿದ್ಯೆಯು ಉಪಾದಾನಕಾರಣ ಎಂದು ಕಲ್ಪಿಸಿರುವವರನ್ನು ಭ್ರಾಂತರೆನ್ನಬೇಕಾಗಿದೆ. ಇದರಿಂದ ಅಧ್ಯಾಸಕ್ಕೆ ನಿಮಿತ್ತವೇನು? ಎಂದು ಕೇಳುವದೂ ಸರಿಯಲ್ಲ. ಏಕೆಂದರೆ ಭ್ರಾಂತಿಗೆಲ್ಲ ಒಂದು ನಿಮಿತ್ತವಿರಬೇಕೆಂಬುದೇನೂ ನಿಯಮವಿಲ್ಲ; ಸರಿಯಾಗಿ ತಿಳಿದುಕೊಳ್ಳದೆ ಇರುವವರು ವಸ್ತುವನ್ನು ತಪ್ಪಾಗಿ ತಿಳಿದುಕೊಳ್ಳುವದು ಸ್ವಭಾವವು. ಆತ್ಮನನ್ನು ಅರಿಯದಿರುವದೇ ನಿಮಿತ್ತಕಾರಣವು. ಅದರಿಂದಲೇ ಅಧ್ಯಾಸವುಂಟಾಗಿರುವದು ಎಂದು ವೇದಾಂತಿಗಳು ಹೇಳುವದುಂಟು. ಆದರೆ ಹೀಗೆ ಹೇಳುವಾಗಲೂ ಕಾಲದಲ್ಲಿ ಈ ಎರಡು ಘಟನೆಗಳು ಆಗುವವೆಂದು ಮಾತ್ರ ತಿಳಿಯಬಾರದು. ಪರಮಾರ್ಥದೃಷ್ಟಿಯಿಂದ ನೋಡಿದಾಗ ಅವಿದ್ಯೆಯೇ ಇರುವದಿಲ್ಲ; ಅದರಲ್ಲಿ ಕಾರ್ಯಕಾರಣಭಾವವೆಲ್ಲಿಂದ ಬಂತು? ಶುಕ್ತಿಯು ರಜತವಾಗಿ ಕಾಣುವದು ಹೇಗೆ? ಹಗ್ಗವು ಹಾವೆಂಬ ಭ್ರಾಂತಿಯಾಗುವದು ಹೇಗೆ ?-ಎಂಬ ವಿಷಯಕ್ಕೆ **ಖ್ಯಾತಿಬಾಧವಿಚಾರ**ವೆಂಬ ಚರ್ಚೆಯನ್ನು ಈಗಿನ ವೇದಾಂತಗ್ರಂಥಗಳಲ್ಲಿ ಬಹಳವಾಗಿ ಚರ್ಚಿಸಿರುತ್ತದೆ. ವೇದಾಂತತತ್ತ್ವ

ನಿರ್ಧಾರಣಕ್ಕೆ ಇದರಿಂದ ಯಾವ ಪ್ರಯೋಜನವೂ ಇಲ್ಲದ್ದರಿಂದ ವ್ಯಥಾಯಾಸಕ್ಕೆ ಕಾರಣ ವಾದ ಈ ವಿಷಯವನ್ನು ನಾವು ಕಡೆಗಣಿಸಿರುತ್ತೇವೆ.

(೧) ಬುದ್ಧ್ವಾನಿಮಿತ್ತತಾಂ ಸತ್ಯಾಂ ಹೇತುಂ ಪೃಥಗನಾಪ್ನುವನ್ ।
ವೀತಶೋಕಂ ತಥಾಕಾಮಮಭಯಂ ಪದಮಶ್ನುತೇ ॥ - ಮಾಂ. ಕಾ. ೪-೭೮

ಯಥೋಕ್ತೇನ ನ್ಯಾಯೇನ ಜನ್ಮನಿಮಿತ್ತಸ್ಯ ದ್ವಯಸ್ಯ ಅಭಾವಾತ್ ಅನಿಮಿತ್ತತಾಂ ಚ ಸತ್ಯಾಂ ಪರಮಾರ್ಥರೂಪಾಂ ಬುದ್ಧ್ವಾ ಹೇತುಂ ಧರ್ಮಾದಿಕಾರಣಂ ದೇವಾದಿಯೋನಿ-ಪ್ರಾಪ್ತಯೇ ಪೃಥಗನಾಪ್ನುವನ್ ಅನುಪಾದದಾನಃ ತ್ಯಕ್ತಬಾಹ್ಯೈಷಣಃ ಸನ್ ಕಾಮಶೋಕಾದಿ-ವರ್ಜಿತಮ್ ಅವಿದ್ಯಾದಿರಹಿತಮ್ ಅಭಯಂ ಪದಮಶ್ನುತೇ । ಪುನರ್ನ ಜಾಯತೇ ಇತ್ಯರ್ಥಃ ॥
- ಮಾಂ. ಕಾ. ಭಾ. ೪-೭೮-೩೩೧

(೨) ತಥಾ ಚ ಲೋಕೇ ಅನುಭವಃ । ಶುಕ್ತಿಕಾ ಹಿ ರಜತವದವಭಾಸತೇ । ಏಕಶ್ಚನ್ದ್ರಃ ಸದ್ವಿತೀಯವದಿತಿ॥ - ಅಧ್ಯಾ. ಭಾ.-೨

(೩) ಪ್ರತ್ಯೇತ್ಯೇವ ಹಿ ಕೇವಲಂ ರಜತಮಿತಿ, ನ ತು ತತ್ರ ರಜತಮಸ್ತಿ ॥
- ಸೂ. ಭಾ. ೪-೧-೫-೫೧೫

(೪) ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮ್ ಅನ್ಯೋನ್ಯಧರ್ಮಾಂಶ್ಚ ಅಧ್ಯಸ್ಯ ಇತರೇತರಾವಿವೇಕೇನ ಅತ್ಯನ್ತವಿವಿಕ್ತಯೋರ್ಧರ್ಮಧರ್ಮಿಣೋಃ ಮಿಥ್ಯಾಜ್ಞಾನನಿಮಿತ್ತಃ ಸತ್ಯಾನೃತೇ ಮಿಥುನೀಕೃತ್ಯ 'ಅಹಮಿದಂ' 'ಮಮೇದಮಿತಿ' ನೈಸರ್ಗಿಕೋಽಯಂ ಲೋಕವ್ಯವಹಾರಃ'॥ - ಅಧ್ಯಾ ಭಾ.-೧

(೫) ಕ್ಷೇತ್ರಕ್ಷೇತ್ರಜ್ಞಯೋರ್ವಿಷಯವಿಷಯಿಣೋರ್ಭಿನ್ನಸ್ವಭಾವಯೋಃ ಇತರೇತರತದ್ಧರ್ಮಾಧ್ಯಾಸಲಕ್ಷಣಃ ಸಂಯೋಗಃ ಕ್ಷೇತ್ರಕ್ಷೇತ್ರಜ್ಞಸ್ವರೂಪವಿವೇಕಾಭಾವನಿಬನ್ಧನಃ ರಜ್ಜುಶುಕ್ತಿಕಾದೀನಾಂ ತದ್ವಿವೇಕಜ್ಞಾನಾಭಾವಾತ್ ಅಧ್ಯಾರೋಪಿತಸರ್ಪರಜತಾದಿ ಸಂಯೋಗವತ್॥ - ಗೀ. ಭಾ. ೧೩-೨೬-೮೨೬

೩೩. ಅವಿದ್ಯೆಯು ಅಗ್ರಹಣಸಂಶಯಾನ್ಯಥಾಗ್ರಹಣರೂಪವಾಗಿ ಮೂರು ಬಗೆಯೆಂದೂ ಅಗ್ರಹಣಕ್ಕೂ ಅನ್ಯಥಾಗ್ರಹಣಕ್ಕೂ ನಿಮಿತ್ತನೈಮಿತ್ತಿಕಭಾವವಿರುವ ದೆಂದೂ ನಾವು ಹೇಳಿರುವದರ ಅಕ್ಷರಾರ್ಥವನ್ನು ಹಿಡಿದು ಅವಿದ್ಯಾಸ್ವರೂಪದ ಅರಿವನ್ನು ತಿಳಿದುಕೊಳ್ಳಬಾರದು. ಏಕೆಂದರೆ ಸಂಖ್ಯೆ, ನಿಮಿತ್ತ ನೈಮಿತ್ತಿಕಭಾವ-ಇವೆಲ್ಲ ಪ್ರಮಾತೃತ್ವವಿಲ್ಲದೆ ತಿಳಿದುಬರುವಂತಿಲ್ಲ ; ಪ್ರಮಾತೃತ್ವವು ಅಧ್ಯಾಸವಿಲ್ಲದೆ ಆಗುವಹಾಗಿಲ್ಲವೆಂದು ಹಿಂದೆ (೨೮) ತಿಳಿಸಿಕೊಟ್ಟಿರುತ್ತೇವೆ. ಆದ್ದರಿಂದ ಹೇಗೆ ಲೋಕದಲ್ಲಿ ಕಣ್ಣಿಗೆ ಕಾಣಿಸುತ್ತಿರುವ ಕಪ್ಪೆಯ ಚಿಪ್ಪು ಬೆಳ್ಳಿಯೆಂಬ ತಪ್ಪು ತಿಳಿವಳಿಕೆಯ ಮರೆಯಿಂದ ಅಜ್ಞಾತವಾಗಿದೆ ಎನಿಸುವದೋ ಹಾಗೆಯೇ ಆತ್ಮನ **ಅಗ್ರಹಣಾದಿಗಳೆಂಬವಕ್ಕೂ ವಿಪರೀತಜ್ಞಾನರೂಪವಾದ ಅಧ್ಯಾಸಮಾತ್ರವೇ ಸ್ವರೂಪವು.** ಜ್ಞಾನವು ಅಧ್ಯಾಸವನ್ನು ಕಳೆದ ಬಳಿಕ ಯಾವ ಅಗ್ರಹಣಾದಿಗಳೂ ಉಳಿಯುವದೇ ಇಲ್ಲ,

ಅಗ್ರಹಣ, ಸಂಶಯ, ವಿಪರೀತಪ್ರತ್ಯಯ- ಎಂಬ ವಿಂಗಡವು ಕೂಡ ಆತ್ಮನಲ್ಲಿ ಹುಟ್ಟುಗಟ್ಟಿದ ಪ್ರಮಾತೃತ್ವವನ್ನವಲಂಬಿಸಿಯೇ ಆಗುವದರಿಂದ **ಶಂಕರಾಚಾರ್ಯರು ತಮ್ಮ ಭಾಷ್ಯಗ್ರಂಥಗಳಲ್ಲಿ ಮುಖ್ಯವಾಗಿ ಅಧ್ಯಾಸವನ್ನೇ ಅವಿದ್ಯೆಯೆಂದು ವ್ಯವಹರಿಸಿರುವದು ಕಂಡುಬರುತ್ತದೆ.**

(೧) ಯಥಾ ಗೃಹ್ಯಮಾಣಾಯಾ ಅಪಿ ಶುಕ್ತಿಕಾಯಾ ವಿಪರ್ಯಯೇಣ ರಜತಾಭಾಸಾಯಾಃ ಅಗ್ರಹಣಂ ವಿಪರೀತಜ್ಞಾನವ್ಯವಧಾನಮಾತ್ರಮ್ ತಥಾ ಗ್ರಹಣಂ ಜ್ಞಾನಮಾತ್ರಮೇವ - ವಿಪರೀತಜ್ಞಾನವ್ಯವಧಾನಾಪೋಹಾರ್ಥತ್ವಾತ್ ಜ್ಞಾನಸ್ಯ॥ - ಬೃ. ಭಾ. ೧-೪-೭-೧೪೩

೩೪. ಅವಿದ್ಯೆಯಿಂದ ಬಂಧವೂ ವಿದ್ಯೆಯಿಂದ ಮೋಕ್ಷವೂ ಆಗುವದೆಂದು ವೇದಾಂತಿಗಳು ವ್ಯವಹರಿಸುವದುಂಟು. ಇದಕ್ಕೆ ನಿಜವಾಗಿಲ್ಲದ ಮೋಕ್ಷವು ಹೊಸದಾಗಿ ಬರುವದೆಂದಾಗಲಿ, ಇರುವ ಬಂಧವು ಹೋಗುವದೆಂದಾಲಿ ಅಭಿಪ್ರಾಯವಿಲ್ಲ. ಇದು ಮುಂದೆ (೧೫೭) **ಬಂಧಮೋಕ್ಷವಿಚಾರದ** ಸಂದರ್ಭದಲ್ಲಿ ವಿಶದವಾಗುವದು. ಅವಿದ್ಯೆಯ ನಿವೃತ್ತಿಯೇ ಬಂಧನಾಶವು, ವಿದ್ಯೆಯ ಉತ್ಪತ್ತಿಯೇ ಮೋಕ್ಷವು; ನಿಜವಾಗಿ ಬಂಧಮೋಕ್ಷಗಳೆಂಬಿವು ಇಲ್ಲವೇ ಇಲ್ಲ - ಎಂದು ವೇದಾಂತಿಗಳು ಹೇಳುವದನ್ನು ಕೇಳಿಯೂ ಅವಿದ್ಯೆಯು ಇದ್ದುಕೊಂಡಿರುತ್ತದೆ; ಬಳಿಕ ವಿದ್ಯೆಯಿಂದ ನಾಶವಾಗುತ್ತದೆ ಎಂದು ಕೆಲವರು ಬಗೆಯುತ್ತಾರೆ. ಇದು ವೇದಾಂತದ ಉಪದೇಶದ ಮರ್ಮವನ್ನು ಅರಿಯದೆ ಮಾಡಿಕೊಂಡ ಭಾವನೆಯು. ಏಕೆಂದರೆ ಅವಿದ್ಯೆಯೂ ಅದರ ಕಾರ್ಯವೂ ಅಸತ್ತು, ವಿದ್ಯೆಯ ಪರಮಾರ್ಥರೂಪವು ಜ್ಞಾನಸ್ವರೂಪನಾದ ಆತ್ಮನ ಸ್ವಭಾವವೇ ಆಗಿರುವದರಿಂದ ಸತ್ತು. ಅಸತ್ತಾದದ್ದು ಎಂದಿಗೂ ಇರುವದೇ ಇಲ್ಲ; ಸತ್ತಾದದ್ದು ಇರುವದಿಲ್ಲವೆಂಬುದು ಎಂದೆಂದಿಗೂ ಇಲ್ಲವೇ ಇಲ್ಲ. ಆದರೂ ವ್ಯವಹಾರದಲ್ಲಿರುವ ಈ ವಿದ್ಯಾವಿದ್ಯೆಗಳ ವಿಭಾಗವನ್ನು ಉಪದೇಶಕ್ಕಾಗಿ ಒಪ್ಪಿಕೊಂಡು ನಮಗೆ ಕಾಣುವ ದ್ವೈತವೆಲ್ಲವೂ ಅವಿದ್ಯೆ ಎಂದು ವೇದಾಂತಿಗಳು ತಿಳಿಸುತ್ತಾರೆ. ಅವಿದ್ಯೆಯ ತತ್ತ್ವವೇನು? ಆತ್ಮನು ಸರ್ವವೂ ಆಗಿದ್ದರೂ ಅವನನ್ನು ಅಸರ್ವನೆಂದು ತೋರಿಸಿಕೊಡುವದು; ಆತ್ಮನಿಗಿಂತ ಬೇರೆಯಾಗಿ ಯಾವ ವಸ್ತ್ವಂತರವೂ ಇಲ್ಲದಿದ್ದರೂ ಇರುವಂತೆ ಮುಂದೊಡ್ಡುವದು; ಆಮೇಲೆ ಆ ಬೇರೆಯ ವಸ್ತುವಿನಲ್ಲಿ ಕಾಮವುಂಟಾಗುವಂತೆ ಮಾಡುವದು; ಆ ಕಾಮದಿಂದ ಆ ವಸ್ತುವನ್ನು ಪಡೆಯುವದಕ್ಕೆ ಕ್ರಿಯೆಯನ್ನು ಮಾಡುವಂತೆ ಮಾಡುವದು ; ಅದರಿಂದ ಫಲವನ್ನುಂಟುಮಾಡುವದು. ಇದೆಲ್ಲವೂ ಅವಿದ್ಯೆಯೇ. ವಿದ್ಯೆಯು ಆತ್ಮನ ರೂಪದಿಂದ ಹುಟ್ಟಬೇಕಾದದ್ದು ಇಲ್ಲವಾದರೂ ಆತ್ಮನು ನಿತ್ಯಚೈತನ್ಯರೂಪನೆಂಬ ಅರಿವಿನ ರೂಪದ ಅಂತಃಕರಣದ ವೃತ್ತಿಯು ವ್ಯವಹಾರದಲ್ಲಿ ಹುಟ್ಟುವದು ನಿಜ; ಅದು ಅವಿದ್ಯೆಯನ್ನು ಕಳೆಯುವದೆಂಬುದೂ ವ್ಯವಹಾರದ ದೃಷ್ಟಿಯಿಂದ ನಿಜವೇ.

ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ನಿತ್ಯಬುದ್ಧಸ್ವಭಾವನಾಗಿರುವ ಆತ್ಮ ನಲ್ಲಿ **ಅವಿದ್ಯೆಯಿದೆ ಎಂಬುದೂ ಅವಿದ್ಯೆಯೇ ; ಈ ಅವಿದ್ಯೆಯು ವಿದ್ಯೆಯಿಂದ ಹೋಗುವದೆಂಬುದೂ ಅವಿದ್ಯೆಯೇ.** ಇದು ಯಾವದೂ ಪರಮಾರ್ಥವಲ್ಲ; ಆತ್ಮನು ಅದ್ವಿತೀಯವಾದ ಬ್ರಹ್ಮವೆಂಬುದೊಂದೇ ಪರಮಾರ್ಥವು.

(೧) ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ಗೀ. ೨-೧೬.

(೨) ಅತ ಇದಮವಿದ್ಯಾಯಾಃ ಸತತ್ತ್ವಮುಕ್ತಂ ಭವತಿ । ಸರ್ವಾತ್ಮಾನಂ ಸನ್ತಮ್ ಅಸರ್ವಾತ್ಮತ್ವೇನ ಗ್ರಾಹಯತಿ । ಆತ್ಮನೋಽನ್ಯದ್ವಸ್ತ್ವನ್ತರಮ್ ಅವಿದ್ಯಮಾನಂ ಪ್ರತ್ಯುಪಸ್ಥಾಪಯತಿ। ಆತ್ಮಾನಮ್ ಅಸರ್ವಮಾಪಾದಯತಿ । ತತಸ್ತದ್ವಿಷಯಃ ಕಾಮೋ ಭವತಿ । ಯತೋ ಭಿದ್ಯತೇ । ಕಾಮತಃ ಕ್ರಿಯಾಮುಪಾದತ್ತೇ । ತತಃ ಫಲಮ್ ॥ - ಬೃ. ಭಾ. ೪-೩-೨೦-೨೧೧

(೩) ಅಪ್ರಕಾಶೋ ಯಥಾದಿತ್ಯೇ ನಾಸ್ತಿ ಜ್ಯೋತಿಃಸ್ವಭಾವತಃ ।
ನಿತ್ಯಬೋಧಸ್ವರೂಪತ್ವಾನ್ನಾಜ್ಞಾನಂ ತದ್ವದಾತ್ಮನಿ ॥ -ಉಪ. ೧೬- ೩೭.

೩೫. ಅವಿದ್ಯೆಯಾಗಲಿ ಅದರ ಕಾರ್ಯವಾಗಲಿ ಪರಮಾರ್ಥವಾಗಿ ಇರುವದೇ ಇಲ್ಲ ಎಂಬುದನ್ನು ನೆನಪಿಟ್ಟವರಿಗೆ ವಿದ್ಯೆಯು ಅವಿದ್ಯೆಯನ್ನು ಹೇಗೆ ನಾಶ ಮಾಡುತ್ತದೆ?- ಎಂಬ ಶಂಕೆಯು ಉಂಟಾಗುವದಕ್ಕೆ ಕಾರಣವಿಲ್ಲ. ವಿದ್ಯೆಯ ಸ್ವಭಾವವು ಎಂಥದ್ದೆಂಬುದನ್ನು ಲಕ್ಷ್ಯಕ್ಕೆ ತಂದುಕೊಂಡರೂ ಈ ಶಂಕೆಯು ಉಂಟಾಗುವದಿಲ್ಲ. ಏಕೆಂದರೆ ವ್ಯವಹಾರದಲ್ಲಿ ಸರಿಯಾದ ತಿಳಿವಳಿಕೆಗೆ 'ವಿದ್ಯೆ' ಎಂದು ಹೆಸರು. ಆ ವಿದ್ಯೆಯು ಹುಟ್ಟಿದ ಕೂಡಲೆ ಅವಿದ್ಯೆಯು ಬಾಧಿತವಾಗುತ್ತದೆ, ಎಂದರೆ ನಾನು ತಿಳಿದುಕೊಂಡಿದ್ದದ್ದು ಸರಿಯಲ್ಲ - ಎಂಬ ನಿಶ್ಚಯವಾಗಿಬಿಡುತ್ತದೆ. ಉದಾಹರಣೆಗೆ ಒಬ್ಬನು ನಸುಗತ್ತಲೆಯಲ್ಲಿ ಬಿದ್ದಿದ್ದ ಒಂದು ಹಗ್ಗವನ್ನು ಹಾವೆಂದು ಭಾವಿಸಿ ಹೆದರಿಕೆಯಿಂದ ಓಡುತ್ತಿರುವಾಗ, ಮತ್ತೊಬ್ಬನು 'ಅಂಜದಿರು, ಇದು ಹಾವಲ್ಲ, ಹಗ್ಗವೇ' ಎಂದು ಹೇಳಿದರೆ ಆ ವಾಕ್ಯಜ್ಞಾನದಿಂದ ಅವನು ಅದು ಹಗ್ಗ ವೆಂದು ತಿಳಿದುಕೊಂಡು ಹಾವಿನ ಭಯವನ್ನೂ ಭಯದಿಂದ ನಡುಗುವದನ್ನೂ ಬಿಡುತ್ತಾನೆ. ಇಲ್ಲಿ ವಾಕ್ಯಜ್ಞಾನವು ಇಲ್ಲದ ಹಗ್ಗವನ್ನು ತಂದುಕೊಡಲಿಲ್ಲ, ಹಾವನ್ನು ಓಡಿಸಲೂ ಇಲ್ಲ. ಇದ್ದ ಹಗ್ಗವನ್ನು ಹಗ್ಗವೆಂದು ತಿಳಿಸಿತು ಅಷ್ಟೆ. ಅಷ್ಟರಿಂದಲೇ ಹಾವೆಂಬ ಭಾವನೆಯು ತಪ್ಪುತಿಳಿವಳಿಕೆಯೆಂದು ಗೊತ್ತಾಯಿತು. ವಸ್ತುವಿನಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಲಿಲ್ಲ. ಇದರಂತೆಯೇ ಅವಿದ್ಯೆಯಿರುವಾಗಲಾಗಲಿ ಅದು ಹೋದಾಗಲಾಗಲಿ ಆತ್ಮವಸ್ತುವಿನಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವದಿಲ್ಲ.

(೧) ಯದ್ಯೇವಂ ಪ್ರತಿಬುದ್ಧೋಽಸಿ, ನಾಸ್ತಿ ಕಸ್ಯಚಿತ್ ಅಪ್ರಬೋಧಃ।
- ಸೂ. ಭಾ. ೪-೧-೩-೫೧೧

(೨) ನ ಹಿ ಕ್ವಚಿತ್ ಸಾಕ್ಷಾತ್ ವಸ್ತುಧರ್ಮಸ್ಯ ಅಪೋಢ್ರೀ ದೃಷ್ಟಾ ಕರ್ತ್ರೀ ವಾ ವಿದ್ಯಾ। ಅವಿದ್ಯಾಯಾಸ್ತು ಸರ್ವತ್ರೈವ ನಿವರ್ತಿಕಾ ದೃಶ್ಯತೇ । ತಥಾ ಇಹಾಪಿ ಅಬ್ರಹ್ಮತ್ವಮ್ ಅಸರ್ವತ್ವಂ ಚ ಅವಿದ್ಯಾಕೃತಮೇವ ನಿವರ್ತ್ಯತಾಂ ಬ್ರಹ್ಮವಿದ್ಯಯಾ ॥ - ಬೃ. ಭಾ. ೧-೪-೧೦-೧೫೧

(೩) ಯಥಾ ಕಶ್ಚಿತ್ ಸಂತಮಸೇ ಪತಿತಾಂ ಕಾಂಚಿತ್ ರಜ್ಜುಮ್ ಅಹಿಂ ಮನ್ಯಮಾನಃ ಭೀತೋ ವೇಪಮಾನಃ ಪಲಾಯತೇ, ತಂ ಚ ಅಪರೋ ಬ್ರೂಯಾತ್ 'ಮಾ ಭೈಷೀಃ। ನಾಯಮ್ ಅಹಿಃ ರಜ್ಜುರೇವ' ಇತಿ । ಸ ಚ ತತ್ ಉಪಶ್ರುತ್ಯ ಅಹಿಕೃತಂ ಭಯಮ್ ಉತ್ಸೃಜೇತ್ ವೇಪಥುಂ ಪಲಾಯನಂ ಚ । ನ ತು ಅಹಿಬುದ್ಧಿಕಾಲೇ ತದಪಗಮಕಾಲೇ ಚ ವಸ್ತುನಃ ಕಶ್ಚಿತ್ ವಿಶೇಷಃ ಸ್ಯಾತ್॥ - ಸೂ. ಭಾ. ೧-೪-೬-೩೫೧

೩೬. ಅದ್ವೈತಸಿದ್ಧಾಂತವನ್ನೂ ಒಪ್ಪಿ ಅವಿದ್ಯೆಯನ್ನೂ ವೇದಾಂತಿಗಳು ಒಪ್ಪಿರುತ್ತಾರೆಂದು ಅನೇಕರು ಭ್ರಮಿಸಿರುತ್ತಾರೆ. ವಸ್ತುಸ್ಥಿತಿಯು ಹೀಗಿಲ್ಲ. ಅದ್ವೈತವನ್ನು ಅರಿಯೆವೆಂದು ಜನರು ಹೇಳುತ್ತಿರುವದರಿಂದ ಅವರೇ ಅವಿದ್ಯೆಯನ್ನು ಒಪ್ಪಿರುತ್ತಾರೆ. ಈ ವ್ಯವಹಾರದದೃಷ್ಟಿಯಿಂದಲೇ ಅವಿದ್ಯೆಯನ್ನು ತೊಲಗಿಸುವ ವಿದ್ಯೆಯನ್ನು ತಿಳಿಸಿಕೊಡುತ್ತೇವೆಂದು ವೇದಾಂತಿಗಳು ಹೇಳುವದು. ಆದ್ದರಿಂದ ''ಅವಿದ್ಯೆ ಯಾರಿಗೆ?'' ಎಂಬ ಪ್ರಶ್ನೆಯನ್ನು ಅದ್ವೈತಿಗಳಿಗೆ ಹಾಕುವದು ಹಾಸ್ಯಾಸ್ಪದವಾದ ಮಾತು. ಅದ್ವಿತೀಯಾತ್ಮನನ್ನು ನಾನು ಅರಿಯೆನು ಎಂಬುವನು ''ನನಗೆ ಅವಿದ್ಯೆಯಿದೆ'' ಎಂದು ಅವಶ್ಯವಾಗಿ ಒಪ್ಪಬೇಕು. ''ಅದ್ವೈತಿಗಳ ದೃಷ್ಟಿಯಲ್ಲಿ ನಾನು ಸರ್ವಜ್ಞನಾದ ಈಶ್ವರನೇ ಆಗಿರುವದರಿಂದ ನನಗೆ ಅವಿದ್ಯೆ ಹೇಗೆ ಇದ್ದೀತು?'' ಎಂದು ಕೆಲವರು ಶಂಕಿಸುವದುಂಟು. ಅದ್ವೈತಿಗಳ ದೃಷ್ಟಿಯನ್ನವಲಂಬಿಸಿದರೆ ಈಶ್ವರನೊಬ್ಬನೇ ಪರಮಾರ್ಥವಾಗಿರುವದರಿಂದ ಆಗ ಅವಿದ್ಯೆಯು ಯಾರಿಗೂ ಇರುವದಿಲ್ಲವೆಂಬುದೇ ಆ ಶಂಕೆಗೆ ಪರಿಹಾರವು. ''ಆತ್ಮನಿಗೆ ಅವಿದ್ಯೆಯಿದ್ದರೆ ಅದ್ವೈತವು ಹೇಗೆ?'' ಎಂದು ಆಕ್ಷೇಪಿಸುವವರಿಗೂ ಇದೇ ಪರಿಹಾರವು. ಅವಿದ್ಯೆಯಿರುವಾಗ ದ್ವೈತವ್ಯವಹಾರವೇ ನಿಶ್ಚಯವಾಗಿರುವದರಿಂದ ಆಗ 'ಅವಿದ್ಯೆಯಿದ್ದರೆ' ಎಂದು ದ್ವೈತವನ್ನು ಆಕ್ಷೇಪಿಸುವ ಕಾರಣವಿಲ್ಲ ; ಅವಿದ್ಯೆಯನ್ನು ವಿದ್ಯೆಯಿಂದ ಕಳೆದುಕೊಂಡಾಗ ಯಾವ ದ್ವೈತವ್ಯವಹಾರವೂ ಇಲ್ಲದ್ದರಿಂದ ಆಗಲೂ ಯಾವ ಆಕ್ಷೇಪವೂ ಇರುವದಿಲ್ಲ.

(೧) ಅವಿದ್ಯಾ ಕಸ್ಯ ದೃಶ್ಯತೇ ಇತಿ ಪ್ರಶ್ನೋಽನಿರರ್ಥಕಃ । ಕಥಮ್? ದೃಶ್ಯತೇ ಚೇತ್ ಅವಿದ್ಯಾ ತದ್ವನ್ತಮಪಿ ಪಶ್ಯಸಿ । ನ ಚ ತದ್ವತಿ ಉಪಲಭ್ಯಮಾನೇ 'ಸಾ ಕಸ್ಯ' ಇತಿ ಪ್ರಶ್ನೋ ಯುಕ್ತಃ। ನ ಹಿ ಗೋಮತಿ ಉಪಲಭ್ಯಮಾನೇ 'ಗಾವಃ ಕಸ್ಯ' ಇತಿ ಪ್ರಶ್ನೋಽರ್ಥವಾನ್ ಭವೇತ್ । ನನು ವಿಷಮೋ ದೃಷ್ಟಾನ್ತಃ। ಗವಾಂ ತದ್ವತಶ್ಚ ಪ್ರತ್ಯಕ್ಷತ್ವಾತ್ ಸಂಬನ್ಧೋಽಪಿ ಪ್ರತ್ಯಕ್ಷಃ ಇತಿ ಪ್ರಶ್ನೋ ನಿರರ್ಥಕಃ । ನ ತಥಾ ಅವಿದ್ಯಾ ತದ್ವಾಂಶ್ಚ ಪ್ರತ್ಯಕ್ಷೌ ಯತಃ ಪ್ರಶ್ನೋ ನಿರರ್ಥಕಃ ಸ್ಯಾತ್ । ಅಪ್ರತ್ಯಕ್ಷೇಣ ಅವಿದ್ಯಾವತಾ ಅವಿದ್ಯಾಸಂಬನ್ಧೇ ಜ್ಞಾತೇ ಕಿಂ ತವ ಸ್ಯಾತ್? ಅವಿದ್ಯಾಯಾ ಅನರ್ಥಹೇತುತ್ವಾತ್

ಪರಿಹರ್ತವ್ಯಾ ಸ್ಯಾತ್ । ಯಸ್ಯ ಅವಿದ್ಯಾ ಸ ತಾಂ ಪರಿಹರಿಷ್ಯತಿ । ನನು ಮಮೈವ ಅವಿದ್ಯಾ । ಜಾನಾಸಿ ತರ್ಹಿ ಅವಿದ್ಯಾಂ ತದ್ವನ್ತಂ ಚ ಆತ್ಮಾನಮ್॥ - ಗೀ. ಭಾ. ೧೩-೨-೭೭೨

(೨) ಕಸ್ಯ ಪುನರಯಮ್ ಅಪ್ರಬೋಧಃ ಇತಿ ಚೇತ್ । ಯಸ್ತ್ವಂ ಪೃಚ್ಛಸಿ ತಸ್ಯ ತೇ ಇತಿ ವದಾಮಃ । ನನು ಅಹಮ್ ಈಶ್ವರ ಏವೋಕ್ತಃ ಶ್ರುತ್ಯಾ । ಯದ್ಯೇವಂ ಪ್ರತಿಬುದ್ಧೋಽಸಿ, ನಾಸ್ತಿ ಕಸ್ಯಚಿತ್ ಅಪ್ರಬೋಧಃ । ಯೋಽಪಿ ದೋಷಃ ಚೋದ್ಯತೇ ಕೈಶ್ಚಿತ್, ಅವಿದ್ಯಯಾ ಕಿಲ ಆತ್ಮನಃ ಸದ್ವಿತೀಯತ್ವಾತ್ ಅದ್ವೈತಾನುಪಪತ್ತಿರಿತಿ, ಸೋಽಪಿ ಏತೇನ ಪ್ರತ್ಯುಕ್ತಃ ॥

- ಸೂ. ಭಾ. ೪-೧- ೩-೫೦೦

(೩) ಸತ್ಯಾಮೇವ ಚ ನೈಸರ್ಗಿಕ್ಯಾಮ್ ಅವಿದ್ಯಾಯಾಂ ಲೋಕವೇದವ್ಯವಹಾರಾವತಾರಃ॥

- ಸೂ. ಭಾ. ೩-೨-೧೫-೨೮೨

೩೭. ಅವಿದ್ಯೆಗೆ ವಿಷಯವು ಯಾವದು? ಆತ್ಮನು ಅದ್ವಿತೀಯನಾಗಿರುವದರಿಂದ ಅವನಿಗಿಂತ ಬೇರೆ ಯಾವ ವಸ್ತುವೂ ಇಲ್ಲ. ತನ್ನ ವಿಷಯದಲ್ಲಿ ತನಗೆ ಅವಿದ್ಯೆಯುಂಟಾಗುವದು ಸಾಧ್ಯವಿಲ್ಲ. ಆದ್ದರಿಂದ ತಪ್ಪಾಗಿ ತಿಳಿದುಕೊಳ್ಳಬಹುದಾದ ಮತ್ತೊಂದು ವಸ್ತುವನ್ನೇ ಒಪ್ಪದವರ ಮತದಲ್ಲಿ ಅವಿದ್ಯೆ ಎಂಬ ಮಾತಿಗೆ ಅರ್ಥವೇ ಇಲ್ಲವಲ್ಲ! - ಎಂಬ ಆಕ್ಷೇಪಕ್ಕೂ ಮೇಲಿನ ಪರಿಹಾರವೇ ಸಾಕಾಗಿರುತ್ತದೆ.

ಏಕೆಂದರೆ ಆತ್ಮನು ಅದ್ವಿತೀಯನು ಎಂಬ ತಿಳಿವಳಿಕೆಯಿರುವವನ ದೃಷ್ಟಿಯಿಂದ ಅವಿದ್ಯೆಯೇ ಇಲ್ಲ. ಆದ್ದರಿಂದ 'ಅವಿದ್ಯೆ ಯಾರಿಗೆ?' - ಎಂಬ ಪ್ರಶ್ನೆಯು ಆ ದೃಷ್ಟಿಯಿಂದ ನೋಡುವವರಿಗೆ ಹಾಕತಕ್ಕದ್ದಲ್ಲ. ಇನ್ನು ಯಾವನು ತನ್ನಲ್ಲಿ ಪ್ರಮಾತೃತ್ವವನ್ನು ಅಧ್ಯಾಸಮಾಡಿಕೊಂಡಿರುವನೋ ಅವನು ತನ್ನ ಪರಮಾರ್ಥರೂಪವಾದ ಬ್ರಹ್ಮದ ವಿಷಯಕ್ಕೆ ತನಗೆ ಅವಿದ್ಯೆ ಇರುತ್ತದೆ ಎಂದು ಅವಶ್ಯವಾಗಿ ಒಪ್ಪಬೇಕು. ಆ ಅವಿದ್ಯೆಯಿಂದಲೇ ಅವನು ಸಂಸಾರಿಯಾಗಿರುತ್ತಾನೆ. ಇಲ್ಲದಿದ್ದರೆ ಶಾಸ್ತ್ರದಲ್ಲಿ ಬ್ರಹ್ಮವಿದ್ಯೆಯನ್ನೇಕೆ ಉಪದೇಶಿಸಬೇಕಿತ್ತು? ಪರಮಾರ್ಥವಾಗಿ ಬ್ರಹ್ಮವೇ ಆಗಿದ್ದರೂ ಅದನ್ನು ಅರಿಯದವನಿಗೇ ಅಲ್ಲವೆ, 'ನೀನು ಬ್ರಹ್ಮವು' ಎಂದು ಶಾಸ್ತ್ರವೂ ಆಚಾರ್ಯನೂ ಉಪದೇಶಿಸಬೇಕು? ಶಾಸ್ತ್ರದಲ್ಲಿ ''ಬ್ರಹ್ಮವೊಂದೇ ಮೊದಲು ಇತ್ತು, ಅದು ತನ್ನನ್ನೇ ನಾನು ಬ್ರಹ್ಮವಾಗಿರುವೆನು ಎಂದು ಅರಿತುಕೊಂಡಿತು. ಅದರಿಂದ ಅದು ಎಲ್ಲವೂ ಆಯಿತು'' ಎಂದು ಹೇಳಿರುವ (ಬೃ. ೧-೪-೧೦) ವಾಕ್ಯದ ಅಭಿಪ್ರಾಯವೇ ಇದು.

(೧) ಬ್ರಹ್ಮಣ್ಯವಿದ್ಯಾನುಪಪತ್ತಿಃ ಇತಿ ಚೇತ್ । ನ । ಬ್ರಹ್ಮಣಿ ವಿದ್ಯಾವಿಧಾನಾತ್ । ನ ಹಿ ಶುಕ್ತಿಕಾಯಾಂ ರಜತಾಧ್ಯಾರೋಪಣೇ ಅಸತಿ ಶುಕ್ತಿಕಾತ್ವಂ ಜ್ಞಾಪ್ಯತೇ ಚಕ್ಷುರ್ಗೋಚರಾಪನ್ನಾಯಾಮ್ 'ಇಯಂ ಶುಕ್ತಿಕಾ ನ ರಜತಮ್' ಇತಿ ॥

- ಬೃ. ಭಾ. ೧-೪-೧೦-೧೫೨

(೨) ಬ್ರಹ್ಮ ವಾ ಇದಮಗ್ರ ಆಸೀತ್ ತದಾತ್ಮಾನಮೇವಾವೇತ್ । ಅಹಂ ಬ್ರಹ್ಮಾಸ್ಮೀತಿ। ತಸ್ಮಾತ್ ತತ್ ಸರ್ವಮಭವತ್ ॥ - ಬೃ. ೧-೪-೧೦.

ಇದಂ ಶರೀರಸ್ಥಂ ಯತ್ ಗೃಹ್ಯತೇ ಅಗ್ರೇ ಪ್ರಾಕ್ಪ್ರತಿಬೋಧಾದಪಿ ಬ್ರಹ್ಮೈವ ಆಸೀತ್ ಸರ್ವಂ ಚ ಇದಮ್ । ಕಿಂ ತು ಅಪ್ರತಿಬೋಧಾತ್ ಅಬ್ರಹ್ಮಾಸ್ಮಿ ಅಸರ್ವಂ ಚ ಇತ್ಯಾತ್ಮನಿ ಅಧ್ಯಾರೋಪಾತ್ ಕರ್ತಾಹಂ ಕ್ರಿಯಾವಾನ್ ಫಲಾನಾಂ ಚ ಭೋಕ್ತಾ ಸುಖೀ ದುಃಖೀ ಸಂಸಾರೀತಿ ಚ ಅಧ್ಯಾರೋಪಯತಿ । ಪರಮಾರ್ಥತಸ್ತು ಬ್ರಹ್ಮೈವ ತದ್ವಿಲಕ್ಷಣಂ, ಸರ್ವಂ ಚ । ತತ್ ಕಥಂಚಿತ್ ಆಚಾರ್ಯೇಣ ದಯಾಲುನಾ ಪ್ರತಿಬೋಧಿತಂ 'ನಾಸಿ ಸಂಸಾರೀ' ಇತಿ ಆತ್ಮಾನಮೇವ ಅವೇತ್ ಸ್ವಾಭಾವಿಕಮ್ ಅವಿದ್ಯಾಧ್ಯಾರೋಪಿತವಿಶೇಷವರ್ಜಿತಮ್ ಇತಿ ಏವಶಬ್ದಾರ್ಥಃ ॥

- ಬೃ. ಭಾ. ೧-೪-೧೦-೧೬೦

೩೮. ಅದ್ವೈತವನ್ನೊಪ್ಪಿದರೆ ಯಾವ ಆಕ್ಷೇಪವಾಗಲಿ ಪರಿಹಾರವಾಗಲಿ ಇರುವದೇ ಇಲ್ಲ. ಏಕೆಂದರೆ ಆಕ್ಷೇಪಪರಿಹಾರಗಳಿರುವದು ದ್ವೈತಕ್ಷೇತ್ರದಲ್ಲಿ. ಆದರೂ ಅದೇಕೊ, ಜನಗಳಿಗೆ ಅದ್ವೈತವೆಂದಾಗಲೆಲ್ಲ ಯಾವದಾದರೊಂದು ಶಂಕೆಯು ತಲೆಯೆತ್ತಿಕೊಳ್ಳುತ್ತಿರುವದು. ನಮ್ಮ ಆತ್ಮನು ಬ್ರಹ್ಮವೇ ಆದರೆ ನನಗೆ ಅವಿದ್ಯೆ ಎಂದರೂ ಬ್ರಹ್ಮಕ್ಕೆ ಅವಿದ್ಯೆ ಎಂದರೂ ಒಂದೇ ಆಗುವದಿಲ್ಲವೆ? ಸರ್ವಜ್ಞವಾದ ಬ್ರಹ್ಮಕ್ಕೆ ಅವಿದ್ಯೆ ಹೇಗೆ ಒಪ್ಪುತ್ತದೆ?- ಎಂಬ ಶಂಕೆಯು ಈ ಜಾತಿಯದು. ಆತ್ಮನು ಬ್ರಹ್ಮವು ಎಂಬ ಅದ್ವೈತದೃಷ್ಟಿಯಿಂದ ಯಾವ ಅವಿದ್ಯೆಯೂ ಯಾರಿಗೂ ಇಲ್ಲ. ಆದ್ದರಿಂದ **ಬ್ರಹ್ಮಕ್ಕೆ ಅವಿದ್ಯೆಯಿಲ್ಲ ಎಂಬುದು ಸರಿಯಾದ ಅಭಿಪ್ರಾಯವೇ ಸರಿ ; ಆದರೆ ಬ್ರಹ್ಮಕ್ಕಿಂತ ವ್ಯತಿರಿಕ್ತವಾದ ಮತ್ತೊಂದು ಚೇತನವಸ್ತುವೇ ಇಲ್ಲ- ಎಂಬುದನ್ನು ಮರೆಯಬಾರದು. ಜೀವನಿಗೇ ಅವಿದ್ಯೆ, ಬ್ರಹ್ಮಕ್ಕೆ ಅವಿದ್ಯೆಯಿಲ್ಲ- ಎಂಬ ವ್ಯಾಖ್ಯಾನಪ್ರಸ್ಥಾನವನ್ನು ಅವಲಂಬಿಸುವವರೂ ಈ ಸಿದ್ಧಾಂತವನ್ನು ಮರೆತಿರುತ್ತಾರೆಂತ ತಿಳಿಯಬೇಕು.** ಈ ತತ್ತ್ವವನ್ನು ನೆನಪಿಗೆ ತಂದುಕೊಡುವದಕ್ಕೇ ಉಪನಿಷತ್ತುಗಳು ಹೊರಟಿರುತ್ತವೆ.

(೧) ನ ಬ್ರೂಮಃ ಶುಕ್ತಿಕಾಯಾಮಿವ ಬ್ರಹ್ಮಣಿ ಅತದ್ಧರ್ಮಾಧ್ಯಾರೋಪಣಾ ನಾಸ್ತಿ ಇತಿ । ಕಿಂ ತರ್ಹಿ ನ ಬ್ರಹ್ಮ ಸ್ವಾತ್ಮನಿ ಅತದ್ಧರ್ಮಾಧ್ಯಾರೋಪನಿಮಿತ್ತಮ್ ಅವಿದ್ಯಾಕರ್ತೃ ಚ ಇತಿ। ಭವತ್ವೇವಂ ನಾವಿದ್ಯಾಕರ್ತೃ ಭ್ರಾನ್ತಂ ಚ ಬ್ರಹ್ಮ । ಕಿಂ ತು ನೈವ ಅಬ್ರಹ್ಮ ಅವಿದ್ಯಾಕರ್ತಾ ಚೇತನೋ ಭ್ರಾನ್ತಃ ಅನ್ಯಃ ಇಷ್ಯತೇ। 'ನಾನ್ಯೋಽತೋಽಸ್ತಿ ವಿಜ್ಞಾತಾ', 'ನಾನ್ಯದತೋಽಸ್ತಿ ವಿಜ್ಞಾತೃ' 'ತತ್ತ್ವಮಸಿ', 'ಆತ್ಮಾನಮೇವಾವೇತ್' 'ಅಹಂ ಬ್ರಹ್ಮಾಸ್ಮಿ', 'ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ' ಇತ್ಯಾದಿಶ್ರುತಿಭ್ಯಃ॥ - ಬೃ. ಭಾ. ೧-೪-೧೦-೧೫೩

೩೯. ಅದ್ವೈತಸಿದ್ಧಾಂತವನ್ನು ನೆನಪಿನಲ್ಲಿಡದೆ ಇದ್ದದ್ದರಿಂದ ಅವಿದ್ಯೆಯ ವಿಷಯದಲ್ಲಿ ಮಿಕ್ಕ ದರ್ಶನಕಾರರು ಎತ್ತಬಹುದಾದ ಮತ್ತೊಂದು ಆಕ್ಷೇಪವನ್ನು ಪರಿಹರಿಸಿ ಈ ವಿಚಾರವನ್ನು ಇಲ್ಲಿಗೆ ಮುಗಿಸುವೆವು. ಅವಿದ್ಯೆಯು ಯಾರಿಗೂ

ಇಲ್ಲವೇ ಇಲ್ಲವೆಂಬವರ ಮತದಲ್ಲಿ ಶಾಸ್ತ್ರೋಪದೇಶವು ವ್ಯರ್ಥವಾಗುವದು, ಶಾಸ್ತ್ರೋಪದೇಶದಿಂದ ಆಗುವ ಜ್ಞಾನವೂ ವ್ಯರ್ಥವೆಂದಾಗುವದು, ಜ್ಞಾನದಿಂದ ಅಜ್ಞಾನವು ನಿವೃತ್ತಿಯಾಗುವದೆಂಬುದೂ ಹೊಂದದ ಮಾತಾಗುವದು. ಈ ದೋಷಗಳನ್ನೆಲ್ಲ ತಪ್ಪಿಸಿಕೊಳ್ಳುವದಕ್ಕಾಗಿ ಅವಿದ್ಯೆಯನ್ನು ಒಪ್ಪಿದರೆ ಅದ್ವಿತೀಯಬ್ರಹ್ಮಕ್ಕೇ ಅವಿದ್ಯೆಯನ್ನು ಒಪ್ಪಬೇಕಾಗುವದು ಎಂಬುದೇ ಈ ಆಕ್ಷೇಪವು.

ಇದು ನೋಡುವದಕ್ಕೆ ಬಲವಾದ ಆಕ್ಷೇಪವೆಂದು ತೋರಿದರೂ ನಿಜವಾಗಿ ಇದರಲ್ಲಿ ಯಾವ ಹುರುಳೂ ಇರುವದಿಲ್ಲ. ಏಕೆಂದರೆ ಅವಿದ್ಯೆಯು ಯಾರಿಗೂ ಇಲ್ಲ, ಅದ್ವಿತೀಯಾತ್ಮನೇ ನಾನು- ಎಂದು ತಿಳಿದವನಿಗೆ ಶಾಸ್ತ್ರೋಪದೇಶವು ವ್ಯರ್ಥವಾದರೆ ತಾನೆ ಏನು ? ನಿಜವನ್ನು ತಿಳಿಯದವರಿಗಲ್ಲವೆ, ಶಾಸ್ತ್ರೋಪದೇಶವೆಂಬುದು? ತಿಳಿಯುವದಕ್ಕಿಂತ ಮುಂಚೆ ಅವಿದ್ಯೆಯಿರುತ್ತದೆ, ಅದನ್ನು ಕಳೆಯುವ ವಿದ್ಯೆಯೂ ಇರುತ್ತದೆ. ವಿದ್ಯೆಯಿಂದ ಅವಿದ್ಯೆಯು ತೊಲಗುವದು ಕಂಡಿರುವಲ್ಲಿ ವಿದ್ಯೆಯು ನಿಷ್ಪ್ರಯೋಜನವೆಂದು ಯಾರುತಾನೇ ಹೇಳಲಾಪರು? ಆತ್ಮೈಕತ್ವವಾದದಲ್ಲಿ ಅವಿದ್ಯಾನಿವೃತ್ತಿಯೂ ಹೊಂದುವದಿಲ್ಲವಲ್ಲ !- ಎಂಬ ಆಕ್ಷೇಪವು ಸರಿಯಲ್ಲ; ಏಕೆಂದರೆ ಏಕತ್ವಜ್ಞಾನದಿಂದ ಅವಿದ್ಯೆಯು ನಿವೃತ್ತವಾಗುವದು ಕಂಡುಬರುತ್ತದೆ. ಈ ದರ್ಶನದಂತೆ ಹಾಗೆ ಕಂಡುಬರಬಾರದಲ್ಲ ! ಎಂಬುದಂತೂ ಸರಿಯೇ ಅಲ್ಲ. ಏಕೆಂದರೆ ಕಂಡುಬರುತ್ತಿರುವಲ್ಲಿ ಕಂಡುಬರಬಾರದು ಎಂದು ಶಂಕಿಸುವದು ಯುಕ್ತವಾಗಲಾರದು. **"ನ ಹಿ ದೃಷ್ಟೇ ಅನುಪಪನ್ನಂ ನಾಮ"** (ಕಂಡಿರುವದರಲ್ಲಿ ಹೊಂದುವದಿಲ್ಲವೆಂಬುದೇ ಇಲ್ಲ) ಎಂಬ ನ್ಯಾಯವು ಈ ಎಲ್ಲಾ ಆಕ್ಷೇಪಕ್ಕೂ ಪರಿಹಾರವನ್ನು ಒದಗಿಸಿ ಕೊಡುತ್ತದೆ.

(೧) ನನ್ವೇವಂ ಶಾಸ್ತ್ರೋಪದೇಶಾನರ್ಥಕ್ಯಮ್ ಇತಿ । ಬಾಢಮ್ । ಏವಮವಗತೇ ಅಸ್ತ್ವೇವ ಆನರ್ಥಕ್ಯಮ್ । ಅವಗಮಾನರ್ಥಕ್ಯಮಪಿ ಇತಿ ಚೇತ್ । ನ । ಅನವಗಮನಿವೃತ್ತೇರ್ದೃಷ್ಟತ್ವಾತ್ । ತನ್ನಿವೃತ್ತೇರಪಿ ಅನುಪಪತ್ತಿರೇಕತ್ವೇ ಇತಿ ಚೇತ್ । ನ । ದೃಷ್ಟವಿರೋಧಾತ್ । ದೃಶ್ಯತೇ ಹಿ ಏಕತ್ವವಿಜ್ಞಾನಾದೇವ ಅನವಗಮನಿವೃತ್ತಿಃ । ದೃಶ್ಯಮಾನಮಪಿ ಅನುಪಪನ್ನಮ್ ಇತಿ ಬ್ರುವತೋ ದೃಷ್ಟವಿರೋಧಃ ಸ್ಯಾತ್ । ನ ಚ ದೃಷ್ಟವಿರೋಧಃ ಕೇನಚಿತ್ ಅಭ್ಯುಪಗಮ್ಯತೇ । ನ ಚ ದೃಷ್ಟೇ ಅನುಪಪನ್ನಂ ನಾಮ । ದೃಷ್ಟತ್ವಾದೇವ । ದರ್ಶನಾನುಪಪತ್ತಿಃ ಇತಿ ಚೇತ್ । ತತ್ರಾಪಿ ಏಷೈವ ಯುಕ್ತಿಃ॥ - ಬೃ. ಭಾ. ೧-೪-೧೦-೧೫೪

# ೬. ಅಧ್ಯಾರೋಪಾಪವಾದ

೪೦. ವೇದಾಂತವು ಹೇಳುವ ಪರಮಾರ್ಥತತ್ತ್ವವಾದ ಆತ್ಮನು ಅಥವಾ ಬ್ರಹ್ಮವು ನಿರ್ವಿಶೇಷವಾಗಿರುತ್ತದೆ. ಆದ್ದರಿಂದ ಅದನ್ನು ಅದರ ಸ್ವರೂಪದಿಂದಲೇ ಇಂಥದ್ದೆಂದು ಯಾವದಾದರೊಂದು ಶಬ್ದದ ಮೂಲಕ ತಿಳಿಸುವದಕ್ಕೆ ಅಥವಾ ತಿಳಿಯುವದಕ್ಕೆ ಆಗಲಾರದು. ಅದರದಲ್ಲದ ಸ್ವರೂಪವನ್ನು ಅಲ್ಲಗಳೆದೇ ಅದನ್ನು ತಿಳಿಸಬೇಕಾಗಿದೆ. ಬಾಷ್ಕಲಿಯೆಂಬಾತನು ಬಾಧ್ವನೆಂಬ ಆಚಾರ್ಯನನ್ನು ಬ್ರಹ್ಮ ಸ್ವರೂಪವನ್ನು ತಿಳಿಸಿಕೊಡಬೇಕೆಂದು ಕೇಳಿಕೊಳ್ಳಲು ಬಾಧ್ವನು ಅವಚನದಿಂದಲೇ ಹೇಳಿಕೊಟ್ಟನಂತೆ. ಆ ಶಿಷ್ಯನು ಮತ್ತೂ ಎರಡು ಸಲ ಅದೇ ಪ್ರಶ್ನೆಯನ್ನುಮಾಡಿದನು. ಆಗ ಗುರುವು ''ನಾವು ಹೇಳುತ್ತಲೇ ಇದೇವೆ, ನಿನಗೆ ಮಾತ್ರ ಇದು ತಿಳಿಯಲಿಲ್ಲ. ಏಕೆಂದರೆ ಈ ಆತ್ಮನು ಉಪಶಾಂತನಾಗಿರುತ್ತಾನೆ, ಇವನಲ್ಲಿ ಯಾವ ವಿಶೇಷವೂ ಇರುವದಿಲ್ಲ'' ಎಂದನಂತೆ. ಗೀತಾದಿಸ್ಮೃತಿಗಳಲ್ಲಿಯೂ ಹೀಗೆಯೇ 'ಅದು ಸತ್ತಲ್ಲ, ಅಸತ್ತೂ ಅಲ್ಲ' ಎಂದೇ ಹೇಳಿದೆ. ವಿಶ್ವರೂಪಧರನಾದ ನಾರಾಯಣನು ''ನನ್ನ ಸ್ವರೂಪವು ನೀನು ಈಗ ಕಾಣುತ್ತಿರುವಂಥ ಭೂತಗುಣ ಯುಕ್ತವಾದದ್ದಲ್ಲ, ಈಗ ನಿನಗೆ ಕಾಣುತ್ತಿರುವದು ನನ್ನ ಮಾಯಾಸೃಷ್ಟಿಯು. ನನ್ನನ್ನು ಈ ರೂಪದವನೇ ಎಂದು ತಿಳಿಯದಿರು'' ಎಂದೇ ನಾರದನಿಗೆ ಹೇಳಿದನೆಂದು ಭಾರತದಲ್ಲಿದೆ. ಆದ್ದರಿಂದಲೇ ಶ್ರುತಿಯಲ್ಲಿ ಅನಾತ್ಮಧರ್ಮವನ್ನು ಅಲ್ಲಗಳೆದೇ ಬ್ರಹ್ಮವನ್ನು ತಿಳಿಸಿದೆ; ಹೀಗೆ **'ಇದಲ್ಲ, ಇದಲ್ಲ' - ಎಂದು ಹೇಳುವ ಮಾರ್ಗಕ್ಕಿಂತ ಬೇರೆಯ ಹೆಚ್ಚಿನ ಉಪದೇಶದ ಪ್ರಕಾರವು ಇಲ್ಲ-** ಎಂದು ಹೇಳಿರುತ್ತದೆ. **ಬ್ರಹ್ಮವು ನಿರ್ವಿಶೇಷವು** ಎಂಬುದು ವೇದಾಂತದ ಮೂಲೋಪದೇಶವಾಗಿರುತ್ತದೆ. ನಿರ್ವಿಶೇಷ, ನಿಷ್ಪ್ರಪಂಚ, ನಿರ್ಗುಣ, ನಿರ್ಧರ್ಮಕ, ನಿರಾಕಾರ, ನಿರ್ವಿಕಲ್ಪಕ, ನಿರುಪಾಧಿಕ - ಇವೆಲ್ಲ ಪರ್ಯಾಯ ಶಬ್ದಗಳು.

(೧) ದರ್ಶಯತಿ ಚ ಶ್ರುತಿಃ ಪರರೂಪಪ್ರತಿಷೇಧೇನೈವ ಬ್ರಹ್ಮ ನಿರ್ವಿಶೇಷತ್ವಾತ್ । ''ಅಥಾತ ಆದೇಶೋ ನೇತಿ ನೇತೀತಿ'' (ಬೃ. ೨-೩-೬), ''ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ'' (ಕೇ. ೧-೪) ''ಯತೋ ವಾಚೋ ನಿವರ್ತನ್ತೇ। ಅಪ್ರಾಪ್ಯ ಮನಸಾ ಸಹ'' (ತೈ. ೨.೯)- ಇತ್ಯೇವಮಾದ್ಯಾ। ಬಾಷ್ಕಲಿನಾ ಚ ಬಾಧ್ವಃ ಪೃಷ್ಟಃ ಸನ್ ಅವಚನೇನೈವ ಬ್ರಹ್ಮ ಪ್ರೋವಾಚ ಇತಿ ಶ್ರೂಯತೇ- ''ಸ ಹೋವಾಚಾಧೀಹಿ ಭೋ ಇತಿ । ಸ ತೂಷ್ಣೀಂ ಬಭೂವ । ತಂ ಹ ದ್ವಿತೀಯೇ ವಾ ತೃತೀಯೇ ವಾ ವಚನ ಉವಾಚ । ಬ್ರೂಮಃ ಖಲು ತಂ ತು ನ ವಿಜಾನಾಸಿ। ಉಪಶಾನ್ತೋಽಯಮಾತ್ಮಾ'' ಇತಿ । ತಥಾ ಸ್ಮೃತಿಷ್ವಪಿ ಪರಪ್ರತಿಷೇಧೇನೈವ ಉಪದಿಶ್ಯತೇ - ''ಜ್ಞೇಯಂ ಯತ್ ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ। ಅನಾದಿಮತ್ ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ'' (ಗೀ ೧೩-೧೨) ಇತ್ಯೇವಮಾದ್ಯಾಸು । ತಥಾ ವಿಶ್ವರೂಪಧರೋ

ನಾರಾಯಣಃ ನಾರದಮುವಾಚ ಇತಿ ಸ್ಮರ್ಯತೇ- ''ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ । ಸರ್ವಭೂತಗುಣೈರ್ಯುಕ್ತಂ ಮೈವಂ ಮಾಂ ಜ್ಞಾತುಮರ್ಹಸಿ'' ಇತಿ ॥
- ಸೂ. ಭಾ. ೩-೨-೧೭-೨೮೪

(೨) ಸ ಹೋವಾಚೈತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽ ವಾಯ್ವನಾಕಾಶಮಸಙ್ಗಮರಸಮಗನ್ಧಮಚಕ್ಷುಷ್ಕಮಶ್ರೋತ್ರಮವಾಗಮನೋಽತೇಜಸ್ಕಮಪ್ರಾಣಮಮುಖಮಮಾತ್ರಮನನ್ತರಮಬಾಹ್ಯಮ್ ॥ - ಬೃ. ೩-೮-೮.

**ಸರ್ವವಿಶೇಷಣರಹಿತಮ್ ಇತರ್ಥಃ । ಏಕಮೇವಾದ್ವಿತೀಯಂ ಹಿ ತತ್ ಕೇನ ಕಿಂ ವಿಶಿಷತೇ? (ವಿಶೇಷತೇ?)** - ಬೃ. ಭಾ. ೩-೮-೮.

(೩) ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಮ್ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ ॥ - ಮುಂ. ೧-೧-೬.

(೪) ಅಧಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತಿ ॥ - ಬೃ. ೨-೩-೬.

ನನು ಮಹತಾ ಯತ್ನೇನ ಪರಿಕರಬನ್ಧಂ ಕೃತ್ವಾ ಕಿಂ ಯುಕ್ತಮ್ ಏವಂ ನಿರ್ದೇಷ್ಟುಂ ಬ್ರಹ್ಮ ? ಬಾಢಮ್ । ಕಸ್ಮಾತ್? ನ ಹಿ ಯಸ್ಮಾತ್ ಇತಿ ನ ಇತಿ ನ ಇತ್ಯೇತಸ್ಮಾತ್ । 'ಇತಿ' ಇತಿ ವ್ಯಾಪ್ತವ್ಯಪ್ರಕಾರಾಃ ನಕಾರದ್ವಯವಿಷಯಾಃ ನಿರ್ದಿಶ್ಯನ್ತೇ । ಯಥಾ ಗ್ರಾಮೋ ಗ್ರಾಮೋ ರಮಣೀಯಃ ಇತಿ । ಅನ್ಯತ್ ಪರಂ ನಿರ್ದೇಶನಂ ನಾಸ್ತಿ। ತಸ್ಮಾತ್ ಅಯಮೇವ ನಿರ್ದೇಶೋ ಬ್ರಹ್ಮಣಃ॥ - ಬೃ. ಭಾ. ೨-೩-೬-೩೫೦

೪೧. ಆತ್ಮನನ್ನು ಇದಲ್ಲ, ಇದಲ್ಲ - ಎಂದು ಶ್ರುತಿಯಲ್ಲಿ ತಿಳಿಸಿದ್ದರಿಂದ ಯಾವದಲ್ಲವೆಂದು ತಿಳಿಸಿದೆಯೋ ಆ ಪ್ರತಿಯೋಗಿಯ ಅಭಾವವು ಬ್ರಹ್ಮದಲ್ಲಿದೆಯೆಂದೂ ಪ್ರತಿಯೋಗಿಯು ಮತ್ತೊಂದು ಕಡೆಯಲ್ಲಿದೆಯೆಂದೂ ಎಣಿಸಬಾರದು. ಉದಾಹರಣೆಗೆ ಬ್ರಹ್ಮವು ಅದೃಶ್ಯವೆಂದರೆ ದೃಶ್ಯವಾದ ಘಟಾದಿಗಳು ಬೇರೆ ಇರುವವೆಂದೂ ಅವುಗಳ ಅಭಾವವು ಬ್ರಹ್ಮದಲ್ಲಿದೆಯೆಂದೂ ಅಭಿಪ್ರಾಯವಲ್ಲ. **ನೇತಿ ನೇತಿ** ಎಂಬ ದ್ವಿರುಕ್ತಿಯು ವೀಪ್ಸಾರ್ಥದಲ್ಲಿ ಬಂದಿದೆ. ಏನೇನು ಇರಬಹುದೆಂದು ಕಲ್ಪಿಸಬಹುದೋ ಅದೊಂದೂ ಅಲ್ಲವೆಂದೇ ಶ್ರುತಿಯ ಅಭಿಪ್ರಾಯ. ಹಾಗಿಲ್ಲದೆ ಇದಲ್ಲ, ಇದಲ್ಲ- ಎಂದು ಗೊತ್ತಾಗಿ ಎರಡನ್ನು ಅಲ್ಲಗಳೆದರೆ, ಬ್ರಹ್ಮವು ಇದಲ್ಲವಾದರೆ ಮತ್ತೇನಿರಬಹುದು ? ಎಂಬ ಶಂಕೆಯುಂಟಾದೀತು. ಶಾಸ್ತ್ರದೃಷ್ಟಿಯಿಂದ ನೋಡುವಾಗ ಬ್ರಹ್ಮವು ಒಂದೇ, ಅದ್ವಿತೀಯವು. ಅದರಲ್ಲಿ ಪೃಥಿವ್ಯಾದಿ ಪಂಚಭೂತಗಳಾಗಲಿ ಅವುಗಳ ವಾಸನೆಗಳಾಗಲಿ, ಅಥವಾ ಅವುಗಳ ಅಭಾವಗಳಾಗಲಿ ಇರುವದಿಲ್ಲ. 'ಅದರಲ್ಲಿಲ್ಲ, ಅದು ಇಂಥದ್ದಲ್ಲ'- ಎಂದು ಅಲ್ಲಗಳೆಯುವ ವೇದವಚನಗಳು ಕೂಡ ಅದರಲ್ಲಿ ಇರುವದೇ ಇಲ್ಲ.

(೧) ಅಥವಾ 'ನೇತಿ ನೇತಿ' (ಬೃ. ೨-೩-೬) ಇತಿ ವೀಪ್ಸೇಯಮ್ । ಇತೀತಿ ಯಾವತ್ ಕಿಂಚಿತ್ ಉತ್ಪ್ರೇಕ್ಷ್ಯತೇ ತತ್ಸರ್ವಂ ನ ಭವತಿ ಇತ್ಯರ್ಥಃ । ಪರಿಗಣಿತಪ್ರತಿಷೇಧೇ ಹಿ ಕ್ರಿಯಮಾಣೇ ಯದಿ ನೈತದ್ ಬ್ರಹ್ಮ ಕಿಮನ್ಯದ್ ಬ್ರಹ್ಮ ಭವೇತ್? ಇತಿ ಜಿಜ್ಞಾಸಾ ಸ್ಯಾತ್ । ವೀಪ್ಸಾಯಾಂ ತು ಸತ್ಯಾಂ ಸಮಸ್ತಸ್ಯ ವಿಷಯಜಾತಸ್ಯ ಪ್ರತಿಷೇಧನಾತ್ ಅವಿಷಯಃ ಪ್ರತ್ಯಗಾತ್ಮಾ ಬ್ರಹ್ಮ ಇತಿ ಜಿಜ್ಞಾಸಾ ನಿವರ್ತತೇ ॥ - ಸೂ. ಭಾ. ೩-೨-೨೨-೨೯೬

(೨) ನೇತಿನೇತಿ ಇತ್ಯಸ್ಯ ಕೋಽರ್ಥಃ ? ನ ಹಿ ಏತಸ್ಮಾತ್ ಬ್ರಹ್ಮಣೋ ವ್ಯತಿರಿಕ್ತಮಸ್ತೀತಿ । ಅತೋ ನೇತಿನೇತಿ ಇತ್ಯುಚ್ಯತೇ । ನ ಪುನಃ ಸ್ವಯಮೇವ ನಾಸ್ತಿ ಇತಿ ॥

- ಸೂ. ಭಾ. ೩-೨-೨೨-೨೯೭

(೩) ''ವೇದಾ ಅವೇದಾಃ'' ಇತಿ ವಚನಾತ್ ಇಷ್ಯತ ಏವ ಅಸ್ಮಾಭಿಃ ಶ್ರುತೇರಪ್ಯಭಾವಃ ಪ್ರಬೋಧೇ ॥ - ಸೂ. ಭಾ. ೪-೧-೩-೩೧೦

(೪) ನನು ಮಹತಾ ಪರಿಕರಬನ್ಧೇನ ಕಂಠರವೇಣ ಉದ್ಘುಷ್ಯ ಜ್ಞೇಯಂ ಬ್ರಹ್ಮ ''ಜ್ಞೇಯಂ ಪ್ರವಕ್ಷ್ಯಾಮಿ'' ಇತಿ, ಅನನುರೂಪಮುಕ್ತಮ್ ''ನ ಸತ್ತನ್ನಾಸದುಚ್ಯತೇ'' ಇತಿ । ನ । ಅನುರೂಪಮೇವೋಕ್ತಮ್ । ಕಥಮ್? ಸರ್ವಾಸು ಹಿ ಉಪನಿಷತ್ಸು ''ನೇತಿ ನೇತಿ'' ''ಅಸ್ಥೂಲಮನಣು'' ಇತ್ಯಾದಿವಿಶೇಷಪ್ರತಿಷೇಧೇನೈವ ನಿರ್ದಿಶ್ಯತೇ। ನ 'ಇದಂ ತತ್' ಇತಿ । ವಾಚೋಽಗೋಚರತ್ವಾತ್ ॥ - ಗೀ. ಭಾ. ೧೩-೧೨-೬೯೨

೪೨. ಬ್ರಹ್ಮದಲ್ಲಿ ಇಂಥದ್ದೊಂದು ಧರ್ಮವಿಲ್ಲ ಎನ್ನುವಾಗಲೇ ಆ ಧರ್ಮವು ನಿಜವಾಗಿ ಮತ್ತೆಲ್ಲಿಯಾದರೂ ಇದೆ ಎಂದು ಒಪ್ಪಿದಂತಾಗಿರುತ್ತದೆ ; ಏಕೆಂದರೆ ಎಲ್ಲಿಯೂ ಇಲ್ಲದ ಧರ್ಮವನ್ನು ಯಾರೂ ಅಲ್ಲಗಳೆಯುವದಿಲ್ಲ. 'ಇವನು ಬಂಜೆಯ ಮಗನಲ್ಲ' ಎಂದು ಯಾರು ತಾನೆ ಪ್ರತಿಷೇಧಿಸುತ್ತಾರೆ? ಬ್ರಹ್ಮವನ್ನು ಅರಿಯಬೇಕು- ಎಂದರೆ ಬ್ರಹ್ಮದಲ್ಲಿ ಜ್ಞೇಯತ್ವವನ್ನು ಒಪ್ಪಿದಂತೆಯೇ ಆಗುವದು, ಅದನ್ನು ಯಾವದಾದರೊಂದು ಮಾತಿನಿಂದ ತಿಳಿಯಹೇಳುವದಕ್ಕಾಗುತ್ತದೆಯೆಂದೂ ಒಪ್ಪಿದಂತೆ ಆಗುವದು. ಬ್ರಹ್ಮವನ್ನು ತಿಳಿಯುವದಕ್ಕೆ ಮನಸ್ಸು ಇರಲೇಬೇಕು. ಹೀಗೆ ಬ್ರಹ್ಮವನ್ನೂ ಅದಕ್ಕಿಂತ ಬೇರೆಯಾದ ಧರ್ಮಗಳನ್ನೂ ಅದನ್ನು ತಿಳಿಸುವ ಶಬ್ದ, ಶಬ್ದವನ್ನು ಪ್ರಯೋಗಿಸುವ ಗುರು, ಅದನ್ನು ತಿಳಿದುಕೊಳ್ಳುವದಕ್ಕೆ ಸಾಧನವಾದ ಮನಸ್ಸು- ಇಷ್ಟನ್ನೂ ಒಪ್ಪದೆ ಗತ್ಯಂತರವಿಲ್ಲದ್ದರಿಂದ ಬ್ರಹ್ಮವು ನಿರ್ವಿಶೇಷವೆಂಬುದು ಹೇಗೆ ಸರಿಯಾದೀತು?- ಎಂಬ ತೊಡಕೊಂದು ಜಿಜ್ಞಾಸುಗಳಿಗೆ ಕಾಣಿಸಿಕೊಳ್ಳ ಬಹುದು.

ಈ ತೊಡಕನ್ನು ಬಿಚ್ಚುವ ಮಾರ್ಗವೇನೆಂದರೆ, ವೇದಾಂತಿಗಳು ನಿರ್ವಿಶೇಷ ವಾದ ಬ್ರಹ್ಮವನ್ನು ತಿಳಿಸಿಕೊಡುವದಕ್ಕೆ ಒಂದು ನ್ಯಾಯವನ್ನು ಉಪಯೋಗಿಸುತ್ತಾರೆ. ಅದಕ್ಕೆ **''ಅಧ್ಯಾರೋಪಾಪವಾದನ್ಯಾಯ''**ವೆಂದು ಹೆಸರು. ಅಜ್ಞಾನಿಗಳು ಆತ್ಮನಲ್ಲಿ ಅಧ್ಯಾಸಮಾಡಿಕೊಂಡಿರುವ **ವಿಕಲ್ಪ**ಗಳಲ್ಲಿ ಒಂದನ್ನು ಆಶ್ರಯಿಸಿಕೊಂಡು ಅದಕ್ಕಿಂತ

ಬಾಹ್ಯತರವಾದ ಅಥವಾ ಸ್ಥೂಲತರವಾದ ಮತ್ತೊಂದು ವಿಕಲ್ಪವನ್ನು ಇಲ್ಲವೆಂದು ತೋರಿಸಿಕೊಟ್ಟು, ಮೊದಲು ಒಪ್ಪಿದ್ದ ವಿಕಲ್ಪವನ್ನೂ ಮತ್ತೊಂದು ವಿಕಲ್ಪದ ಅಂಗೀಕಾರದ ಮೂಲಕ ಅಲ್ಲಗಳೆಯುವದು ಈ ಉಪದೇಶದ ಕ್ರಮವು.

ಈ ಕ್ರಮದಲ್ಲಿ ಉಪದೇಶಕ್ಕಾಗಿ ಬ್ರಹ್ಮದಲ್ಲಿರುವದೆಂದು ಇಟ್ಟುಕೊಂಡದ್ದು **ಅಧ್ಯಾರೋಪವು;** ಅಲ್ಲಗಳೆದದ್ದು **ಅಪವಾದವು,** ಯಾವ ವಸ್ತುವಿನಲ್ಲಾದರೂ ಉಂಟಾಗಿದ್ದ ತಪ್ಪುತಿಳಿವಳಿಕೆಯನ್ನು ಹೊಡೆದುಹಾಕಿ ಸರಿಯಾದ ತಿಳಿವಳಿಕೆಯನ್ನುಂಟು ಮಾಡುವದೇ ವಾಕ್ಯವು. ಪೂರ್ವಾದಿದಿಕ್ಕುಗಳನ್ನು ತಪ್ಪಾಗಿ ತಿಳಿದುಕೊಂಡವನಿಗೆ ಇದು ಪೂರ್ವವಲ್ಲ, ಪಶ್ಚಿಮ- ಎಂಬ ವಾಕ್ಯದಿಂದ ತಪ್ಪುತಿಳಿವಳಿಕೆಯನ್ನು ಕಳೆಯುವ ಜ್ಞಾನವುಂಟಾಗುವಂತೆ ದೇಹಾದಿಗಳನ್ನೇ ತಾನೆಂದು ತಿಳಿದುಕೊಂಡವನಿಗೆ ಆತ್ಮಸ್ವರೂಪವೇ ನೀನು ಎಂದು ತಿಳಿಸುವ ವಾಕ್ಯದಿಂದ ತಪ್ಪುತಿಳಿವಳಿಕೆಯನ್ನು ಹೊಡೆದುಹಾಕುವ ಜ್ಞಾನವುಂಟಾಗುತ್ತದೆ. ಉಪದೇಶಕ್ಕಾಗಿ ಅಜ್ಞರ ಭಾವನೆಯನ್ನೇ ಅನುಸರಿಸಿ ಒಂದೊಂದು ಅಧ್ಯಾರೋಪವನ್ನಿಟ್ಟುಕೊಂಡು ಬೇರೆಯ ತಪ್ಪುತಿಳಿವಳಿಕೆಯನ್ನು ಕಳೆಯಲಾಗುವದು. **ನೇತಿ, ನೇತಿ** ಎಂಬ ವಾಕ್ಯದಲ್ಲಿ ಬ್ರಹ್ಮದಲ್ಲಿ ಅಧ್ಯಸ್ತವಾಗಿರಬಹುದಾದ ಎಲ್ಲಾ ವಿಕಲ್ಪಗಳನ್ನೂ ಅಲ್ಲಗಳೆದಿರುತ್ತದೆಯಾದರೂ ಶಬ್ದವಾಚ್ಯತ್ವವನ್ನೂ ಮನೋವಿಷಯತ್ವವನ್ನೂ ಒಪ್ಪಿಕೊಂಡಿರುವಂತೆ ಮೊದಲು ತೋರುತ್ತದೆ. ಆದರೆ ವಾಚ್ಯತ್ವವೂ ಜ್ಞೇಯತ್ವವೂ ವಿಕಲ್ಪಗಳೇ ಆಗಿರುವದರಿಂದ ಈ ವಾಕ್ಯವು ಅವನ್ನೂ ಅಲ್ಲಗಳೆಯುತ್ತದೆ. ಇಷ್ಟೇ ಅಲ್ಲ, ಈ ವಾಕ್ಯದ ವಾಕ್ಯತ್ವವೂ ವಿಕಲ್ಪವೇ ಆಗಿರುವದರಿಂದ ವಾಕ್ಯವು ತನ್ನ ವಾಕ್ಯತ್ವವನ್ನೂ ಅಲ್ಲಗಳೆದೇ ವಿಶ್ರಾಂತ ವಾಗುತ್ತದೆ.

(೧) ಉಪಾಧಿಕೃತಂ ಮಿಥ್ಯಾರೂಪಮಪಿ ಅಸ್ತಿತ್ವಾಧಿಗಮಾಯ ಜ್ಞೇಯಧರ್ಮವತ್ ಪರಿಕಲ್ಪ್ಯ ಉಚ್ಯತೇ 'ಸರ್ವತಃಪಾಣಿಪಾದಮ್' ಇತ್ಯಾದಿ । ತಥಾ ಹಿ ಸಂಪ್ರದಾಯವಿದಾಂ ವಚನಮ್, "ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ" ಇತಿ ॥

- ಗೀ. ಭಾ. ೧೩-೧೩-೭೯೭

(೨) ಪ್ರಾಗೇಕತ್ವವಿಜ್ಞಾನಾತ್ ಆಚಾರ್ಯಾಗಮಸಂಸ್ಕೃತೇನ ಮನಸೈವ ಇದಂ ಬ್ರಹ್ಮ ಏಕರಸಮ್ ಆಪ್ತವ್ಯಮ್ 'ಆತ್ಮೈವ ನಾನ್ಯದಸ್ತಿ' ಇತಿ । ಆಪ್ತೇ ಚ ನಾನಾತ್ವಪ್ರತ್ಯುಪಸ್ಥಾಪಿಕಾಯಾ ಅವಿದ್ಯಾಯಾ ನಿವೃತ್ತತ್ವಾತ್ ಇಹ ಬ್ರಹ್ಮಣಿ ನಾನಾ ನಾಸ್ತಿ ಕಿಂಚನ ಅಣುಮಾತ್ರಮಪಿ ॥

- ಕ. ಭಾ. ೨-೧-೧೧-೧೨೬

(೩) ಅಪವಾದೋ ನಾಮ ಯತ್ರ ಕಸ್ಮಿಂಶ್ಚಿತ್ ವಸ್ತುನಿ ಪೂರ್ವನಿವಿಷ್ಟಾಯಾಂ ಮಿಥ್ಯಾಬುದ್ಧೌ ನಿಶ್ಚಿತಾಯಾಂ ಪಶ್ಚಾದ್ ಉಪಜಾಯಮಾನಾ ಯಥಾರ್ಥಬುದ್ಧಿಃ ಪೂರ್ವನಿವಿಷ್ಟಾಯಾಃ ಮಿಥ್ಯಾಬುದ್ಧೇರ್ನಿವರ್ತಿಕಾ ಭವತಿ । ಯಥಾ ದೇಹೇಂದ್ರಿಯಸಂಘಾತೇ ಆತ್ಮಬುದ್ಧಿಃ ಆತ್ಮನ್ಯೇವ ಆತ್ಮಬುದ್ಧ್ಯಾ ಪಶ್ಚಾದ್ಭಾವಿನ್ಯಾ 'ತತ್ತ್ವಮಸಿ' ಇತ್ಯನಯಾ ನಿವರ್ತ್ಯತೇ ।

ಯಥಾ ವಾ ದಿಗ್ಭ್ರಾಂತಿಬುದ್ಧಿಃ ದಿಗ್ಯಾಥಾತ್ಮ್ಯಬುದ್ಧ್ಯಾ ನಿವರ್ತ್ಯತೇ ॥
- ಸೂ. ಭಾ. ೩-೩-೯-೩೩೧.

೪೩. ಶ್ರುತ್ಯಾಚಾರ್ಯರೂ ಅಧ್ಯಾರೋಪವನ್ನು ಮಾಡಿಯೇ ಉಪದೇಶಿಸುವದಾದರೆ ಅವರ ವಚನಗಳೂ ಅವಿದ್ಯಾಪೂರ್ವಕವೆಂದಾಗುವದಿಲ್ಲವೆ? ಎಂದು ಶಂಕಿಸುವದಕ್ಕೆ ಬರುವದಿಲ್ಲ. ಏಕೆಂದರೆ **ಅಜ್ಞಾನಿಗಳ ಅಧ್ಯಾರೋಪಕ್ಕೂ ಶ್ರುತ್ಯಾಚಾರ್ಯರ ಅಧ್ಯಾರೋಪಕ್ಕೂ ಒಂದು ಮುಖ್ಯವಾದ ತಾರತಮ್ಯವಿದೆ.** ಒಂದು ವಸ್ತುವನ್ನು ಇನ್ನೊಂದೆಂದು ಭಾವಿಸುವ ಅಜ್ಞಾನಿಗಳಿಗೆ ಸರಿಯಾದ ವಸ್ತುಜ್ಞಾನವು ಆಗಿರುವದಿಲ್ಲ. ಉದಾಹರಣೆಗೆ ಶುಕ್ತಿರಜತವನ್ನು ಕಂಡಾಗ ಅವರಿಗೆ ಇದು ಬೆಳ್ಳಿ ಎಂಬ ತಿಳಿವಳಿಕೆಯೇ ಗಟ್ಟಿಯಾಗಿ ನಿಂತಿರುತ್ತದೆ; ಸರಿಯಾಗಿ ಪರೀಕ್ಷಿಸಿದ ಬಳಿಕ ಇದು ಬೆಳ್ಳಿಯಲ್ಲ. ಕಪ್ಪೆಯ ಚಿಪ್ಪೇ ಎಂಬ ನಿಶ್ಚಯವುಂಟಾಗಿ ಮೊದಲಿದ್ದ ಬೆಳ್ಳಿಯರಿವು ಬಾಧಿತವಾಗುತ್ತದೆ. ಆಗಲೂ ಅದು ಬೆಳ್ಳಿಯಂತೆ ಕಾಣುತ್ತಿರಬಹುದು; ಆದರೆ 'ಕಪ್ಪೆಯ ಚಿಪ್ಪೇ ಬೆಳ್ಳಿಯಂತೆ ಕಾಣಿಸುತ್ತಿದೆ' ಎಂದು ಈಗ ಅಧ್ಯಾರೋಪಿತವಾದ ಬೆಳ್ಳಿ, ಆಸ್ಪದವಾದ ಕಪ್ಪೆಯ ಚಿಪ್ಪು- ಇವುಗಳ ವಿವೇಕವುಂಟಾಗಿರುತ್ತದೆ. ಶ್ರುತ್ಯಾಚಾರ್ಯರ ಅಧ್ಯಾರೋಪವು ಹೀಗೆ ಅಜ್ಞಾನದಿಂದ ಆಗಿರುವದಿಲ್ಲ, ವಿವೇಕಪೂರ್ವಕವಾಗಿಯೇ ಆಗುತ್ತದೆ. ಇದಕ್ಕೆ ಮತ್ತೊಂದು ಉದಾಹರಣೆಯನ್ನು ಕೊಡಬಹುದು. ಆಕಾಶವು ಕಪ್ಪಗಿದೆ, ಕೆಂಪಗಿದೆ - ಎಂದು ಮುಂತಾಗಿ ಅವಿವೇಕಿಗಳು ತಪ್ಪುತಿಳಿವಳಿಕೆಯಿಂದ ವ್ಯವಹರಿಸುವರು ; ವಿವೇಕಿಗಳು ಆಕಾಶಕ್ಕೆ ಯಾವ ಬಣ್ಣವೂ ಇಲ್ಲವೆಂದು ತಿಳಿದೂ ಈಗ ಆಕಾಶವು ಕಪ್ಪಗಿದೆ, ಕೆಂಪಗಿದೆ ಎಂದು ಮತ್ತೊಬ್ಬರ ದೃಷ್ಟಿಯನ್ನು ಅನುಸರಿಸಿ ವ್ಯವಹರಿಸುವರು. ಈ ಎರಡು ವ್ಯವಹಾರದಲ್ಲಿಯೂ ನಿಜವಾಗಿ ಆಕಾಶಕ್ಕೆ ಯಾವ ಬಣ್ಣವೂ ಇರುವದಿಲ್ಲ. ಆದರೆ ಅವಿವೇಕಿಗಳಿಗೆ ಇರುವ ತಪ್ಪುತಿಳಿವಳಿಕೆಯು ಮಾತ್ರ ವಿವೇಕಿಗಳಿಗೆ ಇರುವದೇ ಇಲ್ಲ. ಆದ್ದರಿಂದ ಅಧ್ಯಾರೋಪಮಾಡಿ ವ್ಯವಹರಿಸಿದ ಮಾತ್ರದಿಂದ ಎಲ್ಲರ ವ್ಯವಹಾರವೂ ಅವಿದ್ಯಾಪೂರ್ವಕವೆಂದು ಹೇಳುವದಕ್ಕೆ ಬರುವದಿಲ್ಲ.

(೧) ತಥಾ ಚ ಲೋಕೇ ಅನುಭವಃ-ಶುಕ್ತಿಕಾ ಹಿ ರಜತವತ್ ಅವಭಾಸತೇ, 'ಏಕಶ್ಚನ್ದ್ರಃ ಸದ್ವಿತೀಯವತ್' ಇತಿ॥
-ಅಧ್ಯಾ. ಭಾ-೨

(೨) ಅವಿವೇಕಿನಾಂ ವಿವೇಕಿನಾಂ ಚ ಉಪಚರಿತಾ ಬುದ್ಧಿರ್ದೃಷ್ಟಾ ಇತಿ ಚೇತ್। ನ। ಅವಿವೇಕಿನಾಂ ಮಿಥ್ಯಾಬುದ್ಧಿತ್ವಾತ್, ವಿವೇಕಿನಾಂ ಚ ಸಂವ್ಯವಹಾರಮಾತ್ರಾಲಮ್ಬನಾರ್ಥತ್ವಾತ್। ಯಥಾ 'ಕೃಷ್ಣೋ ರಕ್ತಶ್ಚ ಆಕಾಶಃ' ಇತಿ ವಿವೇಕಿನಾಮಪಿ ಕದಾಚಿತ್ ಕೃಷ್ಣತಾ ರಕ್ತತಾ ಚ ಆಕಾಶಸ್ಯ ಸಂವ್ಯವಹಾರಮಾತ್ರಾಲಮ್ಬನಾರ್ಥತ್ವಂ ಪ್ರತಿಪದ್ಯತೇ ಇತಿ ನ ಪರಮಾರ್ಥತಃ ಕೃಷ್ಣೋ ರಕ್ತೋ ವಾ ಆಕಾಶೋ ಭವಿತುಮರ್ಹತಿ ॥
-ಬೃ. ೨-೧-೨೦-೩೧೭

೪೪. 'ತಿಳಿದವರಾದ ಆಚಾರ್ಯರೂ ಹೀಗೇಕೆ ಅಧ್ಯಾರೋಪಪೂರ್ವಕವಾಗಿ ಬೋಧಿಸುವರು?' ಎಂದರೆ, ಇದೊಂದೇ ಇಲ್ಲಿ ಸರಿಯಾದ ಉಪಾಯವಾಗಿರುವದರಿಂದ ಅಧ್ಯಾರೋಪಾಪವಾದನ್ಯಾಯವನ್ನು ಲೋಕದಲ್ಲಿಯೂ ಬೋಧಕರು ಉಪಯೋಗಿಸುವದುಂಟು. ಉದಾಹರಣೆಗೆ ಸಂಖ್ಯೆಯನ್ನು ಹುಡುಗರಿಗೆ ತಿಳಿಸಿಕೊಡುವದಕ್ಕೆ ಕೆಲವು ಗೆರೆಗಳನ್ನೂ, ಅಕಾರಾದ್ಯಕ್ಷರಗಳನ್ನು ಕಲಿಸಿಕೊಡುವದಕ್ಕೆ ಕಾಗದ, ಮಷಿ- ಮುಂತಾದವುಗಳನ್ನೂ ಸಾಧನವಾಗಿ ಉಪಯೋಗಿಸುವದನ್ನು ನಾವೆಲ್ಲರೂ ಕಂಡಿರುತ್ತೇವೆ. ಇಲ್ಲಿ ಬೋಧನೆಗೆ ಸಾಧನವಾಗಿರುವ ಕಾಗದ, ಮಷಿ, ಗೆರೆ-ಮುಂತಾದವುಗಳನ್ನು ತಿಳಿಸಿಕೊಡಬೇಕೆಂಬ ಉದ್ದೇಶವೇನೂ ಬೋಧಕರಿಗೆ ಇರುವದಿಲ್ಲ. ಪತ್ರಮಷ್ಯಾದಿಗಳು ಸಂಖ್ಯೆಯೆಂದಾಗಲಿ, ಅಕ್ಷರವೆಂದಾಗಲಿ, ಅವರು ಬೋಧಿಸುವದೂ ಇಲ್ಲ. ಅವುಗಳನ್ನು ನೆಪಮಾಡಿಕೊಂಡು ಸಂಖ್ಯೆಯನ್ನೂ ಅಕ್ಷರವನ್ನೂ ಅವರು ತಿಳಿಸಿಕೊಡುತ್ತಾರೆ. ಅಲ್ಲವೇ? ಹೀಗೆಯೇ ಶಿಷ್ಯರ ಬುದ್ಧಿಗೆ ಹಿಡಿಯುವದಕ್ಕೆ ಅನುಕೂಲವಾದ ಆಯಾ ಅಧ್ಯಾರೋಪಗಳಿಂದ ಶ್ರುತಿಯೂ ಆಚಾರ್ಯರೂ ಆತ್ಮತತ್ತ್ವವನ್ನು ಬೋಧಿಸುತ್ತಾರೆ. ಅವರಿಗೆ ಉಪೇಯವಾದ ಆತ್ಮತತ್ತ್ವವನ್ನು ಉಪದೇಶಮಾಡಬೇಕೆಂಬುದೇ ಗುರಿಯೇ ಹೊರತು ಉಪಾಯವಾಗಿ ಮಾಡಿಕೊಂಡಿರುವ ಅಧ್ಯಾರೋಪಗಳಲ್ಲಿ ಅವರ ಬೋಧೆಗೆ ತಾತ್ಪರ್ಯವಿರುವದಿಲ್ಲ.

ಆದರೆ ಈ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಒಂದು ತಾರತಮ್ಯವುಂಟು. ಅದೇನೆಂದರೆ : ಅಕ್ಷರಾದಿಗಳಲ್ಲಿ ಧ್ವನ್ಯಾಧಿಕೃತವಾದ ವಿಶೇಷಗಳು ಇರುವದರಿಂದ ಉತ್ತಮಾಧಿಕಾರಿಗಳಿಗೆ ಅವನ್ನೇ ನೇರಾಗಿ ಸ್ವರೂಪನಿರ್ದೇಶಪೂರ್ವಕವಾಗಿಯೂ ತಿಳಿಸಿಕೊಡಬಹುದು. ಆತ್ಮತತ್ತ್ವವಾದರೋ ಯಾವ ವಿಶೇಷವೂ ಇಲ್ಲದ್ದು; ಅದರ ಸ್ವರೂಪವನ್ನೇ ನಿರ್ದೇಶಿಸಿ ತಿಳಿಸುವದಕ್ಕೆ ಬರುವದೇ ಇಲ್ಲ. ಆದ್ದರಿಂದ ಜನರು ತತ್ತ್ವವನ್ನು ಹೇಗೆಹೇಗೆ ತಿಳಿಯಬಹುದೆಂದು ತೋರುವದೋ ಅದದನ್ನು ಅಲ್ಲಗಳೆದೇ ಆತ್ಮತತ್ತ್ವವನ್ನು ಬೋಧಿಸಬೇಕಾಗಿರುತ್ತದೆ. ಆದ್ದರಿಂದ ವೇದಾಂತಿಗಳು ಈ ಪ್ರಕಾರವನ್ನೇ ಉಪಯೋಗಿಸಿಕೊಂಡಿರುತ್ತಾರೆ.

(೧) ಯಥಾ ಏಕಪ್ರಭೃತಿ ಅಪರಾರ್ಧಸಙ್ಖ್ಯಾಸ್ವರೂಪಪರಿಜ್ಞಾನಾಯ ರೇಖಾಧ್ಯಾರೋಪಣಂ ಕೃತ್ವಾ ಏಕೇಯಂ ರೇಖಾ ದಶೇಯಮ್, ಶತೇಯಮ್, ಸಹಸ್ರೇಯಮ್ ಇತಿ ಗ್ರಾಹಯತಿ । ಅವಗಮಯತಿ ಸಂಖ್ಯಾಸ್ವರೂಪಂ ಕೇವಲಮ್, ನ ತು ಸಙ್ಖ್ಯಾಯಾ ರೇಖಾತ್ಮತ್ವಮೇವ । ಯಥಾ ಚ ಅಕಾರಾದೀನಿ ಅಕ್ಷರಾಣಿ ವಿಜಿಗ್ರಾಹಯಿಷುಃ ಪತ್ರಮಷೀ-ರೇಖಾದಿಸಂಯೋಗೋಪಾಯಮ್ ಆಸ್ಥಾಯ ವರ್ಣಾನಾಂ ಸತತ್ತ್ವಮ್ ಆವೇದಯತಿ, ನ ಪತ್ರಮಷ್ಯಾದ್ಯಾತ್ಮತಾಮ್ ಅಕ್ಷರಾಣಾಂ ಗ್ರಾಹಯತಿ । ತಥಾ ಚೇಹ ಉತ್ಪತ್ತ್ಯಾದ್ಯನೇಕೋಪಾಯಮ್ ಆಸ್ಥಾಯ ಏಕಂ ಬ್ರಹ್ಮತತ್ತ್ವಮ್ ಆವೇದಿತಮ್ । ಪುನಃ ತತ್ಕಲ್ಪಿತೋಪಾಯಜನಿತವಿಶೇಷ-ಪರಿಶೋಧನಾರ್ಥಂ ನೇತಿ ನೇತಿ ಇತಿ ತತ್ತ್ವೋಪಸಂಹಾರಃ ಕೃತಃ । -ಬೃ.ಭಾ.೪-೪-೨೫-೩೨೧

(೨) ಯದಾ ಪುನಃ ಸ್ವರೂಪಮೇವ ನಿರ್ದಿದಿಕ್ಷಿತಂ ಭವತಿ ನಿರಸ್ತಸರ್ವೋಪಾಧಿ ವಿಶೇಷಮ್, ತದಾ ನ ಶಕ್ಯತೇ ಕೇನಚಿದಪಿ ಪ್ರಕಾರೇಣ ನಿರ್ದೇಷ್ಟುಮ್। ತದಾ ಅಯಮೇವ ಅಭ್ಯುಪಾಯೋ ಯದುತ ಪ್ರಾಪ್ತನಿರ್ದೇಶಪ್ರತಿಷೇಧದ್ವಾರೇಣ 'ನೇತಿ ನೇತಿ' ಇತಿ ನಿರ್ದೇಶಃ॥

-ಬೃ. ಭಾ. ೨-೩-೬-೩೪೮

೪೫. ಬ್ರಹ್ಮವನ್ನು "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧), "ವಿಜ್ಞಾನಮಾನನ್ದಂ ಬ್ರಹ್ಮ" (ಬೃ.೩-೯-೨೮)-ಮುಂತಾದ ವಾಕ್ಯಗಳು ವಿಧಿಮುಖವಾಗಿಯೇ ತಿಳಿಸಿಕೊಡುತ್ತವೆಯಾದ್ದರಿಂದ 'ಬ್ರಹ್ಮವು ಇದಲ್ಲ, ಇದಲ್ಲ' ಎಂದು ಬ್ರಹ್ಮಸ್ವರೂಪವನ್ನೇ ನೇರವಾಗಿ ತಿಳಿಸಿದ ಸುತ್ತಿನಪ್ರಕಾರದಿಂದ ಪ್ರಯೋಜನವೇನೂ ಕಾಣಿಸುವದಿಲ್ಲ- ಎಂದು ಕೆಲವು ಜಿಜ್ಞಾಸುಗಳು ಭಾವಿಸಬಹುದು. ಆದರೆ "ಸತ್ಯಂ ಜ್ಞಾನಮ್" ಮುಂತಾಗಿ ತಿಳಿಸಿರುವ ಕ್ರಮವೂ ಅಧ್ಯಾರೋಪಾಪವಾದನ್ಯಾಯದಿಂದಲೇ ಆಗಿರುತ್ತದೆ; ಅಲ್ಲಿಯೂ ನಾಮರೂಪಕರ್ಮಗಳನ್ನು ಅಧ್ಯಾರೋಪಮಾಡಿಕೊಂಡೇ ಬ್ರಹ್ಮವನ್ನು ತಿಳಿಸಿದೆ; ಸ್ವರೂಪವನ್ನೇ ಹೇಳುವಾಗ ನಿಷೇಧಮುಖದಿಂದಲೇ ತಿಳಿಸಬೇಕಾಗುತ್ತದೆ. ಬ್ರಹ್ಮಸ್ವರೂಪವನ್ನು ಯಾವ ಪದವಾಗಲಿ ವಾಕ್ಯವಾಗಲಿ ನೇರಾಗಿ ತಿಳಿಸಲಾರದೆಂಬುದನ್ನು ನಾವು ಇನ್ನುಮುಂದೆ (೬೬) ತಿಳಿಸುವೆವು. ಹೀಗೆ ಪರಪ್ರತಿಷೇಧದಿಂದಲೇ ಬ್ರಹ್ಮವನ್ನು ಶ್ರುತಿಯು ತಿಳಿಸುವದೆಂದು ಒಪ್ಪದಿದ್ದರೆ ಬ್ರಹ್ಮವು ಮನೋವಾಕ್ಕುಗಳಿಗೆ ಅಗೋಚರವೆಂದೂ ಹೇಳಿ ಅದರ ಸ್ವರೂಪವನ್ನು ನೇರವಾಗಿಯೇ ವರ್ಣಿಸುವದಕ್ಕೆ ಹೊರಟ ಶ್ರುತಿಯು ವ್ಯಾಹತವಾಗುವದರಿಂದ ಅಪ್ರಮಾಣವೇ ಆಗುವದು.

(೧) ಅತೋ ನ ನಿರ್ದೇಷ್ಟುಂ ಶಕ್ಯತೇ 'ಇದಂ ತತ್' ಇತಿ ಗೌರಸೌ, ಸ್ಪನ್ದತೇ, ಶುಕ್ಲೋ ವಿಷಾಣೀ ಇತಿ ಯಥಾ ಲೋಕೇ ನಿರ್ದಿಶ್ಯತೇ ತಥಾ ಅಧ್ಯಾರೋಪಿತನಾಮರೂಪಕರ್ಮದ್ವಾರೇಣ ಬ್ರಹ್ಮ ನಿರ್ದಿಶ್ಯತೇ "ವಿಜ್ಞಾನಮಾನನ್ದಂ ಬ್ರಹ್ಮ", "ವಿಜ್ಞಾನಘನ ಏವ", "ಬ್ರಹ್ಮ", "ಆತ್ಮಾ" ಇತ್ಯೇವಮಾದಿಶಬ್ದೈಃ॥

-ಬೃ.೨-೩-೬-೩೪೮

೪೬. ಅಧ್ಯಾರೋಪಾಪವಾದನ್ಯಾಯದಿಂದ ಬ್ರಹ್ಮವನ್ನು ತಿಳಿಸುವದಕ್ಕೆ ಯಾವ ಯಾವ ಅಧ್ಯಾರೋಪಗಳನ್ನು ಉಪನಿಷತ್ತುಗಳಲ್ಲಿ ಅಂಗೀಕರಿಸಿರುತ್ತದೆ ಎಂಬಿದನ್ನು ಸಂಪೂರ್ಣವಾಗಿ ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಆದರೂ ಕೆಲವು ಮುಖ್ಯಪ್ರಕಾರಗಳನ್ನು ಈ ಗ್ರಂಥದಲ್ಲಿರುವ ಪಾಠಗಳ ಮೂಲಕ ವಿವರಿಸಿರುವೆವು. ದಿಕ್ಪ್ರದರ್ಶನಾರ್ಥವಾಗಿ ಇಲ್ಲಿ ಕೆಲವನ್ನು ಉದಾಹರಿಸುವೆವು; ಇವುಗಳಿಂದ ಬೇರೆಯ ಪ್ರಕಾರಗಳನ್ನೂ ಜಿಜ್ಞಾಸುಗಳು ಊಹಿಸಿಕೊಳ್ಳಬೇಕು. ಆತ್ಮನಲ್ಲಿ ಜ್ಞೇಯತ್ವವನ್ನು ಅಧ್ಯಾರೋಪಮಾಡಿ, ಮಿಕ್ಕದ್ದು ಯಾವದೂ ಅರಿತುಕೊಳ್ಳುವದಕ್ಕೆ ತಕ್ಕದ್ದಲ್ಲವೆಂದು ಕೆಲವು ಶ್ರುತಿಗಳು ತಿಳಿಸುತ್ತಿವೆ; ಜ್ಞಾತೃತ್ವವನ್ನು ಅಧ್ಯಾರೋಪಮಾಡಿ ಆತ್ಮನು

ಜ್ಞೇಯನಲ್ಲವೆಂಬುದನ್ನು ಕೆಲವು ಶ್ರುತಿಗಳು ತಿಳಿಸುತ್ತವೆ. ಕೆಲವು ವಚನಗಳಲ್ಲಿ ಆತ್ಮತ್ವವನ್ನು ಆರೋಪಿಸಿ ಜ್ಞಾತೃತ್ವವನ್ನು ಕಳೆದುಹಾಕಿರುತ್ತದೆ; ಮತ್ತೆ ಕೆಲವು ವಚನಗಳಲ್ಲಿ ಸಾಕ್ಷಿತ್ವವನ್ನು ಆರೋಪಿಸಿ ಆತ್ಮತ್ವವನ್ನೂ ಕಳೆದುಹಾಕಿರುತ್ತದೆ. ಕೆಲವು ವಾಕ್ಯಗಳಲ್ಲಿ ಬ್ರಹ್ಮತ್ವವನ್ನು ಆರೋಪಿಸಿ ಅಲ್ಪತ್ವವನ್ನು ತೆಗೆದುಹಾಕಿದೆ; ಕೆಲವು ವಾಕ್ಯಗಳಲ್ಲಿ ಬ್ರಹ್ಮತ್ವದ ಜೊತೆಗೆ ಆತ್ಮತ್ವವನ್ನೂ ಹೇಳಿ ಪರೋಕ್ಷತ್ವವನ್ನು ತೆಗೆದು ಹಾಕಿದೆ. ಹೀಗೆಯೇ ವಾಕ್ಯಗಮ್ಯತ್ವವನ್ನಿಟ್ಟುಕೊಂಡು ಪ್ರತ್ಯಕ್ಷಾದಿಗಳಿಂದ ಪ್ರಮೇಯ ನೆಂಬುದನ್ನು ಅಲ್ಲಗಳೆಯುವದು, ವಾಙ್ಮನಸ್ಸುಗಳಿಗೆ ಅಗೋಚರನೆಂದು ಹೇಳಿ ವಿಷಯತ್ವವನ್ನೇ ಕಿತ್ತುಹಾಕುವದು; ಜಗತ್ಕಾರಣತ್ವವನ್ನು ಹೇಳಿ ಕಾರ್ಯತ್ವವನ್ನು ದೂರಮಾಡುವದು, ಬಳಿಕ ಕಾರಣತ್ವವನ್ನೂ ಇಲ್ಲವೆನ್ನುವದು; ಸಾಮಾನ್ಯತ್ವವನ್ನು ಒಪ್ಪಿ ವಿಶೇಷಗಳು ಅದಕ್ಕಿಂತ ಬೇರೆಯಲ್ಲವೆನ್ನುವದು, ಅಸಂಗತ್ವಾಂಗೀಕಾರದ ಮೂಲಕ ಸಾಮಾನ್ಯತ್ವವೂ ಇಲ್ಲವೆನ್ನುವದು, ಸಂಸಾರಿತ್ವವನ್ನು ತೋರಿಸಿ ಜಡತ್ವದಿಂದ ಬಿಡಿಸಿ ಹೇಳುವದು, ಉಪಾಸ್ಯತ್ವವನ್ನು ಹೇಳಿ ಸಂಸಾರಿತ್ವವನ್ನು ತಪ್ಪಿಸುವದು; ಅವಸ್ಥಾಸಾಕ್ಷಿತ್ವವನ್ನು ಒಪ್ಪಿ ಅಪರಿಚ್ಛಿನ್ನತ್ವವನ್ನು ಕಳೆಯುವದು, ತುರೀಯತ್ವವನ್ನು ತಿಳಿಸಿ ಆ ಸಾಕ್ಷಿತ್ವವನ್ನೂ ತೆಗೆದುಹಾಕುವದು; ಸಾಧಕತ್ವವನ್ನು ಹೇಳಿ ನಿತ್ಯಸಂಸಾರಿತ್ವ ವನ್ನು ಅಲ್ಲಗಳೆಯುವದು, ನಿತ್ಯಮುಕ್ತತ್ವವನ್ನು ಹೇಳಿ ಸಾಧಕತ್ವವನ್ನು ಅಲ್ಲಗಳೆಯು ವದು - ಈ ಪ್ರಕಾರವಾಗಿ ಒಂದೊಂದು ಅಧ್ಯಾರೋಪದಿಂದಲೂ ಬೇರೊಂದು ಕಲ್ಪನೆಯನ್ನು ಕಳೆಯುತ್ತಾ ಹೋಗಿರುತ್ತದೆ.

ಮೇಲೆ ನಾವು ಒಂದೊಂದು ಅಧ್ಯಾರೋಪದ ಮೂಲಕ ಒಂದೊಂದು ವಿಕಲ್ಪದ ನಿಷೇಧವನ್ನು ತಿಳಿಸಿರುತ್ತೇವಾದರೂ **ಪ್ರತಿಯೊಂದು ಅಧ್ಯಾರೋಪವನ್ನೂ ಹಲವು ವಿಕಲ್ಪಗಳ ನಿರಾಸಕ್ಕೆ ಉಪಯೋಗಿಸಬಹುದು; ವೇದಾಂತಿಗಳು ಹಾಗೆ ಉಪಯೋಗಿಸಿಯೂ ಇರುತ್ತಾರೆ.** ಆತ್ಮನೇ ಜ್ಞೇಯನು ಎಂಬ ಅಧ್ಯಾರೋಪವು ಮಿಕ್ಕದ್ದೊಂದೂ ಜ್ಞೇಯವಲ್ಲ ಎಂಬುದನ್ನೇ ಅಲ್ಲದೆ ಆತ್ಮವಿಷಯಕವಾದ ಅಜ್ಞಾನವೇ ಅನಾತ್ಮದ ತೋರಿಕೆಗೆ ಕಾರಣವು, ಆತ್ಮನನ್ನು ತಿಳಿದುಕೊಂಡರೆ ಅನಾತ್ಮವನ್ನೆಲ್ಲ ತಿಳಿದುಕೊಂಡಂತೆಯೇ ಆಯಿತು. ಆತ್ಮನನ್ನು ಅರಿತುಕೊಂಡರೆ ಅಜ್ಞಾನವು ಆತ್ಯಂತಿಕ ವಾಗಿ ಹೋಗಿಬಿಡುತ್ತದೆ, ಆತ್ಮನನ್ನು ಅರಿತುಕೊಂಡರೆ ಜ್ಞಾತೃಜ್ಞೇಯವಿಭಾಗವೇ ಉಳಿಯುವದಿಲ್ಲ- ಎಂಬಿವೇ ಮುಂತಾದ ಸಿದ್ಧಾಂತಗಳನ್ನು ಮನಗಾಣುವದಕ್ಕೆ ಸಾಧನವಾಗಿರುತ್ತದೆ. ವಿಚಾರದಕ್ಷರಾದವರು ಇಂಥವುಗಳನ್ನೆಲ್ಲ ಆಯಾ ಸಂದರ್ಭ ದಿಂದ ತಾವೇ ಊಹಿಸಿಕೊಳ್ಳಬಹುದು. ಮಂದಮಧ್ಯಮಾಧಿಕಾರಿಗಳ ಸಲುವಾಗಿ ಮುಂದಿನ ಗ್ರಂಥಭಾಗದಲ್ಲಿ ನಾವೂ ತಕ್ಕಮಟ್ಟಿಗೆ ವಿವರಿಸುವೆವು.

# ೭. ಪ್ರಮಾಣಪ್ರಮೇಯವ್ಯವಹಾರ

೪೭. ಪರಮಾರ್ಥವನ್ನು ಅರಿತುಕೊಳ್ಳುವದಕ್ಕೆ ಶ್ರುತಿಯೇ ಪ್ರಮಾಣವು ಎಂದು ವೇದಾಂತಿಗಳು ಅಂಗೀಕರಿಸಿರುವರಷ್ಟೆ. ಮಿಕ್ಕ ಪ್ರಮಾಣಗಳಿಗಿಂತ ಶ್ರುತಿಯಲ್ಲಿರುವ ಹೆಚ್ಚುಗಾರಿಕೆಯು ಏನು? -ಎಂಬುದನ್ನು ತಿಳಿದುಕೊಳ್ಳದೆ ಇದ್ದರೆ ಈ ಅಂಗೀಕಾರವು ಯುಕ್ತವಾದದ್ದೆಂದು ಮನಸ್ಸಿಗೆ ತಟ್ಟುವಹಾಗಿರುವದಿಲ್ಲ. ಆದ್ದರಿಂದ ಇದಕ್ಕಾಗಿ ಶ್ರುತಿಪ್ರಾಮಾಣ್ಯವನ್ನು ಕುರಿತು ಕೆಲವು ವಿಚಾರಗಳನ್ನು ಈಗ ವಾಚಕರ ಮುಂದಿಡುವೆವು.

ಪ್ರಮಾಣಪ್ರಮೇಯವ್ಯವಹಾರವೆಲ್ಲವೂ ಅಧ್ಯಾಸರೂಪವಾದ ಅವಿದ್ಯೆಯ ಕ್ಷೇತ್ರದಲ್ಲಿಯೇ ಎಂಬುದನ್ನು ಹಿಂದೆ (೨೮)ಪ್ರತಿಪಾದಿಸಲಾಗಿರುತ್ತದೆ. ಹಾಗಾದರೆ ಶಾಸ್ತ್ರವೂ ಅವಿದ್ಯಾಪೂರ್ವಕವಾಗಿಯೇ ಪ್ರವರ್ತಿಸುತ್ತದೆ ಎಂದಾಯಿತು. ಆಗ ಕರ್ಮಗಳಿಂದ ದೇಶಾಂತರಕಾಲಾಂತರಗಳಲ್ಲಿ ಫಲವಾಗುವದೆಂಬುದನ್ನು ತಿಳಿಸುವ ಶಾಸ್ತ್ರವು ಅಪ್ರಮಾಣವಾಗುವದಿಲ್ಲವೆ? ಅಂಥ ಫಲವನ್ನು ಪಡೆದುಕೊಳ್ಳಬೇಕೆನ್ನುವವನು ನನಗೆ ದೇಹಕ್ಕಿಂತ ಬೇರೆಯಾದ ಆತ್ಮರೂಪವು ಇದೆ ಎಂದು ತಿಳಿಯದೆ ಕರ್ಮಗಳಲ್ಲಿ ತೊಡಗುತ್ತಾನೆಂದು ಹೇಳಬಹುದೆ ? ಇವೆರಡೂ ಸರಿಯಲ್ಲ. ಆದ್ದರಿಂದ ಕರ್ಮಕಾಂಡದ ಪ್ರಾಮಾಣ್ಯಕ್ಕಾಗಿ, ಕರ್ಮವಿಧಾಯಕಶಾಸ್ತ್ರವು ಜ್ಞಾನಿಗಳಿಗೇ ವಿಹಿತವಾಗಿದೆ ಎಂದು ಒಪ್ಪಬೇಕು- ಎಂಬ ಶಂಕೆಯು ಹೆಚ್ಚಿನ ವಿಚಾರಶಕ್ತಿಯಿಲ್ಲದವರಿಗೆ ಮೊಳೆತುಕೊಳ್ಳಬಹುದು.

ಇದಕ್ಕೆ ಪರಿಹಾರವನ್ನು ಆಗಲೆ(೨೮) ಸಂಕ್ಷೇಪವಾಗಿ ಹೇಳಿದೆ. ಈಗ ಅದನ್ನು ವಿಶದಗೊಳಿಸುವೆವು. ದೇಹಾತಿರಿಕ್ತನಾಗಿರುವ ಆತ್ಮನೊಬ್ಬನು ಇದಾನೆಂಬುದು ಶಾಸ್ತ್ರದಿಂದ ತಿಳಿಯಬರುವದಿಲ್ಲವೆಂಬುದೇನೂ ನಮ್ಮ ಅಭಿಪ್ರಾಯವಲ್ಲ. ಆದರೆ ಕರ್ಮವಿಧಾಯಕಶಾಸ್ತ್ರವು ಆತ್ಮಸ್ವರೂಪದ ವಿಚಾರವನ್ನೇನೂ ಮಾಡಿರುವದಿಲ್ಲ; ಏಕೆಂದರೆ ಕರ್ಮದಲ್ಲಿ ತೊಡಗುವದಕ್ಕೆ ನಾನು ಕರ್ತೃ, ಭೋಕ್ತೃ-ಎಂದು ಸಾಮಾನ್ಯವಾಗಿ ಜನರು ತಿಳಿದುಕೊಂಡಿರುವ ಆತ್ಮನಜ್ಞಾನವೇ ಸಾಕಾಗಿರುತ್ತದೆ. ಆತ್ಮನಿಗೆ ಪರಲೋಕಸಂಬಂಧವಿದೆ ಎಂಬ ತಿಳಿವಳಿಕೆಯಿಂದಲೇ ಅಧಿಕಾರಿಗಳು ಕರ್ಮದಲ್ಲಿ ತೊಡಗುವರೇ ಹೊರತು ವೇದಾಂತದಲ್ಲಿ ಹೇಳಿರುವ ಆತ್ಮಜ್ಞಾನವನ್ನು ಪಡೆದುಕೊಂಡು ತೊಡಗುವದಿಲ್ಲ. ಇದಲ್ಲದೆ ಆ ಆತ್ಮಜ್ಞಾನವು ಕರ್ಮದಲ್ಲಿ ತೊಡಗುವದಕ್ಕೆ ವಿರುದ್ಧವೂ ಆಗಿರುತ್ತದೆ. ಏಕೆಂದರೆ ನಾನು ಕರ್ಮಫಲವನ್ನು ಅನುಭವಿಸುವವನು ಎಂಬ ತಿಳಿವಳಿಕೆಯು ಕರ್ಮಕ್ಕೆ ಬೇಕು; ಆದರೆ ನಾನು ಹಸಿವು, ನೀರಡಿಕೆ-

ಮುಂತಾದ ಪರಿಹರಿಸಿಕೊಳ್ಳಬೇಕಾದ ದೋಷಗಳು ಯಾವವೂ ಇಲ್ಲದವನು, ಪಡೆದುಕೊಳ್ಳಬೇಕಾದ ಯಾವ ಕಾಮವೂ ಇಲ್ಲದವನು ಎಂಬುದು ವೇದಾಂತದ ಆತ್ಮಜ್ಞಾನವು. ನಾನು ಇಂಥ ವರ್ಣದವನು, ಇಂಥ ಆಶ್ರಮದವನು, ಇಂಥ ವಯಸ್ಸಿನವನು, ಇಂಥ ಕರ್ಮಕ್ಕೆ ಅಧಿಕಾರಿಯು ಎಂಬ ಜ್ಞಾನವು ಕರ್ಮಕ್ಕೆ ಬೇಕು; ಆದರೆ ನನ್ನ ಆತ್ಮರೂಪದಲ್ಲಿ ಯಾವ ಬ್ರಹ್ಮಕ್ಷತ್ರಾದಿಭೇದವೂ ಇರುವದಿಲ್ಲ, ಕರ್ತೃತ್ವ ಭೋಕ್ತೃತ್ವವಿಲ್ಲದವನು, ಗಮನಾಗಮನಾದಿಗಳಿಲ್ಲದವನು ಎಂಬುದು ವೇದಾಂತದ ಆತ್ಮಜ್ಞಾನವು. ಆದ್ದರಿಂದ ವರ್ಣಾಶ್ರಮಾದಿಗಳನ್ನು ಅಧ್ಯಾಸಮಾಡಿಕೊಂಡಿರುವವನಿಗೆ ಹೇಳಿರುವ ಕರ್ಮವೂ ಯಾವ ಅಧ್ಯಾಸವೂ ಇಲ್ಲದ ನಿತ್ಯಶುದ್ಧಾತ್ಮನ ಜ್ಞಾನವೂ ಜೊತೆಯಲ್ಲಿರುವದೆಂಬುದು ಕತ್ತಲೆಬೆಳಕುಗಳು ಒಟ್ಟಿಗೆ ಇರುವವೆಂಬಂತೆ ವಿರುದ್ಧೋಕ್ತಿಯಾಗಿರುತ್ತದೆ. ಈ ಕಾರಣದಿಂದ **ಕರ್ಮಶಾಸ್ತ್ರವು ಅವಿದ್ಯಾ ಕ್ಷೇತ್ರದಲ್ಲಿಯೇ ಪ್ರಮಾಣವಾಗಿರುವದೆಂದು ಹೇಳಿರುವದರಲ್ಲಿ ತಪ್ಪಿಲ್ಲ.**

(೧)ಶಾಸ್ತ್ರೀಯೇ ತು ವ್ಯವಹಾರೇ ಯದ್ಯಪಿ ಬುದ್ಧಿಪೂರ್ವಕಾರೀ ನಾವಿದಿತ್ವಾ ಆತ್ಮನಃ ಪರಲೋಕಸಂಬನ್ಧಮ್ ಅಧಿಕ್ರಿಯತೇ, ತಥಾಪಿ ನ ವೇದಾನ್ತವೇದ್ಯಮ್ ಅಶನಾಯಾದ್ಯತೀತಮ್ ಅಪೇತಬ್ರಹ್ಮಕ್ಷತ್ರಾದಿಭೇದಮ್ ಅಸಂಸಾರ್ಯಾತ್ಮತತ್ತ್ವಮ್ ಅಧಿಕಾರೇ ಅಪೇಕ್ಷ್ಯತೇ । ಅನುಪಯೋಗಾತ್। ಅಧಿಕಾರವಿರೋಧಾಚ್ಚ। ಪ್ರಾಕ್ಚ ತಥಾಭೂತಾತ್ಮವಿಜ್ಞಾನಾತ್ ಪ್ರವರ್ತಮಾನಂ ಶಾಸ್ತ್ರಮ್ ಅವಿದ್ಯಾವದ್ವಿಷಯತ್ವಂ ನಾತಿವರ್ತತೇ। ತಥಾ ಹಿ 'ಬ್ರಾಹ್ಮಣೋ ಯಜೇತ' ಇತ್ಯಾದೀನಿ ಶಾಸ್ತ್ರಾಣಿ ಆತ್ಮನಿ ವರ್ಣಾಶ್ರಮವಯೋಽವಸ್ಥಾದಿ ವಿಶೇಷಾಧ್ಯಾಸಮಾಶ್ರಿತ್ಯ ಪ್ರವರ್ತನ್ತೇ॥

-ಅಧ್ಯಾ.ಭಾ-೭

೪೮. ಕರ್ಮಕಾಂಡದ ವಾಕ್ಯದಿಂದಾಗುವ ಜ್ಞಾನವು ರಜ್ಜುಸರ್ಪಜ್ಞಾನದಂತೆ ಅಧ್ಯಾಸಮಾತ್ರವಾದರೆ, ಏಕತ್ವವಿಜ್ಞಾನವನ್ನುಂಟುಮಾಡುವ ಶ್ರುತಿಯಿಂದ ಆ ಜ್ಞಾನವು ಅವಶ್ಯವಾಗಿ ಬಾಧಿತವಾಗುತ್ತದೆ. ಆದ್ದರಿಂದ ಪ್ರಮಾಣವೆಂದು ಎಣಿಸಿರುವ ಕರ್ಮಕಾಂಡಶ್ರುತಿಗಳಿಗೆ ವಿರೋಧವಾಗಿರುವದರಿಂದ ಶ್ರುತಿಯು ಏಕತ್ವವಿಜ್ಞಾನವನ್ನು ತಿಳಿಸುತ್ತದೆ ಎಂಬುದು ಸರಿಯಲ್ಲ. ಇದಲ್ಲದೆ ಅದ್ವಿತೀಯನಾದ ಅಕರ್ತೃವಾದ ಆತ್ಮನ ಜ್ಞಾನವನ್ನು ಶ್ರುತಿಯು ಉಪದೇಶಿಸುತ್ತದೆ ಎಂದೊಪ್ಪಿದರೆ ಅದ್ವೈತದಲ್ಲಿ ಉಪದೇಶ, ಉಪದೇಷ್ಟೃ, ಉಪದೇಶ್ಯ-ಎಂಬ ಭೇದಗಳು ಇರುವದಕ್ಕೆ ಅವಕಾಶವಿರುವದಿಲ್ಲವಾದ್ದರಿಂದ ಜ್ಞಾನಕಾಂಡದ ಪ್ರಾಮಾಣ್ಯವೂ ಬಾಧಿತವಾಗುತ್ತದೆ. ಎಲ್ಲಾ ವ್ಯವಹಾರವೂ ಅವಿದ್ಯಾಪುರಃಸರವಾಗಿರುವದರಿಂದ ಏಕತ್ವವನ್ನು ತಿಳಿಸುವ ಶ್ರುತಿ ಪ್ರಮಾಣವ್ಯವಹಾರವೂ ಅವಿದ್ಯಾಪುರಃಸರವೆಂದೇ ಒಪ್ಪಬೇಕು. ಆಗ ಯಾವ ಶ್ರುತಿಯೂ ಪ್ರಮಾಣವಲ್ಲದೆ ಹೋಗುತ್ತದೆ. ಹೀಗೆ ತನ್ನ ಪ್ರಾಮಾಣ್ಯವನ್ನೂ ಕಳೆದುಕೊಂಡು ಕರ್ಮಕಾಂಡದ ವಾಕ್ಯಗಳನ್ನೂ ಅಪ್ರಮಾಣವಾಗಿಸಿ ಎಲ್ಲಾ ವ್ಯವಹಾರವೂ

ಅಸತ್ಯವೆನ್ನುವದಕ್ಕಿಂತ ಅದ್ವೈತಶ್ರುತಿಯೊಂದೇ ಅಪ್ರಮಾಣವೆನ್ನುವದೇ ಮೇಲು-ಎಂದು ಕೆಲವರ ವಾದವು.

ಆದರೆ ಈ ವಾದದಲ್ಲಿ ಹುರುಳಿಲ್ಲ. ಏಕೆಂದರೆ ಪ್ರಮಾಣಪ್ರಮೇಯವ್ಯವಹಾರವೆಲ್ಲವೂ ಅವಿದ್ಯಾಪುರಃಸರವಾಗಿರುವದೆಂಬುದನ್ನು ನಾವು ತೋರಿಸಿಕೊಟ್ಟಿರುತ್ತೇವೆ. ಆದ್ದರಿಂದ ವಿಧಿಪ್ರತಿಷೇಧಶಾಸ್ತ್ರಪ್ರಮಾಣದಂತೆ ಮೋಕ್ಷಪರವಾದ ಶಾಸ್ತ್ರಪ್ರಮಾಣವೂ ಅವಿದ್ಯಾವಂತರಿಗೆ ಹೇಳಿದ್ದು ಎಂಬ ವಿಷಯವು ವೇದಾಂತಿಗಳಿಗೆ ಒಪ್ಪೇ ಆಗಿರುತ್ತದೆ. ಆದರೆ ಇಷ್ಟುಮಾತ್ರದಿಂದ ಪ್ರಮಾಣಗಳ ಪ್ರಾಮಾಣ್ಯವು ಬಾಧಿತವಾಗುತ್ತದೆ ಎನ್ನುವದು ಸರಿಯಾಗುವದಿಲ್ಲ. ಏಕೆಂದರೆ ಮೊದಲನೆಯದಾಗಿ ಜ್ಞಾನವಾಕ್ಯವು ಅವಿದ್ಯೆಯನ್ನು ತೊಲಗಿಸುವದಕ್ಕಾಗಿ ಆತ್ಮೈಕತ್ವಜ್ಞಾನವನ್ನು ತಿಳಿಸಿಕೊಡುವದಕ್ಕೆ ಹೊರಟಿರುತ್ತದೆ. ಅವಿದ್ಯೆಯಿಂದ ಆಗಿರುವ ಸಂಸಾರವು ವಿದ್ಯೆಯಿಂದ ತೊಲಗುತ್ತದೆಯಾದ್ದರಿಂದ ವಿದ್ಯೆಯನ್ನುಂಟುಮಾಡುವ ಮೂಲಕ ಪರಮಪುರುಷಾರ್ಥಕ್ಕೆ ಸಾಧಕವಾಗಿರುವ ಶಾಸ್ತ್ರವು ಪ್ರಮಾಣವೆನ್ನುವದರಲ್ಲಿ ಯಾವ ವಿರೋಧವೂ ಇಲ್ಲ. ಉಪನಿಷದ್ವಾಕ್ಯವು 'ಆತ್ಮೈಕತ್ವವು ಸತ್ಯವೂ ಆಗಿದೆ', 'ಅಸತ್ಯವೂ ಆಗಿದೆ'-ಎಂದೇನೂ ಹೇಳುವದಿಲ್ಲ; ಇಷ್ಟಾರ್ಥಪ್ರಾಪ್ತಿಗಾಗಿ ಕರ್ಮವನ್ನು ಮಾಡಕೂಡದು, ಉಪಾಸನೆ ಮಾಡಬಾರದು- ಎಂದೂ ಹೇಳುವದಿಲ್ಲ. ಆದ್ದರಿಂದ ಅದು ತನಗೆ ತಾನಾಗಲಿ ಕರ್ಮವಿಧಾಯಕ ಶ್ರುತಿಗಾಗಲಿ ವಿರುದ್ಧವಲ್ಲ. ಇನ್ನು ಕರ್ಮಕಾಂಡದ ವಾಕ್ಯವು ಅವಿದ್ಯಾಪ್ರಾಪ್ತವಾಗಿರುವ ಕರ್ತ್ರಾದಿಕಾರಕಗಳು ಇವೆಯೆಂಬ ಲೌಕಿಕಜ್ಞಾನವನ್ನು ಆಶ್ರಯಿಸಿಕೊಂಡೇ ಮುಮುಕ್ಷುಗಳಿಗೆ ಪಾಪಕ್ಷಯಾರ್ಥವಾದ ನಿತ್ಯಕರ್ಮಗಳನ್ನೂ ಫಲಾರ್ಥಿಗಳಿಗೆ ಫಲಸಾಧನವಾದ ಕಾಮ್ಯಕರ್ಮಗಳನ್ನೂ ಉಪದೇಶಿಸುತ್ತದೆ. ಪಾಪವು ಕ್ಷಯವಾದರೆ ಜ್ಞಾನವು ಉತ್ಪತ್ತಿಯಾಗುವದು, ಅವಿದ್ಯಾನಿವೃತ್ತಿಯೂ ಆಗುವದು- ಎಂಬ ಕಾರಣದಿಂದ ಆ ವಾಕ್ಯವು ಕರ್ಮಗಳನ್ನು ವಿಧಿಸುತ್ತದೆ. ಹೀಗೆ ಅದೂ ಪುರುಷಾರ್ಥಕ್ಕೆ ಉಪಾಯವನ್ನು ಉಪದೇಶಿಸುವದರಿಂದ ಪ್ರಮಾಣವೇ ಆಗಿರುತ್ತದೆ. ಕಾರಕಗಳು ಸತ್ಯವಾಗಿವೆ-ಎಂದೇನೂ ಆ ವಚನವು ಹೇಳುವದಿಲ್ಲವಾದ್ದರಿಂದ ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಯಾವ ವಿರೋಧವೂ ಇರುವದಿಲ್ಲ. ಇನ್ನು ಜ್ಞಾನವು ಅದ್ವೈತವನ್ನು ತಿಳಿಸಿದಾಗ ಉಪದೇಶಾದಿಗಳಿರುವದಿಲ್ಲವಲ್ಲ !-ಎಂಬ ಶಂಕೆಗೆ ಪರಿಹಾರವನ್ನು ಹೇಳಬೇಕಾದದ್ದೇ ಇಲ್ಲ. ಏಕೆಂದರೆ ಅದ್ವೈತಜ್ಞಾನವಿರುವವರಿಗೆ ಉಪದೇಶಾದಿಗಳ ಆವಶ್ಯಕತೆಯೇ ಇರುವದಿಲ್ಲ; ಆಗ ಉಪದೇಶಾದಿಗಳು ಅಸತ್ಯವಾದರೆ ತಾನೆ ಏನು? ಪರಮಾರ್ಥವನ್ನು ಬೋಧಿಸುವದಕ್ಕಾಗಿಯೇ ಶಾಸ್ತ್ರ, ಶಿಷ್ಯ, ಗುರು- ಎಂಬ ಭೇದವನ್ನು ಅಧ್ಯಾರೋಪಾಪವಾದನ್ಯಾಯದಿಂದ

ವೇದಾಂತದಲ್ಲಿ ಅಂಗೀಕರಿಸಿದೆ. ಇದನ್ನು ನೆನಪಿಟ್ಟವರಿಗೆ ಶಾಸ್ತ್ರಪ್ರಾಮಾಣ್ಯದ ವಿಷಯದಲ್ಲಿ ಯಾವ ಶಂಕೆಯೂ ಎದ್ದುಕೊಳ್ಳುವದಕ್ಕೆ ಅವಕಾಶವಿರುವದಿಲ್ಲ.

(೧) ವಿದ್ಯೋಪದೇಶಪರಾ ತಾವತ್ ಶ್ರುತಿಃ ಸಂಸಾರಾತ್ ಪುರುಷೋ ಮೋಕ್ಷಯಿತವ್ಯಃ ಇತಿ ಸಂಸಾರಹೇತೋರವಿದ್ಯಾಯಾಃ ವಿದ್ಯಯಾ ನಿವೃತ್ತಿಃ ಕರ್ತವ್ಯಾ ಇತಿ ವಿದ್ಯಾಪ್ರಕಾಶಕತ್ವೇನ ಪ್ರವೃತ್ತಾ ಇತಿ ನ ವಿರೋಧಃ। ಏವಮಪಿ ಕರ್ತ್ರಾದಿಕಾರಕಸದ್ಭಾವಪ್ರತಿಪಾದನಪರಂ ಶಾಸ್ತ್ರಂ ವಿರುಧ್ಯತ ಏವೇತಿ. ಚೇತ್।ನ। ಯಥಾಪ್ರಾಪ್ತಮೇವ ಕಾರಕಾಸ್ತಿತ್ವಮ್ ಉಪಾದಾಯ ಉಪಾತ್ತದುರಿತಕ್ಷಯಾರ್ಥಂ ಕರ್ಮಾಣಿ ವಿದಧತ್ ಶಾಸ್ತ್ರಮ್ ಮುಮುಕ್ಷೂಣಾಂ ಫಲಾರ್ಥಿನಾಂ ಚ ಫಲಸಾಧನಂ ನ ಕಾರಕಾಸ್ತಿತ್ವೇ ವ್ಯಾಪ್ರಿಯತೇ । ಉಪಚಿತದುರಿತಪ್ರತಿಬನ್ಧಸ್ಯ ಹಿ ವಿದ್ಯೋತ್ಪತ್ತಿರ್ನಾವಕಲ್ಪತೇ। ತತ್ಕ್ಷಯೇ ಚ ವಿದ್ಯೋತ್ಪತ್ತಿಃ ಸ್ಯಾತ್। ತತಶ್ಚ ಅವಿದ್ಯಾನಿವೃತ್ತಿಃ । ತತಃ ಆತ್ಯನ್ತಿಕಃ ಸಂಸಾರೋಪರಮಃ॥ -ತೈ.ಭಾ.೧-೧೧-೭೮, ೭೯

(೨) ಯಚ್ಚೋಕ್ತಂ ಸ್ವಾರ್ಥವಿಘಾತಕತ್ವಾತ್ ಅಪ್ರಾಮಾಣ್ಯಮ್ ಇತಿ। ತದಪಿ ನ । ತದರ್ಥಪ್ರತಿಪತ್ತೇರ್ಬಾಧಕಾಭಾವಾತ್ । ನ ಹಿ ಉಪನಿಷದ್ಭ್ಯೋ "ಬ್ರಹ್ಮೈಕಮೇವಾ-ದ್ವಿತೀಯಮ್, ನೈವ ಚ" ಇತಿ ಪ್ರತಿಪತ್ತಿರಸ್ತಿ॥ -ಬೃ. ಭಾ. ೨-೧-೨೦-೩೨೨

(೩) ಯಚ್ಚೋಕ್ತಮ್ ಕರ್ಮಕಾಣ್ಡಪ್ರಾಮಾಣ್ಯವಿಘಾತಕೃತ್ ಉಪನಿಷದ್ವಾಕ್ಯಮ್ ಇತಿ । ತನ್ನ । ಅನ್ಯಾರ್ಥತ್ವಾತ್। ಬ್ರಹ್ಮೈಕತ್ವಪ್ರತಿಪಾದನಪರಾ ಹಿ ಉಪನಿಷದಃ, ನೇಷ್ಟಾರ್ಥಪ್ರಾಪ್ತೌ ಸಾಧನೋಪದೇಶಂ ತಸ್ಮಿನ್ ವಾ ಪುರುಷನಿಯೋಗಂ ವಾರಯನ್ತಿ ಅನೇಕಾರ್ಥತ್ವಾನುಪ-ಪತ್ತೇರೇವ। -ಬೃ.ಭಾ.೨-೧-೨೦-೩೨೩

(೪) ಅವಿದ್ಯಾಪ್ರತ್ಯುಪಸ್ಥಾಪಿತಸ್ಯ ಕ್ರಿಯಾಕಾರಕಫಲಸ್ಯ ಆಶ್ರಯಣೇನ ಇಷ್ಟಾನಿಷ್ಟ ಪ್ರಾಪ್ತಿಪರಿಹಾರೋಪಾಯಸಾಮಾನ್ಯೇ ಪ್ರವೃತ್ತಸ್ಯ ತದ್ವಿಶೇಷಮ್ ಅಜಾನತಃ ತದಾಚಕ್ಷಾಣಾ ಶ್ರುತಿಃ ಕ್ರಿಯಾಕಾರಕಫಲಭೇದಸ್ಯ ಲೋಕಪ್ರಸಿದ್ಧಸ್ಯ ಸತ್ಯತಾಮ್ ಅಸತ್ಯತಾಂ ವಾ ನಾಚಷ್ಟೇ ನ ಚ ವಾರಯತಿ ॥ - ಬೃ.ಭಾ.೨-೧-೨೦-೩೨೪

(೫) ಅಥೈವಂ ಸತಿ ತದೌದಾಸೀನ್ಯಸ್ವರೂಪಾವಸ್ಥಾನೇ ಫಲೇ ಪ್ರಾಪ್ತೇ ಶಾಸ್ತ್ರಸ್ಯ ಪ್ರಾಮಾಣ್ಯಂ- ಪ್ರತ್ಯರ್ಥಿತ್ವಂ ನಿವರ್ತತೇ। ತದಭಾವಾತ್ ಶಾಸ್ತ್ರಸ್ಯಾಪಿ ಶಾಸ್ತ್ರತ್ವಂ ತಂ ಪ್ರತಿ ನಿವರ್ತತ ಏವ । ತಥಾ ಪ್ರತಿಪುರುಷಂ ಪರಿಸಮಾಪ್ತಂ ಶಾಸ್ತ್ರಮ್ ಇತಿ ನ ಶಾಸ್ತ್ರವಿರೋಧಗನ್ಧೋಽಪ್ಯಸ್ತಿ। ಅದ್ವೈತಜ್ಞಾನಾವಸಾನತ್ವಾತ್ ಶಾಸ್ತ್ರಶಿಷ್ಯಶಾಸನಾದಿದ್ವೈತಭೇದಸ್ಯ॥ - ಬೃ.ಭಾ.೫-೧-೧-೩೫೩

(೬) ವಿಕಲ್ಪೋ ವಿನವರ್ತೇತ ಕಲ್ಪಿತೋ ಯದಿ ಕೇನಚಿತ್।

ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ॥ -ಮಾಂ.ಕಾ. ೧-೧೮

ನನು ಶಾಸ್ತಾ, ಶಾಸ್ತ್ರಂ, ಶಿಷ್ಯಃ ಇತಿ ಅಯಂ ವಿಕಲ್ಪಃ ಕಥಂ ನಿವೃತ್ತಃ ಇತಿ ? ಉಚ್ಯತೇ। ವಿಕಲ್ಪೋ ವಿನಿವರ್ತೇತ ಯದಿ ಕೇನಚಿತ್ ಕಲ್ಪಿತಃ ಸ್ಯಾತ್। ಯಥಾಽಯಂ ಪ್ರಪಞ್ಚಃ ಮಾಯಾರಜ್ಜುಸರ್ಪವತ್ ತಥಾ ಅಯಂ ಶಿಷ್ಯಾದಿಭೇದವಿಕಲ್ಪೋಽಪಿ ಪ್ರಾಕ್ಪ್ರತಿಬೋಧಾದೇವ ಉಪದೇಶನಿಮಿತ್ತಃ ॥

- ಮಾಂ. ಕಾ. ಭಾ.೧-೧-೮-೫೭

(೭) ತಮೇತಮವಿದ್ಯಾಖ್ಯಮ್ ಆತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ । ಸರ್ವಾಣಿ ಚ ಶಾಸ್ತ್ರಾಣಿ ವಿಧಿಪ್ರತಿಷೇಧಮೋಕ್ಷಪರಾಣಿ ॥ -ಅಧ್ಯಾ. ಭಾ.-೫

೪೯. ಪ್ರತ್ಯಕ್ಷಾದಿಪ್ರಮಾಣಗಳು ಲೌಕಿಕರಿಗೂ ವೈದಿಕರಿಗೂ ಸಮಾನವಾಗಿರುತ್ತವೆ. ಶ್ರುತಿಯು ವೈದಿಕರು ಮಾತ್ರ ಒಪ್ಪಿರುವ ಪ್ರಮಾಣವು. ಶ್ರುತಿಯನ್ನು ಪ್ರಮಾಣವೆಂದು ಹಿಡಿದರೆ ಪ್ರತ್ಯಕ್ಷಾದಿಗಳು ಅಪ್ರಮಾಣವೆನ್ನಬೇಕಾಗುವದರಿಂದ ಶ್ರುತಿಯೇ ದುರ್ಬಲವೆಂದು ಏತಕ್ಕೆ ಹೇಳಬಾರದು?- ಎಂದು ಕೆಲವರಿಗೆ ಶಂಕೆಯುಂಟಾಗಬಹುದು.

ಈ ಶಂಕೆಯು ಸರಿಯಲ್ಲ. ಏಕೆಂದರೆ ಶ್ರುತ್ಯಾದಿಗಳು ಒಂದಕ್ಕೊಂದು ವಿರುದ್ಧವಾಗಿರುವ ಪ್ರಮಾಣಗಳು ಎಂಬುದೇ ಸರಿಯಲ್ಲ. ಪ್ರಮಾಣಗಳು ಯಾವಾಗಲೂ ತಮ್ಮ ತಮ್ಮ ಅಸಾಧಾರಣವಿಷಯವನ್ನು ತಿಳಿಸುವವೇ ಹೊರತು ಒಂದಕ್ಕೊಂದು ವಿರುದ್ಧವಾಗಿರುವದಿಲ್ಲ. ಕಿವಿಯಿಂದ ಶಬ್ದವು ಕೇಳಬಂದರೆ ಕಣ್ಣಿನಿಂದ ರೂಪವು ತಿಳಿಯಬರುತ್ತದೆಯೇ ಹೊರತು ಕಿವಿಯಿಂದ ಕೇಳಿ ಬಂದದ್ದು ಶಬ್ದವಲ್ಲವೆಂದೇನೂ ಕಣ್ಣು ತಿಳಿಸುವದಿಲ್ಲ. ಪ್ರತ್ಯಕ್ಷಾದಿಗಳು ಶಬ್ದಾದಿಗಳನ್ನು ತಿಳಿಸುವವೇ ಹೊರತು ಅವು ಶ್ರುತಿಯು ಹೇಳುವ ಬ್ರಹ್ಮವು ಅದ್ವಿತೀಯವಲ್ಲವೆಂದೇನೂ ತಿಳಿಸುವದಿಲ್ಲ. ಏಕೆಂದರೆ ಅವಕ್ಕೆ ಬ್ರಹ್ಮವು ವಿಷಯವೇ ಅಲ್ಲ. ಬ್ರಹ್ಮಕ್ಕೆ ರೂಪಾದಿಗಳಿಲ್ಲದ್ದರಿಂದ ಅದು ಪ್ರತ್ಯಕ್ಷಗೋಚರವಲ್ಲ; ಲಿಂಗಾದಿಗಳಿಲ್ಲದ್ದರಿಂದ ಅನುಮಾನಾದಿಗಳಿಗೂ ಗೋಚರವಲ್ಲ. ಬ್ರಹ್ಮಕ್ಕೆ ಶಾಸ್ತ್ರವೊಂದೇ ಪ್ರಮಾಣವು. ಧರ್ಮವು ಹೇಗೆ ಆಗಮದಿಂದಲ್ಲದೆ ಮತ್ತೊಂದರಿಂದ ತಿಳಿಯಲಾರದೋ ಬ್ರಹ್ಮವೂ ಹಾಗೆಯೇ. ಧರ್ಮವನ್ನು ತಿಳಿಸುವ ಶಾಸ್ತ್ರಕ್ಕೂ ಬ್ರಹ್ಮವನ್ನು ತಿಳಿಸುವ ಶಾಸ್ತ್ರಕ್ಕೂ ಯಾವ ವಿರೋಧವೂ ಇಲ್ಲವೆಂದು ಮೇಲೆಯೇ (೪೮) ತಿಳಿಸಿರುತ್ತೇವೆ. ಅದ್ವೈತಶ್ರುತಿಯನ್ನು ಪ್ರಮಾಣವೆಂದು ನಂಬಬೇಕೆಂದೇನೂ ನಾವು ಕೇಳುವದಿಲ್ಲ; ಅದು ಹೇಳುವ ಬ್ರಹ್ಮಾತ್ಮೈಕತ್ವವು ಅನುಭವಗೋಚರವಾಗಿರುವದರಿಂದ ಅದು ಪ್ರಮಾಣವೆಂದು ಆಗಲೇ (೧೯) ತಿಳಿಸಿಯೂ ಇರುತ್ತೇವೆ. ಇನ್ನು ಶ್ರುತಿಯು ಅದ್ವೈತವನ್ನು ಬೋಧಿಸಿದರೆ ಪ್ರತ್ಯಕ್ಷಾದಿಗಳಿಗೆ ವಿಷಯವೇ ಇಲ್ಲವಾಗುವದಲ್ಲ!- ಎಂದೂ ಶಂಕಿಸುವ ಹಾಗಿಲ್ಲ. ಏಕೆಂದರೆ ಪ್ರತ್ಯಕ್ಷಾದಿಗಳು ಅಜ್ಞಾನಿಗಳ ವಿಷಯವೆಂದೂ ಜ್ಞಾನಿಗಳಿಗೆ ಪ್ರತ್ಯಕ್ಷಾದಿಗಳು ಅಪ್ರಮಾಣವೆಂದೂ ಶ್ರುತಿಯೇ ಹೇಳುತ್ತಿರುವದರಿಂದ ಎಚ್ಚರವಾಗುವವರೆಗೆ ಸ್ವಪ್ನವ್ಯವಹಾರವು ಸತ್ಯವಾಗಿರುವಂತೆ ಪ್ರತ್ಯಕ್ಷಾದಿಗಳೂ ಬ್ರಹ್ಮಾತ್ಮೈಕತ್ವಜ್ಞಾನವಾಗುವವರೆಗೆ ಪ್ರಮಾಣವಾಗಿರಬಹುದಾಗಿದೆ. ಇದನ್ನೂ ಹಿಂದೆ (೨೮) ತಿಳಿಸಿರುತ್ತೇವೆ.

(೧) ಸ್ವವಿಷಯಶೂರಾಣಿ ಹಿ ಪ್ರಮಾಣಾನಿ । ಶ್ರೋತ್ರಾದಿವತ್ ॥
-ಬೃ. ಭಾ. ೨-೧-೨೦-೩೨೫

(೨) ಶ್ರೋತ್ರಾದಿದ್ವಾರೈಃ ಶಬ್ದಾದಿಭಿಃ ಪ್ರತ್ಯಕ್ಷತಃ ಉಪಲಭ್ಯಮಾನೈಃ ಬ್ರಹ್ಮಣ ಏಕತ್ವಂ ವಿರುಧ್ಯತೇ ಇತಿ ವದನ್ತೋ ವಕ್ತವ್ಯಾಃ। ಕಿಂ ಶಬ್ದಾದೀನಾಂ ಭೇದೇನ ಆಕಾಶೈಕತ್ವಂ ವಿರುಧ್ಯತೇ? ಇತಿ। ಅಥ ನ ವಿರುಧ್ಯತೇ। ನ ತರ್ಹಿ ಪ್ರತ್ಯಕ್ಷವಿರೋಧಃ॥ -ಬೃ. ಭಾ. ೨-೧-೨೦-೩೨೫

(೩) ರೂಪಾದ್ಯಭಾವಾದ್ ಹಿ ನಾಯಮರ್ಥಃ ಪ್ರತ್ಯಕ್ಷಸ್ಯ ಗೋಚರಃ। ಲಿಙ್ಗಾದ್ಯಭಾವಾಚ್ಚ ನಾನುಮಾನಾದೀನಾಮ್। ಆಗಮಮಾತ್ರಸಮಧಿಗಮ್ಯ ಏವ ತು ಅಯಮರ್ಥೋ ಧರ್ಮವತ್॥
-ಸೂ. ಭಾ. ೨-೧-೬-೪೧೭

(೪) ಸರ್ವವ್ಯವಹಾರಲೋಪಪ್ರಸಙ್ಗಃ। ಪ್ರತ್ಯಕ್ಷಾದಿಪ್ರಮಾಣಾಪ್ರವೃತ್ತೇಃ ಇತಿ ಚೇತ್। ನ। ಪ್ರಾಕ್ಟ್ರಬೋಧಾತ್ ಸ್ವಪ್ನವ್ಯವಹಾರವತ್ ತದುಪಪತ್ತೇಃ, ಶಾಸ್ತ್ರಂ ಚ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ " ಇತ್ಯಾದಿನಾ ಅಪ್ರಬುದ್ಧವಿಷಯೇ ಪ್ರತ್ಯಕ್ಷಾದಿವ್ಯವಹಾರಮ್ ಉಕ್ತ್ವಾ ಪುನಃ ಪ್ರಬುದ್ಧ ವಿಷಯೇ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ.೪-೫-೧೫) ಇತ್ಯಾದಿನಾ ತದಭಾವಂ ದರ್ಶಯತಿ ॥ -ಸೂ. ಭಾ. ೪-೩-೧೪-೫೮೫

೫೦. ಶ್ರುತಿಯು ಅವಿದ್ಯಾದೃಷ್ಟಿಗೇ ಗೋಚರವಾಗುವ ಪ್ರಮಾಣವಾದ್ದರಿಂದ ಅಸತ್ಯವು. ಅಸತ್ಯವಾದ ವೇದಾಂತವಾಕ್ಯದಿಂದ ಸತ್ಯವಾದ ಬ್ರಹ್ಮಾತ್ಮಜ್ಞಾನವು ಆಗುವದು ಹೇಗೆ? ಹಗ್ಗದ ಹಾವು ಕಚ್ಚಿದ್ದರಿಂದ ಸತ್ತನೆಂಬುದನ್ನು ಯಾರೂ ಕಂಡಿಲ್ಲ; ಬಿಸಿಲುಕುದುರೆಯ ನೀರಿನಿಂದ ಸ್ನಾನ, ಪಾನ ಮುಂತಾದ ಪ್ರಯೋಜನವಾದದ್ದನ್ನೂ ಯಾರೂ ಕಂಡಿಲ್ಲವಲ್ಲ!- ಎಂದು ಕೆಲವರ ಆಕ್ಷೇಪ.

ಆದರೆ ಶಂಕಾವಿಷದಿಂದ ಸಾವು ಉಂಟಾಗುತ್ತದೆ; ಕನಸಿನಲ್ಲಿ ಹಾವು ಕಡಿದು ಸಾಯುವದು, ನೀರಿನಲ್ಲಿ ಮಿಾಯುವದು ಮುಂತಾದ ಕಾರ್ಯವಾಗುತ್ತದೆ- ಎಂಬುದನ್ನು ಎಲ್ಲರೂ ಕಂಡಿರುತ್ತಾರೆ. ಆ ಕಾರ್ಯವೂ ಕನಸಿನಲ್ಲೇ ಆಗುವದರಿಂದ ಸುಳ್ಳಲ್ಲವೆ ?- ಎಂದು ಕೇಳಬಹುದು. ಅದು ಸುಳ್ಳೆಂದು ಹೇಳುವವರೂ ಅದರ ಜ್ಞಾನವುಂಟಾಗುವದು ನಿಜವೆಂದಾದರೂ ಒಪ್ಪಲೇಬೇಕು; ಏಕೆಂದರೆ ಎಚ್ಚರವಾದ ಬಳಿಕವೂ ಅದು ಬಾಧಿತವಾಗದೆ ಹಾಗೆಯೇ ಇದ್ದುಕೊಂಡಿರುತ್ತದೆ. ಕಲ್ಪಿತವಾದ ರೇಖಾದಿಗಳಿಂದ ನಿಜವಾದ ಅಕ್ಷರದ ಜ್ಞಾನವುಂಟಾಗುವದನ್ನು ಆಗಲೆ (೪೪) ಉದಾಹರಿಸಿರುತ್ತೇವೆ. ಆದ್ದರಿಂದ ಅಸತ್ಯವಾದ ಉಪಾಯದಿಂದ ಸತ್ಯವಾದ ಜ್ಞಾನ ವುಂಟಾಗಬಹುದು. ಆದ್ದರಿಂದಲೇ ಶ್ರುತಿಯು 'ನೇತಿ ನೇತಿ' ಎಂದು ಉಪಾಯ ವಾದದ್ದೆಲ್ಲ ಅಸತ್ಯವೆಂದು ಅದನ್ನು ಅಲ್ಲಗಳೆಯುವದು.

(೧) ಕಥಂ ತು ಅಸತ್ಯೇನ ವೇದಾನ್ತವಾಕ್ಯೇನ ಸತ್ಯಸ್ಯ ಬ್ರಹ್ಮಾತ್ಮತ್ವಸ್ಯ ಪ್ರತಿಪತ್ತಿರುಪಪದ್ಯೇತ? ನ ಹಿ ರಜ್ಜುಸರ್ಪೇಣ ದಷ್ಟೋ ಮ್ರಿಯತೇ। ನಾಪಿ ಮೃಗತೃಷ್ಣಿಕಾಮ್ಭಸಾ ಪಾನಾವಗಾಹನಾದಿಪ್ರಯೋಜನಂ ಕ್ರಿಯತೇ ಇತಿ । ನೈಷ ದೋಷಃ। ಶಙ್ಕಾವಿಷಾದಿನಿಮಿತ್ತ-ಮರಣಾದಿಕಾರ್ಯೋಪಲಬ್ಧೇಃ। ಸ್ವಪ್ನದರ್ಶನಾವಸ್ಥಸ್ಯ ಚ ಸರ್ಪದಂಶನೋದಕಸ್ನಾನಾದಿ-ಕಾರ್ಯದರ್ಶನಾತ್। ತತ್ಕಾರ್ಯಮಪಿ ಅನೃತಮೇವ ಇತಿ ಚೇದ್ ಬ್ರೂಯಾತ್। ತತ್ರ ಬ್ರೂಮಃ। ಯದ್ಯಪಿ ಸ್ವಪ್ನದರ್ಶನಾವಸ್ಥಸ್ಯ ಸರ್ಪದಂಶನೋದಕಸ್ನಾನಾದಿಕಾರ್ಯಮ್ ಅನೃತಮ್, ತಥಾಪಿ ತದವಗತಿಃ ಸತ್ಯಮೇವ ಫಲಮ್। ಪ್ರತಿಬುದ್ಧಸ್ಯಾಪಿ ಅಬಾಧ್ಯಮಾನತ್ವಾತ್॥

-ಸೂ. ಭಾ. ೨-೧-೧೪-೪೩೭

(೨) ಗ್ರಾಹ್ಯಂ ಜನಿಮದ್ಬುದ್ಧಿವಿಷಯಮ್ ಅಪಲಪತಿ ಅರ್ಥಾತ್ ''ಸ ಏಷ ನೇತಿ ನೇತಿ'' ಇತಿ ಆತ್ಮನೋಽದೃಶ್ಯತಾಂ ದರ್ಶಯನ್ತೀ ಶ್ರುತಿಃ। ಉಪಾಯಸ್ಯ ಉಪೇಯನಿಷ್ಠತಾಮ್ ಅಜಾನತಃ ಉಪಾಯತ್ವೇನ ವ್ಯಾಖ್ಯಾತಸ್ಯ ಉಪೇಯವದ್ ಅಗ್ರಾಹ್ಯತಾ ಮಾ ಭೂತ್ ಇತಿ ಅಗ್ರಾಹ್ಯಭಾವೇನ ಹೇತುನಾ ಕಾರಣೇನ ನಿಹ್ನುತೇ ಇತ್ಯರ್ಥಃ । ತತಶ್ಚ ಏವಮ್ ಉಪಾಯಸ್ಯ ಉಪೇಯನಿಷ್ಠತಾಮೇವ ಜಾನತಃ ಉಪೇಯಸ್ಯ ಚ ನಿತ್ಯೈಕರೂಪತ್ವಮಿತಿ ತಸ್ಯ ಸಬಾಹ್ಯಾಭ್ಯನ್ತರಮಜಮ್ ಆತ್ಮತತ್ತ್ವಮ್ ಪ್ರಕಾಶತೇ ಸ್ವಯಮೇವ॥

-ಮಾಂ. ಕಾ. ಭಾ. ೩-೨೬-೧೭೫

೫೧. ಶ್ರುತಿಯು ಆವಿದ್ಯಕವಾದರೂ ಅವಿದ್ಯೆಯನ್ನು ಹೇಗೆ ಕಳೆಯುತ್ತದೆ ? ಹಾಗೆ ಕಳೆದರೆ ಅವಿದ್ಯೆಯಿಂದಾಗಿರುವ ಸಕಲಪ್ರಮಾಣಪ್ರಮೇಯವ್ಯವಹಾರವೂ ಹೋಗಿಬಿಡಬೇಕಾಗುವದರಿಂದ ಶ್ರುತಿಯು ಅಪ್ರಮಾಣವಾಗುವದಲ್ಲ !- ಎಂದು ಶಂಕಿಸುವದಕ್ಕೆ ಅವಕಾಶವಿಲ್ಲ.

ಏಕೆಂದರೆ ಪ್ರಮಾಣಪ್ರಮೇಯವ್ಯವಹಾರಕ್ಕೆ ಮೂಲವು ಪ್ರಮಾತೃತ್ವವು. ಪ್ರಮಾತೃತ್ವವನ್ನು ಅಲ್ಲಗಳೆದು ಆತ್ಮನ ನಿಜವಾದ ಅದ್ವೈತಸ್ವರೂಪವನ್ನು ತಿಳಿಸಿ ಕೊಡುವದೇ ಶ್ರುತಿಯ ಕೃತ್ಯವು. ಪ್ರಮಾತೃತ್ವವು ಅವಿದ್ಯಾಕೃತವೆಂಬುದು ಹೇಗೆಂಬು ದನ್ನು ಆಗಲೆ (೨೮) ತೋರಿಸಿಕೊಟ್ಟಿರುತ್ತೇವೆ. ಪ್ರಮಾತೃತ್ವವು ಪರಮಾರ್ಥವಲ್ಲ ವೆಂದು ಯಾವನಿಗೆ ಮನವರಿಕೆಯಾಗುವದೋ ಅವನಿಗೆ ಪ್ರಮಾಣವು ಪ್ರಮಾಣ ವಲ್ಲ, ಪ್ರಮೇಯವು ಪ್ರಮೇಯವಲ್ಲ. ಆದ್ದರಿಂದ ಶ್ರುತಿಯಿಂದ ಆತ್ಮಸ್ವರೂಪದ ಜ್ಞಾನವಾದ ಬಳಿಕ ಕನಸಿನ ಪ್ರಮಾಣವು ಎಚ್ಚರದಲ್ಲಿ ಅಪ್ರಮಾಣವಾಗುವಂತೆ, ಶ್ರುತಿಯು ತಾನೂ ಅಪ್ರಮಾಣವೇ ಆಗಿಬಿಡುತ್ತದೆ. ಹೀಗೆ ವೇದಾಂತಜ್ಞಾನವು ಪ್ರಮಾಣಗಳ ಪ್ರಮಾಣತ್ವವನ್ನು ಆತ್ಯಂತಿಕವಾಗಿ ಬಾಧಿಸುವದರಿಂದ ಇದಕ್ಕೆ **ಅಂತ್ಯ ಪ್ರಮಾಣ**ವೆಂದು ಹೆಸರು. ಅಂತ್ಯಪ್ರಮಾಣ ತನ್ನ ಪ್ರಮಾಣತ್ವವನ್ನೂ ಅಲ್ಲಗಳೆಯುವ ದಾದರೂ ಪ್ರಮಾಣವ್ಯವಹಾರವು ಬಾಧಿತವಾಗುವದರೊಳಗೆ ತನ್ನ ಕೆಲಸವನ್ನು ಮಾಡಿಬಿಟ್ಟಿರುತ್ತದೆಯಾದ್ದರಿಂದ ಆಮೇಲೆ ಅದು ಅಪ್ರಮಾಣವಾದರೂ ಚಿಂತೆ ಯಿಲ್ಲ. ಒಬ್ಬನು ಕನಸಿನಲ್ಲಿ ಇದೆಲ್ಲವೂ ನಿನ್ನ ಸ್ವಪ್ನವು ಎಂದು ಗರ್ಜಿಸಿದರೆ, ಆ

ಗರ್ಜನೆಯಿಂದ ನಮಗೆ ಎಚ್ಚರವಾಗುವಾಗ ಅವನ ಮಾತೂ ಕನಸಿನೊಳಗೇ ಸೇರಿರುವದರಿಂದ ಮಿಥ್ಯೆಯೆಂದಾದರೂ ಅವನ ಆ ವಾಕ್ಯವು ಸ್ವಪ್ನವು ಸ್ವಪ್ನವೆಂದು ತಿಳಿಸಿಕೊಡುವಮಟ್ಟಿಗೆ ಪ್ರಮಾಣವೇ ಆಗಿರುವದಲ್ಲವೆ? ಇದರಂತೆಯೇ ಶ್ರುತಿ ಪ್ರಾಮಾಣ್ಯವನ್ನೂ ಅರಿಯಬೇಕು. ಶ್ರುತಿಯಿಂದ ಅದ್ವೈತಜ್ಞಾನವಾದ ಬಳಿಕ ಹೇಗೆ? ಏನು? ಏಕೆ?- ಮುಂತಾದ ಆಕಾಂಕ್ಷೆಯು ಹುಟ್ಟುವ ಹಾಗಿರುವದಿಲ್ಲವಾದ್ದರಿಂದ ಆ ಜ್ಞಾನವು ಯಥಾರ್ಥವೋ, ಅಲ್ಲವೋ?-ಎಂಬ ಶಂಕೆಯಾಗಲಿ ಅದು ಅಪ್ರಮಾಣ ವೆಂದು ತಿಳಿಸುವ ಬಾಧಕಜ್ಞಾನವಾಗಲಿ ಅದು ವ್ಯರ್ಥವೆಂಬ ಅನಾದರವಾಗಲಿ ಆಗ ಇರುವದಿಲ್ಲ.

(೧) ನ ಹಿ ಆತ್ಮಸ್ವರೂಪಾಧಿಗಮೇ ಸತಿ ಪುನಃ ಪ್ರಮಾಣಪ್ರಮೇಯವ್ಯವಹಾರಃ ಸಂಭವತಿ॥ ಪ್ರಮಾತೃತ್ವಂ ಹಿ ಆತ್ಮನೋ ನಿವರ್ತಯತಿ ಅನ್ತ್ಯಂ ಪ್ರಮಾಣಮ್। ನಿವರ್ತಯದೇವ ಚ ಅಪ್ರಮಾಣೀ ಭವತಿ ಸ್ವಪ್ನಕಾಲಪ್ರಮಾಣಮಿವ ಪ್ರಬೋಧೇ। ಲೋಕೇ ಚ ವಸ್ತ್ವಧಿಗಮೇ ಪ್ರವೃತ್ತಿ ಹೇತುತ್ವಾದರ್ಶನಾತ್ ಪ್ರಮಾಣಸ್ಯ ॥ -ಗೀ. ಭಾ. ೨-೬೯-೧೩೫

(೨) ಅಪಿ ಚ ಅನ್ತ್ಯಮಿದಂ ಪ್ರಮಾಣಮ್ ಆತ್ಮೈಕತ್ವಸ್ಯ ಪ್ರತಿಪಾದಕಮ್, ನಾತಃ ಪರಂ ಕಿಂಚಿತ್ ಆಕಾಙ್ಕ್ಷ್ಯಮ್ ಅಸ್ತಿ । ಯಥಾ ಹಿ ಲೋಕೇ 'ಯಜೇತ' ಇತಿ ಉಕ್ತೇ ಕಿಮ್, ಕೇನ, ಕಥಮ್?- ಇತ್ಯಾಕಾಙ್ಕ್ಷ್ಯತೇ, ನೈವಂ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ' ಇತ್ಯುಕ್ತೇ ಕಿಂಚಿತ್ ಅನ್ಯತ್ ಆಕಾಙ್ಕ್ಷ್ಯಮಸ್ತಿ। ಸರ್ವಾತ್ಮೈಕತ್ವವಿಷಯತ್ವಾವಗತೇಃ, ಸತಿ ಹಿ ಅನ್ಯಸ್ಮಿನ್ ಅವಶಿಷ್ಯಮಾಣೇ ಅರ್ಥೇ ಆಕಾಙ್ಕ್ಷಾ ಸ್ಯಾತ್। ನ ತು ಆತ್ಮೈಕತ್ವವ್ಯತಿರೇಕೇಣ ಅವಶಿಷ್ಯಮಾಣೋಽನ್ಯೋಽರ್ಥೋಽಸ್ತಿ । ಯ ಆಕಾಙ್ಕ್ಷ್ಯೇತ । ನ ಚೇಯಮ್ ಅವಗತಿಃ ನೋತ್ಪದ್ಯತೇ ಇತಿ ಶಕ್ಯಂ ವಕ್ತುಮ್। "ತದ್ಧಾಸ್ಯ ವಿಜಜ್ಞೌ" (ಛಾಂ.೬-೧೬-೩) ಇತ್ಯಾದಿಶ್ರುತಿಭ್ಯಃ ಅವಗತಿಸಾಧನಾನಾಂ ಚ ಶ್ರವಣಾದೀನಾಂ ವೇದಾನುವಚನಾದೀನಾಂ ಚ ವಿಧಾನಾತ್। ನ ಚೇಯಮವಗತಿಃ ಅನರ್ಥಿಕಾ, ಭ್ರಾನ್ತಿರ್ವಾ ಇತಿ ಶಕ್ಯಂ ವಕ್ತುಮ್। ಅವಿದ್ಯಾನಿವೃತ್ತಿಫಲದರ್ಶನಾತ್, ಬಾಧಕಜ್ಞಾನಾನ್ತ-ರಾಭಾವಾಚ್ಚ॥ -ಸೂ.ಭಾ. ೨-೧-೧೪-೪೩೮

೫೨. ಆತ್ಮನು ಶಾಸ್ತ್ರಪ್ರಮಾಣದಿಂದಲೇ ತಿಳಿಯಬರುವನೆಂದು ವೇದಾಂತಿಗಳು ಹೇಳಿದರೂ ಅವನು ಘಟಾದಿಗಳಂತೆ ಪ್ರಮೇಯನೆಂದು ತಿಳಿಯಬಾರದು. ಏಕೆಂದರೆ ಪ್ರಮಾಣಗಳಿಂದ ಆತ್ಮನೆಂಬ ಪ್ರಮೇಯವು ಸಿದ್ಧ ವಾಗುವದಾದರೆ ಅದೂ ಮಿಕ್ಕ ಪ್ರಮೇಯಗಳಂತೆ ಅವಿದ್ಯಾಕಲ್ಪಿತವೆಂದಾಗುವದರಿಂದ ಆತ್ಮಾನಾತ್ಮಗಳೆರಡೂ ಬರಿಯ ತೋರಿಕೆ, ನಿಸ್ಸಾರ-ಎನ್ನುವ ಶೂನ್ಯವಾದವೇ ಕೊನೆಯ ಸಿದ್ಧಾಂತವಾಗುವದು. ಆದ್ದರಿಂದಲೇ ಶ್ರುತಿಸ್ಮೃತಿಗಳಲ್ಲಿ **ಆತ್ಮನು ಅಪ್ರಮೇಯ**ನೆಂದು ಹೇಳಿರುತ್ತದೆ. ಶಾಸ್ತ್ರವು ಆತ್ಮಸ್ವರೂಪವನ್ನು ತಿಳಿಸುವದಕ್ಕೆ ಆಗುವದಿಲ್ಲವೆಂಬುದಕ್ಕೆ ಅವನು ನಿರ್ವಿಶೇಷನಾಗಿರುತ್ತಾನೆಂಬುದು ಒಂದು ಕಾರಣ, ಇದನ್ನು ಆಗಲೆ(೪೦) ನಾವು ತಿಳಿಸಿರುತ್ತೇವೆ; ಆತ್ಮನು ತಿಳಿಯತಕ್ಕವನ ಒಳಗಿರುವ ಸ್ವರೂಪವೇ ಆಗಿರು

ತ್ತಾನೆಂಬುದು ಅವನು ಪ್ರಮೇಯನಲ್ಲವೆಂಬುದಕ್ಕೆ ಇನ್ನೊಂದು ಕಾರಣವು. ಪ್ರಮಾಣವು ಪ್ರಮೇಯದ ವಿಷಯದಲ್ಲಿ ತೊಡಗುತ್ತದೆ, ಪ್ರಮಾತೃವಿನ ವಿಷಯದಲ್ಲಲ್ಲ.

(೧) ಏತದಪ್ರಮಯಂ ಧ್ರುವಮ್॥ - ಬೃ. ೪-೪-೨೦

(೨) ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ - ಗೀ. ಭಾ ೨-೧೮-೩೪

(೩) ಸಿದ್ಧೇ ಹಿ ಆತ್ಮನಿ ಪ್ರಮಾತರಿ ಪ್ರಮಿತ್ಸೋಃ ಪ್ರಮಾಣಾನ್ವೇಷಣಾ ಭವತಿ। ನ ಹಿ ಪೂರ್ವಮ್ 'ಇತ್ಥಮಹಮ್' ಇತಿ ಆತ್ಮಾನಂ ಪ್ರಮಾಯ ಪಶ್ಚಾತ್ ಪ್ರಮೇಯಪರಿಚ್ಛೇದಾಯ ಪ್ರವರ್ತತೇ॥ - ಗೀ. ೨-೧೮-೩೪.

೫೩. ಆತ್ಮನು ಅಪ್ರಮೇಯನಾದರೆ ಶ್ರುತಿಯು ಹೇಗೆ ಪ್ರಮಾಣವಾದೀತು? ಪ್ರಮಾಣಕ್ಕೆ ಪ್ರಮೇಯದಲ್ಲಿ ವ್ಯಾಪಾರವಿರಬೇಕಷ್ಟೆ? ಇದಲ್ಲದೆ ಆತ್ಮನು ಅಪ್ರಮೇಯನಾದರೆ ಪ್ರಮಾಣವಿಲ್ಲದ್ದರಿಂದ ಆತ್ಮನು ಇಲ್ಲವೆಂದೇ ಯಾರಾದರೂ ವಾದಿಸಬಹುದಾಗುತ್ತದೆ. ಶಾಸ್ತ್ರವೇ ಆತ್ಮನಿಗೆ ಪ್ರಮಾಣವೆಂದೂ ಹೇಳಿ ಆತ್ಮನು ಅಪ್ರಮೇಯನೆಂದೂ ಹೇಳುವದು ವ್ಯಾಹತವು, ಎಂದರೆ ತನಗೆತಾನೇ ವಿರುದ್ಧವಾದ ಮಾತೂ, ಆಗಿರುತ್ತದೆ -ಎಂದು ಆತ್ಮಸ್ವಭಾವವನ್ನೂ ಪ್ರಮಾಣಸ್ವಭಾವವನ್ನೂ ಅರಿಯದವರು ಶಂಕಿಸುತ್ತಾರೆ.

ಮೊದಲನೆಯದಾಗಿ ಶ್ರುತಿಯು ಪ್ರಮಾಣವೆನಿಸಿರುವದು ಬ್ರಹ್ಮವನ್ನು ಇಂಥವನೆಂದು ವಿಷಯೀಕರಿಸುವದರಿಂದಲ್ಲ. ಮತ್ತೇನೆಂದರೆ ಜಿಜ್ಞಾಸುವಿನ ಪ್ರತ್ಯಗಾತ್ಮನೇ ಆದ್ದರಿಂದ, ಅದು ಆತ್ಮನು ವಿಷಯವಲ್ಲ-ಎಂದು ತಿಳಿಸಿ ಅರಿಯುವವನು, ಅರಿಯಲ್ಪಡತಕ್ಕದ್ದು, ಅರಿವು-ಮುಂತಾದ ಭೇದವನ್ನು ತೆಗೆದುಹಾಕುತ್ತದೆ. ಆತ್ಮನ ಧರ್ಮವಲ್ಲದ್ದನ್ನು ತೆಗೆದುಹಾಕಿ ಆತ್ಮಸ್ವರೂಪವನ್ನುಳಿಸುವದರಿಂದ ಮಾತ್ರವೇ ಶ್ರುತಿಯು ಪ್ರಮಾಣವು. **'ಸಿದ್ಧಂ ತು ನಿವರ್ತಕತ್ವಾತ್'** (ಅದರದ್ದಲ್ಲದ ಧರ್ಮವನ್ನು ಕಳೆಯುವದರಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆ) ಎಂಬ **ದ್ರವಿಡಾಚಾರ್ಯ**ರ ಸೂತ್ರಕ್ಕೆ ಇದೇ ಅಭಿಪ್ರಾಯ. ಶ್ರುತಿಯು ಅಂತ್ಯಪ್ರಮಾಣವೆಂದೂ ಅದರಿಂದಾಗುವ ಜ್ಞಾನವಾದ ಬಳಿಕ ಪ್ರಮಾಣಾದಿವ್ಯವಹಾರವೇ ಬಾಧಿತವಾಗಿಬಿಡುವದೆಂದೂ ಹಿಂದೆ (೫೧) ಹೇಳಿರುತ್ತೇವೆ.

ಇನ್ನು ಆತ್ಮನು ಆಗಮದಿಂದ ಸಿದ್ಧನಾಗದೆ ಇದ್ದರೆ, ಆತ್ಮನೇ ಅಸಿದ್ಧನೆಂದಾಗುತ್ತದೆಯಲ್ಲ! - ಎಂಬ ಶಂಕೆಗಂತೂ ಕಾರಣವೇ ಇಲ್ಲ. ಏಕೆಂದರೆ ಆಕಾಶವೇ ಮುಂತಾದ ಪದಾರ್ಥಗಳು ಪ್ರಮಾಣದ ಬಯಕೆಯಿಲ್ಲದೆ ತಾವೇ ಸಿದ್ಧವಾಗು

ವಂತಿಲ್ಲವಾದ್ದರಿಂದ ಅವುಗಳಿಗೆ ಪ್ರತ್ಯಕ್ಷಾದಿಪ್ರಮಾಣಗಳು ಬೇಕಾಗಿರುತ್ತವೆ. ಆದರೆ ಆತ್ಮನು ಸ್ವತಃಸಿದ್ಧನಾಗಿರುತ್ತಾನೆ, ಪ್ರಮಾಣಗಳ ಸಹಾಯದಿಂದ ಸಿದ್ಧನಾಗಬೇಕಾದದ್ದಿಲ್ಲ. ಆತ್ಮನೆಂದರೆ ಪ್ರಮಾತೃವಿನ ಸ್ವರೂಪವು; ಪ್ರಮಾತೃವಿಗೆ ಪ್ರಮೇಯದ ವಿಷಯಕ್ಕೆ ಪ್ರಮಾಣವು ಬೇಕಾದೀತೇ ಹೊರತು ತನ್ನ ವಿಷಯಕ್ಕೆ ಬೇಕಾಗುವದಿಲ್ಲ. ಪ್ರಮಾಣಾದಿವ್ಯವಹಾರಕ್ಕೆ ಆಶ್ರಯನಾಗಿರುವದರಿಂದ ಅವನು ಆ ವ್ಯವಹಾರಕ್ಕಿಂತ ಮೊದಲೇ ಸಿದ್ಧನಾಗಿರುತ್ತಾನೆ. ವಸ್ತುವು ಪ್ರಮಾಣದಿಂದ ಸಿದ್ಧವಾದರೇ ಸಿದ್ಧವಾದಂತೆ, ತಾನೇ ಸಿದ್ಧವಾಗಿದ್ದರೆ ಅಲ್ಲ-ಎಂದು ಹೇಳುವದಕ್ಕಾಗಲಾರದು. **ಸ್ವತಃಸಿದ್ಧನಾಗಿರುವ, ತನ್ನ ಸ್ವರೂಪವೇ ಆಗಿರುವ, ಆತ್ಮನನ್ನು ನಿರಾಕರಿಸುವದಕ್ಕೆ ಯಾರಿಂದಲೂ ಆಗಲಾರದು.** ಬೆಂಕಿಯು ಪ್ರಯತ್ನಪಟ್ಟರೂ ತನ್ನ ಸ್ವರೂಪವೇ ಆಗಿರುವ ಬಿಸಿಯನ್ನು ಹೇಗೆ ತಪ್ಪಿಸಿಕೊಳ್ಳಲಾರದೋ ಹಾಗೆಯೇ ಯಾವನೊಬ್ಬನೂ ತನ್ನ ಆತ್ಮರೂಪವನ್ನು ಕೊಡವಿಕೊಳ್ಳಲಾರನು.

(೧) ನ ಹಿ ಶಾಸ್ತ್ರಮ್ ಇದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಿಪಾದಯಿಷತಿ, ಕಿಂ ತರ್ಹಿ, ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿಪಾದಯತ್ ಅವಿದ್ಯಾಕಲ್ಪಿತಂ ವೇದ್ಯವೇದಿತೃವೇದನಾದಿಭೇದಮ್ ಅಪನಯತಿ॥ -ಸೂ. ಭಾ. ೧-೧-೪-೪೭

(೨) ನನು ಆಗಮೇನ ಆತ್ಮಾ ಪರಿಚ್ಛಿದ್ಯತೇ ಪ್ರತ್ಯಕ್ಷಾದಿನಾ ಚ ಪೂರ್ವಮ್ । ನ । ಆತ್ಮನಃ ಸ್ವತಃಸಿದ್ಧತ್ವಾತ್। ಸಿದ್ಧೇ ಹಿ ಆತ್ಮನಿ ಪ್ರಮಾತರಿ ಪ್ರಮಿತ್ಸೋಃ ಪ್ರಮಾಣಾನ್ವೇಷಣಾ ಭವತಿ। ನ ಹಿ ಪೂರ್ವಮ್ ಇತ್ಥಮಹಮ್ ಇತಿ ಆತ್ಮಾನಂ ಪ್ರಮಾಯ ಪಶ್ಚಾತ್ ಪ್ರಮೇಯಪರಿಚ್ಛೇದಾಯ ಪ್ರವರ್ತತೇ। ನ ಹಿ ಆತ್ಮಾ ನಾಮ ಕಸ್ಯಚಿತ್ ಅಪ್ರಸಿದ್ಧೋ ಭವತಿ। ಶಾಸ್ತ್ರಂ ತು ಅನ್ತ್ಯಂ ಪ್ರಮಾಣಮ್ ಅತದ್ಧರ್ಮಾಧ್ಯಾರೋಪಣಮಾತ್ರನಿವರ್ತಕತ್ವೇನ ಪ್ರಾಮಾಣ್ಯಮ್ ಆತ್ಮನಃ ಪ್ರತಿಪದ್ಯತೇ, ನ ತು ಅಜ್ಞಾತಾರ್ಥಜ್ಞಾಪಕತ್ವೇನ । ತಥಾ ಚ ಶ್ರುತಿಃ ''ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಃ॥'' (ಬೃ. ೩-೪-೧) ಇತಿ॥ -ಗೀ. ಭಾ. ೨-೧೮-೩೪

(೩) ನ ಹಿ ಆತ್ಮಾ ಆಗನ್ತುಕಃ ಕಸ್ಯಚಿತ್। ಸ್ವಯಂಸಿದ್ಧತ್ವಾತ್। ನ ಹಿ ಆತ್ಮಾ ಆತ್ಮನಃ ಪ್ರಮಾಣಮಪೇಕ್ಷ್ಯ ಸಿಧ್ಯತಿ। ತಸ್ಯ ಹಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಅಪ್ರಸಿದ್ಧಪ್ರಮೇಯಸಿದ್ಧಯೇ ಉಪಾದೀಯನ್ತೇ। ನ ಹಿ ಆಕಾಶಾದಯಃ ಪದಾರ್ಥಾಃ ಪ್ರಮಾಣನಿರಪೇಕ್ಷಾಃ ಸ್ವಯಂಸಿದ್ಧಾಃ ಕೇನಚಿತ್ ಅಭ್ಯುಪಗಮ್ಯನ್ತೇ । ಆತ್ಮಾ ತು ಪ್ರಮಾಣಾದಿವ್ಯವಹಾರಾಶ್ರಯತ್ವಾತ್ ಪ್ರಾಗೇವ ಪ್ರಮಾಣಾದಿವ್ಯವಹಾರಾತ್ ಸಿಧ್ಯತಿ। ನ ಚ ಈದೃಶಸ್ಯ ನಿರಾಕರಣಂ ಸಂಭವತಿ । ಆಗನ್ತುಕಂ ಹಿ ವಸ್ತು ನಿರಾಕ್ರಿಯತೇ, ನ ಸ್ವರೂಪಮ್। ಯ ಏವ ಹಿ ನಿರಾಕರ್ತಾ ತದೇವ ತಸ್ಯ ಸ್ವರೂಪಮ್। ನ ಹಿ ಅಗ್ನೇರೌಷ್ಣ್ಯಮ್ ಅಗ್ನಿನಾ ನಿರಾಕ್ರಿಯತೇ॥ -ಸೂ. ಭಾ. ೨-೩-೭-೯೯

(೪) ''ಸಿದ್ಧಂ ತು ನಿವರ್ತಕತ್ವಾತ್'' ಇತ್ಯಾಗಮವಿದಾಂ ಸೂತ್ರಮ್॥

-ಮಾಂ. ಕಾ. ಭಾ. ೨-೩೨-೧೧೩

೫೪. ಅರಿಯದ್ದನ್ನು ತಿಳಿಸಿಕೊಡುವದೇ ಪ್ರಮಾಣದ ಕೃತ್ಯವು ಎಂದು ಭಾವಿಸುವವರಿಗೆ ಅದ್ವೈತಶ್ರುತಿಯು ಪ್ರಮಾಣವೆನ್ನುವದಕ್ಕೆ ಅರ್ಹವಾಗಲಾರದು. ಏಕೆಂದರೆ ಶ್ರುತಿಯು ಅದ್ವೈತತತ್ತ್ವವನ್ನು ನೇರಾಗಿ ತಿಳಿಸುವದಿಲ್ಲ; ಅದರದ್ದಲ್ಲದ ಧರ್ಮವನ್ನು ಕಳೆಯುತ್ತದೆ, ಅಷ್ಟೆ. ಆದ್ದರಿಂದ ಅವರ ಅಭಿಪ್ರಾಯದಲ್ಲಿ ಪ್ರತ್ಯಕ್ಷಾದಿಗಳಿಗೂ ಶ್ರುತಿಗೂ ಬಹಳ ತಾರತಮ್ಯವಿದೆ ಎಂದಾಗುವದು.

ಆದರೆ ಒಳಹೊಕ್ಕು ನೋಡಿದರೆ ಯಾವ ಪ್ರಮಾಣವೇ ಆಗಲಿ ತನ್ನ ಪ್ರಮೇಯದ ಅಜ್ಞಾನವನ್ನು ಕಳೆಯುವದೇ ಹೊರತು ಆ ಪ್ರಮೇಯದಲ್ಲಿ ಯಾವದಾದರೊಂದು ವಿಶೇಷವನ್ನೂ ಉಂಟುಮಾಡುವದಿಲ್ಲ. ಕಟ್ಟಿಗೆಯನ್ನು ಒಡೆದು ಎರಡು ತುಂಡು ಮಾಡು ಎಂದರೆ ತುಂಡುಗಳ ಸಂಬಂಧವನ್ನು ಬಿಡಿಸುವದೇ ಅಲ್ಲದೆ ತುಂಡುಗಳನ್ನು ಮಾಡುವದೆಂಬ ಮತ್ತೊಂದು ಕ್ರಿಯೆ ಇದೆ ಎಂದು ಯಾರೂ ಭಾವಿಸುವದಿಲ್ಲ. ಕಡಿಯುವದೆಂದರೇ ತುಂಡುಮಾಡುವದು ಅಲ್ಲವೆ ? ಇದರಂತೆ ಪ್ರಮಾಣವು ವಿಷಯವನ್ನು ತಿಳಿಸುವದು ಎಂದರೆ ಅದರ ವಿಷಯದಲ್ಲಿರುವ ಅಜ್ಞಾನವನ್ನು ತೊಲಗಿಸುವದೇ ಹೊರತು ಅದರ ಜೊತೆಗೆ 'ತಿಳಿಸುವದು' ಎಂಬ ಮತ್ತೊಂದು ಕ್ರಿಯೆಯನ್ನೇನೂ ಮಾಡುವದಿಲ್ಲ. ಹೀಗೆ ನೋಡಿದರೆ ಎಲ್ಲಾ ಪ್ರಮಾಣಗಳಿಗೂ ಅಜ್ಞಾನವನ್ನು ತೊಲಗಿಸುವದೇ ಕೆಲಸವು ; ಮಿಕ್ಕ ಪ್ರಮಾಣಗಳಂತೆ ಶ್ರುತಿಯೂ ಆತ್ಮವಿಷಯಕವಾದ ಅಜ್ಞಾನವನ್ನು ತೊಲಗಿಸುತ್ತದೆಯಾದ್ದರಿಂದ ಅದನ್ನು ಪ್ರಮಾಣವೆಂದು ಎಣಿಸುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

(೧) ಯೇಷಾಂ ಪುನಃ ತಮೋಽಪನಯನವ್ಯತಿರೇಕೇಣ ಘಟಾಧಿಗಮೇ ಪ್ರಮಾಣಂ ವ್ಯಾಪ್ರಿಯತೇ ತೇಷಾಂ ಛೇದ್ಯಾವಯವಸಂಬನ್ಧವಿಯೋಗವ್ಯತಿರೇಕೇಣ ಅನ್ಯತರಾವಯವೇಽಪಿ ಛಿದಿರ್ವ್ಯಾಪ್ರಿಯತೇ ಇತ್ಯುಕ್ತಂ ಸ್ಯಾತ್। ಯದಾ ಪುನಃ ಘಟತಮಸೋರ್ವಿವೇಕಕರಣೇ ಪ್ರವೃತ್ತಂ ಪ್ರಮಾಣಮ್ ಅನುಪಾದಿತ್ಸಿತತಮೋನಿವೃತ್ತಿಫಲಾವಸಾನಮ್ ಛಿದಿರಿವ ಛೇದ್ಯಾವಯವಸಂಬನ್ಧವಿವೇಕಕರಣೇ ಪ್ರವೃತ್ತಾ ತದವಯವದ್ವೈಧೀಭಾವಫಲಾವಸಾನಾ, ತದಾ ನಾನ್ತರೀಯಕಂ ಘಟವಿಜ್ಞಾನಮ್ ನ ತತ್ಪ್ರಮಾಣಫಲಮ್॥ -ಮಾಂ. ಭಾ. ೭-೩೯

೫೫. ಆತ್ಮನು ಪ್ರಮಾಣಕ್ಕೆ ವಿಷಯನೆಂದೇ ಅನೇಕ ದರ್ಶನಕಾರರು ಒಪ್ಪಿರುತ್ತಾರೆ. ಅವರಲ್ಲಿ ಆತ್ಮನು ಮಾನಸಪ್ರತ್ಯಕ್ಷಕ್ಕೆ ಗೋಚರನಾಗಿರುತ್ತಾನೆಂದು ಕೆಲವರೂ, ಅನುಮಾನದಿಂದ ತಿಳಿಯಬರುತ್ತಾನೆಂದು ಕೆಲವರೂ ಅಭಿಪ್ರಾಯಪಟ್ಟಿರುತ್ತಾರೆ. ಅವರ ಮತದಲ್ಲಿರುವ ದೋಷವನ್ನು ತಿಳಿದುಕೊಳ್ಳುವದರಿಂದ **ಆತ್ಮನು ಅಪ್ರಮೇಯ**ನೆಂಬ ವೇದಾಂತಸಿದ್ಧಾಂತದ ಹೆಚ್ಚುಗಾರಿಕೆಯು ಸ್ಫುಟವಾಗುತ್ತದೆ. ಆದ್ದರಿಂದ ಇದನ್ನು ಸ್ವಲ್ಪ ಇಲ್ಲಿ ವಿವರಿಸುವೆವು.

ಆತ್ಮನು ಪ್ರಮಾತೃವಿನ ಪರಮಾರ್ಥಸ್ವರೂಪವೇ ಆಗಿರುತ್ತಾನೆ; ಪ್ರಮಾತೃತ್ವವೂ ಅವನಲ್ಲಿ ಅಧ್ಯಸ್ತವಾಗಿರುತ್ತದೆ ಎಂದು ಹಿಂದೆ (೨೮,೫೧) ಹೇಳಿರುತ್ತೇವೆ. ಆದರೆ ಆತ್ಮನು ಪ್ರತ್ಯಕ್ಷಾದಿಗೋಚರನೆನ್ನುವವರೂ ಅವನು ಪ್ರಮಾತೃವೆಂದು ಅವಶ್ಯವಾಗಿ ಒಪ್ಪಬೇಕಷ್ಟೆ. ಹಾಗೆಂದು ಒಪ್ಪಿದಮೇಲೂ ಪ್ರಮಾತೃವಾದ ಆತ್ಮನನ್ನು ಪ್ರಮಾಣದಿಂದ ಅರಿಯುತ್ತೇವೆನ್ನುವುದು ಆತ್ಮನು ಅಮತನು, ಅವಿಜ್ಞಾತನು, ಅವನನ್ನು ಅರಿಯುವುದಕ್ಕೆ ಯಾವ ಪ್ರಮಾಣವೂ ಇಲ್ಲ - ಎಂದು ಸ್ಪಷ್ಟವಾಗಿ ಹೇಳುತ್ತಿರುವ ಶ್ರುತಿಗೆ ವಿರುದ್ಧವಾಗುವದು. ಇದಲ್ಲದೆ ಪ್ರಮಾತೃವನ್ನು ಅರಿಯಬೇಕೆಂಬ ಇಚ್ಛೆಯುಳ್ಳ ಪ್ರಮಾತೃವು ತಾನಾಗಲಿ ಇನ್ನೊಬ್ಬನಾಗಲಿ ಇರುವ ಸಂಭವವಿಲ್ಲ. ತಾನೇ ಆದರೆ ತನ್ನ ಪ್ರಮಿತ್ಸೆಯು -ಅರಿಯಬೇಕೆಂಬ ಇಚ್ಛೆಯು -ಪ್ರಮೇಯವಿಷಯವಾಗಿರುತ್ತದೆಯೇ ಹೊರತು ತನ್ನ ವಿಷಯವಾಗಿರಲಾರದು. ಮತ್ತೊಬ್ಬನಾದರೆ ಅವನನ್ನು ಅರಿಯವದಕ್ಕೆ ಮತ್ತೊಬ್ಬ ಪ್ರಮಾತೃವೂ ಅವನಿಗೆ ಇವನನ್ನರಿಯಬೇಕೆಂಬ ಇಚ್ಛೆಯೂ ಇರುವವೆಂದು ಕಲ್ಪಿಸಬೇಕಾಗಿಬರುವದರಿಂದ ಅನವಸ್ಥಾದೋಷವು ಬರುವದು. ಪ್ರಮಾತೃವಿಗೆ ಪ್ರಮೇಯವನ್ನು ಅರಿಯಬೇಕೆಂಬ ಇಚ್ಛೆ, ಪ್ರಮೇಯದ ಸ್ಮೃತಿ, ಅರಿಯುವ ಪ್ರಯತ್ನ, ಪ್ರಮಾಣಜ್ಞಾನದ ಉತ್ಪತ್ತಿ -ಇವುಗಳಾದಮೇಲಲ್ಲವೆ, ಪ್ರಮೇಯವು ಸಿದ್ಧವಾಗಬೇಕು? ಆದರೆ ಆತ್ಮನಿಗೆ ತನ್ನ ವಿಷಯದಲ್ಲಿ ಇಂಥ ಇಚ್ಛಾಸ್ಮೃತ್ಯಾದಿಗಳುಂಟಾದ ಬಳಿಕ ಅವನು ತನಗೆತಾನು ಸಿದ್ಧನಾಗುವನೆಂದು ಕಲ್ಪಿಸುವದಕ್ಕೆ ಆಗುವಹಾಗಿಲ್ಲ; ಮತ್ತೊಬ್ಬ ಪ್ರಮಾತೃವು ತನ್ನನ್ನು ಅರಿಯಬಹುದೆಂದು ಕಲ್ಪಿಸಿದರೆ ಅವನನ್ನು ಅರಿಯುವ ಇನ್ನೊಬ್ಬ ಪ್ರಮಾತೃವನ್ನೂ ಅವನ ಇಚ್ಛಾಸ್ಮೃತ್ಯಾದಿಗಳನ್ನೂ ಕಲ್ಪಿಸಬೇಕಾಗುವದರಿಂದ ಮೇಲೆ ಹೇಳಿದಂತೆಯೇ ಅನವಸ್ಥಾದೋಷವು ಬರುವದು.

ಹೀಗೆ ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ಆತ್ಮನನ್ನು ವಿಷಯೀಕರಿಸಿ ಅರಿಯಬಹುದೆಂದು ಕಲ್ಪಿಸುವದು ಯುಕ್ತ್ಯನುಭವಗಳಿಗೆ ವಿರುದ್ಧವಾಗಿರುತ್ತದೆ. ತನ್ನನ್ನು ತಾನು ಅರಿಯವನೆಂದರೆ ಅರಿಯುವ ತಾನು, ಅರಿಯಲ್ಪಡುವ ತಾನು- ಎಂದು ಇಬ್ಭಾಗವಾಗಿ, ಬಿದಿರುಗಳುವನ್ನು ಒಡೆದು ಎರಡು ದೆಬ್ಬೆಗಳನ್ನು ಮಾಡುವಂತೆ, ಆತ್ಮನನ್ನು ತುಂಡುಮಾಡಬೇಕಾಗಿಬರುವದು; ಅಥವಾ ಒಬ್ಬರನ್ನೊಬ್ಬರು ನೋಡುವ ಅನೇಕ ಪ್ರಮಾತೃಗಳನ್ನು ಕಲ್ಪಿಸಬೇಕಾಗುವದು. ಇದಲ್ಲದೆ ಒಂದು ದೀಪವನ್ನು ಇನ್ನೊಂದು ದೀಪದ ಬೆಳಕಿನಿಂದ ನೋಡುವದೆಂಬುದು ಹೇಗೆ ಅಪಹಾಸ್ಯವೋ ಹಾಗೆ ಒಬ್ಬ ಆತ್ಮನನ್ನು ಇನ್ನೊಬ್ಬನು ಅರಿಯುವನೆಂದು ಕಲ್ಪಿಸುವದೂ ಅಪಹಾಸ್ಯವು. ಏಕೆಂದರೆ ಇಬ್ಬರಿಗೂ ಜ್ಞಾನಸ್ವರೂಪವು ಅಥವಾ ಜ್ಞಾನ

ಧರ್ಮವು ಸಮಾನವಾಗಿರುವಾಗ ಒಬ್ಬನಿಗೊಬ್ಬನ ಅಪೇಕ್ಷೆ ಏತಕ್ಕೆ ಬಂದೀತು? ಆದ್ದರಿಂದ ಆತ್ಮನು ಅಪ್ರಮೇಯನೆಂಬ ವೇದಾಂತಸಿದ್ಧಾಂತವೇ ಸರಿಯಾದದ್ದು.

(೧) ವಿಪ್ರತಿಷಿದ್ಧಂ ಜ್ಞಾಯತೇ ಯಃ ಶ್ರವಣಾದಿಕರ್ತೃತ್ವೇನ, 'ಅಮತೋ ಮನ್ತಾ ಅವಿಜ್ಞಾತೋ ವಿಜ್ಞಾತಾ' (ಬೃ. ೩-೭-೨೩) ಇತಿ ಚ । ತಥಾ ''ನ ಮತೇರ್ಮನ್ತಾರಂ ಮನ್ವೀಥಾಃ, ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ'' (ಬೃ. ೩-೪-೨) ಇತ್ಯಾದಿ ಚ ॥ -ಐ.ಭಾ.೧-೩-೬೩

(೨) ಪ್ರಮಾತುಶ್ಚೇತ್ ಪ್ರಮಾಣಾಪೇಕ್ಷಾ ಸಿದ್ಧಿಃ, ಕಸ್ಯ ಪ್ರಮಿತ್ಸಾ ಸ್ಯಾತ್? ಯಸ್ಯ ಪ್ರಮಿತ್ಸಾ ಸ ಏವ ಪ್ರಮಾತಾ ಅಭ್ಯುಪಗಮ್ಯತೇ। ತದೀಯಾ ಚ ಪ್ರಮಿತ್ಸಾ ಪ್ರಮೇಯವಿಷಯೈವ, ನ ಪ್ರಮಾತೃವಿಷಯಾ। ಪ್ರಮಾತೃವಿಷಯತ್ವೇ ಅನವಸ್ಥಾಪ್ರಸಙ್ಗಾತ್ ಪ್ರಮಾತುಃ ತದಿಚ್ಛಾಯಾಶ್ಚ। ತಸ್ಯಾಪ್ಯನ್ಯಃ ಪ್ರಮಾತಾ, 'ತಸ್ಯಾಪ್ಯನ್ಯಃ', ಇತಿ। ಏವಮೇವ ಇಚ್ಛಾಯಾಃ ಪ್ರಮಾತೃವಿಷಯತ್ವೇ। ಪ್ರಮಾತುರಾತ್ಮನಃ ಅವ್ಯವಹಿತತ್ವಾಚ್ಚ ಪ್ರಮೇಯತ್ವಾನುಪಪತ್ತಿಃ। ಲೋಕೇ ಹಿ ಪ್ರಮೇಯಂ ನಾಮ ಪ್ರಮಾತುರಿಚ್ಛಾ ಸ್ಮೃತಿಪ್ರಯತ್ನಪ್ರಮಾಣಜನ್ಮವ್ಯವಹಿತಂ ಸಿಧ್ಯತಿ। ನಾನ್ಯಥಾ ಅವಗತಿಃ ಪ್ರಮೇಯವಿಷಯಾ ದೃಷ್ಟಾ । ನ ಚ ಪ್ರಮಾತುಃ ಪ್ರಮಾತಾ ಸ್ವಸ್ಯ ಸ್ವಯಮೇವ ಕೇನಚಿತ್ ವ್ಯವಹಿತಃ ಕಲ್ಪಯಿತುಂ ಶಕ್ಯಃ ಇಚ್ಛಾದೀನಾಮನ್ಯತಮೇನಾಪಿ। ಸ್ಮೃತಿಶ್ಚ ಸ್ಮರ್ತವ್ಯವಿಷಯಾ, ನ ಸ್ಮರ್ತೃವಿಷಯಾ। ತಥಾ ಇಚ್ಛಾಯಾಃ, ಇಷ್ಟವಿಷಯತ್ವಮೇವಃ, ನ ಇಚ್ಛಾವದ್ವಿಷಯತ್ವಮ್ । ಸ್ಮರ್ತ್ರಿಚ್ಛಾವದ್ವಿಷಯತ್ವೇಽಪಿ ಹಿ ಉಭಯೋಃ, ಅನವಸ್ಥಾ ಪೂರ್ವವತ್ ಅಪರಿಹಾರ್ಯಾ ಸ್ಯಾತ್॥
-ಉಪ. ಗದ್ಯ. ೫೯

(೩) ಸರ್ವಸ್ಯ ಯೋಽಯಂ ಮನ್ತಾ ಸ ಮನ್ತೈವ ಇತಿ ನ ಸ ಮನ್ತವ್ಯಃ ಸ್ಯಾತ್। ನ ಚ ದ್ವಿತೀಯೋ ಮನ್ತುರ್ಮನ್ತಾ ಅಸ್ತಿ। ಯದಾ ಸ ಆತ್ಮನೈವ ಮನ್ತವ್ಯಃ, ತದಾ ಯೇನ ಚ ಮನ್ತವ್ಯಃ ಆತ್ಮಾ ಆತ್ಮನಾ, ಯಶ್ಚ ಮನ್ತವ್ಯ ಆತ್ಮಾ, ತೌ ದ್ವೌ ಪ್ರಸಜ್ಯೇಯಾತಾಮ್। ಏಕ ಏವ ಆತ್ಮಾ ದ್ವಿಧಾ ಮನ್ತೃಮನ್ತವ್ಯತ್ವೇನ ದ್ವಿಶಕಲೀಭವೇತ್ ವಂಶಾದಿವತ್। ಉಭಯಥಾಪಿ ಅನುಪಪತ್ತಿರೇವ। ಯಥಾ ಪ್ರದೀಪಯೋಃ ಪ್ರಕಾಶ್ಯಪ್ರಕಾಶಕತ್ವಾನುಪಪತ್ತಿಃ, ಸಮತ್ವಾತ್, ತದ್ವತ್। ನ ಚ ಮನ್ತುರ್ಮನ್ತವ್ಯೇ ಮನನವ್ಯಾಪಾರಶೂನ್ಯಃ ಕಾಲೋಽಸ್ತಿ ಆತ್ಮಮನನಾಯ । ಯದಾಪಿ ಲಿಙ್ಗೇನ ಆತ್ಮಾನಂ ಮನುತೇ ಮನ್ತಾ, ತದಾಪಿ ಪೂರ್ವವದೇವ ಯೋ ಲಿಙ್ಗೇನ ಮನ್ತವ್ಯಃ ಆತ್ಮಾ ಯಶ್ಚ ತಸ್ಯ ಮನ್ತಾ ತೌ ದ್ವೌ ಪ್ರಸಜ್ಯೇಯಾತಾಮ್। ಏಕ ಏವ ವಾ ದ್ವಿಧಾ ಇತಿ ಪೂರ್ವೋಕ್ತದೋಷಃ॥ -ಐ. ಭಾ. ೧-೩-೬೪

೫೬. ಆತ್ಮನು ಪ್ರಮಾತೃವೊ, ಅಲ್ಲವೊ? ಆತ್ಮನು ಶ್ರುತಿಗೆ ಪ್ರಮೇಯವೊ, ಅಲ್ಲವೊ? ಪ್ರತ್ಯಕ್ಷಾದಿಗಳು ಪ್ರಮಾಣವೊ, ಅಲ್ಲವೊ? ಯಾವದಾದರೊಂದನ್ನು ನಿಶ್ಚಿತವಾಗಿ ಹೇಳಿಬಿಡಿ ಎಂದು ವೇದಾಂತಿಗಳನ್ನು ನಿರ್ಬಂಧಿಸಿ ಕೆಲವರು ಕೇಳುವರು. ಆದರೆ ಎಲ್ಲಾ ವ್ಯವಹಾರವೂ ಅಧ್ಯಾರೋಪದೃಷ್ಟಿಯಿಂದ, ಪರಮಾರ್ಥವಲ್ಲ- ಎಂಬ ಸಿದ್ಧಾಂತವನ್ನು ನೆನಪಿಟ್ಟವರಿಗೆ ಈ ಬಗೆಯ ಪ್ರಶ್ನೆಗಳಿಗೆ ಅವಕಾಶವಿರುವದಿಲ್ಲವೆಂದು ಗೊತ್ತಾಗುವದು. ಏಕೆಂದರೆ ಆತ್ಮನು ವ್ಯವಹಾರದೃಷ್ಟಿಯಿಂದ ಪ್ರಮಾತೃವೆನ್ನುವದು ಸರಿ; ಇನ್ನೂ ಸ್ವಲ್ಪ ಒಳಹೊಕ್ಕು ನೋಡಿದರೆ ಹಿಂದೆ (೫೧) ಹೇಳಿರುವಂತೆ

ಪ್ರಮಾತೃತ್ವವು ಆಧ್ಯಾಸಿಕವಾಗಿರುತ್ತದೆ. ಶ್ರುತಿಯಿಂದ ಅದ್ವೈತಜ್ಞಾನವಾಗುವವರೆಗೆ ತಾನು ಪ್ರಮಾತೃ, ಪರಮಾತ್ಮನು ಪ್ರಮೇಯನು; ಜ್ಞಾನವಾದಬಳಿಕ ಪ್ರಮಾತೃವೇ ಪರಮಾತ್ಮನು; ಪ್ರಮಾತೃಪ್ರಮೇಯವಿಭಾಗವೇ ಆಗ ಇರುವದಿಲ್ಲ. ಇದನ್ನು ಹಿಂದೆ (೫೧) ತಿಳಿಸಿರುತ್ತೇವೆ. ಪ್ರತ್ಯಕ್ಷಾದಿಗಳು ಜ್ಞಾನವಾಗುವವರೆಗೆ ಪ್ರಮಾಣವೇ; ಜ್ಞಾನವುಂಟಾದ ಬಳಿಕ ಸ್ವಪ್ನಪ್ರಮಾಣಗಳು ಎಚ್ಚರವಾಗುತ್ತಲೂ ಬಾಧಿತವಾಗುವಂತೆ ಅವೂ ಬಾಧಿತವಾಗುತ್ತವೆ. ಈ ಎಲ್ಲಾ ವ್ಯವಹಾರವೂ ಅಧ್ಯಾರೋಪದೃಷ್ಟಿಯಿಂದ ಉಂಟು; ಅಪವಾದದೃಷ್ಟಿಯಿಂದ ಇಲ್ಲ. ಈ ಕೆಳಗಿರುವ ಶ್ರುತಿಗಳನ್ನೂ ವಾಕ್ಯಗಳನ್ನೂ ಹೀಗೆಯೇ ಹೊಂದಿಸಿಕೊಳ್ಳಬೇಕು.

(೧) ಸಿದ್ಧೇ ಹ್ಯಾತ್ಮನಿ ಪ್ರಮಾತರಿ ಪ್ರಮಿತ್ಸೋಃ ಪ್ರಮಾಣಾನ್ವೇಷಣಾ ಭವತಿ॥

-ಗೀ.ಭಾ.೨-೧೮-೩೪

(೨) ದೇಹೇನ್ದ್ರಿಯಾದಿಷು ಅಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ ॥ -ಅಧ್ಯಾ.ಭಾ.-೫

(೩) ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ॥ -ಛಾಂ. ೮-೭-೧.

(೪) ವಿಜ್ಞಾತಾರಮರೇ ಕೇನ ವಿಜಾನೀಯಾತ್ -ಬೃ.೪-೫-೧೫.

(೫) ಅನ್ವೇಷ್ಟವ್ಯಾತ್ಮವಿಜ್ಞಾನಾತ್ ಪ್ರಾಕ್ಪ್ರಮಾತೃತ್ವಮಾತ್ಮನಃ।
ಅನ್ವಿಷ್ಟಃ ಸ್ಯಾತ್ ಪ್ರಮಾತೈವ ಪಾಪ್ಮದೋಷಾದಿವರ್ಜಿತಃ॥

-ಸಂಪ್ರದಾಯವಿದ್ವಚನ, ಸೂ.ಭಾ.೧-೧-೪

(೬) ಯಾವದ್ ಹಿ ನ ಸತ್ಯಾತ್ಮೈಕತ್ವಪ್ರತಿಪತ್ತಿಃ, ತಾವತ್ ಪ್ರಮಾಣಪ್ರಮೇಯಫಲಲಕ್ಷಣೇಷು ವಿಕಾರೇಷು ಅನೃತತ್ವಬುದ್ಧಿರ್ನ ಕಸ್ಯಚಿತ್ ಉತ್ಪದ್ಯತೇ। ವಿಕಾರಾನೇವ ತು 'ಅಹಂ' 'ಮಮ' ಇತಿ ಅವಿದ್ಯಯಾ ಆತ್ಮಾತ್ಮೀಯೇನ ಭಾವೇನ ಸರ್ವೋ ಜನ್ತುಃ ಪ್ರತಿಪದ್ಯತೇ ಸ್ವಾಭಾವಿಕೀಂ ಬ್ರಹ್ಮಾತ್ಮತಾಂ ಹಿತ್ವಾ। ತಸ್ಮಾತ್ ಪ್ರಾಗ್ಬ್ರಹ್ಮಾತ್ಮತಾಪ್ರತಿಬೋಧಾತ್ ಉಪಪನ್ನಃ ಸರ್ವೋ ಲೌಕಿಕೋ ವೈದಿಕಶ್ಚ ವ್ಯವಹಾರಃ। ಯಥಾ ಸುಪ್ತಸ್ಯ ಪ್ರಾಕೃತಸ್ಯ ಜನಸ್ಯ ಸ್ವಪ್ನೇ ಉಚ್ಚಾವಚಾನ್ ಭಾವಾನ್ ಪಶ್ಯತಃ ನಿಶ್ಚಿತಮೇವ ಪ್ರತ್ಯಕ್ಷಾಭಿಮತಂ ವಿಜ್ಞಾನಂ ಭವತಿ ಪ್ರಾಕ್ ಪ್ರಬೋಧಾತ್। ನ ಚ ಪ್ರತ್ಯಕ್ಷಾಭಾಸಾಭಿಪ್ರಾಯಸ್ತತ್ಕಾಲೇ ಭವತಿ, ತದ್ವತ್॥ -ಸೂ.ಭಾ.೨-೧-೧೪-೪೩೬

(೭) ಪ್ರತಿಲೋಮಮಿದಂ ಸರ್ವಂ ಯಥೋಕ್ತಂ ಲೋಕಬುದ್ಧಿತಃ।
ಅವಿವೇಕಧಿಯಾಮಸ್ತಿ ನಾಸ್ತಿ ಸರ್ವಂ ವಿವೇಕಿನಾಮ್॥ -ಉಪ. ೧೮-೯೨

# ೮. ತರ್ಕ

೫೭. ಬ್ರಹ್ಮಜಿಜ್ಞಾಸೆಯು ಅನುಭವದಲ್ಲಿ ಕೊನೆಗಾಣುವದೆಂದು ಹೇಳುವ ವೇದಾಂತಿಗಳು ತರ್ಕದಿಂದ ಬ್ರಹ್ಮಜ್ಞಾನವು ಆಗುವದಿಲ್ಲವೆಂದು ಏತಕ್ಕೆ ಹೇಳುತ್ತಾರೆಂಬುದು ತಾರ್ಕಿಕರಿಗೆ ತಿಳಿಯದೆ ಇರುತ್ತದೆ. ಐತಿಹ್ಯಮಾತ್ರವನ್ನು ಹೇಳುವ ಶಬ್ದವನ್ನು ಅನುಭವಕ್ಕಿಂತ ಮೇಲಕ್ಕೆ ಏತಕ್ಕೆ ಏರಿಸುತ್ತಾರೆಂಬುದೂ ಅವರಿಗೆ ತಿಳಿಯುವ ಹಾಗಿಲ್ಲ. ಇಲ್ಲಿ ಅನುಭವವೆಂದರೇನು, ಶಬ್ದದ ಕೃತ್ಯವೇನು? -ಎಂಬುದನ್ನು ಮೊದಲು ತಿಳಿದುಕೊಳ್ಳಬೇಕಾಗಿರುತ್ತದೆ. ಪ್ರತ್ಯಕ್ಷಾದಿಜ್ಞಾನಗಳನ್ನೂ ತಾರ್ಕಿಕರು ಅನುಭವವೆಂದೇ ಕರೆಯುತ್ತಾರೆ. ವ್ಯವಹಾರದೃಷ್ಟಿಯಿಂದ ಇದೂ ಸರಿಯೇ ಆದರೂ ಬ್ರಹ್ಮದ ಅನುಭವವು ಪ್ರತ್ಯಕ್ಷಾದಿಗಳಿಂದ ಆಗುವದಿಲ್ಲ. ಇದನ್ನು ಹಿಂದೆ (೪೯) ತಿಳಿಸಿದ್ದಾಗಿದೆ.

ಇನ್ನು ಶಬ್ದವಿಚಾರ. ಶಬ್ದವು ಅನುಷ್ಠಾನಮಾಡಬೇಕಾದ, ಸಾಧ್ಯವಾದ ಧರ್ಮವನ್ನೂ ಹೇಳುತ್ತದೆ; ಸಿದ್ಧವಾಗಿರುವ ಬ್ರಹ್ಮಾದಿವಸ್ತುಗಳನ್ನೂ ಹೇಳುತ್ತದೆ. ಅನುಷ್ಠೇಯವಾದ ಧರ್ಮವನ್ನು ಶಬ್ದವು ಮಾತ್ರ ತಿಳಿಸುತ್ತದೆ ಎಂದರೆ ಒಪ್ಪಬಹುದು; ಆದರೆ ಆಗಲೆ ಇದ್ದುಕೊಂಡಿರುವ ವಸ್ತುವನ್ನು ಪ್ರತ್ಯಕ್ಷಾದಿಗಳೂ ತಿಳಿಸಬೇಕಲ್ಲವೆ? ಎಂದು ಸಾಂಖ್ಯಾದಿಗಳು ಕೇಳುತ್ತಾರೆ. ಇದ್ದುಕೊಂಡಿರುವ ವಸ್ತುವನ್ನು **ಭೂತವಸ್ತು, ಪರಿನಿಷ್ಠಿತವಸ್ತು, ಪರಿನಿಷ್ಪನ್ನವಸ್ತು** -ಮುಂತಾದ ಪರ್ಯಾಯ ಶಬ್ದಗಳಿಂದ ಕರೆಯುತ್ತಾರೆ. ಇಂಥ ವಸ್ತು ಪ್ರಮಾಣಾಂತರಗೋಚರವಾಗಿಯೇ ಇರಬೇಕಾದ್ದರಿಂದ ಒಂದು ಶ್ರುತಿಯು ಮತ್ತೊಂದಕ್ಕೆ ವಿರುದ್ಧವಾದಾಗ ಪ್ರಬಲ ಶ್ರುತಿಗೆ ಅನುಗುಣವಾಗಿ ದುರ್ಬಲಶ್ರುತಿಯನ್ನು ನಯಿಸುವಂತೆ ಶ್ರುತಿಯು ಪ್ರಮಾಣಾಂತರಕ್ಕೆ ವಿರುದ್ಧವಾದರೆ ಆ ಪ್ರಮಾಣಕ್ಕೆ ತಕ್ಕಂತೆಯೇ ಆ ಶ್ರುತಿಯ ಅರ್ಥವನ್ನೂ ಮಾಡಬೇಕೆಂದು ಅವರು ಅಭಿಪ್ರಾಯಪಡುತ್ತಾರೆ. ಇದೂ ಸರಿಯಲ್ಲ. ಏಕೆಂದರೆ ಬ್ರಹ್ಮವು ಭೂತವಸ್ತುವಾದರೂ ಪ್ರಮಾಣಾಂತರಗೋಚರವಲ್ಲ; ಏಕೆಂದರೆ ಇದಕ್ಕೆ ರೂಪಾದಿಗಳಿರುವದಿಲ್ಲ. ಒಂದು ಪ್ರಮಾಣಕ್ಕೆ ಇನ್ನೊಂದು ವಿರುದ್ಧವಾಗುವದೆಂಬುದೂ ಸರಿಯಲ್ಲ; ಇದನ್ನು ಆಗಲೆ (೪೯) ತಿಳಿಸಿಕೊಟ್ಟಿದ್ದಾಗಿದೆ. ಆದ್ದರಿಂದ ಧರ್ಮದಂತೆ ಬ್ರಹ್ಮವೂ ಶ್ರುತಿಮಾತ್ರಗೋಚರವೇ ಆಗಿರುತ್ತದೆ.

ತರ್ಕವು ದೃಷ್ಟವಾದ ವಸ್ತುವಿನ ಹೋಲಿಕೆಯಿಂದ ಅದೃಷ್ಟವಾದದ್ದನ್ನು ಸಮರ್ಥಿಸುವದಕ್ಕೆ ಉಪಯೋಗವಾಗುತ್ತದೆ; ಆದ್ದರಿಂದ ಅನುಭವಕ್ಕೆ ಅದು ಹತ್ತಿರವಾಗಿದೆ-ಎಂಬುದು ತಾರ್ಕಿಕರ ವಾದವು. ಆದರೆ ಬ್ರಹ್ಮವು ಶಾಸ್ತ್ರದೃಷ್ಟ

ವಾದದ್ದೇ ಹೊರತು ಪ್ರತ್ಯಕ್ಷದೃಷ್ಟವಲ್ಲ. ಆದ್ದರಿಂದ ಪ್ರತ್ಯಕ್ಷವನ್ನು ಅವಲಂಬಿಸುವ ಅನುಮಾನವಾಗಲಿ ಅಥವಾ ಬೇರೆಯ ಯುಕ್ತಿಯಾಗಲಿ ಇಲ್ಲಿ ಉಪಯೋಗಕ್ಕೆ ಬರುವದಿಲ್ಲ. ಬ್ರಹ್ಮವು ಅಚಿಂತ್ಯವಾಗಿರುತ್ತದೆ. ಆದ್ದರಿಂದಲೇ ಇದನ್ನು ಕೇವಲ ತರ್ಕದಿಂದ ತಿಳಿಯುವದು ಸಿದ್ಧರಾದ ಕಪಿಲಾದಿಋಷಿಗಳಿಗೂ ಸಾಧ್ಯವಲ್ಲವೆಂದು ಶ್ರುತಿಸ್ಮೃತಿಗಳು ಹೇಳುತ್ತಿರುವವು.

(೧) ಯತ್ತು ಉಕ್ತಮ್ ಪರಿನಿಷ್ಪನ್ನತ್ವಾದ್ ಬ್ರಹ್ಮಣಿ ಪ್ರಮಾಣಾನ್ತರಾಣಿ ಸಂಭವೇಯುಃ ಇತಿ। ತದಪಿ ಮನೋರಥಮಾತ್ರಮ್। ರೂಪಾದ್ಯಭಾವಾದ್ ಹಿ ನಾಯಮರ್ಥಃ ಪ್ರತ್ಯಕ್ಷಸ್ಯ ಗೋಚರಃ। ಲಿಙ್ಗಾದ್ಯಭಾವಾಚ್ಚ ನಾನುಮಾನಾದೀನಾಮ್। ಆಗಮಮಾತ್ರಸಮಧಿಗಮ್ಯ ಏವ ತು ಅಯಮರ್ಥೋ ಧರ್ಮವತ್॥ -ಸೂ. ಭಾ. ೨-೧-೬-೪೧೭

(೨) ತತ್ರ ಪಣ್ಡಿತಂಮನ್ಯಾಃ ಕೇಚಿತ್ ಸ್ವಚಿತ್ತವಶಾತ್ ಸರ್ವಂ ಪ್ರಮಾಣಮ್ ಇತರೇತರವಿರುದ್ಧಂ ಮನ್ಯನ್ತೇ॥ -ಬೃ. ಭಾ. ೨-೧-೨೦-೩೨೫

(೩) ತಥಾ ಚ ಶ್ರುತಿಃ-''ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ'' (ಕ. ೧-೨-೯) ಇತಿ । ಕೋ ಅದ್ಧಾ ವೇದ ಕ ಇಹ ಪ್ರವೋಚತ್। 'ಇಯಂ ವಿಸೃಷ್ಟಿರ್ಯತ ಆ ಬಭೂವ ' (ಋ. ೧೦-೧೨೯-೬) ಇತಿ ಚೈತೇ ಋಚೌ ಸಿದ್ಧಾನಾಮಪಿ ಈಶ್ವರಾಣಾಂ ದುರ್ಬೋಧತಾಂ ಜಗತ್ಕಾರಣಸ್ಯ ದರ್ಶಯತಃ। ಸ್ಮೃತಿರಪಿ ಭವತಿ ''ಅಚಿನ್ತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್'' (?) ಇತಿ। ''ಅವ್ಯಕ್ತೋಽಯಮಚಿನ್ತ್ಯೋಽಯಮವಿಕಾರ್ಯೋಽಯಮುಚ್ಯತೇ'' (ಗೀ.೨-೨೫) ಇತಿ ಚ । ''ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ। ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ'' (ಗೀ.೧೦.೨) ಇತಿ ಚೈವಂಜಾತೀಯಕಾ॥ -ಸೂ. ಭಾ. ೨-೧-೬-೪೧೭

೫೮. ವೇದಾಂತಿಗಳಿಗೆ ಯಾವ ತರ್ಕವೂ ಸರ್ವಥಾ ಬೇಡವೆಂದು ತಿಳಿಯಬಾರದು. ಶ್ರುತಿಯು ಒಂದಾನೊಂದು ವಿಲಕ್ಷಣರೀತಿಯಿಂದ ಅನಾತ್ಮವನ್ನೆಲ್ಲ ಬಿಡಿಸಿ ಆತ್ಮನಲ್ಲಿಯೇ ಮನಸ್ಸು ವಿಶ್ರಾಂತವಾಗುವಂತೆ ಅದು ಬೋಧಿಸುತ್ತದೆ. ಈ ಕ್ರಮಕ್ಕೆ **ಆಗಮ** ಎಂದು ಹೆಸರು. ಉತ್ತಮಾಧಿಕಾರಿಗಳಿಗೆ ಈ ಆಗಮಕ್ರಮದಿಂದ ಬೋಧಿಸಿದ ವಾಕ್ಯದ ಶ್ರವಣವೇ ಆತ್ಮಾನುಭವಕ್ಕೆ ಸಾಕಾಗಿರುತ್ತದೆ. ಆದರೆ ಹೀಗೆ ಶ್ರವಣಮಾತ್ರದಿಂದ ತತ್ತ್ವವನ್ನು ಅರಿತುಕೊಳ್ಳಲಾರದವರು, ಪ್ರತ್ಯಕ್ಷಾದಿಗಳನ್ನು ತರ್ಕಶುದ್ಧವಾಗಿಯೇ ಉಪಯೋಗಿಸುವಂತೆ ಶ್ರುತಿಯನ್ನೂ ಉಪಯೋಗಿಸುವದು ತಪ್ಪಲ್ಲ. ಆದ್ದರಿಂದಲೇ ಶ್ರುತಿಯು ಆತ್ಮದರ್ಶನಕ್ಕೆ ಶ್ರವಣವಲ್ಲದೆ ಮನನವೂ ಬೇಕೆನ್ನುತ್ತದೆ. ಕಳ್ಳರು ಕಣ್ಣುಕಟ್ಟಿ ಕಾಡಿನಲ್ಲಿ ಬಿಟ್ಟಿದ್ದ ಸಾಹುಕಾರನು ಮಾರ್ಗದರ್ಶಿಗಳು ಕೊಟ್ಟ ತಿಳಿವಳಿಕೆಯಿಂದಲೂ ತನ್ನ ವಿವೇಚನಾಶಕ್ತಿಯಿಂದಲೂ ತನ್ನ ಗಾಂಧಾರ ದೇಶಕ್ಕೇ ತಲುಪಿದನು; ಇದರಂತೆ ಸಾಧಕನು **ಆಚಾರ್ಯನ ಉಕ್ತಿ**ಯಿಂದಲೂ ತನ್ನ ಬುದ್ಧಿಯಿಂದಲೂ ಆತ್ಮಜ್ಞಾನವನ್ನು ಮಾಡಿಕೊಳ್ಳಬೇಕು- ಎಂದು ದೃಷ್ಟಾಂತ

ಪೂರ್ವಕವಾಗಿ ತರ್ಕದ ಆವಶ್ಯಕತೆಯನ್ನು ಅದು ತಿಳಿಸುತ್ತದೆ. ಇಂಥ ತರ್ಕವನ್ನು ಶ್ರುತಿಯೇ ಅನುಭವಕ್ಕಾಗಿ ತಿಳಿಸಿಕೊಟ್ಟಿರುತ್ತದೆ. ಆದರೆ ಈ ನೆಪದಿಂದ ಶ್ರುತ್ಯಾಧಾರ ವಿಲ್ಲದ ಅಥವಾ ಶ್ರುತಿವಿರುದ್ಧವಾದ ಒಣತರ್ಕವನ್ನೂ ಬ್ರಹ್ಮಕ್ಕಾಗಿ ಉಪಯೋಗಿಸಿ ಕೊಳ್ಳುವದಕ್ಕಾಗುವದಿಲ್ಲ. ಏಕೆಂದರೆ ಮನುಷ್ಯರು ಸುಮ್ಮನೆ ಊಹಿಸುವ ತರ್ಕಕ್ಕೆ ನಿಲುಗಡೆಯಿರುವದಿಲ್ಲ; ಶಾಸ್ತ್ರವಿಷಯವಾದ ಆತ್ಮತತ್ತ್ವವಂತೂ ಶಾಸ್ತ್ರವಿಲ್ಲದೆ ಊಹಿಸುವದಕ್ಕೂ ಸಿಕ್ಕುವದಿಲ್ಲ. ಜನರು ಊಹಿಸಿ ಕಲ್ಪಿಸಿದ ತರ್ಕದಂತೆ ನಡೆವರೆ ಪುರುಷಾರ್ಥವೂ ಸಿಕ್ಕಲಾರದು. ಶ್ರುತಿಯಿಂದ ಅನುಭವಕ್ಕೆ ಬಂದ ವಿಷಯದ ಲ್ಲಂತೂ ಅದಕ್ಕೆ ವಿರುದ್ಧವಾಗಿ ತರ್ಕವನ್ನು ಮಾಡುವದು ಹೇಗೂ ಸರಿಯಲ್ಲ. ''ನ ಹಿ ದೃಷ್ಟೇಽನುಪಪನ್ನಂ ನಾಮ'' (ಕಂಡದ್ದರಲ್ಲಿ ಅನುಪಪನ್ನವೆಂಬುದಿಲ್ಲ) ಎಂಬ ನ್ಯಾಯವನ್ನು ನಾವು ಆಗಲೆ (೩೯) ಉದಾಹರಿಸಿರುವದು ಈ ಕಾರಣದಿಂದಲೇ. ಕೇವಲ ತರ್ಕ, ಶುಷ್ಕತರ್ಕ, ನಿರಾಗಮತರ್ಕ- ಇವೆಲ್ಲ ಶ್ರುತಿವಿರುದ್ಧವಾದ, ನಿಷ್ಪ್ರಮಾಣಕವಾದ, ಅನುಭವಸಂಮತಿಯಿಲ್ಲದ ತರ್ಕಕ್ಕೆ ಹೆಸರುಗಳು. ತರ್ಕ, ಉಪಪತ್ತಿ, ಯುಕ್ತಿ- ಇವೆಲ್ಲ ಪರ್ಯಾಯಗಳು. ಬ್ರಹ್ಮದ ವಿಷಯಕ್ಕೆ ಅನುಮಾನವು ಕೂಡ ತರ್ಕದ ಸ್ಥಾನದಲ್ಲಿರುವದೇ ಹೊರತು ಸ್ವತಂತ್ರಪ್ರಮಾಣವಲ್ಲ, ಶ್ರುತಿಯೇ ಹೇಳಿಕೊಟ್ಟಿರುವ ಅನುಭವಾನುಸಾರಿ ತರ್ಕವು ಶ್ರುತ್ಯನುಗೃಹೀತತರ್ಕವೆನಿಸುವದು; ಅದಕ್ಕೆ ವಿರೋಧವಲ್ಲದ ತರ್ಕವು ಶ್ರುತ್ಯವಿರೋಧಿ ತರ್ಕ, ಶ್ರುತ್ಯನುಕೂಲ ತರ್ಕ-ಎನಿಸುವದು.

(೧) ಅನುಮಾನಮಪಿ ವೇದಾನ್ತವಾಕ್ಯಾವಿರೋಧಿ ಪ್ರಮಾಣಂ ಭವತ್ ನ ನಿವಾರ್ಯತೇ। ಶ್ರುತ್ಯೈವ ಚ ಸಹಾಯತ್ವೇನ ತರ್ಕಸ್ಯಾಭ್ಯುಪೇತತ್ವಾತ್। ತಥಾ ಹಿ ''ಶ್ರೋತವ್ಯೋ ಮನ್ತವ್ಯಃ' (ಬೃ. ೨-೪-೫) ಇತಿ ಶ್ರುತಿಃ'' ''ಪಣ್ಡಿತೋ ಮೇಧಾವೀ ಗನ್ಧಾರಾನೇವೋಪಸಂಪದ್ಯೇತ್ಯೈವಮೇವೇಹಾ ಚಾರ್ಯವಾನ್ ಪುರುಷೋ ವೇದ'' (ಛಾಂ. ೬-೧೪-೨) ಇತಿ ಚ ಪುರುಷಬುದ್ಧಿ ಸಾಹಾಯ್ಯಮಾತ್ಮನೋ ದರ್ಶಯತಿ॥ -ಸೂ.ಭಾ.೧-೧-೨-೨೮

(೨) ನಿರಾಗಮಾಃ ಪುರುಷೋತ್ಪ್ರೇಕ್ಷಾಮಾತ್ರನಿಬನ್ಧನಾಸ್ತರ್ಕಾಃ ಅಪ್ರತಿಷ್ಠಿತಾ ಭವನ್ತಿ। ....ಯದ್ಯಪಿ ಕ್ವಚಿದ್ವಿಷಯೇ ತರ್ಕಸ್ಯ ಪ್ರತಿಷ್ಠಿತತ್ವಮ್ ಉಪಲಕ್ಷ್ಯತೇ, ತಥಾಪಿ ಪ್ರಕೃತೇ ತಾವದ್ ವಿಷಯೇ ಪ್ರಸಜ್ಯತ ಏವ ಅಪ್ರತಿಷ್ಠಿತತ್ವದೋಷಾತ್ ಅನಿರ್ಮೋಕ್ಷಸ್ತರ್ಕಸ್ಯ । ನ ಹಿ ಇದಮತಿಗಮ್ಭೀರಂ ಭಾವಯಾಥಾತ್ಮ್ಯಂ ಮುಕ್ತಿನಿಬನ್ಧನಮ್ ಆಗಮಮನ್ತರೇಣ ಉತ್ಪ್ರೇಕ್ಷಿತುಮಪಿ ಶಕ್ಯಮ್ ॥ -ಸೂ. ಭಾ. ೨-೧-೧೧-೪೨೮

(೩) ಯದಪಿ ಶ್ರವಣವ್ಯತಿರೇಕೇಣ ಮನನಂ ವಿದಧಚ್ಛಬ್ದ ಏವ ತರ್ಕಮಪಿ ಆದರ್ತವ್ಯಂ ದರ್ಶಯತಿ ಇತ್ಯುಕ್ತಮ್। ನಾನೇನ ಮಿಷೇಣ ಶುಷ್ಕತರ್ಕಸ್ಯ ಅತ್ರ ಆತ್ಮಲಾಭಃ ಸಂಭವತಿ। ಶ್ರುತ್ಯನುಗೃಹೀತ ಏವ ಹಿ ಅತ್ರ ತರ್ಕಃ ಅನುಭವಾಙ್ಗತ್ವೇನ ಆಶ್ರೀಯತೇ॥

-ಸೂ.ಭಾ.೨-೧-೬-೪೧೮

೫೯. ಹಲವರು ವಾದಿಗಳು ತಮತಮಗೆ ಅಭಿಮತವಾದ ತರ್ಕವನ್ನು ಶ್ರುತಿಗೆ ಅಭಿಮತವೆಂದು ಅಥವಾ ಶ್ರುತ್ಯರ್ಥವನ್ನು ತಿಳಿದುಕೊಳ್ಳುವದಕ್ಕೆ ಅನುಕೂಲವಾದ ತರ್ಕವೆಂದು ಉದಾಹರಿಸುತ್ತಿರುತ್ತಾರೆ. ಆದರೆ ಇಂಥದ್ದೇ ಅನುಕೂಲತರ್ಕವೆಂಬು ದನ್ನು ನಿಶ್ಚಯಿಸುವದಕ್ಕೆ ಸಾಧನವಿಲ್ಲದೆ ಇಲ್ಲ. ಮೇಲೆ ಹೇಳಿರುವಂತೆ ಶ್ರುತಿಯೇ ಈ ಬಗೆಯ ತರ್ಕಗಳನ್ನು ಅಲ್ಲಲ್ಲಿ ಉದಾಹರಿಸುತ್ತಾ ಹೋಗಿರುತ್ತದೆ; ಆದ್ದರಿಂದ ಆ ತರ್ಕಗಳನ್ನು ಅವಶ್ಯವಾಗಿ ಸ್ವೀಕರಿಸಬೇಕು. ಆ ತರ್ಕಗಳ ಅಭಿಪ್ರಾಯವನ್ನೂ ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ವರ್ಣಿಸಬಹುದಲ್ಲವೆ?- ಎಂದು ಯಾರಿಗಾ ದರೂ ತೋರಬಹುದು; ಆದರೆ **ತರ್ಕವು ಅನುಭವಾಙ್ಗ**ವಾಗಿರಬೇಕೆಂದು ಒಪ್ಪಿದರೆ ಶುಷ್ಕತರ್ಕಕ್ಕೂ ಶ್ರೌತತರ್ಕಕ್ಕೂ ಇರುವ ತಾರತಮ್ಯವು ಸ್ಫುಟವಾಗುವದು. ಯಾವ ತರ್ಕವನ್ನನುಸರಿಸಿ ಶ್ರುತಿಯ ಅಭಿಪ್ರಾಯವನ್ನು ನಿರ್ಣಯಿಸಿದರೆ ಎಲ್ಲರಿಗೂ ಏಕರೂಪವಾದ ಅನುಭವವುಂಟಾಗುವದೋ ಅದೇ **ಶ್ರೌತತರ್ಕವು.** ಏಕೆಂದರೆ ಪರಮಾರ್ಥವು ಒಂದೇ ರೂಪವಾಗಿರಬೇಕು; ದೇಶಕಾಲನಿಮಿತ್ತಗಳನ್ನು ಬಯಸಿ ಅದು ಬೇರೆಬೇರೆಯಾಗುವದಲ್ಲ. ಅದರ ವಿಷಯವಾದ ಜ್ಞಾನವೇ **ಸಮ್ಯಜ್ಜ್ಞಾನವು,** ಏಕೆಂದರೆ ಅದು ಸಾರ್ವತ್ರಿಕಾನುಭವಕ್ಕೆ ಹೊಂದುಗೆಯಾಗಿರುವದು. ಆದ್ದರಿಂದ ಅನುಭವಕ್ಕೆ ಅನುಕೂಲವಾಗುವಂತೆ ಶ್ರುತಿಯಲ್ಲಿ ಹೇಳಿರುವ **ತರ್ಕವೂ** ಅದಕ್ಕೆ ಅನುಗುಣವಾಗಿ ನಾವೇ ಕಲ್ಪಿಸುವ ಲೌಕಿಕತರ್ಕವೂ **ಸತ್ತರ್ಕವು.** ಯಾವ ತರ್ಕವು ಒಂದು ಪಕ್ಷದವರು ಮಾತ್ರ ಒಪ್ಪತಕ್ಕದ್ದಾಗಿದ್ದು ಮಿಕ್ಕವರಿಗೆ ವಿರುದ್ಧವಾಗುತ್ತ ದೆಯೋ ಅಂಥ ತರ್ಕವು ನಿಲುಗಡೆಯಿಲ್ಲದ್ದಾದ್ದರಿಂದ ಅನುಭವಾಂಗವಲ್ಲ; ಅದು ಅನುಭವಾಂಗವಲ್ಲವಾದ್ದರಿಂದ ಕುತರ್ಕವಾಗಿರುತ್ತದೆ.

(೧) ಅಪಿ ಚ ಸಮ್ಯಗ್ಜ್ಞಾನಾನ್ಮೋಕ್ಷಃ ಇತಿ ಸರ್ವೇಷಾಂ ಮೋಕ್ಷವಾದಿನಾಮ್ ಅಭ್ಯುಪಗಮಃ। ತಚ್ಚ ಸಮ್ಯಗ್ಜ್ಞಾನಮ್ ಏಕರೂಪಮ್ । ವಸ್ತುತನ್ತ್ರತ್ವಾತ್ । ಏಕರೂಪೇಣ ಹಿ ಅವಸ್ಥಿತೋ ಯೋಽರ್ಥಃ ಸ ಪರಮಾರ್ಥಃ । ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್ಜ್ಞಾನಮ್ ಇತ್ಯುಚ್ಯತೇ । ಯಥಾ ಅಗ್ನಿರುಷ್ಣಃ ಇತಿ । ತತ್ರ ಏವಂ ಸತಿ ಸಮ್ಯಗ್ಜ್ಞಾನೇ ಪುರುಷಾಣಾಂ ವಿಪ್ರತಿಪತ್ತಿಃ ಅನುಪಪನ್ನಾ । ತರ್ಕಜ್ಞಾನಾನಾಂ ತು ಅನ್ಯೋನ್ಯವಿರೋಧಾತ್ ಪ್ರಸಿದ್ಧಾ ವಿಪ್ರತಿಪತ್ತಿಃ। ಯದ್ಧಿ ಕೇನಚಿತ್ ತಾರ್ಕಿಕೇಣ ಇದಮೇವ ಸಮ್ಯಗ್ಜ್ಞಾನಮ್ ಇತಿ ಪ್ರತಿಪಾದಿತಂ ತದಪರೇಣ ವ್ಯುತ್ಥಾಪ್ಯತೇ । ತೇನಾಪಿ ಪ್ರತಿಷ್ಠಾಪಿತಂ ತತೋಽಪರೇಣ ವ್ಯುತ್ಥಾಪ್ಯತೇ ಇತಿ ಪ್ರಸಿದ್ಧಂ ಲೋಕೇ । ಕಥಮ್ ಏಕರೂಪಾನವಸ್ಥಿತವಿಷಯಂ ತರ್ಕಪ್ರಭವಂ ಸಮ್ಯಗ್ಜ್ಞಾನಂ ಭವೇತ್ ? ನ ಚ ಪ್ರಧಾನವಾದೀ ತರ್ಕವಿದಾಮ್ ಉತ್ತಮಃ ಇತಿ ಸರ್ವೈಸ್ತಾರ್ಕಿಕೈಃ ಪರಿಗೃಹೀತಃ, ಯೇನ ತದೀಯಂ ಮತಂ ಸಮ್ಯಗ್ಜ್ಞಾನಮ್ ಇತಿ ಪ್ರತಿಪದ್ಯೇಮಹಿ । ನ ಚ ಶಕ್ಯನ್ತೇ ಅತೀತಾನಾಗತವರ್ತಮಾನಾ-ಸ್ತಾರ್ಕಿಕಾಃ ಏಕಸ್ಮಿನ್ ದೇಶೇ ಕಾಲೇ ಚ ಸಮಾಹರ್ತುಮ್, ಯೇನ ತನ್ಮತಿರೇಕರೂಪಾ ಏಕಾರ್ಥವಿಷಯಾ ಸಮ್ಯಙ್ಮತಿಃ ಇತಿ ಸ್ಯಾತ್ । ವೇದಸ್ಯ ತು ನಿತ್ಯತ್ವೇ ವಿಜ್ಞಾನೋತ್ಪತ್ತಿಹೇತುತ್ವೇ ಚ ಸತಿ

ವ್ಯವಸ್ಥಿತಾರ್ಥವಿಷಯತ್ವೋಪಪತ್ತೇಃ ತಜ್ಜನಿತಸ್ಯ ಜ್ಞಾನಸ್ಯ ಸಮ್ಯಕ್ತ್ವಮ್ ಅತೀತಾನಾಗತವರ್ತಮಾನ್ಯೈಃ ಸರ್ವೈರಪಿ ತಾರ್ಕಿಕೈರಪಹ್ನೋತುಮ್ ಅಶಕ್ಯಮ್ ॥

-'ಸೂ. ಭಾ. ೨-೧-೧೧-೪೨೯

(೨) ಶ್ರುತ್ಯನುಗೃಹೀತ ಏವ ಹಿ ಅತ್ರ ತರ್ಕಃ ಅನುಭವಾಙ್ಗತ್ವೇನ ಆಶ್ರೀಯತೇ ॥

- ಸೂ. ಭಾ. ೨-೧-೬-೪೧೮

೩) ಪರ ಏವಾತ್ಮಾ ಯಃ ಪೂರ್ವಮ್ ''ಸತ್ಯಂ ಜ್ಞಾನಮನನ್ತಂ ಬ್ರಹ್ಮ'' ಇತಿ ಪ್ರಕೃತಃ ..... ಸ ಆತ್ಮಾ ಅಸ್ಮಾಭಿಃ ಯಥಾ ಖಂ ತಥೇತಿ ಸಂಪ್ರಕಾಶಿತಃ । ''ಆತ್ಮಾ ಹ್ಯಾಕಾಶವತ್'' ಇತ್ಯಾದಿಶ್ಲೋಕೈಃ। ನ ತಾರ್ಕಿಕಪರಿಕಲ್ಪಿತಾತ್ಮವತ್ ಪುರುಷಬುದ್ಧಿಪ್ರಮಾಣಗಮ್ಯಃ ಇತ್ಯಭಿಪ್ರಾಯಃ॥

- ಮಾಂ. ಕಾ. ಭಾ. ೩-೧೧-೧೪೯

೪) ಶಾಸ್ತ್ರೋಪಪತ್ತಿಭ್ಯಾಮ್ ಅವಧಾರಿತತ್ವಾತ್, ಅದ್ವಯಾತ್ಮದರ್ಶನಂ ಸಮ್ಯಗ್ದರ್ಶನಮ್, ತದ್ಬಾಹ್ಯತ್ವಾತ್ ಮಿಥ್ಯಾದರ್ಶನಮನ್ಯತ್ ॥ -ಮಾಂ ಕಾ. ಭಾ. ೩-೧೭-೧೬೦

೫) ಕಾಪಿಲಕಾಣಾದಾದಿತರ್ಕಶಾಸ್ತ್ರವಿರೋಧಃ ಇತಿ ಚೇತ್ । ನ । ತೇಷಾಂ ಮೂಲಾಭಾವೇ ವೇದವಿರೋಧೇ ಚ ಭ್ರಾನ್ತತ್ವೋಪಪತ್ತೇಃ ॥ - ತೈ. ಭಾ ೩-೧೦-೨೫೪

೬) ತೇ ತು ಕುತರ್ಕದೂಷಿತಾನ್ತಕರಣಾಃ ಬ್ರಾಹ್ಮಣಾದಿವರ್ಣಾಪಸದಾಃ ಅನುಕಮ್ಪನೀಯಾಃ ಆಗಮಾರ್ಥವಿಚ್ಛಿನ್ನಸಂಪ್ರದಾಯಬುದ್ಧಯಃ ಇತಿ॥

-ಬೃ.ಭಾ. ೨-೧-೨೦-೩೨೫

೬೦. ಸಾಂಖ್ಯವೈಶೇಷಿಕರೇ ಮೊದಲಾದವರಾಗಲಿ ಈಚಿನ ವೇದಾಂತಿಗಳಾಗಲಿ ಅವೇದಾಂತಿಗಳಾಗಲಿ , ವೈದಿಕರಾಗಲಿ ಅವೈದಿಕರಾಗಲಿ, ಉಪಯೋಗಿಸುವ ತರ್ಕಗಳು ಸರ್ವಥಾ ಅನಾದರಣೀಯವೆಂದು ವೇದಾಂತಿಗಳು ಹೇಳುವದಿಲ್ಲ. ಅವರ ಯುಕ್ತಿಗಳು ಶ್ರುತಿಯಿಂದಾಗುವ ಜ್ಞಾನಕ್ಕೆ ಎಷ್ಟೆಷ್ಟರಮಟ್ಟಿಗೆ ಉಪಯೋಗವಾಗುತ್ತವೆಯೋ ಅಷ್ಟಷ್ಟು ಮಟ್ಟಿಗೆ ಅವನ್ನು ಉಪಕರಣವಾಗಿ ಉಪಯೋಗಿಸಲೂ ಬಹುದು. ಆದ್ದರಿಂದಲೇ ''ಪರಮತಮ್ ಅಪ್ರತಿಷಿದ್ಧಮ್ ಅನುಮತಂ ಭವತಿ'' ಎಂಬ ನ್ಯಾಯವನ್ನು ವೇದಾಂತದಲ್ಲಿ ಒಪ್ಪಿದೆ ಎಂದು ಹಿಂದೆ ( ೪) ಹೇಳಿರುವದು. ಹಾಗೆ ಒಪ್ಪಿದ ತರ್ಕಗಳು ಶ್ರೌತತರ್ಕಕ್ಕೆ ಹೊಂದಿಕೆಯಾಗಿ ಅಥವಾ ಅವಕ್ಕೆ ಸಮೀಪವಾಗಿದ್ದಷ್ಟು ಮಟ್ಟಿಗೆ ಅವನ್ನು ವೇದಾಂತಿಗಳು ಒಪ್ಪಿಯೇ ಒಪ್ಪುತ್ತಾರೆ.

(೧) ಏತೇನ ಸರ್ವಾಣಿ ತರ್ಕಸ್ಮರಣಾನಿ ಪ್ರತಿವಕ್ತವ್ಯಾನಿ । ತಾನ್ಯಪಿ ತರ್ಕೋಪಪತ್ತಿಭ್ಯಾಂ ತತ್ತ್ವಜ್ಞಾನಾಯ ಉಪಕುರ್ವನ್ತಿ ಇತಿ ಚೇತ್, ಉಪಕುರ್ವನ್ತು ನಾಮ । ತತ್ತ್ವಜ್ಞಾನಂ ತು ವೇದಾನ್ತವಾಕ್ಯೇಭ್ಯ ಏವ ಭವತಿ । ''ನಾವೇದವಿನ್ಮನುತೇ ತಂ ಬೃಹನ್ತಮ್'' (ತೈ. ಬ್ರಾ. ೩-೧೨-೯-೭), ''ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ'' (ಬೃ. ೩-೯-೨೬) ಇತ್ಯೇವಮಾದಿಶ್ರುತಿಭ್ಯಃ ॥ -ಸೂ. ಭಾ. ೨-೧-೩-೪೦೮

(೨) ಯೇನ ತ್ವಂಶೇನ ನ ವಿರುಧ್ಯೇತೇ ತೇನ ಇಷ್ಟಮೇವ ಸಾಂಖ್ಯಯೋಗಸ್ಮೃತ್ಯೋಃ ಸಾವಕಾಶತ್ವಮ್॥ -ಸೂ. ಭಾ. ೨-೧-೩-೪೦೭

(೩) ನ ಚ (ಸಾಂಖ್ಯವಾದಃ) ಕಾರ್ಯಕಾರಣಾನನ್ಯತ್ವಾಭ್ಯುಪಗಮಾತ್ ಪ್ರತ್ಯಾಸನ್ನೋ ವೇದಾನ್ತವಾದಸ್ಯ॥ -ಸೂ. ಭಾ. ೧-೪-೨೮-೩೯೭

(೪) ಪರಮಾರ್ಥತತ್ತ್ವಮದ್ವಯಮೇತತ್ ನ ಬುದ್ಧೇನ ಭಾಷಿತಮ್, ಯದ್ಯಪಿ ಬ್ಯಾಹ್ಯಾರ್ಥನಿರಾಕರಣಂ ಜ್ಞಾನಮಾತ್ರಕಲ್ಪನಾ ಚ ಅದ್ವಯವಸ್ತುನಾಮ್ಮೀಪ್ಯಮ್ ಉಕ್ತಮ್॥ -ಮಾಂ.ಕಾ.ಭಾ.೪-೯೯-೩೬೬

೬೧. ತರ್ಕಪ್ರಧಾನವಾದ ದರ್ಶನಗಳಿಗೂ ವೇದಾಂತಕ್ಕೂ ಇರುವ ಒಂದು ಮುಖ್ಯವಾದ ತಾರತಮ್ಯವು ಇಲ್ಲಿ ಸ್ಫುಟವಾಗುತ್ತದೆ. ಅದೇನೆಂದರೆ ತಾರ್ಕಿಕರು **ದೃಷ್ಟಾಂತ**ಬಲದಿಂದಲೇ ಕಾರಣ, ಕಾರ್ಯ, ಮುಂತಾದವುಗಳ ಸ್ವರೂಪವನ್ನು ನಿರ್ಣಯಿಸುವದಕ್ಕೆ ಹೊರಟಿರುತ್ತಾರೆ. ಆದ್ದರಿಂದ ಅವರಿಗೆ ಪ್ರತ್ಯಕ್ಷವಾಗಿ ಕಂಡಿರುವ ದೃಷ್ಟಾಂತವು ಅತ್ಯವಶ್ಯವಾಗಿರುತ್ತದೆ ಅವರು ದೃಷ್ಟಾಂತವನ್ನು ಬಿಟ್ಟು ಸ್ವಲ್ಪವೂ ಕದಲುವದಕ್ಕೆ ಅವಕಾಶವಿರುವದಿಲ್ಲ. ವೇದಾಂತಿಗಳು **ಶ್ರುತಿಪ್ರಮಾಣ**ದಿಂದುಂಟಾಗುವ ಅನುಭವವನ್ನು ಪ್ರಧಾನವಾಗಿಟ್ಟುಕೊಂಡಿರುತ್ತಾರೆ. ಆ ಅನುಭವವು ಪ್ರತ್ಯಕ್ಷಾದಿಗಳಿಗೆ ಗೋಚರವಲ್ಲದ ವಸ್ತುವನ್ನು ತಿಳಿಸುವದಾಗಿರುವದರಿಂದ ಯಾವದಾದರೂ ದೃಷ್ಟಾಂತಕ್ಕೆ ಅನನುಗುಣವಾಗಿದ್ದರೂ ಬಾಧಕವಾಗಿರುವದಿಲ್ಲ. ವೇದಾಂತಿಗಳು ದೃಷ್ಟಾಂತಗಳನ್ನು ಉಪಯೋಗಿಸುವಾಗ ದೃಷ್ಟಾಂತದ ಯಾವದಾದರೊಂದು ಅಂಶವನ್ನು ಮಾತ್ರ ಹೋಲಿಕೆಯಾಗಿಟ್ಟುಕೊಂಡು ಅವುಗಳನ್ನು ಉದಾಹರಿಸುವರೇ ಹೊರತು ಎಲ್ಲಾ ಅಂಶದಲ್ಲಿಯೂ ಹೋಲಿಕೆಯಿದೆಯೆಂದು ಅವರು ಒಪ್ಪಿರುವದಿಲ್ಲವೆಂಬುದನ್ನು ನೆನಪಿಡಬೇಕು. ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಎಲ್ಲಾ ಬಗೆಯಿಂದಲೂ ಹೋಲಿಕೆಯಿರುವದೆಂದು ಯಾರೂ ಹೇಳುವದಿಲ್ಲ, ಹೇಳುವದಕ್ಕೆ ಬರುವದೂ ಇಲ್ಲ. ಏಕೆಂದರೆ ಅಂಥ ಹೋಲಿಕೆಯಿದ್ದರೆ ಎರಡು ವಸ್ತುಗಳೂ ಒಂದೇ ಆಗುವದರಿಂದ ದೃಷ್ಟಾಂತ, ದ್ರಾಷ್ಟಾಂತಿಕ -ಎಂಬ ಭೇದವೇ ಇಲ್ಲವಾಗುವದು.

(೧) ಅಪಿ ಚ ಆಗಮಬಲೇನ ಬ್ರಹ್ಮವಾದೀ ಕಾರಣಾದಿಸ್ವರೂಪಂ ನಿರೂಪಯತಿ ಇತಿ ನಾವಶ್ಯಂ ತಸ್ಯ ಯಥಾದೃಷ್ಟಮೇವ ಸರ್ವಮಭ್ಯುಪಗನ್ತವ್ಯಮ್ ಇತಿ ನಿಯಮೋಽಸ್ತಿ। ಪರಸ್ಯ ತು ದೃಷ್ಟಾನ್ತಬಲೇನ ಕಾರಣಾದಿಸ್ವರೂಪಮ್ ನಿರೂಪಯತಃ ಯಥಾದೃಷ್ಟಮೇವ ಸರ್ವಮ್ ಅಭ್ಯುಪಗನ್ತವ್ಯಮ್ ಇತ್ಯಯಮಸ್ತಿ ಅತಿಶಯಃ॥ -ಸೂ.ಭಾ. ೨.೨.೩೮-೭೬

(೨) ನ ಹಿ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಕ್ವಚಿತ್ ಕಿಂಚಿದ್ ವಿವಕ್ಷಿತಾಂಶಂ ಮುಕ್ತ್ವಾ ಸರ್ವಸಾರೂಪ್ಯಂ ಕೇನಚಿತ್ ದರ್ಶಯಿತುಂ ಶಕ್ಯತೇ। ಸರ್ವಸಾರೂಪ್ಯೇ ಹಿ ದೃಷ್ಟಾನ್ತದಾರ್ಷ್ಟಾನ್ತಿಕಭಾವೋಚ್ಛೇದ ಏವ ಸ್ಯಾತ್॥ -ಸೂ.ಭಾ. ೩.೨.೨೦-೭೮೭

೬೨. ದೃಷ್ಟಾಂತವನ್ನು ಪ್ರಯೋಗಿಸಿದಮಾತ್ರದಿಂದ ವಸ್ತುಸಿದ್ಧಿಯಾಯಿತೆಂದು ಭಾವಿಸುವದು ತಪ್ಪು. ಏಕೆಂದರೆ ದೃಷ್ಟಾಂತವು ಪ್ರಕೃತವಾಗಿ ಹೇಳುವ

ವಿಷಯವನ್ನು ಸ್ಪಷ್ಟೀಕರಿಸುವದಕ್ಕೆ ಮಾತ್ರ ಉಪಯೋಗವಾಗುತ್ತದೆ. ನಾಗರಹಾವಿನಂತೆ ನೀರಹಾವು ಇದ್ದಮಾತ್ರದಿಂದ ಅದರಂತೆ ಇದೂ ಸವಿಷವಾಗಿರುವದೆಂದು ಯಾರೂ ಸಾಧಿಸುವದಕ್ಕೆ ಆಗಲಾರದು. ಇದಲ್ಲದೆ ದೃಷ್ಟಾಂತವೆಂಬುದು ಶಾಸ್ತ್ರದಲ್ಲಿ ಹೇಳಿದ್ದರೆ ಅದಕ್ಕೆ ಪ್ರಯೋಜನವನ್ನು ಮಾತ್ರ ಹೇಳಬಹುದೇ ಹೊರತು ದೃಷ್ಟಾಂತವು ಹೊಂದದ ಕಡೆಯಲ್ಲಿಯೂ ಹೊಂದಿಸುವದಕ್ಕೆ ಆಗುವದಿಲ್ಲ. ಅದು ಲೌಕಿಕ ದೃಷ್ಟಾಂತವಾಗಿದ್ದರೆ, ದೃಷ್ಟಾಂತವನ್ನು ಲೋಕಸಮ್ಮತವಾಗುವಂತೆ ಕಲ್ಪಿಸಬೇಕೇ ಹೊರತು ನಮ್ಮ ಇಷ್ಟವಾದದ್ದು ಸಿದ್ಧಿಯಾಗುವದಕ್ಕಾಗಿ ದೃಷ್ಟಾಂತವನ್ನೇ ತಿರಿಚಿ ವಾದಗ್ರಸ್ತವಾಗಿ ಮಾಡಿಬಿಡಬಾರದು. ಏಕೆಂದರೆ ನಮಗೆ ಬೇಕಾಗಿದೆ ಎಂಬ ಕಾರಣದಿಂದ ವಸ್ತುಸಿದ್ಧಿಯನ್ನು ನಿಶ್ಚಯಿಸುವದಕ್ಕೆ ಆಗಲಾರದು. ಇದನ್ನು ನೆನಪಿಟ್ಟರೆ ಲೌಕಿಕವಸ್ತುವಿರುದ್ಧವಾಗಿರುವದನ್ನು ತಿಳಿಸುವದಕ್ಕೂ ಶಾಸ್ತ್ರೀಯದೃಷ್ಟಾಂತಗಳನ್ನು ಬಳಸುವವರ ತರ್ಕವು ಕುತರ್ಕವೆಂದು ಸಿದ್ಧವಾಗುತ್ತದೆ. ಏಕೆಂದರೆ ಆಗ ದೃಷ್ಟಾಂತ ದಾರ್ಷ್ಟಾಂತಿಕಭಾವವೇ ಕೆಟ್ಟುಹೋಗಿಬಿಡುತ್ತದೆ. ಬೆಂಕಿಯು ತಣ್ಣಗಿದೆ ಎಂದಾಗಲಿ ಸೂರ್ಯನು ಚಂದ್ರನಂತೆ ತಂಪಾದ ಕಿರಣಗಳುಳ್ಳವನೆಂದಾಗಲಿ ಯಾವ ದೃಷ್ಟಾಂತದಿಂದಲೂ ತೋರಿಸುವದಕ್ಕೆ ಆಗಲಾರದು. ಇದರಂತೆ ದೃಷ್ಟಾಂತದಲ್ಲಿಲ್ಲದ ಅಂಶವನ್ನೇ ಕಲ್ಪಿಸಿ ಲೋಕಸಮ್ಮತವಾದದ್ದನ್ನು ವಾದಗ್ರಸ್ತವಾಗಿ ಮಾಡುವವರದ್ದು ಕುತರ್ಕಮಾತ್ರವಲ್ಲದೆ ನಗೆಗೀಡೂ ಆಗಿರುತ್ತದೆ ಎಂಬುದೂ ಇದರಿಂದ ಸ್ಪಷ್ಟವಾಗುತ್ತದೆ. ಏಕೆಂದರೆ ಇಲ್ಲದ್ದನ್ನು ಕಲ್ಪಿಸುವದಾದರೆ ಯಾರು ಬೇಕಾದರೂ ಏನನ್ನಾದರೂ ಕಲ್ಪಿಸಬಹುದಾಗುವದು. ಹಗ್ಗವನ್ನು ಹಾವೆಂದೂ ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದೂ ಜನರು ಭ್ರಾಂತಿಯಿಂದ ತಿಳಿಯುವಾಗ ಅವರ ತಿಳಿವಳಿಕೆಯು ತಪ್ಪೆನ್ನದೆ ಆಗ ನಿಜವಾಗಿಯೂ ಒಂದು ಬಗೆಯ ತೋರಿಕೆಯ ಹಾವು (ಪ್ರಾತಿಭಾಸಿಕಸರ್ಪವು) ಅವಿದ್ಯಾಪರಿಣಾಮವಾಗಿ ಹುಟ್ಟಿರುತ್ತದೆ ಎಂದು ವಾದಿಸುವ ಈಚಿನ ವೇದಾಂತಿಗಳು ಈ ಕುತರ್ಕದವರಾಗಿರುತ್ತಾರೆ.

(೧) ನ ಹಿ ಡುಣ್ಡುಭಃ ಸರ್ಪ ಇವ ಇತ್ಯೇತಾವತಾ ಸವಿಷೋ ಭವತಿ। ಸರ್ಪೋ ವಾ ಡುಣ್ಡುಭ ಇವ ಇತ್ಯೇತಾವತಾ ನಿರ್ವಿಷೋ ಭವತಿ॥ -ಸೂ. ಭಾ.೨-೨-೧೦-೨೦

(೨) ನ ಚೇದಂ ಸ್ವಮನೀಷಯಾ ಜಲಸೂರ್ಯಕಾದಿದೃಷ್ಟಾನ್ತಪ್ರಣಯನಮ್। ಶಾಸ್ತ್ರಪ್ರಣೀತಸ್ಯ ತು ಅಸ್ಯ ಪ್ರಯೋಜನಮಾತ್ರಮ್ ಉಪನ್ಯಸ್ಯತೇ॥

-ಸೂ. ಭಾ.೩-೨-೨೦-೨೮೭

(೩) ನ ಹ್ಯಭಿಲಷಿತಸಿದ್ಧಿನಿಬನ್ಧನಾ ವ್ಯವಸ್ಥಾ ಶಕ್ಯಾ ವಿಜ್ಞಾತುಮ್॥

-ಸೂ. ಭಾ. ೨-೩-೫೦-೧೬೯

(೪) ಯಥಾಭೂತಾ ಮೂರ್ತಾಮೂರ್ತಾದಿಪದಾರ್ಥಧರ್ಮಾ ಲೋಕೇ ಪ್ರಸಿದ್ಧಾಃ। ತದ್ದೃಷ್ಟಾನ್ತೋಪಾದಾನೇನ ತದವಿರೋಧ್ಯೇವ ವಸ್ತ್ವನ್ತರಂ ಜ್ಞಾಪಯಿತುಂ ಪ್ರವೃತ್ತಂ ಶಾಸ್ತ್ರಂ ನ ಲೌಕಿಕವಸ್ತುವಿರೋಧಜ್ಞಾಪನಾಯ ಲೌಕಿಕಮೇವ ದೃಷ್ಟಾನ್ತಮ್ ಉಪಾದತ್ತೇ। ಉಪಾದೀಯಮಾನೋಽಪಿ ದೃಷ್ಟಾನ್ತಃ ಅನರ್ಥಕಃ ಸ್ಯಾತ್। ದಾರ್ಷ್ಟಾನ್ತಿಕಾಸಙ್ಗತೇಃ। ನ ಹಿ ಅಗ್ನಿಃ ಶೀತಃ, ಆದಿತ್ಯೋ ನ ತಪತಿ ಇತಿ ವಾ ದೃಷ್ಟಾನ್ತಶತೇನಾಪಿ ಪ್ರತಿಪಾದಯಿತುಂ ಶಕ್ಯಮ್। ಪ್ರಮಾಣಾನ್ತರೇಣ ಅನ್ಯಥಾಧಿಗತತ್ವಾದ್ ವಸ್ತುನಃ॥ -ಬೃ. ಭಾ. ೨-೧-೨೦-೩೧೫

(೫) ಅವಿದ್ಯಮಾನಾರ್ಥಕಲ್ಪನಾಯಾಂ ಸರ್ವಾರ್ಥಸಿದ್ಧಿಪ್ರಸಙ್ಗಾತ್। ಇಯಾನೇವ ಅವಿದ್ಯಮಾನೋ, ವಿರುದ್ಧೋಽವಿರುದ್ಧೋ ವಾ ಅರ್ಥಃ ಕಲ್ಪನೀಯಃ, ನಾತೋಽಧಿಕಃ ಇತಿ ನಿಯಮಹೇತ್ವಭಾವಾತ್ । ಕಲ್ಪನಾಯಾಶ್ಚ ಸ್ವಾಯತ್ತತ್ವಾತ್, ಪ್ರಭೂತತ್ವಸಂಭವಾಚ್ಚ॥
-ಸೂ. ಭಾ. ೨-೨-೧೭-೩೮

(೬) 'ಶುಕ್ತಿಕಾಂ ರಜತಮಿತಿ ಪ್ರತ್ಯೇತಿ' ಇತ್ಯತ್ರ ಶುಕ್ತಿವಚನ ಏವ ಶುಕ್ತಿಕಾಶಬ್ದಃ। ರಜತಶಬ್ದಸ್ತು ರಜತಪ್ರತೀತಿಲಕ್ಷಣಾರ್ಥಃ। ಪ್ರತ್ಯೇತ್ಯೇವ ಹಿ ಕೇವಲಂ ರಜತಮಿತಿ, ನ ತು ತತ್ರ ರಜತಮಸ್ತಿ॥ -ಸೂ. ಭಾ. ೪-೧-೫-೫೧೫

(೭) ನ ಹಿ ಮನೋವಿಕಲ್ಪನಾಯಾಃ ರಜ್ಜುಸರ್ಪಾದಿಲಕ್ಷಣಾಯಾಃ ರಜ್ಜ್ವಾಂ ಪ್ರಲಯಃ ಉತ್ಪತ್ತಿರ್ವಾ। ನ ಚ ಮನಸಿ ರಜ್ಜು ಸರ್ಪಸ್ಯ ಉತ್ಪತ್ತಿಃ ಪ್ರಲಯೋ ವಾ। ನ ಚ ಉಭಯತೋ ವಾ॥
-ಮಾಂ. ಕಾ. ಭಾ.೨-೩೨-೧೧೩

# ೯. ವೇದಾಂತವಾಕ್ಯ

೬೩. ಶಾಂಕರವೇದಾಂತದಲ್ಲಿ ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣವೆಂದು ಅಂಗೀಕರಿಸಿರುವದೊಂದು ವಿಶೇಷವೆಂದು ಹಿಂದೆ (೧೮) ಹೇಳಿರುತ್ತೇವೆ. ಶ್ರುತಿ ಪ್ರಾಮಾಣ್ಯವನ್ನು ಕುರಿತ ಕೆಲವು ಆಕ್ಷೇಪಗಳಿಗೆ ಪರಿಹಾರವನ್ನೂ ಹಿಂದೆ (೪೭-೫೬) ಹೇಳಿರುತ್ತೇವೆ. ಆದರೆ ಇದುವರೆಗೆ ಶಾಸ್ತ್ರವನ್ನು ಅಥವಾ ಶ್ರುತಿಯನ್ನು ಪ್ರಮಾಣ ಪ್ರಧಾನವಾದ ದೃಷ್ಟಿಯಿಂದ ವಿಮರ್ಶಿಸಿದ್ದು ಮಾತ್ರ ಆಗಿರುತ್ತದೆ. ಈಗ ಅದನ್ನು ವಾಕ್ಯಪ್ರಧಾನವಾದ ದೃಷ್ಟಿಯಿಂದ ವಿಮರ್ಶಿಸುವದಕ್ಕೆ ಮೊದಲುಮಾಡುವೆವು. ಏಕೆಂದರೆ ಬ್ರಹ್ಮಜ್ಞಾನವು ವೇದಾಂತವಾಕ್ಯಗಳ ಅರ್ಥದ ವಿಚಾರದಿಂದ ಮಾಡಿದ ನಿಶ್ಚಯದಿಂದ ಉಂಟಾಗುತ್ತದೆ ಎಂಬುದೇ ಈ ದರ್ಶನದ ಮುಖ್ಯೋಪ ದೇಶವಾಗಿರುತ್ತದೆ.

(೧) ವಾಕ್ಯಾರ್ಥವಿಚಾರಣಾಧ್ಯವಸಾನನಿರ್ವೃತ್ತಾ ಹಿ ಬ್ರಹ್ಮಾವಗತಿಃ, ನ ಅನುಮಾನಾದಿ ಪ್ರಮಾಣಾನ್ತರನಿರ್ವೃತ್ತಾ॥ -ಸೂ. ಭಾ.೧-೧-೨-೨೭

(೨) ತಾರ್ಕಿಕೋ ಹಿ ಅನಾಗಮಜ್ಞಃ ಸ್ವಬುದ್ಧಿಪರಿಕಲ್ಪಿತಂ ಯತ್ಕಿಂಚಿದೇವ ಕಲ್ಪಯತಿ। ಅತ ಏವ ಚ ಯೇಯಮ್ ಆಗಮಪ್ರಭೂತಾ ಮತಿಃ ತಾರ್ಕಿಕಾತ್ ಅನ್ಯೇನೈವ ಆಗಮಾಭಿಜ್ಞೇನ ಆಚಾರ್ಯೇಣೈವ ಪ್ರೋಕ್ತಾ ಸತೀ ಸುಜ್ಞಾನಾಯ ಭವತಿ ॥ -ಕ.ಭಾ೧-೨-೯-೬೦

೬೪. ಆಚಾರ್ಯರ ಕಾಲಕ್ಕೆ ವೇದಾಂತವಾಕ್ಯಗಳನ್ನೆಲ್ಲ ವಿಧಿಕಾಂಡದಲ್ಲಿ ಅಡಕ ಮಾಡುವ ಮೀಮಾಂಸಕರೂ ಅವರನ್ನು ಅನುಸರಿಸುವ ವೇದಾಂತಿಗಳೂ ಇರುತ್ತಿದ್ದರು. ಈಗಲೂ ವೇದಾಂತವು ಬ್ರಹ್ಮದ ಉಪಾಸನೆಯನ್ನೇ ವಿಧಿಸುತ್ತದೆ, ಸುಮ್ಮನೆ ಬ್ರಹ್ಮವನ್ನು ತಿಳಿಸುವದಿಲ್ಲ-ಎಂಬ ಶಾಂಕರೇತರ ಮತಗಳ ವೇದಾಂತಿಗಳು ಇರುತ್ತಾರೆ. ಇವರೆಲ್ಲರೂ ಶಾಂಕರವೇದಾಂತಕ್ಕೆ ಪ್ರತಿಪಕ್ಷಿಗಳಾಗಿರುತ್ತಾರೆ. ಆದ್ದರಿಂದ ಅವರ ಆಕ್ಷೇಪಗಳನ್ನು ಪರಿಹರಿಸಿಕೊಳ್ಳುವದು ಜಿಜ್ಞಾಸುಗಳಿಗೆ ಅವಶ್ಯವಾಗಿರುತ್ತದೆ. ಮೊಟ್ಟಮೊದಲನೆಯದಾಗಿ ಬ್ರಹ್ಮವು ಭೂತವಸ್ತುವಾದ್ದರಿಂದ ಅದನ್ನು ಶ್ರುತಿಯು ಹೇಳುವದಿಲ್ಲವೆಂಬ ಮೀಮಾಂಸಕರ ಮತವನ್ನು ವಿಮರ್ಶಿಸಿ ನೋಡೋಣ.

ಶಾಸ್ತ್ರವು ಪ್ರತ್ಯಕ್ಷಾದಿಗೋಚರವಲ್ಲದ ಧರ್ಮವನ್ನು ವಿಧಿಸಬಹುದು. ಆದರೆ ಬ್ರಹ್ಮವು ಭೂತವಸ್ತುವಾಗಿರುವದರಿಂದ ಅದು ಪ್ರತ್ಯಕ್ಷಾದಿವಿಷಯವಾಗಿರಬೇಕು; ಆದ್ದರಿಂದ ಅದನ್ನು ಶಾಸ್ತ್ರವು ತಿಳಿಸಿದರೆ ಅನುವಾದವಾಗುವದೇ ಹೊರತು, ಪ್ರಮಾಣವಾಗುವದಿಲ್ಲ. ಅದನ್ನು ತಿಳಿಸುವದರಿಂದ ಪ್ರಯೋಜನವೂ ಇರುವದಿಲ್ಲ. ಆದ್ದರಿಂದಲೇ ಶಾಸ್ತ್ರವು ಕ್ರಿಯೆಯನ್ನೇ ತಿಳಿಸುವದೆಂದು ಹೇಳಿರುವದಲ್ಲದೆ, ಕ್ರಿಯೆಯಲ್ಲದ ವಸ್ತುವನ್ನು ತಿಳಿಸುವ ವಾಕ್ಯಗಳು ಸ್ವತಃ ವ್ಯರ್ಥವಾಗುವವು; ಆದ್ದರಿಂದಲೇ ಅರ್ಥವಾದಗಳು ವಿಧಿಯನ್ನು ಹೊಗಳುವದರ ಮೂಲಕ ಪ್ರಮಾಣವಾಗಿರುವವೆಂದು ಮೀಮಾಂಸಾಸೂತ್ರದಲ್ಲಿ ನಿರ್ಣಯಿಸಿದೆ. ಆದ್ದರಿಂದ ವೇದಾಂತವಾಕ್ಯಗಳು ಕರ್ಮಕ್ಕೆ ಬೇಕಾದ ಕರ್ತೃ, ದೇವತೆ - ಮುಂತಾದವುಗಳನ್ನು ತಿಳಿಸುವದರಿಂದ ಪ್ರಮಾಣವಾಗಿವೆ ಎಂದು ಎಣಿಸಬೇಕು- ಎಂಬುದು ಮೀಮಾಂಸಕರ ಅಭಿಪ್ರಾಯವು.

ಮೊದಲನೆಯದಾಗಿ ಶಾಸ್ತ್ರವು ಕರ್ಮವನ್ನೇ ತಿಳಿಸಬೇಕೆಂಬುದು ಕರ್ಮಕಾಂಡವಾಕ್ಯದ ವಿಷಯ. ಬ್ರಹ್ಮವು ಭೂತವಸ್ತುವಾದರೂ ಬ್ರಹ್ಮಾತ್ಮನೇ ನಾನು ಎಂಬುದು ಶಾಸ್ತ್ರವಿಲ್ಲದೆ ತಿಳಿಯುವಂತಿಲ್ಲ. ಅದನ್ನು ತಿಳಿದುಕೊಂಡರೆ ಅವಿದ್ಯಾದಿಕ್ಲೇಶಗಳು ಪರಿಹಾರವಾಗುವದರಿಂದ ದೃಷ್ಟಪ್ರಯೋಜನವೂ ಇದೆ. ವೇದವಾಕ್ಯಗಳು ಕ್ರಿಯೆಯನ್ನೇ ಹೇಳಬೇಕೆಂಬುದಿಲ್ಲ. ಏಕೆಂದರೆ ಶ್ರುತಿಯು ಕ್ರಿಯಾಕಾರಕಫಲಗಳನ್ನು ನಿರಾಕರಿಸುತ್ತದೆ. ಉಪಾಸನಾವಾಕ್ಯಗಳಲ್ಲಿ ದೇವತಾದಿಗಳನ್ನು ಹೇಳಿರುವದು ನಿಜ; ಆದರೆ ಏಕತ್ವವನ್ನು ಹೇಳುವ ಬ್ರಹ್ಮವಾಕ್ಯವು ದ್ವೈತವಿಜ್ಞಾನವನ್ನೇ ಬಾಧಿಸುವದರಿಂದ

ಅಲ್ಲಿ ಉಪಾಸನಾವಿಧಿಯಾಗಲಿ ಅದರ ಶೇಷವಾದ ದೇವತಾದಿಗಳಾಗಲಿ ಇರುವ ವೆನ್ನುವದು ಸರಿಯಾಗುವದಿಲ್ಲ.

(೧) ಯದಪಿ ಶಾಸ್ತ್ರತಾತ್ಪರ್ಯವಿದಾಮ್ ಅನುಕ್ರಮಣಮ್''ದೃಷ್ಟೋ ಹಿ ತಸ್ಯಾರ್ಥಃ ಕರ್ಮಾವಬೋಧನಮ್'' ಇತ್ಯೇವಮಾದಿ, ತದ್ ಧರ್ಮಜಿಜ್ಞಾಸಾವಿಷಯತ್ವಾತ್ ವಿಧಿಪ್ರತಿಷೇಧಶಾಸ್ತ್ರಾಭಿಪ್ರಾಯಂ ದ್ರಷ್ಟವ್ಯಮ್॥ -ಸೂ. ಭಾ.೧-೧-೪-೫೫

(೨) ನ ಚ ಪರಿನಿಷ್ಠಿತವಸ್ತುಸ್ವರೂಪತ್ವೇಽಪಿ ಪ್ರತ್ಯಕ್ಷಾದಿವಿಷಯತ್ವಂ ಬ್ರಹ್ಮಣಃ। 'ತತ್ತ್ವಮಸಿ' (ಛಾಂ.೬-೮-೭) ಇತಿ ಬ್ರಹ್ಮಾತ್ಮಭಾವಸ್ಯ ಶಾಸ್ತ್ರಮನ್ತರೇಣ ಅನವಗಮ್ಯಮಾನತ್ವಾತ್॥ -ಸೂ. ಭಾ.೧-೧-೪-೩೮

(೩) ಯತ್ತು ಹೇಯೋಪಾದೇಯರಹಿತತ್ವಾತ್ ಉಪದೇಶಾನರ್ಥಕ್ಯಮ್ ಇತಿ। ನೈಷ ದೋಷಃ। ಹೇಯೋಪಾದೇಯಶೂನ್ಯಬ್ರಹ್ಮಾತ್ಮತಾವಗಮಾದೇವ ಸರ್ವಕ್ಲೇಶಪ್ರಹಾಣಾತ್ ಪುರುಷಾರ್ಥಸಿದ್ಧೇಃ॥ -ಸೂ. ಭಾ.೧-೧-೪-೩೮

(೪) ಸರ್ವೇಷು ಹಿ ವೇದಾನ್ತೇಷು ವಾಕ್ಯಾನಿ ತಾತ್ಪರ್ಯೇಣ ಏತಸ್ಯಾರ್ಥಸ್ಯ ಪ್ರತಿಪಾದಕತ್ವೇನ ಸಮನುಗತಾನಿ॥ -ಸೂ. ಭಾ. ೧-೧-೪-೩೭

(೫) ನ ಚ ತೇಷಾಂ ಕರ್ತೃಸ್ವರೂಪಪ್ರತಿಪಾದನಪರತಾ ಅವಸೀಯತೇ। ''ತತ್ಕೇನ ಕಂ ಪಶ್ಯೇತ್''(ಬೃ.೨-೪-೧೩) ಇತ್ಯಾದಿ ಕ್ರಿಯಾಕಾರಕಫಲನಿರಾಕರಣಶ್ರುತೇಃ ॥ -ಸೂ. ಭಾ.೧-೧-೪-೩೮

(೬) ದೇವತಾದಿಪ್ರತಿಪಾದನಸ್ಯ ತು ಸ್ವವಾಕ್ಯಗತೋಪಾಸನಾರ್ಥತ್ವೇಽಪಿ ನ ಕಶ್ಚಿದ್ವಿರೋಧಃ। ನ ತು ತಥಾ ಬ್ರಹ್ಮಣ ಉಪಾಸನಾವಿಧಿಶೇಷತ್ವಂ ಸಂಭವತಿ। ಏಕತ್ವೇ ಹೇಯೋಪಾದೇಯಶೂನ್ಯತಯಾ ಕ್ರಿಯಾಕಾರಕಾದಿದ್ವೈತವಿಜ್ಞಾನೋಪಮರ್ದೋಪಪತ್ತೇಃ। ನ ಹಿ ಏಕತ್ವವಿಜ್ಞಾನೇನ ಉನ್ಮಥಿತಸ್ಯ ದ್ವೈತವಿಜ್ಞಾನಸ್ಯ ಪುನಃ ಸಂಭವೋಽಸ್ತಿ, ಯೇನ ಉಪಾಸನಾವಿಧಿಶೇಷತ್ವಂ ಬ್ರಹ್ಮಣಃ ಪ್ರತಿಪದ್ಯೇತ॥ -ಸೂ. ಭಾ.೧-೧-೪-೩೮

೬೫. ಪ್ರವೃತ್ತಿಯನ್ನೊ ನಿವೃತ್ತಿಯನ್ನೊ ವಿಧಿಸುವ ವಾಕ್ಯಗಳು, ಅವಕ್ಕೆ ಶೇಷವಾಗಿರುವ ವಸ್ತುಗಳು- ಇಷ್ಟನ್ನಲ್ಲದೆ ಬರಿಯ **ಭೂತವಸ್ತು**ವನ್ನು ಹೇಳುವ ವೇದವಾಕ್ಯವೇ ಇಲ್ಲವೆಂದು ಕೆಲವರು ಹೇಳುತ್ತಾರೆ. ಮೀಮಾಂಸಕರ ಮತದಲ್ಲಿ ಜ್ಞಾನಕಾಂಡವೆಂಬುದೂ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳಿಗೆ ಶೇಷವಾಗಿ ರುವ ವಿಷಯವನ್ನೇ ಹೇಳುತ್ತದೆ. ಮತ್ತೆ ಕೆಲವರ ಮತದಲ್ಲಿ ಬ್ರಹ್ಮವನ್ನು ಶಾಸ್ತ್ರವು ಹೇಳುತ್ತದೆಯಾದರೂ ಸ್ವತಂತ್ರವಾಗಿ ಅದನ್ನು ತಿಳಿಸುವದಿಲ್ಲ; ಮತ್ತೇನೆಂದರೆ ಉಪಾಸನಾವಿಧಿಗೆ ಶೇಷವಾಗಿಯೇ ತಿಳಿಸುತ್ತದೆ. ಜ್ಞಾನಕಾಂಡದಲ್ಲಿಯೂ ಕೆಲವು ಉಪಾಸನಾವಿಧಿಗಳಿವೆ. ''ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ'' (ಬೃ.೨-೪-೯) (''ಎಲೆ, ಆತ್ಮನನ್ನು ಕಾಣಬೇಕು, ಕೇಳಬೇಕು, ಯೋಚಿಸಬೇಕು, ಧ್ಯಾನಮಾಡಬೇಕು'',) ''ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ''

(ಛಾಂ. ೮-೭-೧) 'ಆತನನ್ನು ಹುಡುಕಬೇಕು, ಆತನನ್ನೇ ತಿಳಿದುಕೊಳ್ಳಬೇಕು', 'ಆತ್ಮೇತ್ಯೇವೋಪಾಸೀತ' (ಬೃ. ೧-೪-೭) 'ಆತ್ಮನೆಂದೇ ಉಪಾಸನೆಮಾಡಬೇಕು' -ಎಂದು ಮುಂತಾದವು ಇಂಥ ವಿಧಿಗಳು. ಉಪಾಸನೆಮಾಡಬೇಕಾದ ಬ್ರಹ್ಮದ ಅಥವಾ ಪರಮಾತ್ಮನ ಸ್ವರೂಪವನ್ನು ತಿಳಿಸುವದಕ್ಕೆ ವಿಧಿಯಿಲ್ಲದ ಬ್ರಹ್ಮವಾಕ್ಯಗಳು ಬಂದಿರುತ್ತವೆ- ಎಂಬುದು ಅವರ ಅಭಿಪ್ರಾಯವು. ಹೇಗೆ ಅದೃಷ್ಟವಾದ ಸ್ವರ್ಗವು ಕರ್ಮದಿಂದ ಪಡೆಯತಕ್ಕದ್ದೋ ಅದರಂತೆ ಅದೃಷ್ಟವಾದ ಮೋಕ್ಷವೂ ಉಪಾಸನಾ ರೂಪವಾದ ಮಾನಸಕರ್ಮದಿಂದ ದೊರೆಯತಕ್ಕದ್ದು ಎಂದು ಅವರು ತಿಳಿದು ಕೊಂಡಿರುತ್ತಾರೆ. ಈ ಉಪಾಸನೆಯಿಂದ ಅವಿದ್ಯೆಯು ಹೋಗುವದೆಂದೂ ಕೆಲವರ ನಂಬಿಕೆ.

ಆದರೆ ಇದು ಸರಿಯಲ್ಲ. ಉಪನಿಷತ್ತಿನಲ್ಲಿ ಮಾತ್ರವೇ ತಿಳಿಯಬರುವ ಪರಮಪುರುಷನನ್ನು ಇಲ್ಲವೆನ್ನುವದಾಗಲಿ, ವೇದದಿಂದ ತಿಳಿಯಬರುವದಿಲ್ಲವೆನ್ನುವ ದಾಗಲಿ ಶಕ್ಯವಲ್ಲ. ಏಕೆಂದರೆ ಅವನನ್ನು ನಿರ್ವಿಶೇಷನಾದ ನಮ್ಮ ಆತ್ಮನೆಂದೇ ಉಪನಿಷತ್ತುಗಳಲ್ಲಿ ಕರೆದಿದೆ. ಆತ್ಮನನ್ನು ಇಲ್ಲವೆಂದು ನಿರಾಕರಿಸುವದಕ್ಕೆ ಆಗ ಲಾರದು; ಏಕೆಂದರೆ ಯಾವನು ಹಾಗೆ ನಿರಾಕರಿಸುವದಕ್ಕೆ ಪ್ರಯತ್ನಿಸುವನೋ ಅವನೇ ಆತ್ಮನು. ಅವನನ್ನು **ಔಪನಿಷದಪುರುಷ**ನೆಂದು ಕರೆಯುವದರಿಂದ ಅವನನ್ನು ಪ್ರಧಾನವಾಗಿಯೇ ಉಪನಿಷತ್ತುಗಳಲ್ಲಿ ಪ್ರತಿಪಾದಿಸಿದೆ, ಮತ್ತೊಂದು ವಿಧಿಗೆ ಶೇಷವಾಗಿ ಅಲ್ಲ-ಎಂಬುದು ಸ್ಪಷ್ಟವಾಗುತ್ತದೆ.

ಎಷ್ಟೋ ಕಡೆಗಳಲ್ಲಿ ಬ್ರಹ್ಮಾತ್ಮೈಕತ್ವವನ್ನು ಹೇಳುವ ವಾಕ್ಯಗಳು ಬಂದು ಅಷ್ಟರಲ್ಲಿಯೇ ಮುಗಿದಿರುತ್ತವೆ. ಅವುಗಳ ಸಂಬಂಧದಲ್ಲಿ ಯಾವ ವಿಧಿಯೂ ಇರುವದೇ ಇಲ್ಲ. ಆದ್ದರಿಂದ ಬ್ರಹ್ಮಾತ್ಮಸ್ವರೂಪವನ್ನು ತಿಳಿಸುವದರಲ್ಲಿಯೇ ಉಪನಿಷತ್ತಿಗೆ ತಾತ್ಪರ್ಯವೆಂದು ಹೇಳಬೇಕಾಗುತ್ತದೆ. ಕೆಲವು ಕಡೆಗಳಲ್ಲಿ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂದು ಮುಂತಾಗಿ ವಿಧಿಯಂತಿರುವ ವಾಕ್ಯಗಳಿರುವದು ನಿಜ. ಆದರೆ ದರ್ಶನಮಾಡಿಕೊಳ್ಳಬೇಕೆಂದು ಅಲ್ಲಿ ಹೇಳಿರುವದು ನಮ್ಮ ಆತ್ಮನನ್ನೇ. ಆದ್ದರಿಂದ ಹೊಸದಾಗಿ ದರ್ಶನವನ್ನುಮಾಡಿಕೊಳ್ಳಬೇಕೆಂದು ಅಲ್ಲಿ ವಿಧಿಸಿದೆ ಎನ್ನುವದು ಸರಿಯಲ್ಲ. ಆತ್ಮಸ್ವರೂಪವನ್ನು ತಿಳಿಸುವ ವಾಕ್ಯಗಳಿಂದಲೇ ತಿಳಿಯ ಬೇಕಾದದ್ದು ತಿಳಿದೇಬಿಡುವದರಿಂದ ಅದನ್ನು ತಿಳಿದಮೇಲೆ ವಿಧಿಸತಕ್ಕದ್ದು ಯಾವದೂ ಉಳಿಯುವದೂ ಇಲ್ಲ. ಆದ್ದರಿಂದ ಬಹಿರ್ಮುಖರಾಗಿ ನನಗೆ ಇದಾಗ ಬೇಕು, ಇದಾಗಬಾರದು-ಎಂದು ಕರ್ಮಗಳಲ್ಲಿ ತೊಡಗಿ ಆತ್ಯಂತಿಕಪುರುಷಾರ್ಥ ವನ್ನು ಪಡೆಯದೆ ಸಂಕಟಪಡುತ್ತಿರುವವರಿಗಾಗಿ 'ಹೊರಗೆ ನೋಡಬೇಡಿ, ಆತ್ಮನನ್ನೇ

ನೋಡಿ' ಎಂದು ಹಿಂದಿರುಗಿಸುವಮಟ್ಟಿಗೆ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂದು ಮುಂತಾದ ವಿಧಿಗಳು ಉಪಯುಕ್ತವಾಗಿವೆ. ಹೀಗೆ ಆತ್ಮನನ್ನು ಹುಡುಕುವದಕ್ಕೆ ಮೊದಲುಮಾಡಿದವನಿಗೆ ಬೇಕೆಂದು ತೆಗೆದುಕೊಳ್ಳುವದಕ್ಕಾಗಲಿ ಬೇಡವೆಂದು ತೊಲಗಿಸಿಕೊಳ್ಳುವದಕ್ಕಾಗಲಿ ಆಗದಂಥ ಎಲ್ಲರೊಳಗಿನ ಪರಮಾರ್ಥವಾಗಿರುವ ಆತ್ಮನನ್ನೇ 'ಈ ಆತ್ಮನೇ ಇದೆಲ್ಲವೂ ಆಗಿರುತ್ತಾನೆ', 'ಎಲ್ಲಿ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಯಾರನ್ನು ಏತರಿಂದ ನೋಡಬೇಕು?' 'ಈ ಆತ್ಮನು ಬ್ರಹ್ಮವೇ'-ಎಂದು ಮುಂತಾಗಿ ಉಪದೇಶಿಸುತ್ತವೆ. ಆದ್ದರಿಂದ ಜ್ಞಾನಕಾಂಡದಲ್ಲಿ ಯಾವ ವಿಧಿಗೂ ಬ್ರಹ್ಮವು ಶೇಷವಾಗಿರುವದೆಂದು ಕಲ್ಪಿಸುವದಕ್ಕೆ ಆಗುವದಿಲ್ಲ.

(೧) ಯೋಽಸೌ ಉಪನಿಷತ್ಸ್ವೇವಾಧಿಗತಃ ಪುರುಷಃ, ಅಸಂಸಾರೀ, ಬ್ರಹ್ಮ, ಉತ್ಪಾದ್ಯಾದಿಚತುರ್ವಿಧದ್ರವ್ಯವಿಲಕ್ಷಣಃ, ಸ್ವಪ್ರಕರಣಸ್ಥೋಽನನ್ಯಶೇಷಃ, ನಾಸೌ ನಾಸ್ತಿ ನಾಧಿಗಮ್ಯತೇ ಇತಿ ವಾ ಶಕ್ಯಂ ವದಿತುಮ್। 'ಸ ಏಷ ನೇತಿ ನೇತ್ಯಾತ್ಮಾ' (ಬೃ.೩-೯-೨೬) ಇತ್ಯಾತ್ಮಶಬ್ದಾತ್, ಆತ್ಮನಶ್ಚ ಪ್ರತ್ಯಾಖ್ಯಾತುಮ್ ಅಶಕ್ಯತ್ವಾತ್, ಯ ಏವ ನಿರಾಕರ್ತಾ ತಸ್ಯೈವಾತ್ಮತ್ವಾತ್॥ - ಸೂ.ಭಾ.೧-೧-೪-೫೪

(೨) "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" (ಬೃ. ೩-೯-೨೬) ಇತಿ ಚ ಔಪನಿಷದತ್ವವಿಶೇಷಣಂ ಪುರುಷಸ್ಯ ಉಪನಿಷತ್ಸ್ವೇವ ಪ್ರಾಧಾನ್ಯೇನ ಪ್ರಕಾಶ್ಯಮಾನತ್ವೇ ಉಪಪದ್ಯತೇ। ಅತಃ ಭೂತವಸ್ತುಪರೋ ವೇದಭಾಗೋ ನಾಸ್ತಿ ಇತಿ ವಚನಂ ಸಾಹಸಮಾತ್ರಮ್॥

-ಸೂ.ಭಾ.೧-೧-೪-೫೪

(೩) ನ ಹಿ ಏವಂ ಲಕ್ಷಣಮ್ ಆತ್ಮನೋ ಯಾಥಾತ್ಮ್ಯಮ್ ಉತ್ಪಾದ್ಯಂ ವಿಕಾರ್ಯಮ್ ಆಪ್ಯಂ ಸಂಸ್ಕಾರ್ಯಂ ವಾ ಕರ್ತೃಭೋಕ್ತೃರೂಪಂ ವಾ ಯೇನ ಕರ್ಮಶೇಷತಾ ಸ್ಯಾತ್। ಸರ್ವಾಸಾಮ್ ಉಪನಿಷದಾಮ್ ಆತ್ಮಯಾಥಾತ್ಮ್ಯನಿರೂಪಣೇನೈವ ಉಪಕ್ಷಯಾತ್॥

-ಈಶ. ಅವ.೧

(೪) ಕಿಮರ್ಥಾನಿ ತರ್ಹಿ "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ" ಇತ್ಯಾದೀನಿ ವಿಧಿಚ್ಛಾಯಾನಿ ವಚನಾನಿ? ಸ್ವಾಭಾವಿಕಪ್ರವೃತ್ತಿವಿಷಯವಿಮುಖೀಕರಣಾರ್ಥಾನಿ ಇತಿ ಬ್ರೂಮಃ। ಯೋ ಹಿ ಬಹಿರ್ಮುಖಃ ಪ್ರವರ್ತತೇ ಪುರುಷಃ ಇಷ್ಟಂ ಮೇ ಭೂಯಾದನಿಷ್ಟಂ ಮಾ ಭೂದಿತಿ, ನ ಚ ತತ್ರಾತ್ಯನ್ತಿಕಂ ಪುರುಷಾರ್ಥಂ ಲಭತೇ, ತಮ್ ಆತ್ಯನ್ತಿಕಪುರುಷಾರ್ಥವಾಞ್ಛಿನಂ ಸ್ವಾಭಾವಿಕ ಕಾರ್ಯಕರಣಸಙ್ಘಾತಪ್ರವೃತ್ತಿಗೋಚರಾದ್ ವಿಮುಖೀಕೃತ್ಯ ಪ್ರತ್ಯಗಾತ್ಮಸ್ರೋತಸ್ತಯಾ ಪ್ರವರ್ತಯನ್ತಿ "ಆತ್ಮಾ ವಾ ಅರೇ ದ್ರಷ್ಟವ್ಯಃ" ಇತ್ಯಾದೀನಿ। ತಸ್ಯ ಆತ್ಮಾನ್ವೇಷಣಾಯ ಪ್ರವೃತ್ತಸ್ಯ ಅಹೇಯಮ್ ಅನುಪಾದೇಯಂ ಚ ಆತ್ಮತತ್ತ್ವಮ್ ಉಪದಿಶ್ಯತೇ। "ಇದಂ ಸರ್ವಂ ಯದಯಮಾತ್ಮಾ" (ಬೃ.೨-೪-೬), "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್.....ಕೇನ ಕಂ ವಿಜಾನೀಯಾತ್...ವಿಜ್ಞಾತಾರಮರೇ ಕೇನ ವಿಜಾನೀಯಾತ್" (ಬೃ.೪-೫-೧೫), 'ಅಯಮಾತ್ಮಾ ಬ್ರಹ್ಮ' (ಬೃ.೨-೫-೧೯) ಇತ್ಯಾದಿಭಿಃ॥

-ಸೂ. ಭಾ.೧-೧-೪-೫೨

(೫) ದ್ರಷ್ಟವ್ಯವಿಧೇರ್ವಿಷಯಸಮರ್ಪಕಾಣಿ ಏತಾನಿ ಇತಿ ಚೇತ್। ನ। 'ಅರ್ಥಾನ್ತರಾಭಾವಾತ್' ಇತ್ಯುಕ್ತೋತ್ತರತ್ವಾತ್। ಆತ್ಮವಸ್ತುಸ್ವರೂಪಸಮರ್ಪಕೈರೇವ ವಾಕ್ಯೈಃ 'ತತ್ತ್ವಮಸಿ' ಇತ್ಯಾದಿಭಿಃ ಶ್ರವಣಕಾಲೇ ಏವ ತದ್ದರ್ಶನಸ್ಯ ಕೃತತ್ವಾತ್ ದ್ರಷ್ಟವ್ಯವಿಧೇರ್ನಾನುಷ್ಠಾನಾನ್ತರಂ ಕರ್ತವ್ಯಮ್ ಇತ್ಯುಕ್ತೋತ್ತರಮೇತತ್॥ -ಬೃ. ಭಾ. ೧-೪-೭-೧೩೭

೭೬. ಬ್ರಹ್ಮಸ್ವರೂಪವನ್ನು ತಿಳಿಸುವ ವಾಕ್ಯಗಳಾಗಲಿ ಬ್ರಹ್ಮಾತ್ಮೈಕತ್ವವನ್ನು ತಿಳಿಸುವ ವಾಕ್ಯಗಳಾಗಲಿ ಬ್ರಹ್ಮವಾಚಕವಾದ ಪದವನ್ನು ಒಳಗೊಂಡಿರಲೇಬೇಕು. ಏಕೆಂದರೆ ವಾಕ್ಯವು ಪದಾರ್ಥಗಳ ಸಂಬಂಧವೆಂಬ ವಾಕ್ಯಾರ್ಥವನ್ನು ಹೇಳಬೇಕಾಗಿರುವದರಿಂದ ಅದರಲ್ಲಿರುವ ಪದಗಳು ಆಯಾ ಪದಾರ್ಥಗಳನ್ನು ಹೇಳಬೇಕಾದದ್ದು ಅವಶ್ಯವಾಗಿರುತ್ತದೆ. ಆದ್ದರಿಂದ ಬ್ರಹ್ಮವಾಚಕಪದವಿಲ್ಲದೆ ಬ್ರಹ್ಮವನ್ನು ಹೇಳುವ ವಾಕ್ಯವು ಇರುವದು ಅಸಂಭವ. ಆದರೆ ಬ್ರಹ್ಮವು ಪದವಾಚ್ಯವಾದರೆ ಅದು ನಿರ್ವಿಶೇಷವೆಂಬ ಸಿದ್ಧಾಂತಕ್ಕೆ ಹಾನಿಯುಂಟಾಗುತ್ತದೆ. ಬ್ರಹ್ಮವನ್ನು ಯಾವದೊಂದು ಶಬ್ದದಿಂದಲೂ ತಿಳಿಸುವದಕ್ಕೆ ಆಗುವದಿಲ್ಲವೆಂದು ಹಿಂದೆ (೪೦) ಹೇಳಿರುವದನ್ನು ಕೈಬಿಡಬೇಕಾಗಿ ಬರುತ್ತದೆ. ಹೀಗೆ ಪೂರ್ವಾಪರವಿರುದ್ಧವಾಗಿರುವ ಈ ಬ್ರಹ್ಮವಾದವನ್ನು ಹೇಗೆ ನಂಬೋಣ?-ಎಂದು ಯಾರಿಗಾದರೂ ಶಂಕೆಯುಂಟಾಗಬಹುದು.

ಬ್ರಹ್ಮವು ಯಾವ ಶಬ್ದಕ್ಕೂ ಗೋಚರವಲ್ಲವೆಂಬುದೇ ಇಲ್ಲಿ ಸಿದ್ಧಾಂತವು. ಏಕೆಂದರೆ ಲೋಕದಲ್ಲಿ ಎತ್ತು, ಕುದುರೆ-ಮುಂತಾದ ಶಬ್ದಗಳು ಜಾತಿಯ ಮೂಲಕವಾಗಿಯೂ ಅಡಿಗೆಯವನು, ಓದುವವನು-ಮುಂತಾದ ಶಬ್ದಗಳು ಕ್ರಿಯೆಯ ಮೂಲಕವಾಗಿಯೂ ಬಿಳಿಯದು, ಕರಿಯದು- ಮುಂತಾದವು ಗುಣದ ಮೂಲಕವಾಗಿಯೂ ಧನವಂತನು, ಗೋಮಂತನು-ಮುಂತಾದವು ಸಂಬಂಧದ ಮೂಲಕವಾಗಿಯೂ ಆಯಾ ಪದಾರ್ಥಗಳನ್ನು ತಿಳಿಸುವವು. ಆದರೆ ಬ್ರಹ್ಮದಲ್ಲಿ ಜಾತಿಯೇ ಮುಂತಾದ ಯಾವ ಶಬ್ದಪ್ರವೃತ್ತಿನಿಮಿತ್ತವೂ ಇಲ್ಲದಿರುವದರಿಂದ ಅದು ಯಾವ ಪದಕ್ಕೂ ಅರ್ಥವಲ್ಲ. ಅದು ಅದ್ವಿತೀಯವೂ, ಅವಿಷಯವೂ, ಎಲ್ಲದರ ಸ್ವರೂಪವೂ ಆಗಿರುವದರಿಂದಲೂ ಅದು ಯಾವ ಶಬ್ದಕ್ಕೂ ವಿಷಯವಾಗಲಾರದು. ಬ್ರಹ್ಮ, ಆತ್ಮ-ಮುಂತಾದ ಶಬ್ದಗಳು ಕೂಡ ಬ್ರಹ್ಮವನ್ನು ತಿಳಿಸಲಾರವು. ಆದರೂ ಅಧ್ಯಾರೋಪಾಪವಾದನ್ಯಾಯದಿಂದ ಕೆಲಕೆಲವು ನಾಮರೂಪಕರ್ಮಗಳನ್ನು ಅಧ್ಯಾರೋಪಮಾಡಿಯೇ ವಿಜ್ಞಾನ, ಆನಂದ, ವಿಜ್ಞಾನಘನ, ಬ್ರಹ್ಮ, ಆತ್ಮ-ಮುಂತಾದ ಶಬ್ದಗಳನ್ನು ಬ್ರಹ್ಮಕ್ಕೆ ಉಪಯೋಗಿಸಿರುತ್ತದೆ-ಎಂದು ತಿಳಿಯಬೇಕು. ಬ್ರಹ್ಮವನ್ನು ಸತ್ಯವೆಂದು ಕರೆಯುವದರಿಂದ ಅದು ಹುಸಿಯಲ್ಲವೆಂದು ತಿಳಿಸಿದಂತೆ ಆಗುತ್ತದೆ; ಜ್ಞಾನವೆಂದು ಕರೆಯುವದರಿಂದ ಅದು ಜಡವಲ್ಲವೆಂದು ತಿಳಿಸಿದಂತೆ ಆಗುವದು. ಇದರಂತೆ ಬ್ರಹ್ಮ ಎಂಬ ಶಬ್ದವು ಅದು ಅಲ್ಪವಲ್ಲವೆಂದು ತಿಳಿಸುವದಕ್ಕೆ

ಉಪಯೋಗವಾಗುತ್ತದೆ; ಅದರಲ್ಲಿ ಬೃಹತ್ತ್ವವೆಂಬ ಧರ್ಮವಿದೆ ಎಂದು ತಿಳಿಸುವದಕ್ಕಲ್ಲ. ದೇಹವುಳ್ಳ ಪ್ರತ್ಯಗಾತ್ಮನನ್ನು ತಿಳಿಸುವ ಆತ್ಮ ಎಂಬ ಶಬ್ದವನ್ನೇ ದೇಹಾದ್ಯತೀತವಾಗಿರುವ ವಸ್ತುವನ್ನು ತಿಳಿಸುವದಕ್ಕೆ ಧಾತುವಿನ ಅರ್ಥವನ್ನನುಸರಿಸಿ ಉಪಯೋಗಿಸಲಾಗಿರುತ್ತದೆ. ವ್ಯಾಪಿಸಿಕೊಂಡಿರುವದು, ಎಲ್ಲವನ್ನೂ ತೆಗೆದುಕೊಳ್ಳುವದು, ಎಲ್ಲವನ್ನೂ ತಿನ್ನುವದು ಅಥವಾ ಸಂಹರಿಸುವದು, ಸಂತತವಾಗಿರುವದು- ಎಂಬುದು ಆತ್ಮಶಬ್ದದ ಅರ್ಥವು. ದೇಹಿಯಾದ ಆತ್ಮನ ವಾಚಕವಾದ ಈ ಆತ್ಮಶಬ್ದವು ಅವಾಚ್ಯನಾದ ಆತ್ಮನಲ್ಲಿಯೂ ಅವನು ಅನಾತ್ಮವಲ್ಲವೆಂದು ತಿಳಿಸುವದಕ್ಕೆ ಪ್ರಯುಕ್ತವಾಗಿರುತ್ತದೆ ಎಂದು ತಿಳಿಯಬೇಕು. ಹೀಗೆಯೇ ಬ್ರಹ್ಮವು ಪದವಾಚ್ಯವಲ್ಲದಿದ್ದರೂ ಅಧ್ಯಾರೋಪದಿಂದ ಬ್ರಹ್ಮವನ್ನು ಕೆಲವು ಶಬ್ದಗಳು ತಿಳಿಸಬಹುದಾಗಿದೆ. ಆದ್ದರಿಂದ ಬ್ರಹ್ಮವು ವಾಚ್ಯವಲ್ಲದಿದ್ದರೆ ಬ್ರಹ್ಮವಾಕ್ಯವಿರಲಾರದು ಎಂಬ ಶಂಕೆಗೆ ಕಾರಣವಿಲ್ಲ.

(೧) ಸರ್ವೋ ಹಿ ಶಬ್ದಃ ಅರ್ಥಪ್ರಕಾಶನಾಯ ಪ್ರಯುಕ್ತಃ ಶ್ರೂಯಮಾಣಶ್ಚ ಶ್ರೋತೃಭಿಃ ಜಾತಿಕ್ರಿಯಾಗುಣಸಂಬನ್ಧದ್ವಾರೇಣ ಸಙ್ಗತಿಗ್ರಹಣಸವ್ಯಪೇಕ್ಷಃ ಅರ್ಥಂ ಪ್ರತ್ಯಾಯಯತಿ, ನಾನ್ಯಥಾ। ಅದೃಷ್ಟತ್ವಾತ್। ತದ್ ಯಥಾ ಗೌಃ, ಅಶ್ವಃ ಇತಿ ವಾ ಜಾತಿತಃ। ಪಚತಿ ಪಠತೀತಿ (ಪಾಚಕಃ ಪಾಠಕಃ ಇತಿ ವಾ) ಕ್ರಿಯಾತಃ। ಶುಕ್ಲಃ ಕೃಷ್ಣಃ ಇತಿ ವಾ ಗುಣತಃ। ಧನೀ ಗೋಮಾನ್ ಇತಿ ವಾ ಸಂಬನ್ಧತಃ। ನ ತು ಬ್ರಹ್ಮ ಜಾತಿಮತ್। ಅತಃ ನ ಸದಾದಿಶಬ್ದವಾಚ್ಯಮ್। ನಾಪಿ ಗುಣವತ್ ಯೇನ ಗುಣಶಬ್ದೇನೋಚ್ಯೇತ। ನಾಪಿ ಕ್ರಿಯಾಶಬ್ದವಾಚ್ಯಮ್। ನಿಷ್ಕ್ರಿಯತ್ವಾತ್। "ನಿಷ್ಕಲಂ ನಿಷ್ಕ್ರಿಯಂ ಶಾನ್ತಮ್" (ಶ್ವೇ. ೬-೧೯)ಇತಿ ಶ್ರುತೇಃ। ನ ಚ ಸಂಬನ್ಧಿ। ಏಕತ್ವಾತ್। ಅದ್ವಯತ್ವಾತ್, ಅವಿಷಯತ್ವಾತ್। ಆತ್ಮತ್ವಾಚ್ಚ ನ ಕೇನಚಿತ್ ಶಬ್ದೇನ ಉಚ್ಯತೇ ಇತಿ ಯುಕ್ತಮ್॥

-ಗೀ. ಭಾ.೧೩-೧೨-೭೫

(೨) ಅಧ್ಯಾರೋಪಿತನಾಮರೂಪಕರ್ಮದ್ವಾರೇಣ ಬ್ರಹ್ಮ ನಿರ್ದಿಶ್ಯತೇ 'ವಿಜ್ಞಾನಮಾನನ್ದಂ ಬ್ರಹ್ಮ' 'ಪ್ರಜ್ಞಾನಘನ ಏವ', 'ಬ್ರಹ್ಮ', 'ಆತ್ಮಾ' ಇತ್ಯೇವಮಾದಿ ಶಬ್ದೈಃ॥

-ಬೃ. ಭಾ. ೨-೩-೬-೩೪೮

(೩) ಬ್ರಹ್ಮಶಬ್ದಸ್ಯ ಹಿ ವ್ಯುತ್ಪಾದ್ಯಮಾನಸ್ಯ ನಿತ್ಯಶುದ್ಧತ್ವಾದಯೋ ಅರ್ಥಾಃ ಪ್ರತೀಯನ್ತೇ। ಬೃಂಹತೇರ್ಧಾತೋರರ್ಥಾನುಗಮಾತ್॥ -ಸೂ. ಭಾ. ೧-೧-೧-೧೯

(೪) ಆತ್ಮಾ ಆಪ್ನೋತೇಃ ಅತ್ತೇಃ ಅತತೇರ್ವಾ ಪರಃ ಸರ್ವಜ್ಞಃ ಸರ್ವಶಕ್ತಿಃ, ಅಶನಾಯಾದಿಸರ್ವಸಂಸಾರಧರ್ಮವರ್ಜಿತಃ, ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಅಜೋಽಜರೋಽಮರೋಽಮೃತೋಽಭಯೋಽದ್ವಯಃ॥ -ಐ. ಭಾ.೧-೧-೨೮

(೫)"ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸನ್ತತೋ ಭಾವಸ್ತಸ್ಮಾದಾತ್ಮೇತಿ ಕೀರ್ತ್ಯತೇ।" ಇತಿ ಆತ್ಮಶಬ್ದವ್ಯುತ್ಪತ್ತಿಸ್ಮರಣಾತ್॥ -ಕ. ಭಾ.೨-೧-೧-೧೧೧

(೬) ಕಥಂ ತರ್ಹಿ 'ಆತ್ಮೈವಾಧಸ್ತಾತ್', 'ಸ ಆತ್ಮಾ' ಇತ್ಯಾದಿಶಬ್ದಾಃ ಆತ್ಮಾನಂ ಪ್ರತ್ಯಾಯಯನ್ತಿ? ನೈಷ ದೋಷ। ದೇಹವತಿ ಪ್ರತ್ಯಗಾತ್ಮನಿ ಭೇದವಿಷಯೇ ಪ್ರಯುಜ್ಯಮಾನಃ ಶಬ್ದಃ ದೇಹಾದೀನಾಮಾತ್ಮತ್ವೇ ಪ್ರತ್ಯಾಖ್ಯಾಯಮಾನೇ ಯತ್ ಪರಿಶಿಷ್ಟಂ ತತ್ ಅವಾಚ್ಯಮಪಿ ಪ್ರತ್ಯಾಯಯತಿ॥ -ಛಾಂ. ಭಾ.೭-೧-೩-೫೫೦

೬೭. ಈಗ ಇನ್ನೊಂದು ಶಂಕೆಯು ಎದ್ದುಕೊಳ್ಳುತ್ತದೆ : ಬ್ರಹ್ಮವಾಕ್ಯದಲ್ಲಿ ಯಾವದಾದರೊಂದು ಪದವು ಬ್ರಹ್ಮವನ್ನು ನೇರಾಗಿ ತಿಳಿಸಲೇಬೇಕು. ಇಲ್ಲದಿದ್ದರೆ ವಾಕ್ಯದಿಂದ ಬ್ರಹ್ಮಸ್ವರೂಪವು ನಮಗೆ ತಿಳಿಯುವದಕ್ಕೇ ಅವಕಾಶವಿರುವದಿಲ್ಲ. ವಾಕ್ಯದಲ್ಲಿ ಒಂದೊಂದು ಪದವೂ ಬ್ರಹ್ಮವನ್ನು ತಿಳಿಸುತ್ತದೆ ಎನ್ನುವದಾದರೆ ಒಂದೇ ಪದವು ಸಾಕಾಗಿರುವಲ್ಲಿ ಅನೇಕ ಪದಗಳ ಸಮುದಾಯರೂಪವಾದ ವಾಕ್ಯವಾದರೂ ಏತಕ್ಕೆ ಬೇಕು? ವಾಕ್ಯವೆಂದರೆ ಪದಾರ್ಥಗಳ ಸಂಬಂಧವನ್ನು ಹೇಳಬೇಕಲ್ಲವೆ?

ನಿಜವಾಗಿ ನೋಡಿದರೆ ಈ ಶಂಕೆಗೆ ಆಗಲೆ ಉತ್ತರವು ಮೇಲಿನ ಪದವಿಚಾರದಲ್ಲಿಯೇ ಬಂದಿರುತ್ತದೆ. ಆದರೂ ವಾಕ್ಯಸ್ವಭಾವವನ್ನು ಪರಿಶೀಲಿಸುವದಕ್ಕಾಗಿ ಇಲ್ಲಿ ಸ್ವಲ್ಪ ವಿವರವಾಗಿ ಹೇಳುವೆವು. ಬ್ರಹ್ಮವಾಕ್ಯಗಳು ಮುಖ್ಯವಾಗಿ ಎರಡು ಬಗೆಯಾಗಿರುತ್ತವೆ. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಮುಂತಾದ ಕೆಲವು ವಾಕ್ಯಗಳು ಲಕ್ಷಣವಾಕ್ಯಗಳು; ಎಂದರೆ ಬ್ರಹ್ಮದ ಸ್ವರೂಪವನ್ನು ತಿಳಿಸುವ ವಾಕ್ಯಗಳು. 'ತತ್ತ್ವಮಸಿ' ಮುಂತಾದ ವಾಕ್ಯಗಳು ನಮ್ಮಗಳ ಆತ್ಮನು ಪರಮಾರ್ಥವಾಗಿ ಬ್ರಹ್ಮವೇ ಎಂದು ತಿಳಿಸುವವು.

ಮೊದಲನೆಯ ತರದ ಲಕ್ಷಣವಾಕ್ಯಗಳಲ್ಲಿರುವ ವಿಶೇಷಣಗಳು ಸ್ವಪ್ರಧಾನವಾಗಿ ಬಂದಿರುವದಿಲ್ಲ; ಆದ್ದರಿಂದ ಸತ್ಯವಾದ ಬ್ರಹ್ಮವು, ಅಸತ್ಯಬ್ರಹ್ಮವಲ್ಲ; ಜ್ಞಾನರೂಪವಾದ ಬ್ರಹ್ಮವು, ಅಜ್ಞಾನರೂಪವಾದದ್ದಲ್ಲ; ಅನಂತಬ್ರಹ್ಮವು, ಸಾಂತಬ್ರಹ್ಮವಲ್ಲ- ಎಂದು ಮತ್ತೊಂದು ಬ್ರಹ್ಮದಿಂದ ಬಿಡಿಸಿ ಬ್ರಹ್ಮವನ್ನು ತಿಳಿಸುವದಕ್ಕೆ ಆ ವಿಶೇಷಣಗಳು ಬಂದಿರುವದಿಲ್ಲ. ಬ್ರಹ್ಮವು ಒಂದೇ, ಅನೇಕಬ್ರಹ್ಮಗಳಿಲ್ಲವೇ ಇಲ್ಲ. ಆದ್ದರಿಂದ ಸಜಾತೀಯವಾದ ಮತ್ತೊಂದು ಬ್ರಹ್ಮದಿಂದ ಬಿಡಿಸುವದಕ್ಕೆ ವಿಶೇಷಣವನ್ನು ಉಪಯೋಗಿಸುವದರ ಅವಶ್ಯಕತೆಯೂ ಇರುವದಿಲ್ಲ. ಸತ್ಯವಾದದ್ದು ಬ್ರಹ್ಮವು. ಜ್ಞಾನವಾದದ್ದು ಬ್ರಹ್ಮವು, ಅನಂತವಾದದ್ದು ಬ್ರಹ್ಮವು-ಎಂಬುದೇ ವಿಶೇಷಣಗಳ ಅರ್ಥವು. ಸತ್ಯಾದಿಶಬ್ದಗಳು ಬ್ರಹ್ಮದಲ್ಲಿರುವ ಸತ್ಯತ್ವಾದಿಧರ್ಮಗಳನ್ನು ಹೇಳುವದಕ್ಕೆ ಬಂದಿರುವದಿಲ್ಲ; ಬ್ರಹ್ಮವು ಅನೃತವಲ್ಲ, ಅಚೇತನವಲ್ಲ, ಪರಿಚ್ಛಿನ್ನವಲ್ಲ- ಎಂದು ಅನೃತತ್ವಾದಿಗಳನ್ನು ಅಲ್ಲಗಳೆಯುವ ಮೂಲಕವೇ ಬ್ರಹ್ಮವನ್ನು ತಿಳಿಸುತ್ತವೆ. ಆದ್ದರಿಂದ ಲಕ್ಷಣವಾಕ್ಯದಲ್ಲಿರುವ ಯಾವದೊಂದು ಶಬ್ದವೂ ನೇರಾಗಿ ಬ್ರಹ್ಮವನ್ನು ತಿಳಿಸುವದಿಲ್ಲವೆಂಬುದೇ ಸಿದ್ಧಾಂತವು. ಸತ್ಯಾದಿಶಬ್ದಗಳು

ಒಂದರ ಜೊತೆಯಲ್ಲೊಂದು ಇರುವದರಿಂದ ಅವುಗಳ ವಾಚ್ಯಾರ್ಥವನ್ನು ತೆಗೆದು ಕೊಳ್ಳಬಾರದೆಂಬುದನ್ನು ತಿಳಿಸುತ್ತವೆ. ಹೇಗೆಂದರೆ ಸತ್ಯವಾದದ್ದು ಬ್ರಹ್ಮವು ಎಂದರೆ ಅನೃತವಾದ ಕಾರ್ಯವಲ್ಲ ಎಂದು ಅಭಿಪ್ರಾಯವಷ್ಟೆ; ಹಾಗಾದರೆ ಅದು ಕಾರಣ ವಾಗಿ ಮಣ್ಣು ಮುಂತಾದದ್ದರಂತೆ ಅಚೇತನವಾಗಿರಬಹುದು ಎಂಬ ಶಂಕೆಯನ್ನು ಜ್ಞಾನಶಬ್ದವು ಪರಿಹರಿಸುತ್ತದೆ. ಜ್ಞಾನವಾದ್ದರಿಂದ ಬ್ರಹ್ಮವು ಘಟಜ್ಞಾನಾದಿಗಳಂತೆ ಹುಟ್ಟಿ ನಾಶವಾಗಬಹುದು ಎಂಬ ಶಂಕೆಯನ್ನು ಅನಂತಶಬ್ದವು ತೊಲಗಿಸುತ್ತದೆ. ಬ್ರಹ್ಮವು ವಿಜ್ಞಾತೃವಿನ ಸ್ವರೂಪವೇ ಆಗಿ ನಿತ್ಯಸಿದ್ಧವಾಗಿರುವದರಿಂದ ಜ್ಞಾನ ಶಬ್ದವಾಚ್ಯವಾದ ಬುದ್ಧಿವೃತ್ತಿಯಲ್ಲ; ಯಾವ ವಿಶೇಷವೂ ಇಲ್ಲದ್ದರಿಂದ ಸತ್ತಾ ಸಾಮಾನ್ಯವಿಷಯಕವಾದ ಸತ್ಯಶಬ್ದಕ್ಕೂ ವಾಚ್ಯವಲ್ಲ. ಈ ರೀತಿಯಲ್ಲಿ ಸತ್ಯಾದಿ ಶಬ್ದಗಳು ಒಂದಕ್ಕೊಂದು ನೇರಿಕೊಂಡು ತಮ್ಮ ತಮ್ಮ ವಾಚ್ಯವಾದ ಅರ್ಥವನ್ನು ದೂರಮಾಡಿ **ಲಕ್ಷಣೆ**ಯಿಂದ ನಮ್ಮ ಸ್ವರೂಪವೇ ಆಗಿರುವ ಬ್ರಹ್ಮವನ್ನು ತಿಳಿಸುವದಕ್ಕೆ ಉಪಯೋಗವಾಗುವದರಿಂದ ಈ ಎಲ್ಲಾ ಶಬ್ದಗಳೂ ಲಕ್ಷಣವಾಕ್ಯದಲ್ಲಿರ ಬೇಕಾದದ್ದು ಅವಶ್ಯವಾಗಿರುತ್ತದೆ. ಲಕ್ಷಣವಾಕ್ಯವು 'ನೀಲಮ್ ಉತ್ಪಲಮ್' ಎಂಬಂತೆ ಪದಾರ್ಥಗಳ ಸಂಸರ್ಗವನ್ನು ಹೇಳುವದಿಲ್ಲವೆಂಬುದೂ ಇದರಿಂದ ಸಿದ್ಧ ವಾಗುವದರಿಂದ ವಾಕ್ಯವು ಪದಾರ್ಥಗಳ ಸಂಬಂಧವನ್ನೇ ಹೇಳಬೇಕೆಂಬ ನಿರ್ಬಂಧವೂ ಸರಿಯಲ್ಲ.

ಇನ್ನು ಎರಡನೆಯ ಜಾತಿಯ 'ತತ್ತ್ವಮಸಿ' ವಾಕ್ಯವನ್ನು ವಿಮರ್ಶಿಸೋಣ. ಇಲ್ಲಿ ತತ್ ಎಂಬ ಪದವು ಯಾವ ಸಂಸಾರಧರ್ಮವೂ ಇಲ್ಲದ ಅನುಭವರೂಪವಾದ ಬ್ರಹ್ಮವೆಂಬ ವಸ್ತುವನ್ನು ತಿಳಿಸುವದು. ತ್ವಂಪದವು ದೇಹ, ಪ್ರಾಣ , ಮನಸ್ಸು, ಬುದ್ಧಿ, ಅಹಂಕಾರ-ಇವುಗಳಿಗಿಂತ ಭಿನ್ನವಾಗಿರುವ ಒಳಗಿನ ಆತ್ಮನಾದ ಚೈತನ್ಯವನ್ನು ಹೇಳುವದು. ಈ ಎರಡು ಪದಗಳನ್ನೂ ಒಟ್ಟಿಗೆ ಪ್ರಯೋಗಮಾಡಿರುವದರಿಂದಲೇ ಇವುಗಳ ಐಕ್ಯವು ತೋರುತ್ತದೆ. ಹಾಗಿಲ್ಲದಿದ್ದರೆ ತತ್, ತ್ವಮ್-ಈ ಪದಗಳು ತಮ್ಮ ತಮ್ಮ ವಾಚ್ಯಾರ್ಥವನ್ನೇ ಹೇಳುತ್ತವೆ ಎಂದಾಗುತ್ತಿತ್ತು. ಕುದುರೆ ಕಪ್ಪು ಎಂಬ ವಾಕ್ಯದಲ್ಲಿ ಕುದುರೆ ಎಂಬ ಶಬ್ದವು ಕಪ್ಪುಬಣ್ಣದ್ದಲ್ಲದ ಕುದುರೆಗಳೆಲ್ಲವನ್ನೂ ಬಿಡುವಂತೆಯೂ, ಕಪ್ಪು ಎಂಬ ಶಬ್ದವು ಕುದುರೆಗಳಲ್ಲದ ಪದಾರ್ಥಗಳನ್ನೆಲ್ಲ ಬಿಡುವಂತೆಯೂ ಆಗಿರುವದು ಈ ಎರಡು ಶಬ್ದಗಳ ಸಾಮಾನಾಧಿಕರಣ್ಯದಿಂದ; ವಾಕ್ಯಕ್ಕೆ ಕಪ್ಪುಕುದುರೆ ಎಂಬ ಅರ್ಥದ ಜ್ಞಾನವಾಗುವದು ಈ ಎರಡು ಪದಾರ್ಥಗಳ ಜ್ಞಾನದಿಂದ. ಇದರಂತೆ ತತ್‌ತ್ವಂಪದಗಳ ಸಾಮಾನಾಧಿಕರಣ್ಯದಿಂದ ಮೇಲೆ ಹೇಳಿದ ಜ್ಞಾನವಾಗಿ ತತ್ ಎಂದರೆ ಶ್ರೋತೃವಿನ ಆತ್ಮನೇ ಎಂದೂ ತ್ವಮ್ ಎಂದರೆ

ದುಃಖರಹಿತವಾದ ಬ್ರಹ್ಮವೆಂದೂ ಅರ್ಥವಾಗಿ ಅಸಿಪದದಿಂದ 'ಹತ್ತನೆಯವನು ನೀನು' ಎಂಬಂತೆ ಬ್ರಹ್ಮಾತ್ಮೈಕತ್ವಜ್ಞಾನವೆಂಬ ವಾಕ್ಯಾರ್ಥಜ್ಞಾನವಾಗುತ್ತದೆ. ಈ ಕಾರಣದಿಂದ ಪದಾರ್ಥಗಳ ಸಂಸರ್ಗರೂಪವಾದ ಅರ್ಥವನ್ನು ಹೇಳದೆಯೇ ವಾಕ್ಯವು ಬ್ರಹ್ಮಾತ್ಮೈಕತ್ವವನ್ನು ತಿಳಿಸುತ್ತದೆ. (ಸಂಸರ್ಗವೆಂದರೆ ಒಂದಕ್ಕೊಂದು ಸೇರಿಕೊಂಡಿರುವದು). ಆದ್ದರಿಂದ ಇಲ್ಲಿಯೂ ವಾಕ್ಯದ ಪದಗಳೆಲ್ಲ ಅವಶ್ಯವಾಗಿರುತ್ತವೆ.

(೧) ಲಕ್ಷಣಾರ್ಥಪ್ರಧಾನಾನಿ ವಿಶೇಷಣಾನಿ, ನ ವಿಶೇಷಣಪ್ರಾಧಾನಾನ್ಯೇವ । ಕಃ ಪುನಃ ಲಕ್ಷಣಲಕ್ಷ್ಯಯೋಃ, ವಿಶೇಣವಿಶೇಷ್ಯಯೋರ್ವಾ ವಿಶೇಷಃ ಇತಿ ? ಉಚ್ಯತೇ, ಸಮಾನಜಾತೀಯೇಭ್ಯ ಏವ ನಿವರ್ತಕಾನಿ ವಿಶೇಷಣಾನಿ ವಿಶೇಷ್ಯಸ್ಯ । ಲಕ್ಷಣಂ ತು ಸರ್ವತ ಏವ । ಯಥಾ 'ಅವಕಾಶದಾತೃ ಆಕಾಶಮ್' ಇತಿ । ಲಕ್ಷಣಾರ್ಥಂ ಚ ವಾಕ್ಯಮ್ ಇತ್ಯವೋಚಾಮ॥

- ತೈ. ಭಾ. ೨-೧-೯೬

(೨) ಸತ್ಯಾದಿಶಬ್ದಾ ನ ಪರಸ್ಪರಂ ಸಂಬಧ್ಯನ್ತೇ । ಪರಾರ್ಥತ್ವಾತ್ । ವಿಶೇಷ್ಯಾರ್ಥಾ ಹಿ ತೇ । ಅತಃ ಏಕೈಕೋ ವಿಶೇಷಣಶಬ್ದಃ ಪರಸ್ಪರಂ ನಿರಪೇಕ್ಷಃ ಬ್ರಹ್ಮಶಬ್ದೇನ ಸಂಬಧ್ಯತೇ - 'ಸತ್ಯಂ ಬ್ರಹ್ಮ, ಜ್ಞಾನಂ ಬ್ರಹ್ಮ, ಅನನ್ತಂ ಬ್ರಹ್ಮ' ಇತಿ ॥ - ತೈ. ಭಾ. ೨-೧-೯೭

(೩) 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತಿ ಬ್ರಹ್ಮಣೋ ಲಕ್ಷಣಾರ್ಥಂ ವಾಕ್ಯಮ್ ।.... ಲಕ್ಷಣಾರ್ಥಪ್ರಧಾನಾನಿ ವಿಶೇಷಣಾನಿ ನ ವಿಶೇಷಣಪ್ರಧಾನಾನ್ಯೇವ । .... ಸತ್ಯಂ ಬ್ರಹ್ಮೇತಿ ವಿಕಾರಾತ್ ನಿವರ್ತಯತಿ । ಅತಃ ಕಾರಣತ್ವಂ ಪ್ರಾಪ್ತಂ ಬ್ರಹ್ಮಣಃ । ಕಾರಣಸ್ಯ ಚ ಕಾರಕತ್ವಮ್, ವಸ್ತುತ್ವಾತ್ ಮೃದ್ವತ್ ಅಚಿದ್ರೂಪತಾ ಚ ಪ್ರಾಪ್ತಾ । ಅತ ಇದಮುಚ್ಯತೇ 'ಜ್ಞಾನಂ ಬ್ರಹ್ಮ' ಇತಿ ।.... 'ಜ್ಞಾನಂ ಬ್ರಹ್ಮ' ಇತಿ ವಚನಾತ್ ಪ್ರಾಪ್ತಮನ್ತವತ್ತ್ವಮ್ । ಲೌಕಿಕಸ್ಯ ಜ್ಞಾನಸ್ಯ ಅನ್ತವತ್ತ್ವದರ್ಶನಾತ್ । ಅತಃ ತನ್ನಿವೃತ್ತ್ಯರ್ಥಮಾಹ 'ಅನನ್ತಮ್' ಇತಿ ॥

- ತೈ.ಭಾ.೨-೧-೯೫-೧೦೨

(೪) ವಿಜ್ಞಾತೃಸ್ವರೂಪಾವ್ಯತಿರೇಕಾತ್ ಕರಣಾದಿನಿಮಿತ್ತಾನಪೇಕ್ಷತ್ವಾಚ್ಚ ಬ್ರಹ್ಮಣಃ ಜ್ಞಾನಸ್ವರೂಪತ್ವೇಽಪಿ ನಿತ್ಯತ್ವಪ್ರಸಿದ್ಧಿಃ । ಅತೋ ನೈವ ಧಾತ್ವರ್ಥಃ ತತ್ । ಅಕ್ರಿಯಾರೂಪತ್ವಾತ್ । ಅತ ಏವ ಚ ನ ಜ್ಞಾನಕರ್ತೃ । ತಸ್ಮಾದೇವ ಚ ನ ಜ್ಞಾನಶಬ್ದವಾಚ್ಯಮಪಿ ತದ್ ಬ್ರಹ್ಮ । ತಥಾಪಿ ತದಾಭಾಸವಾಚಕೇನ ಬುದ್ಧಿಧರ್ಮವಿಷಯೇಣ ಜ್ಞಾನಶಬ್ದೇನ ತತ್ ಲಕ್ಷ್ಯತೇ, ನ ತು ಉಚ್ಯತೇ । ಶಬ್ದಪ್ರವೃತ್ತಿಹೇತುಜಾತ್ಯಾದಿಧರ್ಮರಹಿತತ್ವಾತ್ । ತಥಾ ಸತ್ಯಶಬ್ದೇನಾಪಿ । ಸರ್ವವಿಶೇಷಪ್ರತ್ಯಸ್ತಮಿತಸ್ವರೂಪತ್ವಾತ್ ಬ್ರಹ್ಮಣಃ । ಬಾಹ್ಯಸತ್ತಾಸಾಮಾನ್ಯವಿಷಯೇಣ ಸತ್ಯಶಬ್ದೇನ ಲಕ್ಷ್ಯತೇ 'ಸತ್ಯಂ ಬ್ರಹ್ಮ' ಇತಿ । ನ ತು ಸತ್ಯಶಬ್ದವಾಚ್ಯಮೇವ ಬ್ರಹ್ಮ ॥ - ತೈ. ಭಾ.೨-೧-೧೦೬, ೧೦೭

(೫) ಏವಂ ಸತ್ಯಾದಿಶಬ್ದಾಃ ಇತರೇತರಸಂನಿಧಾನಾತ್ ಅನ್ಯೋನ್ಯನಿಯಮ್ಯನಿಯಾಮಕಾಃ ಸನ್ತಃ ಸತ್ಯಾದಿಶಬ್ದವಾಚ್ಯಾತ್ ತನ್ನಿವರ್ತಕಾಃ, ಬ್ರಹ್ಮಣೋ ಲಕ್ಷಣಾರ್ಥಾಶ್ಚ ಭವನ್ತಿ, ಇತ್ಯತಃ ಸಿದ್ಧಂ ''ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ'' 'ಅನಿರುಕ್ತೇಽನಿಲಯನೇ' ಇತಿ ಚ ಅವಾಚ್ಯತ್ವಮ್, ನೀಲೋತ್ಪಲವತ್ ಅವಾಕ್ಯಾರ್ಥತ್ವಂ ಚ ಬ್ರಹ್ಮಣಃ ॥ - ತೈ. ಭಾ. ೨-೧-೧೦೭

(೬) ತತ್ರ ಅಜಾದಿಶಬ್ದೈಃ ಜನ್ಮಾದಯೋ ಭಾವವಿಕಾರಾ ನಿವರ್ತಿತಾಃ । ಅಸ್ಥೂಲಾದಿ ಶಬ್ದೈಶ್ಚ ಸ್ಥೌಲ್ಯಾದಯೋ ದ್ರವ್ಯಧರ್ಮಾಃ । ವಿಜ್ಞಾನಾದಿಶಬ್ದೈಶ್ಚ ಚೈತನ್ಯಪ್ರಕಾಶಾತ್ಮಕತ್ವಮ್ ಉಕ್ತಮ್ । ಏಷ ವ್ಯಾವೃತ್ತಸರ್ವಸಂಸಾರಧರ್ಮಕಃ, ಅನುಭವಾತ್ಮಕೋ ಬ್ರಹ್ಮಸಂಜ್ಞಕಃ, ತತ್ಪದಾರ್ಥೋ ವೇದಾನ್ತಾಭಿಯುಕ್ತಾನಾಂ ಪ್ರಸಿದ್ಧಃ । ತಥಾ ತ್ವಂಪದಾರ್ಥೋಽಪಿ ಪ್ರತ್ಯಗಾತ್ಮಾ ಶ್ರೋತಾ ದೇಹಾದಾರಭ್ಯ ಪ್ರತ್ಯಗಾತ್ಮತಯಾ ಸಂಭಾವ್ಯಮಾನಃ ಚೈತನ್ಯಪರ್ಯನ್ತತ್ವೇನ ಅವಧಾರಿತಃ॥ - ಸೂ. ಭಾ. ೪-೧-೨-೫೦೬

(೭) ತ್ವಂಸತೋಽಸ್ತು ಲ್ಯನೀಡತ್ವಾನ್ನೀಲಾಶ್ವವದಿದಂ ಭವೇತ್
ನಿರ್ದುಃಖವಾಚಿನಾ ಯೋಗಾತ್ ತ್ವಂಶಬ್ದಸ್ಯ ತದರ್ಥತಾ ॥
ಪ್ರತ್ಯಗಾತ್ಮಾಭಿಧಾನೇನ ತಚ್ಛಬ್ದಸ್ಯ ಯುತೇಸ್ತಥಾ।
ದಶಮಸ್ತ್ವಮಸೀತ್ಯೇವಂ ವಾಕ್ಯಂ ಸ್ಯಾತ್ ಪ್ರತ್ಯಗಾತ್ಮನಿ ॥

- ಉಪ. ಸಾ. ೧೮-೧೬೪, ೧೬೫

೬೮. ವಾಕ್ಯದಲ್ಲಿರುವ ಪ್ರತಿಯೊಂದು ಶಬ್ದವೂ ಲಕ್ಷಣೆಯಿಂದಲೇ ಬ್ರಹ್ಮವನ್ನು ತಿಳಿಸುವದೆಂಬುದು ಲೋಕದಲ್ಲಿ ಕಂಡಿಲ್ಲ. 'ಗಂಗೆಯಲ್ಲಿ ಹಳ್ಳಿಯಿದೆ' ಎಂಬ ವಾಕ್ಯದಲ್ಲಿ ಗಂಗೆ ಎಂಬುದು ಲಕ್ಷಣೆಯಿಂದ ದಡವನ್ನು ತಿಳಿಸುತ್ತದೆ ಎನ್ನುವಾಗಲೂ ದಡವನ್ನು ತಿಳಿಸುವದಕ್ಕೆ ವಾಚಕವಾದ ಬೇರೊಂದು ಶಬ್ದವು ಇರುತ್ತದೆ. ಆದರೆ ಬ್ರಹ್ಮಕ್ಕೆ ಯಾವ ಶಬ್ದವೂ ವಾಚಕವಲ್ಲದಿರುವಾಗ ಅದನ್ನು ಯಾವ ಶಬ್ದವಾದರೂ ಲಕ್ಷಣೆಯಿಂದ ತಾನೆ ಹೇಗೆ ಹೇಳೀತು ?- ಎಂದು ಕೆಲವರು ಶಂಕೆಯನ್ನು ತೆಗೆದಿರುತ್ತಾರೆ.

ಆದರೆ ಬ್ರಹ್ಮವನ್ನು ವಾಚ್ಯವೆಂದಾಗಲಿ ಲಕ್ಷ್ಯವೆಂದಾಗಲಿ ಹೇಳುವದು ಅಧ್ಯಾರೋಪದೃಷ್ಟಿಯಿಂದಲೇ ಎಂಬುದನ್ನು ನೆನಪಿಟ್ಟವರಿಗೆ ಈ ಶಂಕೆಯು ಯಾವ ಆತಂಕವನ್ನೂ ಒಡ್ಡಲಾರದು. ಬ್ರಹ್ಮವು ಇಂಥಿಂಥ ಶಬ್ದಕ್ಕೆ ವಾಚ್ಯವೆನ್ನುವದು ಆ ಬ್ರಹ್ಮವಾಚಕಶಬ್ದವು ಅದನ್ನು ಹೇಳಲಾರದೆಂದು ತಿಳಿಸುವದಕ್ಕೆ. ಅದನ್ನು ಸತ್ಯಾದಿ ಶಬ್ದಗಳು ಲಕ್ಷಣೆಯಿಂದ ತಿಳಿಸುವವೆನ್ನುವದು, ಅದು ವಾಚ್ಯವಲ್ಲವೆಂದು ತಿಳಿಸುವದಕ್ಕೆ, ಅಭಿಧಾವೃತ್ತಿಯಿಂದಲಾಗಲಿ ಲಕ್ಷಣಾವೃತ್ತಿಯಿಂದಾಗಲಿ ಶಬ್ದವು ಮನೋವಾಕ್ಕುಗಳಿಗೆ ವಿಷಯವಾಗಬಲ್ಲ, ಆತ್ಮನಿಗಿಂತ ಬೇರೆಯಾಗಿರುವ, ಭೇದಪ್ರಪಂಚದಲ್ಲಿರುವ ವಸ್ತುವನ್ನು ತಿಳಿಸುವದೇ ಹೊರತು ವಿಷಯಿಯಾದ ಅದ್ವಿತೀಯಾತ್ಮವನ್ನು ತಿಳಿಸಲಾರದು. ಆದ್ದರಿಂದಲೇ ಶ್ರುತಿಯು ಅದು ವಾಕ್ಕಿಗೂ ಮನಸ್ಸಿಗೂ ಗೋಚರವಲ್ಲವೆಂದು ತಿಳಿಸುತ್ತದೆ.

(೧) ಅದ್ವಯತ್ವಾತ್, ಅವಿಷಯತ್ವಾತ್, ಆತ್ಮತ್ವಾಚ್ಚ, ನ ಕೇನಚಿತ್ ಶಬ್ದೇನ ಉಚ್ಯತೇ ಇತಿ ಯುಕ್ತಮ್ । ''ಯತೋ ವಾಚೋ ನಿವರ್ತನ್ತೇ'' ಇತ್ಯಾದಿಶ್ರುತಿಭ್ಯಶ್ಚ ॥

- ಗೀ. ಭಾ. ೧೩-೧೨-೭೮೫

(೨) ಮನ ಇತಿ ಪ್ರತ್ಯಯಃ, ವಿಜ್ಞಾನಮ್ । ತಚ್ಚ ಯತ್ರ ಅಭಿಧಾನಂ. ಪ್ರವೃತ್ತಮ್ ಅತೀನ್ದ್ರಿಯೇಽಪ್ಯರ್ಥೇ ತದರ್ಥೇ ಚ ಪ್ರವರ್ತತೇ ಪ್ರಕಾಶನಾಯ । ಯತ್ರ ಚ ವಿಜ್ಞಾನಂ ತತ್ರ ವಾಚಃ ಪ್ರವೃತ್ತಿಃ । ತಸ್ಮಾತ್ ಸಹೈವ ವಾಙ್ಮನಸಯೋರಭಿಧಾನಪ್ರತ್ಯಯಯೋಃ ಪ್ರವೃತ್ತಿಃ ಸರ್ವತ್ರ । ತಸ್ಮಾತ್ ಬ್ರಹ್ಮಪ್ರಕಾಶನಾಯ ಸರ್ವಥಾ ಪ್ರಯೋಕ್ತೃಭಿಃ ಪ್ರಯುಜ್ಯಮಾನಾ ಅಪಿ ವಾಚಃ, ಯಸ್ಮಾತ್ ಅಪ್ರತ್ಯಯವಿಷಯಾತ್ ಅನಭಿಧೇಯಾತ್ ಅದೃಶ್ಯಾದಿವಿಶೇಷಣಾತ್ ಸಹೈವ ಮನಸಾ ವಿಜ್ಞಾನೇನ ಸರ್ವಪ್ರಕಾಶನಸಮರ್ಥೇನ ನಿವರ್ತನ್ತೇ.... ॥ - ತೈ. ಭಾ. ೨-೯-೨೨೨

೭೯. ಕಾರ್ಯವಾದ ಕ್ರಿಯೆಯಲ್ಲಿಯೇ ವಾಕ್ಯದ ಪದಗಳು ಅನ್ವಯವಾಗುತ್ತವೆಯೆಂದೂ ವಿಹಿತವಾದ ಕ್ರಿಯೆಯಿಲ್ಲದಿದ್ದರೆ ಪದಗಳು ಸಂಹತವಾಗಿ ವಾಕ್ಯವಾಗುವದೇ ಇಲ್ಲವೆಂದೂ *ಕೆಲವರ ಅಭಿಪ್ರಾಯವಿರುತ್ತದೆ. ಅನುಷ್ಠೇಯವಾದ ಕ್ರಿಯೆಯಿದ್ದರೆ ಪದಾರ್ಥಗಳು ಅದಕ್ಕೆ ಶೇಷವಾಗಿ ಸಂಹತವಾಗುತ್ತವೆ ; ವಾಕ್ಯವು ಪ್ರಮಾಣವಾಗುತ್ತದೆ. ಇಲ್ಲದ್ದಿದ್ದರೆ 'ಇದು ಇದರಿಂದ ಹೀಗೆ' ಎಂದು ನೂರು ಪದಗಳು ಸೇರಿದರೂ ವಾಕ್ಯವಾಗುವದಿಲ್ಲ. ಆದ್ದರಿಂದ ಮಾಡಬೇಕು, ಮಾಡಲ್ಪಡಬೇಕು, ಮಾಡತಕ್ಕದ್ದು - ಎಂದು ಮುಂತಾದ ಕ್ರಿಯಾಪದಗಳು ಅವಶ್ಯವಾಗಿರಬೇಕು. ಬರಿಯ ಪರಮಾತ್ಮ, ಈಶ್ವರ- ಎಂಬಂಥ ಪದಗಳಿದ್ದರೆ ವಾಕ್ಯವಾಗುವದಿಲ್ಲ. ಪ್ರಮಾಣವೂ ಆಗುವದಿಲ್ಲ. ಪರಮಾತ್ಮ, ಬ್ರಹ್ಮ - ಮುಂತಾದವು ಪದಗಳ ಅರ್ಥವಾದರೆ ಪ್ರಮಾಣಾಂತರಗೋಚರವೇ ಆಗುವದರಿಂದ ವಾಕ್ಯವು ವ್ಯರ್ಥವಾಗುವದು - ಎಂಬುದು ಅವರ ಆಶಯ. ಇದಂತೂ ಸರಿಯೇ ಅಲ್ಲ. ಏಕೆಂದರೆ ಲೋಕದಲ್ಲಿಯೂ ವೇದದಲ್ಲಿಯೂ ವಸ್ತುಮಾತ್ರವನ್ನು ತಿಳಿಸುವದರಲ್ಲಿ ಪರ್ಯವಸಾನವಾಗುವ ವಾಕ್ಯಗಳು ಹೇರಳವಾಗಿವೆ. ಉದಾಹರಣೆಗೆ 'ಚೋದನಾಲಕ್ಷಣೋಽರ್ಥೋ ಧರ್ಮಃ' ಎಂಬ ಜೈಮಿನಿಯ ಸೂತ್ರವು ಯಾವ ಕಾರ್ಯಕ್ರಿಯೆಯಲ್ಲಿಯೂ ಅನ್ವಯಿಸುವದಿಲ್ಲ; ಧರ್ಮದ ಲಕ್ಷಣವನ್ನು ಮಾತ್ರ ಹೇಳುತ್ತದೆ. ಇದರಂತೆ ''ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್' (ಛಾಂ. ೬-೨-೧) 'ಸೋಮ್ಯನೆ, ಇದು ಮೊದಲು ತನಗೆರಡನೆಯದಿಲ್ಲದ ಸತ್ತೊಂದೇ ಆಗಿತ್ತು.' ''ಅಯಮಾತ್ಮಾ ಬ್ರಹ್ಮ'' (ಬೃ.೨-೫-೧೯) 'ಈ ಆತ್ಮನು ಬ್ರಹ್ಮವು' - ಮುಂತಾದ ವಾಕ್ಯಗಳೂ ಬ್ರಹ್ಮವಸ್ತುವನ್ನೇ ತಾತ್ಪರ್ಯದಿಂದ ತಿಳಿಸುತ್ತವೆ ; ಅವುಗಳಲ್ಲಿರುವ ಪದಗಳು ಬ್ರಹ್ಮಸ್ವರೂಪದಲ್ಲಿಯೇ ಸಮನ್ವಯವಾಗುತ್ತಿವೆ; ಎಂದು ನಿಶ್ಚಿತವಾಗಿರುವಾಗ ಕರ್ತವ್ಯವಿಧಿಯನ್ನೇ ವಾಕ್ಯವು ತಿಳಿಸಬೇಕೆಂದು ಕಲ್ಪಿಸುವದು ಯುಕ್ತವಲ್ಲ. ಕ್ರಿಯಾಪದವು ವಾಕ್ಯದಲ್ಲಿರಬೇಕೆಂದು ಒಪ್ಪಿದರೂ ಕರ್ತವ್ಯವನ್ನು ವಿಧಿಸುವ ಕ್ರಿಯಾಪದವೇ ಇರಬೇಕೆಂಬ ನಿಯಮಕ್ಕೆ ಕಾರಣವಿರುವದಿಲ್ಲ. ''ಅಸ್ತಿ ಮೇರು-ರ್ವರ್ಣಚತುಷ್ಟಯೋಪೇತಃ'' ನಾಲ್ಕು ಬಣ್ಣಗಳಿಂದೊಡಗೂಡಿದ ಮೇರು ಪರ್ವತವಿದೆ - ಎಂಬಂತೆ ಅಸ್ತಿ (ಇದೆ) ಎಂಬ ಕ್ರಿಯೆಯನ್ನು ಇಟ್ಟುಕೊಳ್ಳುವದಕ್ಕೆ ಅಡ್ಡಿ

ಯಿಲ್ಲ. 'ತತ್ತ್ವಮಸಿ' (ಛಾಂ. ೬-೮-೭) 'ನೀನು ಅದಾಗಿರುವೆ', 'ಅಹಂ ಬ್ರಹ್ಮಾಸ್ಮಿ' (ಬೃ. ೧-೪-೧೦) 'ನಾನು ಬ್ರಹ್ಮವಾಗಿರುವೆನು' ಎಂಬ ವಾಕ್ಯಗಳಲ್ಲಿ ಇರು ಎಂಬ ಕ್ರಿಯೆಯನ್ನು ಹೇಳುವ ಪದಗಳು ಇದ್ದೂ ಇವೆ. ಕೆಲವು ವೇದವಾಕ್ಯಗಳು ಕ್ರಿಯಾ ಪ್ರತಿಷೇಧವನ್ನು ಹೇಳುತ್ತವೆ ; ಅಲ್ಲಿ ಕರ್ತವ್ಯಕ್ರಿಯೆಯ ಉಪದೇಶವಿಲ್ಲದಿದ್ದರೂ ವಾಕ್ಯವಾಗಿರುತ್ತದೆ ; ಪ್ರಾಮಾಣ್ಯವೂ ಇರುತ್ತದೆ.

(೧) ತದ್ ಬ್ರಹ್ಮ ಸರ್ವಜ್ಞಂ ಸರ್ವಶಕ್ತಿ ಜಗದುತ್ಪತ್ತಿಸ್ಥಿತಿಲಯಕಾರಣಂ ವೇದಾನ್ತಶಾಸ್ತ್ರಾದೇವ ಅವಗಮ್ಯತೇ । ಕಥಮ್ ? ಸಮನ್ವಯಾತ್ । ಸರ್ವೇಷು ಹಿ ವೇದಾನ್ತೇಷು ವಾಕ್ಯಾನಿ ತಾತ್ಪರ್ಯೇಣ ಏತಸ್ಯಾರ್ಥಸ್ಯ ಪ್ರತಿಪಾದಕತ್ವೇನ ಸಮನುಗತಾನಿ । "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ ೬-೨-೧) "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" (ಐ. ೧-೧-೧), "ತದೇತದ್ಬ್ರಹ್ಮಾಪೂರ್ವಮನಪರಮನನ್ತರಮ-ಬಾಹ್ಯಮ್.... ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ" (ಬೃ. ೨-೫-೧೯), "ಬ್ರಹ್ಮೈವೇದಮ-ಮೃತಂ ಪುರಸ್ತಾತ್" (ಮುಂ. ೨-೨-೧೨) ಇತ್ಯಾದೀನಿ । ನ ಚ ತದ್ಗತಾನಾಂ ಪದಾನಾಂ ಬ್ರಹ್ಮಸ್ವರೂಪವಿಷಯೇ ನಿಶ್ಚಿತೇ ಸಮನ್ವಯೇ ಅವಗಮ್ಯಮಾನೇ ಅರ್ಥಾನ್ತರಕಲ್ಪನಾ ಯುಕ್ತಾ । ಶ್ರುತಹಾನ್ಯಶ್ರುತಕಲ್ಪನಾಪ್ರಸಙ್ಗಾತ್ ॥ - ಸೂ.ಭಾ.೧-೧-೪-೩೭

(೨) ಅನನುಷ್ಠೇಯತ್ವೇ ವಾಕ್ಯಪ್ರಾಮಾಣತ್ವಾನುಪಪತ್ತಿರಿತಿ ಚೇತ್ । ನ ಹಿ ಅನುಷ್ಠೇಯೇ ಅಸತಿ ಪದಾನಾಂ ಸಂಹತಿರುಪಪದ್ಯತೇ । ಅನುಷ್ಠೇಯತ್ವೇ ತು ಸತಿ ತಾದರ್ಥ್ಯೇನ ಪದಾನಿ ಸಂಹನ್ಯನ್ತೇ । ತತ್ರ ಅನುಷ್ಠೇಯನಿಷ್ಠಂ ವಾಕ್ಯಂ ಪ್ರಮಾಣಂ ಭವತಿ 'ಇದಮನೇನ ಏವಂ ಕರ್ತವ್ಯಮ್' ಇತಿ । ನ ತು 'ಇದಮ್, ಅನೇನ, ಏವಮ್' ಇತ್ಯೇವಂಪ್ರಕಾರಾಣಾಂ ಪದಶತಾನಾಮಪಿ ವಾಕ್ಯತ್ವಮಸ್ತಿ, "ಕುರ್ಯಾತ್ ಕ್ರಿಯೇತ ಕರ್ತವ್ಯಂ ಭವೇತ್ ಸ್ಯಾದಿತಿ ಪಞ್ಚಮಮ್" ಇತ್ಯೇವಮಾದೀನಾಮ್ ಅನ್ಯತಮೇ ಅಸತಿ। ಅತಃ ಪರಮಾತ್ಮೇಶ್ವರಾದೀನಾಮ್ ಅವಾಕ್ಯಪ್ರಮಾಣತ್ವಮ್ । ಪದಾರ್ಥತ್ವೇ ಚ ಪ್ರಮಾಣಾನ್ತರವಿಷಯತ್ವಮ್ । ಅತಃ ಅಸದೇತತ್ ಇತಿ ಚೇತ್ । ನ । "ಅಸ್ತಿ ಮೇರುರ್ವರ್ಣಚತುಷ್ಟಯೋಪೇತಃ" ಇತ್ಯೇವಮಾದ್ಯನನುಷ್ಠೇಯೇಽಪಿ ವಾಕ್ಯದರ್ಶನಾತ್ । ನ ಚ" "ಮೇರುರ್ವರ್ಣಚತುಷ್ಟಯೋಪೇತಃ" ಇತ್ಯೇವಮಾದಿವಾಕ್ಯಶ್ರವಣೇ ಮೇರ್ವಾದೌ ಅನುಷ್ಠೇಯತ್ವಬುದ್ಧಿರುತ್ಪದ್ಯತೇ। ತಥಾ ಅಸ್ತಿಪದಸಹಿತಾನಾಂ ಪರಮಾತ್ಮೇಶ್ವರಾದಿ ಪ್ರತಿ ಪಾದಕವಾಕ್ಯಪದಾನಾಂ ವಿಶೇಷಣವಿಶೇಷ್ಯಭಾವೇನ ಸಂಹತಿಃ ಕೇನ ವಾರ್ಯತೇ ? ॥

-ಬೃ.ಭಾ.೧-೩-೧-೫೩

(೩) ಅಪಿ ಚ 'ಬ್ರಾಹ್ಮಣೋ ನ ಹನ್ತವ್ಯಃ' ಇತಿ ಚೈವಮಾದ್ಯಾ ನಿವೃತ್ತಿರುಪದಿಶ್ಯತೇ। ನ ಚ ಸಾ ಕ್ರಿಯಾ, ನಾಪಿ ಕ್ರಿಯಾಸಾಧನಮ್। ಅಕ್ರಿಯಾರ್ಥಾನಾಮುಪದೇಶೋಽನರ್ಥಕಶ್ಚೇತ್ 'ಬ್ರಾಹ್ಮಣೋ ನ ಹನ್ತವ್ಯಃ' ಇತ್ಯಾದಿ ನಿವೃತ್ತ್ಯುಪದೇಶಾನಾಮಾನರ್ಥಕ್ಯಂ ಪ್ರಾಪ್ತಮ್। ತಚ್ಚಾನಿಷ್ಟಮ್॥ -ಸೂ. ಭಾ.೧-೧-೪-೫೬

(೪) ತಸ್ಮಾತ್ ಪ್ರತಿಷೇಧವಿಧೀನಾಂ ವಸ್ತುಯಾಥಾತ್ಮ್ಯಜ್ಞಾನನಿಷ್ಠತ್ವೈವ ನ ಪುರುಷ ವ್ಯಾಪಾರನಿಷ್ಠತಾಗನ್ಧೋಽಪ್ಯಸ್ತಿ । ತಥಾ ಇಹಾಪಿ ಪರಮಾತ್ಮಾದಿಯಾಥಾತ್ಮ್ಯಜ್ಞಾನವಿಧೀನಾಂ ತಾವನ್ಮಾತ್ರಪರ್ಯವಸಾನತ್ವೈವ ಸ್ಯಾತ್। -ಬೃ.ಭಾ. ೧-೩-೧-೫೪

# ೧೦. ವಾಕ್ಯಜನ್ಯಜ್ಞಾನ

೭೦. ಕರ್ಮಕಾಂಡದ ವಾಕ್ಯದಿಂದಾಗುವ ಜ್ಞಾನಕ್ಕೂ ಜ್ಞಾನಕಾಂಡದ ವಾಕ್ಯದಿಂದಾಗುವ ಜ್ಞಾನಕ್ಕೂ ಇರುವ ತಾರತಮ್ಯವನ್ನು ಇಲ್ಲಿ ಮನದಟ್ಟುಮಾಡಿಕೊಳ್ಳುವದು ಅವಶ್ಯವಾಗಿರುತ್ತದೆ. ಕರ್ಮಕಾಂಡದ ವಾಕ್ಯಗಳು ಪುರುಷನ ವ್ಯಾಪಾರಕ್ಕೆ ಅಧೀನವಾಗಿರುವ, ಆ ವ್ಯಾಪಾರವಾದ ಬಳಿಕ ಮುಂದಿನ ಕಾಲದಲ್ಲಿ ಆಗುವ ಸ್ವರ್ಗವೇ ಮುಂತಾದ ಅಭ್ಯುದಯವನ್ನು ಕೊಡುವ, **ಧರ್ಮವನ್ನು** ತಿಳಿಸುತ್ತವೆ. ಜ್ಞಾನಕಾಂಡದ ವಾಕ್ಯಗಳು ವಸ್ತುವಿಗೆ ಅಧೀನವಾಗಿರುವ, ನಿತ್ಯವಾಗಿದ್ದುಕೊಂಡಿರುವ, ಜಿಜ್ಞಾಸುವಿನ ಆತ್ಮನೇ ಆಗಿರುವ, ಮುಕ್ತಿಯನ್ನು ಕೊಡುವ, **ಬ್ರಹ್ಮವನ್ನು** ತಿಳಿಸುತ್ತವೆ. ಇನ್ನೊಂದು ವಿಷಯದಲ್ಲಿಯೂ ಈ ಎರಡು ಜ್ಞಾನಗಳು ಒಂದಕ್ಕೊಂದು ವಿಲಕ್ಷಣವಾಗಿರುತ್ತವೆ. ಕರ್ಮಜ್ಞಾನವಾದ ಬಳಿಕ ಆಯಾ ಕಾರಕಗಳನ್ನು ಒದಗಿಸಿಕೊಂಡು ಕರ್ಮವನ್ನು ಮಾಡಬೇಕಾದದ್ದು ಬೇರೆ ಉಳಿದಿರುತ್ತದೆ. ಆದರೆ ಬ್ರಹ್ಮಜ್ಞಾನವಾದ ಬಳಿಕ ಮತ್ತೇನೂ ಮಾಡಬೇಕಾದದ್ದಿರುವದಿಲ್ಲ ; ಆ ಜ್ಞಾನವು ಬಂದಕೂಡಲೆ ನಾನು ಕರ್ತೃಭೋಕ್ತೃವಲ್ಲದ ಸರ್ವಾತ್ಮನು ಎಂಬ ಅರಿವು ಉಂಟಾಗಿಬಿಡುತ್ತದೆ. ಹೀಗೆ ವೇದಾಂತವಾಕ್ಯಜನ್ಯಜ್ಞಾನವು ಸಂಪೂರ್ಣವಾಗಿ ಅಜ್ಞಾನವನ್ನು ಕಳೆದು ಪರಮತೃಪ್ತಿಯನ್ನುಂಟುಮಾಡುವದರಿಂದ ಇದನ್ನು ತಿಳಿದವರು ಬುದ್ಧಿವಂತರು, ಕೃತಕೃತ್ಯರು - ಎಂದು ಗೀತೆಯಲ್ಲಿ ಹೇಳಿರುತ್ತದೆ.

(೧) ಅಭ್ಯುದಯಫಲಂ ಧರ್ಮಜ್ಞಾನಮ್ । ತಚ್ಚ ಅನುಷ್ಠಾನಾಪೇಕ್ಷಮ್। ನಿಃಶ್ರೇಯಸಫಲಂ ತು ಬ್ರಹ್ಮವಿಜ್ಞಾನಂ ನಚ ಅನುಷ್ಠಾನಾನ್ತರಾಪೇಕ್ಷಮ್ । ಭವ್ಯಶ್ಚ ಧರ್ಮೋ ಜಿಜ್ಞಾಸ್ಯಃ ನ ಜ್ಞಾನಕಾಲೇ ಅಸ್ತಿ । ಪುರುಷವ್ಯಾಪಾರತನ್ತ್ರತ್ವಾತ್ । ಇಹ ತು ಭೂತಂ ಬ್ರಹ್ಮ ಜಿಜ್ಞಾಸ್ಯಮ್। ನಿತ್ಯತ್ವಾತ್ ನ ಪುರುಷವ್ಯಾಪಾರತನ್ತ್ರಮ್ ॥ - ಸೂ. ಭಾ. ೧-೧-೧-೧೨

(೨) ಏವಂ ಭೂತವಸ್ತುವಿಷಯಾಣಾಂ ಪ್ರಾಮಾಣ್ಯಂ ವಸ್ತುತನ್ತ್ರಮ್ । ತತ್ರ ಏವಂ ಸತಿ ಬ್ರಹ್ಮಜ್ಞಾನಮಪಿ ವಸ್ತುತನ್ತ್ರಮೇವ, ಭೂತವಸ್ತುವಿಷಯತ್ವಾತ್ ॥ - ಸೂ. ಭಾ. ೧-೧-೨-೨೮

(೩) ಯಥಾ ವಿಧಿವಿಷಯೇ ಕರ್ತ್ರಾದ್ಯನೇಕಕಾರಕೋಪಸಂಹಾರದ್ವಾರೇಣ ವಾಕ್ಯಾರ್ಥಜ್ಞಾನಕಾಲಾತ್ ಅನ್ಯತ್ರ ಅನುಷ್ಠೇಯೋಽರ್ಥೋಽಸ್ತಿ ಅಗ್ನಿಹೋತ್ರಾದಿಲಕ್ಷಣಃ, ನ ತಥೇಹ ಪರವಿದ್ಯಾವಿಷಯೇ । ವಾಕ್ಯಾರ್ಥಜ್ಞಾನಸಮಕಾಲೇ ಏವ ತು ಪರ್ಯವಸಿತೋ ಭವತಿ । ಕೇವಲಶ್ರುತಿಪ್ರಕಾಶಿತಾರ್ಥಜ್ಞಾನಮಾತ್ರನಿಷ್ಠಾವ್ಯತಿರಿಕ್ತಾಭಾವಾತ್ ॥ - ಮುಂ. ೧-೧-೬-೧೮

(೪) ಅಗ್ನಿಹೋತ್ರಾದಿವಿಧ್ಯರ್ಥಜ್ಞಾನೋತ್ತರಕಾಲಮ್ ಅಗ್ನಿಹೋತ್ರಾದಿಕರ್ಮ ಅನೇಕ ಸಾಧನೋಪಸಂಹಾರಪೂರ್ವಕಮ್ ಅನುಷ್ಠೇಯಂ 'ಕರ್ತಾ ಅಹಮ್, ಮಮ ಕರ್ತವ್ಯಮ್' ಇತ್ಯೇವಂಪ್ರಕಾರವಿಜ್ಞಾನವತಃ ಅವಿದುಷಃ ಯಥಾ ಅನುಷ್ಠೇಯಂ ಭವತಿ । ನ ತು ತಥಾ 'ನ

ಜಾಯತೇ' ಇತ್ಯಾದ್ಯಾತ್ಮಸ್ವರೂಪವಿಧ್ಯರ್ಥಜ್ಞಾನೋತ್ತರಕಾಲಭಾವಿ ಕಿಂಚಿತ್ ಅನುಷ್ಠೇಯಂ ಭವತಿ। ಕಿಂ ತು 'ನಾಹಂ ಕರ್ತಾ' 'ನಾಹಂ ಭೋಕ್ತಾ' ಇತ್ಯಾದ್ಯಾತ್ಮೈಕತ್ವಾಕರ್ತೃತ್ವಾದಿ ವಿಷಯಜ್ಞಾನಾತ್ ಅನ್ಯತ್ ನೋಪಪದ್ಯತೇ ॥ - ಗೀ. ಭಾ. ೨-೨೧-೪೪

(೫) ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ - ಗೀ. ೧೫-೨೦

೭೧. ಜ್ಞಾನಕಾಂಡದಲ್ಲಿಯೂ ಕೆಲವು ವಿಧಿವಾಕ್ಯಗಳಿರುತ್ತವೆ. ಅವು ಬ್ರಹ್ಮದಲ್ಲಿ ಸಮನ್ವಯವಾಗುವದಿಲ್ಲ. ಆ ವಾಕ್ಯಗಳು ನಾಮೋಪಾಸನೆ, ಓಂಕಾರೋಪಾಸನೆ, ಸಂಹಿತೋಪಾಸನೆ, ಬ್ರಹ್ಮೋಪಾಸನೆ - ಮುಂತಾದರೂಪದ ಉಪಾಸನೆಗಳನ್ನು ವಿಧಿಸುತ್ತವೆ. ಬ್ರಹ್ಮೋಪಾಸನೆಯನ್ನು ಹೇಳುವ ವಾಕ್ಯಗಳಿಗೆ ಬ್ರಹ್ಮಸ್ವರೂಪವನ್ನು ಹೇಳುವ ವಾಕ್ಯಗಳು ಶೇಷವಾಗಿರಬೇಕೆಂಬ ಶಂಕೆಯನ್ನು ಬ್ರಹ್ಮವಾಕ್ಯವು ಬ್ರಹ್ಮದಲ್ಲಿಯೇ ಸಮನ್ವಯವಾಗಿರುವದರಿಂದಲೂ ಅವುಗಳಲ್ಲಿ ಯಾವ ವಿಧಿಯೂ ಇಲ್ಲದಿರುವದರಿಂದಲೂ (೬೫) ಬ್ರಹ್ಮಸ್ವರೂಪವನ್ನು ತಿಳಿಸುವ ವಾಕ್ಯಗಳಿಂದಾಗುವ ಏಕತ್ವಜ್ಞಾನವು ದ್ವೈತವನ್ನು ಬಾಧಿಸಿಬಿಡುವುದರಿಂದಲೂ (೬೪) ಬ್ರಹ್ಮಪ್ರಕರಣದಲ್ಲಿ ವಿಧಿಯಂತಿರುವ 'ದ್ರಷ್ಟವ್ಯಃ ಶ್ರೋತವ್ಯಃ', 'ಅನ್ವೇಷ್ಟವ್ಯಃ' ಮುಂತಾದ ವಾಕ್ಯಗಳು ಉಪಾಸನೆಯನ್ನು ಹೇಳದೆ ಅನಾತ್ಮದಿಂದ ಆತ್ಮನ ಕಡೆಗೆ ಜಿಜ್ಞಾಸುವಿನ ಚಿತ್ತವನ್ನು ಹಿಂತಿರುಗಿಸುವದಕ್ಕೆ ಬಂದಿರುವದರಿಂದಲೂ (೬೫) ಬ್ರಹ್ಮವಾಕ್ಯವು ಮತ್ತೆ ಯಾವದಕ್ಕೂ ಶೇಷವಲ್ಲವೆಂದು ನಿರಾಕರಿಸಿದ್ದಾಗಿದೆ. ಬ್ರಹ್ಮವನ್ನು ಅರಿತುಕೊಳ್ಳಬೇಕೆಂದು ಶ್ರುತಿಯಲ್ಲಿ ಹೇಳಿರುವ ವಸ್ತುವನ್ನು ಮತ್ತೆ ಯಾವದಾದರೂ ಕರ್ತವ್ಯಕ್ಕೆ ಶೇಷವೆಂದು ಹೇಳಿದರೆ, ಆ ಕರ್ತವ್ಯದಿಂದ ಮೋಕ್ಷವನ್ನು ಪಡೆಯಬಹುದೆಂದು ಒಪ್ಪಿಕೊಳ್ಳಬೇಕಾಗುವದು; ಆಗ ಒಂದಕ್ಕಿಂತ ಒಂದು ಹೆಚ್ಚುಕಡಿಮೆಯಾಗಿರುವ ಕರ್ಮಫಲಗಳಲ್ಲಿಯೇ ಮೋಕ್ಷವೂ ಒಂದು, ಅದು ಅನಿತ್ಯವು - ಎಂದಾಗುತ್ತದೆ. ಇದು ಸರಿಯಲ್ಲ. ಉಪಾಸನಾವಾಕ್ಯಗಳು ಉಪಾಸನಾಪರವಾಗಿರುವದರಿಂದ ಅವು ಬ್ರಹ್ಮಸ್ವರೂಪವನ್ನು ನಿರ್ಧರಿಸುವದಕ್ಕೆ ಮುಖ್ಯ ಪ್ರಮಾಣವಾಗಲಾರವು. ಅವುಗಳನ್ನು ಬ್ರಹ್ಮಸ್ವರೂಪವನ್ನು ತಿಳಿಸುವದಕ್ಕೇ ಬಂದಿರುವ ಪ್ರಧಾನವಾಕ್ಯಗಳಿಗೆ ವಿರೋಧವಿಲ್ಲದಂತೆ ಅರ್ಥಮಾಡಬೇಕು. ಜ್ಞಾನಪ್ರಕರಣದಲ್ಲಿಲ್ಲದ ಉಪಾಸನಾವಾಕ್ಯಗಳಿಗೆ ಅನುಗುಣವಾಗಿ ಬ್ರಹ್ಮವಾಕ್ಯಗಳನ್ನು ಹೊಂದಿಸುವದಂತೂ ಸರಿಯೇ ಅಲ್ಲ. ಈ ಕಾರಣದಿಂದಲೇ ಬ್ರಹ್ಮದಲ್ಲಿ ಯಾವ ವಿಶೇಷವೂ ಇಲ್ಲವೆಂದು ಹೇಳುವ ವಾಕ್ಯಗಳೇ ಬ್ರಹ್ಮಸ್ವರೂಪವನ್ನು ತಿಳಿಸುತ್ತವೆಯೆಂದೂ ಮಿಕ್ಕ ವಾಕ್ಯಗಳು ಅಧ್ಯಾರೋಪದೃಷ್ಟಿಯಿಂದ ಬ್ರಹ್ಮದಲ್ಲಿ ಕೆಲವು ವಿಶೇಷಗಳನ್ನು ಒಪ್ಪಿಕೊಂಡಿದ್ದರೂ ಅದರಿಂದ ಬ್ರಹ್ಮದ ಪರಮಾರ್ಥಸ್ವರೂಪಕ್ಕೆ ಯಾವ ಬಾಧಕವೂ ಇಲ್ಲವೆಂದೂ ತಿಳಿಯಬೇಕು.

(೧) 'ಅಸ್ಥೂಲಮನಣ್ವಹ್ರಸ್ವಮದೀರ್ಘಮ್' (ಬೃ. ೩-೮-೮), 'ಅಶಬ್ದಮಸ್ಪರ್ಶಮರೂಪಮವ್ಯಯಮ್' (ಕ. ೧-೩-೧೫), 'ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ' (ಛಾಂ. ೮-೧೪-೧), 'ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯನ್ತರೋ ಹ್ಯಜಃ' (ಮುಂ. ೨-೧-೨), 'ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ' (ಬೃ.೨-೫-೧೯) -ಇತ್ಯೇವಮಾದೀನಿ ವಾಕ್ಯಾನಿ ನಿಷ್ಪ್ರಪಞ್ಚಬ್ರಹ್ಮಾತ್ಮತತ್ತ್ವಪ್ರಧಾನಾನಿ ನಾರ್ಥಾನ್ತರಪ್ರಧಾನಾನಿ ಇತ್ಯೇತತ್ ಪ್ರತಿಷ್ಠಾಪಿತಂ 'ತತ್ತು ಸಮನ್ವಯಾತ್' (ಸೂ. ೧-೧-೪) ಇತ್ಯತ್ರ । ತಸ್ಮಾದೇವಂಜಾತೀಯಕೇಷು ವಾಕ್ಯೇಷು ಯಥಾಶ್ರುತಂ ನಿರಾಕಾರಮೇವ ಬ್ರಹ್ಮ ಅವಧಾರಯಿತವ್ಯಮ್। ಇತರಾಣಿ ತು ಆಕಾರವದ್ಬ್ರಹ್ಮವಿಷಯಾಣಿ ವಾಕ್ಯಾನಿ ನ ತತ್ಪ್ರಧಾನಾನಿ । ಉಪಾಸನಾದಿವಿಧಿಪ್ರಧಾನಾನಿ ಹಿ ತಾನಿ । ತೇಷು ಅಸತಿ ವಿರೋಧೇ ಯಥಾಶ್ರುತಮಾಶ್ರಯಿತವ್ಯಮ್ । ಸತಿ ತು ವಿರೋಧೇ ತತ್ಪ್ರಧಾನಾನಿ ಅತತ್ಪ್ರಧಾನೇಭ್ಯೋ ಬಲೀಯಾಂಸಿ ಭವನ್ತಿ॥ - ಸೂ ಭಾ. ೩-೨-೧೪-೨೮೧

(೨) ಅತಃ ತದ್ಬ್ರಹ್ಮ ಯಸ್ಯ ಇಯಂ ಜಿಜ್ಞಾಸಾ ಪ್ರಸ್ತುತಾ । ತದ್ ಯದಿ ಕರ್ತವ್ಯಶೇಷತ್ವೇನ ಉಪದಿಶ್ಯೇತ, ತೇನ ಚ ಕರ್ತವ್ಯೇನ ಸಾಧ್ಯಶ್ಚೇತ್ ಮೋಕ್ಷೋ ಅಭ್ಯುಪಗಮ್ಯೇತ, ಅನಿತ್ಯ ಏವ ಸ್ಯಾತ್ । ತತ್ರೈವಂ ಸತಿ ಯಥೋಕ್ತಕರ್ಮಫಲೇಷ್ವೇವ ತಾರತಮ್ಯಾವಸ್ಥಿತೇಷು ಅನಿತ್ಯೇಷು ಕಶ್ಚಿತ್ ಅತಿಶಯೋ ಮೋಕ್ಷಃ ಇತಿ ಪ್ರಸಜ್ಯೇತ । ನಿತ್ಯಶ್ಚ ಮೋಕ್ಷಃ ಸರ್ವೈರ್ಮೋಕ್ಷವಾದಿಭಿರಭ್ಯುಪಗಮ್ಯತೇ । ಅತೋ ನ ಕರ್ತವ್ಯಶೇಷತ್ವೇನ ಬ್ರಹ್ಮೋಪದೇಶೋ ಯುಕ್ತಃ॥ -ಸೂ. ಭಾ. ೧-೧-೪-೪೩

೭೨. ವಾಕ್ಯಶ್ರವಣಮಾತ್ರದಿಂದ ಯಾರಿಗೂ ಜ್ಞಾನವಾಗುವದಕ್ಕೆ ಅವಕಾಶವಿಲ್ಲ ಏಕೆಂದರೆ ವೇದಾಂತವಾಕ್ಯವನ್ನು ಶ್ರವಣಮಾಡಿದರೂ ಜ್ಞಾನವಾಗದೆ ಇರುವವರು ಬಹಳ ಜನರಿದ್ದಾರೆಂದು ಶ್ರುತಿಯಲ್ಲಿಯೇ ( ಕ. ೧-೨-೭) ಹೇಳಿದೆ. ಇದು 'ಹಾವಲ್ಲ, ಹಗ್ಗ' ಎಂಬ ವಾಕ್ಯಶ್ರವಣದಿಂದ ಭ್ರಾಂತಿಯಿಂದಾಗಿದ್ದ ಅಂಜಿಕೆಯನ್ನು ತೊಲಗಿಸುವ ಜ್ಞಾನವು ಲೋಕದಲ್ಲಿ ಕಂಡಿದೆ ಎಂದು ವೇದಾಂತಿಗಳು ವಾದಿಸುವದುಂಟು. ಆದರೆ ದಾರ್ಷ್ಟಾಂತಿಕದಲ್ಲಿ ಹಾಗೆ ಕಂಡಿಲ್ಲ. ಶ್ರವಣಮಾಡಿದ ಬಳಿಕ ಮನನನಿದಿಧ್ಯಾಸನಗಳನ್ನೂ ಮಾಡಬೇಕೆಂದು ಶ್ರುತಿಯಲ್ಲಿಯೇ ವಿಧಿಸಿರುವದರಿಂದಲೂ ಶ್ರವಣದಿಂದ ಬ್ರಹ್ಮಾತ್ಮಜ್ಞಾನವುಂಟಾಗಲಾರದೆಂದು ಒಪ್ಪಬೇಕಾಗಿದೆ. ಇದಲ್ಲದೆ ಶಾಸ್ತ್ರದಲ್ಲಿ ಉಕ್ತವಾಗಿರುವ ವಿಧಿಯಿಲ್ಲದೆ ಆತ್ಮಜ್ಞಾನವನ್ನು ಸಂಪಾದಿಸುವದಕ್ಕಾಗಲಿ ವಾಕ್ಯಶ್ರವಣಕ್ಕಾಗಲಿ ಯಾರೂ ಪ್ರಯತ್ನಿಸಲಾರರು. ಆದ್ದರಿಂದ ಆತ್ಮಜ್ಞಾನಕ್ಕೆ ಒಂದಾನೊಂದು ಪ್ರವರ್ತಕಪ್ರಮಾಣವು ಬೇಕೇಬೇಕು ; ಬರಿಯ ವಸ್ತುಬೋಧಕವಾದ ವೇದಾಂತವಾಕ್ಯವು ಆತ್ಮಜ್ಞಾನಕ್ಕೆ ಸಾಕು ಎಂಬುದು ಸರಿಯಲ್ಲ- ಎಂದು ಕೆಲವರು ವಾದಿಸುತ್ತಾರೆ.

ಆದರೆ ಆತ್ಮವಾಕ್ಯಶ್ರವಣದಿಂದ ಜ್ಞಾನವುಂಟಾಗುತ್ತಿರುವಲ್ಲಿ ಅದಕ್ಕಾಗಿ ವಿಧಿಯು ಬೇಕೆನ್ನುವದು ಎಂದಿಗೂ ಯುಕ್ತವಲ್ಲ. ವಾಕ್ಯಶ್ರವಣಕ್ಕೂ ವಿಧಿಬೇಕೆನ್ನುವವರು ಆ ವಿಧಿವಾಕ್ಯದ ಶ್ರವಣಕ್ಕೂ ಮತ್ತೊಂದು ವಿಧಿವಾಕ್ಯವನ್ನು ಕಲ್ಪಿಸಬೇಕಾಗುವದರಿಂದ ಅನವಸ್ಥಾದೋಷಕ್ಕೆ ಗುರಿಯಾಗುವರು. ಇದಲ್ಲದೆ ಅನಾತ್ಮವಿಷಯದಲ್ಲಾದರೆ ತನಗಿಂತ ಬೇರೆಯಾಗಿರುವ ಆ ವಸ್ತುವಿನ ಜ್ಞಾನದಲ್ಲಿ ತೊಡಗುವದಕ್ಕೆ ಪ್ರವರ್ತಕಪ್ರಮಾಣವು ಬೇಕಾದೀತು. ಆದರೆ ತನ್ನ ವಿಷಯದ ಜ್ಞಾನಕ್ಕೆ ಪ್ರವರ್ತಕ ಪ್ರಮಾಣವು ಬೇಕೆನ್ನುವದು ಎಂದಿಗೂ ಸರಿಯಾಗಲಾರದು. ಶ್ರವಣದಂತೆ ಮನನ ನಿದಿಧ್ಯಾಸನಗಳನ್ನೂ ಆತ್ಮಜ್ಞಾನಕ್ಕಾಗಿಯೇ ಉಪದೇಶಿಸಿರುತ್ತದೆಯೇ ಹೊರತು ಆತ್ಮಜ್ಞಾನವಾದ ಬಳಿಕ ಮತ್ತೊಂದು ಕರ್ತವ್ಯದಲ್ಲಿ ಆತ್ಮನನ್ನು ವಿನಿಯೋಗಿಸಿರುವದಿಲ್ಲ. ಆತ್ಮನನ್ನು ನೋಡಬೇಕು, ಕೇಳಬೇಕು - ಮುಂತಾದ ಬ್ರಹ್ಮಪ್ರಕರಣದ ವಾಕ್ಯಗಳು ಯಾವ ಜ್ಞಾನವನ್ನೂ ವಿಧಿಸುವದರಲ್ಲಿ ತಾತ್ಪರ್ಯವುಳ್ಳವಲ್ಲ ; ಅವು ನೋಡುವದಕ್ಕೂ ಕೇಳುವದಕ್ಕೂ ಪ್ರಯತ್ನವನ್ನು ಮಾಡಬೇಕು, ಅತ್ತಕಡೆಗೆ ಅವಧಾನವನ್ನು ಮಾಡಬೇಕು ಎಂದು ಮಾತ್ರ ಹೇಳುತ್ತವೆ. ನೋಡು, ಕೇಳು- ಮುಂತಾದ ಶಬ್ದಗಳಿಗೆ ಲೋಕದಲ್ಲಿ ಇಷ್ಟೇ ಅರ್ಥವಿರುತ್ತದೆ ; ಆದ್ದರಿಂದ ವೇದದಲ್ಲಿಯೂ ಇದೇ ಅರ್ಥವನ್ನು ಇವಕ್ಕೆ ಕಲ್ಪಿಸುವದು ಯುಕ್ತ. ಆದ್ದರಿಂದ ಶ್ರವಣಾದಿಜ್ಞಾನಗಳು ವಿಹಿತವಾಗಿರುವದಿಲ್ಲ. ಬ್ರಹ್ಮವಾಕ್ಯಶ್ರವಣದಿಂದ ಜ್ಞಾನವಾಗುವದಿಲ್ಲ ಎಂದು ಹೇಳುವದು ಸಾಹಸದ ಮಾತು. ''ಶ್ರವಣಮಾಡಿದರೂ ಬಹುಜನರಿಗೆ ತಿಳಿದಿರುವದಿಲ್ಲ'' ಎಂಬ ಶ್ರುತಿಯು ಆತ್ಮನನ್ನು ಕಷ್ಟಪಟ್ಟು ತಿಳಿದುಕೊಳ್ಳಬೇಕು ಎಂಬ ತಾತ್ಪರ್ಯವುಳ್ಳದ್ದು. ಏಕೆಂದರೆ ''ಈ ಆತ್ಮಸ್ವರೂಪವನ್ನು ಹೇಳುವವನೇ ಆಶ್ಚರ್ಯರೂಪನು, ಇದನ್ನು ಅರಿತುಕೊಳ್ಳುವವನೇ ಜಾಣನು'' ಎಂದು ಅಲ್ಲಿಯೇ ಹೇಳಿರುತ್ತದೆ. ಕರ್ಮಕಾಂಡದ ವಾಕ್ಯಗಳಿಗೆ ಹೇಗೆ ಧರ್ಮಾಧರ್ಮಗಳಿವೆಯೆಂಬ ಮತ್ತು ಕರ್ತೃವಾದ ಜೀವಾತ್ಮನಿಗೆ ದೇಹಾಂತರಸಂಬಂಧವುಂಟೆಂಬ ಜ್ಞಾನವು ಉಂಟಾಗುತ್ತದೆಯೋ ಹಾಗೆಯೇ ಜ್ಞಾನಕಾಂಡದ ವಾಕ್ಯಗಳಿಂದ ಅದೇ ಆತ್ಮನು ಅವಿಕ್ರಿಯನು, ಅಕರ್ತೃ, ಏಕನು - ಎಂದು ಮುಂತಾದ ಜ್ಞಾನವು ಏತಕ್ಕೆ ಉಂಟಾಗಬಾರದು? - ಎಂಬ ಪ್ರಶ್ನೆಗೆ ಕರ್ಮವಾದಿಗಳು ಉತ್ತರವನ್ನು ಕೊಡುವದಕ್ಕಾಗುವದಿಲ್ಲ. ವಾಕ್ಯತ್ವವು ಎರಡಕ್ಕೂ ಸಮಾನವಾಗಿರುವದರಿಂದ ಎರಡರಿಂದಲೂ ಅವಶ್ಯವಾಗಿ ಜ್ಞಾನವುಂಟಾಗಲೇಬೇಕು. ಎರಡೂ ಶಾಸ್ತ್ರವಾಕ್ಯಗಳಾದ್ದರಿಂದ ಆ ವಾಕ್ಯಗಳಿಂದ ಉಂಟಾಗುವ ಜ್ಞಾನವು ಯಾಥಾರ್ಥ್ಯವೂ ಆಗಿರಬೇಕು. ಲೌಕಿಕಪ್ರಮಾಣಗಳಿಗೆ ಗೋಚರವಾಗದ ದರ್ಶಪೂರ್ಣಮಾಸಾದಿಕರ್ಮಗಳ

ಜ್ಞಾನದ ಫಲದಂತೆ ಪರಮಾತ್ಮಸ್ವರೂಪಜ್ಞಾನದ ಫಲವೂ ಯಾಥಾರ್ಥವಾಗಿಯೇ ಇರಬೇಕು. ಈ ವಿಷಯದಲ್ಲಿ ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಯಾವ ತಾರತಮ್ಯವನ್ನೂ ತೋರಿಸುವದಕ್ಕೆ ಆಗುವದಿಲ್ಲ.

(೧) ಆತ್ಮವಿಜ್ಞಾನೇ ವಿಧಿಮನ್ತರೇಣ ನ ಪ್ರವರ್ತತೇ ಇತಿ ಚೇತ್ । ನ । ಆತ್ಮವಾದಿವಾಕ್ಯಶ್ರವಣೇನ ಆತ್ಮವಿಜ್ಞಾನಸ್ಯ ಜನಿತತ್ವಾತ್ । ಕಿಂ ಭೋಃ ಕೃತಸ್ಯ ಕರಣಮ್ ? ತಚ್ಛ್ರವಣೇಽಪಿ ನ ಪ್ರವರ್ತತೇ ಇತಿ ಚೇತ್ । ನ । ಅನವಸ್ಥಾಪ್ರಸಙ್ಗಾತ್ । ಯಥಾ ಆತ್ಮವಾದಿವಾಕ್ಯಾರ್ಥಶ್ರವಣೇ ವಿಧಿಮನ್ತರೇಣ ನ ಪ್ರವರ್ತತೇ, ತಥಾ ವಿಧಿವಾಕ್ಯಾರ್ಥಶ್ರವಣೇಽಪಿ ವಿಧಿಮನ್ತರೇಣ ನ ಪ್ರವರ್ತಿಷ್ಯತೇ ಇತಿ ವಿಧ್ಯನ್ತರಾಪೇಕ್ಷಾ । ತಥಾ ತದರ್ಥಶ್ರವಣೇಽಪಿ ಇತಿ ಅನವಸ್ಥಾ ಪ್ರಸಜ್ಯೇತ ॥ -ಬೃ. ಭಾ. ೧-೪-೭-೧೩೭

(೨) ತತ್ರಾಪಿ ಪ್ರವರ್ತಕಪ್ರಮಾಣಾಭಾವೇ ಪ್ರವೃತ್ತ್ಯನುಪಪತ್ತಿಃ ಇತಿ ಚೇತ್ । ನ ಸ್ವಾತ್ಮವಿಷಯತ್ವಾತ್ ಆತ್ಮಜ್ಞಾನಸ್ಯ ॥ - ಗೀ. ಭಾ. ೨-೬೯-೧೩೫

(೩) ಯದಿ ಹ್ಯವಗತಂ ಬ್ರಹ್ಮ ಅನ್ಯತ್ರ ವಿನಿಯುಜ್ಯೇತ, ಭವೇತ್ತದಾ ವಿಧಿಶೇಷತ್ವಮ್। ನ ತು ತದಸ್ತಿ । ಮನನನಿದಿಧ್ಯಾಸನಯೋರಪಿ ಶ್ರವಣವದವಗತ್ಯರ್ಥತ್ವಾತ್ ।

- ಸೂ. ಭಾ. ೧-೧-೪-೬೧

(೪) ದ್ರಷ್ಟವ್ಯಾದಿಶಬ್ದಾ ಅಪಿ ಪರವಿದ್ಯಾಧಿಕಾರಪಠಿತಾಃ ತತ್ತ್ವಾಭಿಮುಖೀಕರಣಪ್ರಧಾನಾಃ, ನ ತತ್ತ್ವಾವಬೋಧವಿಧಿಪ್ರಧಾನಾ ಭವನ್ತಿ । ಲೋಕೇಽಪಿ ಇದಂ ಪಶ್ಯ, ಇದಮ್ ಆಕರ್ಣಯ ಇತಿ ಚೈವಂಜಾತೀಯಕೇಷು ನಿರ್ದೇಶೇಷು 'ಪ್ರಣಿಧಾನಮಾತ್ರಂ ಕುರು' ಇತ್ಯುಚ್ಯತೇ ನ ಸಾಕ್ಷಾತ್ 'ಜ್ಞಾನಮೇವ ಕುರು' ಇತಿ॥ - ಸೂ. ಭಾ. ೩-೨-೨೧-೨೯೧

(೫) ಯಥಾ ಚ ದರ್ಶಪೂರ್ಣಮಾಸಾದಿಕ್ರಿಯಾ ಇದಂಫಲಾ ವಿಶಿಷ್ಟೇತಿಕರ್ತವ್ಯತಾಕಾ ಏವಂಕ್ರಮಪ್ರಯುಕ್ತಾಙ್ಗಾ ಚ ಇತ್ಯೇತತ್ ಅಲೌಕಿಕಂ ವಸ್ತು ಪ್ರತ್ಯಕ್ಷಾದ್ಯವಿಷಯಂ ತಥಾಭೂತಂ ಚ ವೇದವಾಕ್ಯೈರೇವ ಜ್ಞಾಪ್ಯತೇ । ತಥಾ ಪರಮಾತ್ಮೇಶ್ವರದೇವತಾದಿವಸ್ತು ಅಸ್ಥೂಲಾದಿಧರ್ಮಕಮ್ ಅಶನಾಯಾದ್ಯತೀತಂ ಚೇತ್ಯೇವಮಾದಿವಿಶಿಷ್ಟಮ್ ಇತಿ ವೇದವಾಕ್ಯೈರೇವ ಜ್ಞಾಪ್ಯತೇ ಇತಿ ಅಲೌಕಿಕತ್ವಾತ್ ತಥಾಭೂತಮೇವ ಭವಿತುಮರ್ಹತಿ ॥

- ಬೃ. ಭಾ. ೧-೩-೧-೫೨

೭೩. ವೇದಾಂತವಾಕ್ಯಗಳಿಂದ ಜ್ಞಾನವಾಗುವದೆಂದು ಒಪ್ಪಿಕೊಂಡರೂ ಆ ಜ್ಞಾನವು ಶಾಂಕರವೇದಾಂತದಲ್ಲಿ ಹೇಳಿರುವ ಪರಮಾತ್ಮಜ್ಞಾನವೇ ಎಂಬುದನ್ನು ಅನೇಕರು ಒಪ್ಪಿರುವದಿಲ್ಲ. ಕರ್ಮಗಳಿಗೆ ಕರ್ತೃವಾಗಿರುವ ಆತ್ಮನ ಜ್ಞಾನವನ್ನು ಪುರುಷಾರ್ಥಕ್ಕೆ ಸಾಧನವಾಗಿ ಹೇಳುವದಕ್ಕೆ ಆ ವಾಕ್ಯಗಳು ಬಂದಿರುತ್ತವೆ, ಆದ್ದರಿಂದ ಇವನ್ನು ಕರ್ಮಶೇಷವಾದ ಅರ್ಥವಾದವೆಂದು ಗ್ರಹಿಸುವದೇ ಯುಕ್ತ ಎಂದು **ಮೀಮಾಂಸಕರ ಅಭಿಪ್ರಾಯವು.** 'ಮೈತ್ರೇಯೀಯಾಜ್ಞವಲ್ಕ್ಯರ ಕಥೆ', 'ಪ್ರತರ್ದನನ ಕಥೆ', 'ಜಾನಶ್ರುತಿಯ ಕಥೆ' - ಮುಂತಾಗಿ ವೇದಾಂತಗಳಲ್ಲಿ

ಕಥೆಗಳು ಕಂಡುಬರುತ್ತವೆ; ಬರಿಯ ಕಥೆಯ ಜ್ಞಾನದಿಂದ ಯಾವ ಪ್ರಯೋಜನವೂ ಇರುವದಿಲ್ಲವಾದ್ದರಿಂದ ಇವುಗಳನ್ನು ಅಶ್ವಮೇಧಯಜ್ಞದಲ್ಲಿ 'ಪಾರಿಪ್ಲವ'ಕ್ಕಾಗಿ - ಮಕ್ಕಳು ಅಮಾತ್ಯರು ಮುಂತಾದವರಿಂದೊಡಗೂಡಿದ ರಾಜನಿಗೆ ಹೇಳಬೇಕೆಂದು ಶಾಸ್ತ್ರದಲ್ಲಿ ವಿಧಿಸಿರುವ ಕಥಾಖ್ಯಾನಕ್ಕೆ ಉಪಯೋಗಿಸತಕ್ಕದ್ದೆಂದು ಇವರು ಅಭಿಪ್ರಾಯಪಟ್ಟಿರುತ್ತಾರೆ.

ಈ ಅಭಿಪ್ರಾಯಗಳಂತೂ ಸರಿಯೇ ಅಲ್ಲ. ಏಕೆಂದರೆ ಉಪನಿಷತ್ತುಗಳಲ್ಲಿ ಮಾತ್ರವೇ ತಿಳಿಯಬರುವ ಪರಮಾತ್ಮವಿಜ್ಞಾನವು ಕರ್ಮಕ್ಕೆ ಶೇಷವಾಗಿರಲಾರದೆಂದು ಆಗಲೇ (೬೫) ಹೇಳಿದ್ದಾಗಿದೆ. ಈ ಆತ್ಮನು ಬರಿಯ ಕರ್ತೃಭೋಕ್ತೃಸ್ವರೂಪ ನಾಗಿರುವದಿಲ್ಲ ; ವೇದಾಂತವಾಕ್ಯಗಳು ಯಾವ ಕರ್ತೃತ್ವಾದಿಸಂಸಾರಧರ್ಮಗಳೂ ಇಲ್ಲದ ಪರಮಾತ್ಮನನ್ನು ತಿಳಿಸುತ್ತವೆ. ಆ ಜ್ಞಾನದಿಂದ ಕರ್ಮಗಳೇ ನಾಶವಾಗಿ ಬಿಡುತ್ತವೆ. ಹೀಗೆ ಸ್ವತಂತ್ರವಾಗಿಯೇ ಪರಮಾತ್ಮಸ್ವರೂಪವನ್ನು ತಿಳಿಸುವದರಿಂದ ಈ ವಾಕ್ಯಗಳನ್ನು ಅರ್ಥವಾದವೆನ್ನುವದಕ್ಕೆ ಆಗುವದಿಲ್ಲ. ಆತ್ಮಜ್ಞಾನದ ಫಲವು ಪ್ರತ್ಯಕ್ಷ ಗಮ್ಯವಾದ್ದರಿಂದ ಫಲವಾಕ್ಯಗಳನ್ನೂ ಅರ್ಥವಾದವೆನ್ನುವದಕ್ಕೆ ಬರುವದಿಲ್ಲ. ಒಂದು ವೇಳೆ ಅರ್ಥವಾದವೆಂದು ಒಪ್ಪಿದರೂ ಅವುಗಳಿಂದಾಗುವ ಜ್ಞಾನವು ಪ್ರಮಾಣಾಂತ ರಗೋಚರವಾದ ವಿಷಯವನ್ನೂ ಅನುವಾದವನ್ನೂ ಮಾಡದೆ, ಪ್ರಮಾಣಾಂತರ ವಿರುದ್ಧವಾದ ಅರ್ಥವನ್ನೂ ಹೇಳದೆ ಇರುವದರಿಂದ, ಅದು ಇರುವ ವಸ್ತು ಸ್ವರೂಪವನ್ನೇ ತಿಳಿಸುತ್ತದೆ ಎಂದು ಒಪ್ಪಬೇಕು.

ಮೈತ್ರೇಯೀ - ಮುಂತಾದವರ ಕಥೆಗಳು ಬರಿಯ ಕಥೆಗಳಲ್ಲ ; ಅವುಗಳನ್ನು ಯಜ್ಞದಲ್ಲಿ ಪಾರಿಪ್ಲವಕ್ಕೆ ವಿನಿಯೋಗಿಸಬೇಕೆಂಬುದಕ್ಕೆ ಪ್ರಮಾಣವಿಲ್ಲ. ಮನುವಿನ ಕಥೆಯೇ ಮುಂತಾದ ಇಂಥಿಂಥ ಕಥೆಗಳನ್ನೇ ಪಾರಿಪ್ಲವಕ್ಕೆ ಉಪಯೋಗಿಸಬೇಕೆಂದು ವಿಶೇಷವಚನವೂ ಇದೆ. ಆದ್ದರಿಂದ ಪ್ರಕೃತವಾದ ಕಥೆಗಳು ಯಾವ ಯಾವ ವಿದ್ಯೆಯ ಪ್ರಕರಣದಲ್ಲಿ ಬಂದಿರುತ್ತವೆಯೋ ಅವುಗಳಿಗೇ ಅವತರಣಿಕೆಯಾಗಿ ಬಂದಿವೆ ಎಂದೆಣಿಸುವದು ಯುಕ್ತ. ಹಾಗೆ ಹೊಂದಿಸುವದಕ್ಕೆ ಬಂದೂ ಬರುತ್ತದೆ. ಆದ್ದರಿಂದ ವೇದಾಂತವಾಕ್ಯದಿಂದಾಗುವ ಜ್ಞಾನವು ಕರ್ಮಾನಕ್ಕೆ ಶೇಷವೆಂದು ಎಣಿಸುವದಕ್ಕೆ ಎಳ್ಳಷ್ಟೂ ಅವಕಾಶವಿರುವದಿಲ್ಲ.

(೧) ಯದಿ ಸಂಸಾರ್ಯೇವ ಆತ್ಮಾ ಶಾರೀರಃ ಕರ್ತಾ ಭೋಕ್ತಾ ಚ ಶರೀರ ಮಾತ್ರವ್ಯತಿರೇಕೇಣ ವೇದಾನ್ತೇಷು ಉಪದಿಷ್ಟಃ ಸ್ಯಾತ್ ತತೋ ವರ್ಣಿತೇನ ಪ್ರಕಾರೇಣ ಫಲಶ್ರುತೇಃ ಅರ್ಥವಾದತ್ವಂ ಸ್ಯಾತ್ । ಅಧಿಕಸ್ತಾವತ್ ಶಾರೀರಾದಾತ್ಮನಃ ಅಸಂಸಾರೀ ಈಶ್ವರಃ ಕರ್ತೃತ್ವಾದಿಸಂಸಾರಧರ್ಮರಹಿತಃ ಅಪಹತಪಾಪ್ಮತ್ವಾದಿವಿಶೇಷಣಃ ಪರಮಾತ್ಮಾ ವೇದ್ಯತ್ವೇನ ಉಪದಿಶ್ಯತೇ ವೇದಾನ್ತೇಷು । ನ ಚ ತದ್ವಿಜ್ಞಾನಂ ಕರ್ಮಣಾಂ ಪ್ರವರ್ತಕಂ ಭವತಿ ಪ್ರತ್ಯುತ

ಕರ್ಮಾಣ್ಯುಚ್ಛಿನತ್ತಿ ಇತಿ ವಕ್ಷ್ಯತಿ 'ಉಪಮರ್ದಂ ಚ' (ಸೂ. ೩-೪-೧೬) ಇತ್ಯತ್ರ ॥
-ಸೂ. ಭಾ. ೩-೪-೮-೪೪೫

(೨) ಅನನ್ಯಶೇಷತ್ವಾಚ್ಚ ತಜ್ಜ್ಞಾನಸ್ಯ ಜುಹ್ವಾಮಿವ ಫಲಶ್ರುತೇರರ್ಥವಾದತ್ವಾನುಪಪತ್ತಿಃ ॥ - ಬೃ. ಭಾ. ೧-೩-೧-೫೩

(೩) ತದ್ ಯತ್ರ ಯೋಽವಾನ್ತರವಾಕ್ಯಾರ್ಥಃ ಪ್ರಮಾಣಾನ್ತರಗೋಚರೋ ಭವತಿ ತತ್ರ ತದನುವಾದೇನ ಅರ್ಥವಾದಃ ಪ್ರವರ್ತತೇ । ಯತ್ರ ಪ್ರಮಾಣಾನ್ತರವಿರುದ್ಧಃ ತತ್ರ ಗುಣವಾದೇನ । ಯತ್ರ ತು ತದುಭಯಂ ನಾಸ್ತಿ, ತತ್ರ ಕಿಂ ಪ್ರಮಾಣಾನ್ತರಾಭಾವಾದ್ ಗುಣವಾದಃ ಸ್ಯಾತ್, ಆಹೋಸ್ವಿತ್ ಪ್ರಮಾಣಾನ್ತರಾವಿರೋಧಾತ್ ವಿದ್ಯಮಾನವಾದಃ ? ಇತಿ ಪ್ರತೀತಿಶರಣೈರ್ವಿದ್ಯಮಾನವಾದ ಆಶ್ರಯಣೀಯೋ ನ ಗುಣವಾದಃ ॥ - ಸೂ. ಭಾ ೧-೩-೩೩-೩೦೩

(೪) "ಪಾರಿಪ್ಲವಮಾಚಕ್ಷೀತ" ಇತಿ ಹಿ ಪ್ರಕೃತ್ಯ "ಮನುರ್ವೈವಸ್ವತೋ ರಾಜಾ" ಇತ್ಯೇವಮಾದೀನಿ ಕಾನಿಚಿದೇವ ಆಖ್ಯಾನಾನಿ ತತ್ರ ವಿಶೇಷ್ಯನ್ತೇ । ಆಖ್ಯಾನಸಾಮಾನ್ಯಾಚ್ಚೇತ್ ಸರ್ವಗೃಹೀತಿಃ ಸ್ಯಾತ್ ಅನರ್ಥಕಮೇವೇದಂ ವಿಶೇಷಣಂ ಭವೇತ್ । ತಸ್ಮಾತ್ ನ ಪಾರಿಪ್ಲವಾರ್ಥಾ ಏತಾಃ ಆಖ್ಯಾನಶ್ರುತಯಃ ॥ - ಸೂ. ಭಾ. ೩-೪-೨೩-೪೬೬

(೫) ಅಸತಿ ಚ ಪಾರಿಪ್ಲವಾರ್ಥತ್ವೇ ಆಖ್ಯಾನಾನಾಂ ಸಂನಿಹಿತವಿದ್ಯಾಪ್ರತಿ ವಾದನೋಪಯೋಗಿತ್ವೈವ ನ್ಯಾಯ್ಯಾ । ಏಕವಾಕ್ಯತೋಪಬನ್ಧಾತ್ । ತಥಾ ಹಿ ತತ್ರ ತತ್ರ ಸಂನಿಹಿತಾಭಿರ್ವಿದ್ಯಾಭಿರೇಕವಾಕ್ಯತಾ ದೃಶ್ಯತೇ । ಪ್ರರೋಚನೋಪಯೋಗಾತ್ ಪ್ರತಿಪತ್ತಿಸೌಕರ್ಯೋಪಯೋಗಾಚ್ಚ॥ - ಸೂ. ಭಾ. ೩-೪-೨೪-೪೬೭

೭೪. ವೇದಾಂತವಾಕ್ಯದಿಂದ ಪರಮಾತ್ಮಜ್ಞಾನವು ಉಂಟಾಗಬಹುದೆಂದು ಒಪ್ಪಿದರೂ ವಾಕ್ಯಜನ್ಯಜ್ಞಾನವು ಸಾಮಾನ್ಯವಾಗಿ ಪರೋಕ್ಷವಾಗಿರುತ್ತದೆ. ಅನಾದಿ ಕಾಲದಿಂದ ಬಂದಿರುವ ಗಟ್ಟಿಯಾದ ಸಂಸ್ಕಾರದಿಂದ ನಾನು ಸಂಸಾರಿ ಎಂದು ಪ್ರತ್ಯಕ್ಷವಾಗಿರುವ ಜ್ಞಾನವು ವಾಕ್ಯಜನ್ಯಜ್ಞಾನಕ್ಕಿಂತ ಪ್ರಬಲವಾಗಿರುವದರಿಂದ ವಾಕ್ಯಜನ್ಯಜ್ಞಾನವು ಬಾಧಿತವಾಗುತ್ತದೆ. ಆದ್ದರಿಂದ ನಾನು ಅಕರ್ತೃವಾದ ಅಭೋಕ್ತೃವಾದ ಪರಮಾತ್ಮನು ಎಂಬ ಜ್ಞಾನವು ಗಟ್ಟಿಯಾಗುವವರೆಗೆ ಜ್ಞಾನಾಭ್ಯಾಸರೂಪವಾದ **ಪ್ರಸಂಖ್ಯಾನ**ವನ್ನು ಮಾಡಬೇಕು - ಎಂದು ಅಭಿಪ್ರಾಯಪಡುತ್ತಿದ್ದ ಕೆಲವರು ವಾದಿಗಳು ಆಚಾರ್ಯರ ಕಾಲದಲ್ಲಿದ್ದರು. ವಾಕ್ಯಗಳು ಪದಾರ್ಥಗಳ ಸಂಸರ್ಗವನ್ನು ತಿಳಿಸುವದರಿಂದ ಅದರಿಂದ ನೇರಾಗಿ ಅಪರೋಕ್ಷಜ್ಞಾನವು ಉಂಟಾಗುವದೇ ಇಲ್ಲ. ಈ ಜ್ಞಾನವನ್ನು ಮತ್ತೆ ಮತ್ತೆ ಅಭ್ಯಾಸಮಾಡಿದರೆ ಕೊನೆಯಲ್ಲಿ ಯಾವದರ ಸಂಬಂಧವೂ ಇಲ್ಲದ ಅಖಂಡಾತ್ಮಜ್ಞಾನವು ಉಂಟಾಗುತ್ತದೆ. ವಾಕ್ಯದಿಂದ ನಿಶ್ಚಿತ ಜ್ಞಾನವುಂಟಾದರೂ ಮಿಥ್ಯಾವಭಾಸವು ಇದ್ದುಕೊಂಡೇ ಇರಬಹುದು ; ಬೆಲ್ಲವು ಸಿಹಿಯೆಂದು ತಿಳಿದರೂ ಅದು ರೋಗದಿಂದ ಕಹಿ ಎಂದೇ ತೋರುವಂತೆ ಸಂಸಾರಿತ್ವವು

ಬಲವಾಗಿ ತೋರುತ್ತಿದ್ದರೆ ಅದನ್ನು ಕಳೆಯುವದಕ್ಕಾಗಿ ತತ್ತ್ವಾಭ್ಯಾಸವನ್ನು ಮಾಡುವದು ಅವಶ್ಯ - ಎಂದೂ ಕೆಲವರು ವಾದಿಸಿರುತ್ತಾರೆ.

ಈ ಯಾವ ವಾದಗಳೂ ಆಚಾರ್ಯರಿಗೆ ಸಮ್ಮತವಲ್ಲ. ವಾಕ್ಯದಿಂದ ಪರೋಕ್ಷಜ್ಞಾನವೇ ಆಗಬೇಕೆಂಬ ನಿಯಮವೇನೂ ಇಲ್ಲ. ಹತ್ತನೆಯವನ ಕಥೆಯೇ ಇದಕ್ಕೆ ನಿದರ್ಶನ. ಹತ್ತು ಜನ ಮೂಢರು ತಮ್ಮಲ್ಲಿ ಒಬ್ಬನು ಹೇಗೋ ಮಾಯವಾಗಿದ್ದಾನೆಂಬ ತಪ್ಪು ತಿಳಿವಳಿಕೆಯನ್ನುಳ್ಳವರಾಗಿದ್ದರು. ತಮ್ಮನ್ನುಬಿಟ್ಟು ಹೊರಗಿನ ಒಂಬತ್ತು ಜನರನ್ನೇ ಎಣಿಸಿ ನಾವು ಒಂಬತ್ತೇ ಜನರು ಎಂದು ತಿಳಿದಿದ್ದರು. ಹತ್ತನೆಯವನನ್ನು ಕಾಣದೆ ಪೇಚಾಡುತ್ತಿದ್ದ ಅವರನ್ನುಕಂಡು ಒಬ್ಬ ದಾರಿಹೋಕನು 'ನೀನೇ ಹತ್ತನೆಯವನು' ಎಂದು ಒಬ್ಬೊಬ್ಬರಿಗೂ ಹೇಳಿಕೊಟ್ಟನು. ಆಗ ಅವರಿಗೆ ಒಬ್ಬೊಬ್ಬನಿಗೂ ನಾನೇ ಹತ್ತನೆಯವನು ಎಂಬ ಅರಿವು ಉಂಟಾಯಿತು. ಇದರಂತೆ ಕಾಮವಶರಾಗಿ ಅನಾತ್ಮವನ್ನೇ ನೋಡುತ್ತಿರುವ ಅಜ್ಞರಿಗೆ 'ತತ್ತ್ವಮಸಿ' ನೀನೇ ಆ ಸದ್ಬ್ರಹ್ಮವು ಎಂಬ **ವೇದಾಂತವಾಕ್ಯದಿಂದ ನಾನೇ ಬ್ರಹ್ಮವು ಎಂಬ ಜ್ಞಾನವು ಅಪರೋಕ್ಷವಾಗಿಯೇ ಉಂಟಾಗಬಹುದಾಗಿದೆ.** ಶ್ವೇತಕೇತುವಿಗೆ ಅದು ಆಯಿತೆಂದು ಶ್ರುತಿಯಲ್ಲಿದೆ, ಈಗಲೂ ಹಾಗೆ ಆಗುತ್ತದೆ. ವಾಕ್ಯದಿಂದುಂಟಾಗುವ ಜ್ಞಾನದಿಂದ ಅಬ್ರಹ್ಮವು ನಾನು, ಅನಾತ್ಮವು ನಾನು ಎಂಬ ತಿಳಿವಳಿಕೆಯು ಹೋಗುವದಿಲ್ಲ - ಎಂಬುದೂ ಸರಿಯಲ್ಲ ; ಏಕೆಂದರೆ 'ತತ್ತ್ವಮಸಿ', 'ನೇತಿ, ನೇತಿ' - ಮುಂತಾದ ವಾಕ್ಯಗಳು ಬ್ರಹ್ಮಾತ್ಮೈಕತ್ವವನ್ನೇ ಸ್ಪಷ್ಟವಾಗಿ ಹೇಳುತ್ತವೆ. ವಾಕ್ಯವು ಪ್ರತ್ಯಕ್ಷದಿಂದ ಬಾಧಿತವಾಗುತ್ತದೆ ಎಂಬುದು ಪ್ರತ್ಯಕ್ಷಗೋಚರವಾದ ವಿಷಯದಲ್ಲಿ ಸರಿಯಾದೀತು. ಉದಾರಹಣೆಗೆ 'ಕೃಷ್ಣಲಾನ್ ಶ್ರಪಯೇತ್' ಎಂಬ ವಾಕ್ಯದಲ್ಲಿ ಕೃಷ್ಣವೆಂಬ ಲೋಹದ ಚೂರುಗಳನ್ನು ಬೇಯಿಸಬೇಕೆಂದು ವಿಧಿಸಿದೆ ; ಆದರೆ ಅವನ್ನು ಮೆತ್ತಗಾಗುವಂತೆ ಬೇಯಿಸುವದು ಆಗದ ಕೆಲಸವೆಂಬುದು ಪ್ರತ್ಯಕ್ಷಸಿದ್ಧವಾಗಿರುತ್ತದೆಯಾದ್ದರಿಂದ ಅದೃಷ್ಟವಾದ ಒಂದಾನೊಂದು ಸಂಸ್ಕಾರಕ್ಕಾಗಿ ಹಾಗೆ ಬೇಯಿಸಬೇಕೆಂದು ಹೇಳಿದೆ ಎಂದು ವಾಕ್ಯಕ್ಕೆ ಅರ್ಥವನ್ನು ಮಾಡಬೇಕಾಗುವದು. ಆದರೆ ಆತ್ಮನು ಸಂಸಾರಿ ಎಂಬುದು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿಲ್ಲ ; ಏಕೆಂದರೆ ಆತ್ಮನು ಪ್ರತ್ಯಕ್ಷಗೋಚರನಲ್ಲ (೫೬). ಆದ್ದರಿಂದ ಪ್ರತ್ಯಕ್ಷಾಭಾಸದಿಂದ ತೋರುವ ಸಂಸಾರಿತ್ವವನ್ನು 'ತತ್ತ್ವಮಸಿ' ಮುಂತಾದ ಶಾಸ್ತ್ರವಾಕ್ಯವು ಬಾಧಿಸಬಹುದಾಗಿದೆ. ಐಕ್ಯಜ್ಞಾನವು ವಾಕ್ಯದಿಂದ ಉಂಟಾದಮೇಲೂ ಬೆಲ್ಲವು ಕಹಿ ಎಂದು ಜ್ವರದೋಷದಿಂದ ತೋರುವಂತೆ ಸಂಸಾರಿತ್ವವು ತೋರಬಹುದೆಂದು ಶಂಕಿಸುವದು ಸರಿಯಲ್ಲ ; ಏಕೆಂದರೆ ಏಕತ್ವವನ್ನು ಕಂಡುಕೊಂಡಾಗ ಎರಡನೆಯ ವಸ್ತುವೇ ಇಲ್ಲದ್ದರಿಂದ

ಏಕತ್ವಜ್ಞಾನಕ್ಕೆ ದೃಷ್ಟಾಂತದ ಜ್ಞಾನಕ್ಕಿರುವಂತೆ ಬಾಧಕವಾದದ್ದು ಮತ್ತೆ ಯಾವದೂ ಇರುವ ಸಂಭವವೇ ಇಲ್ಲ.

ಆದ್ದರಿಂದ ವಾಕ್ಯಯುಕ್ತಿಗಳನ್ನು ಅಭ್ಯಾಸಮಾಡಬೇಕೆನ್ನುವದು ಪದಾರ್ಥ ವಿವೇಕಕ್ಕಾಗಿಯೇ ಹೊರತು ವಾಕ್ಯಾರ್ಥಜ್ಞಾನವಾದ ಮೇಲೆ ಅಭ್ಯಾಸ ಮಾಡಬೇಕೆಂದಲ್ಲ. 'ವಿಜ್ಞಾಯ ಪ್ರಜ್ಞಾಂ ಕುರ್ವೀತ'' (ಬೃ. ೪-೪-೨೧) ಅರಿತು ಪ್ರಜ್ಞೆಯನ್ನು ಮಾಡಿಕೊಳ್ಳ ಬೇಕು - ಎಂಬ ವೇದಾಂತವಾಕ್ಯಕ್ಕೆ ವಾಕ್ಯವಿಜ್ಞಾನವನ್ನು ಸಂಪಾದಿಸಿಕೊಂಡ ಬಳಿಕ ಅದರ ಅಭ್ಯಾಸದಿಂದ ಅನುಭವವೆಂಬ ಸಾಕ್ಷಾತ್ಕಾರ ಜ್ಞಾನವನ್ನು ಮಾಡಿಕೊಳ್ಳಬೇಕೆಂದು ಅರ್ಥವಲ್ಲ. ಜ್ಞಾನವುಂಟಾದ ಬಳಿಕವೂ ಬಿಟ್ಟ ಬಾಣದಂತೆ ಪ್ರಾರಬ್ಧಕರ್ಮವಶದಿಂದ ಕರಣತ್ರಯವು ಬಹಿರ್ಮುಖವಾಗಿ ಪ್ರವರ್ತಿಸಬಹುದಾದ್ದರಿಂದ ವಿಜ್ಞಾನಸ್ಮೃತಿಯನ್ನು ಹಾಗೆಯೇ ನಿಲ್ಲಿಸಬೇಕೆಂದು ಆ ವಾಕ್ಯದ ಅರ್ಥ. ಇದೂ ವ್ಯಾವಹಾರಿಕದೃಷ್ಟಿಯಿಂದ ಹೇಳಿದ್ದು. ಜ್ಞಾನಿಯಾದವನಿಗೆ ನಿತ್ಯಶುದ್ಧಾನಂದಸ್ವರೂಪವಾದ ಆತ್ಮತತ್ತ್ವದಲ್ಲಿಯೇ ಮನಸ್ಸಿಡಬೇಕೆಂದು, ಅಥವಾ ಅನಿತ್ಯವೂ ಅಶುಚಿಯೂ ದುಃಖಕರವೂ ಆಗಿರುವ ಅನಾತ್ಮದಲ್ಲಿ ಮನಸ್ಸು ಹಾಕಬಾರದೆಂದು, ವಿಧಿಸುವದೂ ಅವಶ್ಯವಿರುವದಿಲ್ಲವಾಗಿ ಶಾಸ್ತ್ರಾಚಾರ್ಯರಿಂದ ವಿಜ್ಞಾನವನ್ನು ಸಂಪಾದಿಸಿಕೊಂಡು ಆ ಮೂಲಕ ಜಿಜ್ಞಾಸಾಪರಿಸಮಾಪ್ತಿಕರವಾದ ಪ್ರಜ್ಞೆಯನ್ನು ದೊರಕಿಸಿಕೊಳ್ಳಬೇಕು - ಎಂದು ವಿಜ್ಞಾನಸಂಪಾದನೆಗೆ ಬೇಕಾಗಿರುವ ಸಂನ್ಯಾಸಶಮದಮಾದಿಗಳನ್ನೇ ಮುಮುಕ್ಷುವಿಗೆ ವಿಧಿಸಿದೆ ಎಂದೇ ಈ ವಾಕ್ಯಕ್ಕೆ ಅರ್ಥವನ್ನು ಮಾಡುವದು ಯುಕ್ತತರವಾಗಿರುತ್ತದೆ. ಅದ್ವೈತವನ್ನು ತಿಳಿಸುವ ವಾಕ್ಯ ಜನ್ಯಜ್ಞಾನವುಂಟಾದ ಮೇಲೆ ಬ್ರಹ್ಮವನ್ನು ಅರಿಯುವದಕ್ಕೆ ಮತ್ತೊಂದು ಪ್ರಮಾಣ ವಾಗಲಿ ಮತ್ತೊಂದು ಸಾಧನವಾಗಲಿ ಬೇಕೆಂದು ತಿಳಿಯುವದು ಯಾವ ಬಗೆ ಯಿಂದಲೂ ಹೊಂದುವದಿಲ್ಲವೆಂಬುದು ಸ್ಪಷ್ಟವಾಗಿಯೇ ಇರುತದೆ.

೧) ನವಬುದ್ಧ್ಯಪಹಾರಾದ್ ಹಿ ಸ್ವಾತ್ಮಾನಂ ದಶಪೂರಣಮ್ ।
ಅಪಶ್ಯನ್ ಜ್ಞಾತುಮೇವೇಚ್ಛೇತ್ ಸ್ವಮಾತ್ಮಾನಂ ಜನಸ್ತಥಾ ॥೧೬೭॥
ಅವಿದ್ಯಾಬದ್ಧಚಕ್ಷುಷ್ಟ್ವಾತ್ ಕಾಮಾಪಹೃತಧೀಃ ಸದಾ ।
ವಿವಿಕ್ತಂ ದೃಶಿಮಾತ್ಮಾನಂ ನೇಕ್ಷತೇ ದಶಮಂ ಯಥಾ ॥೧೬೮॥
ದಶಮಸ್ತ್ವಮಸೀತ್ಯೇವಂ ತತ್ತ್ವಮಸ್ಯಾದಿವಾಕ್ಯತಃ ।
ಸ್ವಮಾತ್ಮಾನಂ ವಿಜಾನಾತಿ ಕೃತ್ಸ್ನಾನ್ತಃಕರಣೇಕ್ಷಣಮ್ ॥೧೬೯॥
- ಉಪ. ಪದ್ಯ. ೧೮

(೨) ವಾಕ್ಯಜನಿತವಿಜ್ಞಾನಮಾತ್ರಾತ್ ನಾಬ್ರಹ್ಮಾನಾತ್ಮವಿಜ್ಞಾನನಿವೃತ್ತಿಃ ಇತಿ ಚೇತ್ ।ನ । 'ತತ್ತ್ವಮಸಿ', 'ನೇತಿ ನೇತಿ', 'ಆತ್ಮೈವೇದಂ', 'ಏಕಮೇವಾದ್ವಿತೀಯಮ್', ಬ್ರಹ್ಮೈವೇದಮಮೃತಮ್', 'ನಾನ್ಯದತೋಽಸ್ತಿ ದ್ರಷ್ಟೃ', 'ತದೇವ ಬ್ರಹ್ಮ ತ್ವಂ ವಿದ್ಧಿ' ಇತ್ಯಾದಿವಾಕ್ಯಾನಾಂ ತದ್ವಾದಿತ್ವಾತ್ । - ಬೃ. ಭಾ ೧-೪-೭-೧೩೭

(೩) ಪ್ರತ್ಯಕ್ಷಾದೀನಿ ಬಾಧೇರನ್ ಕೃಷ್ಣಲಾದಿಷು ಪಾಕವತ್ ।
ಅಕ್ಷಜಾದಿನಿಭೈರೇತೈಃ ಕಥಂ ಸ್ಯಾದ್ ವಾಕ್ಯ ಬಾಧನಮ್ ॥ - ಉಪ. ೧೮-೧೭೭

(೪) ಪ್ರತ್ಯಗಾತ್ಮನ ಆತ್ಮತ್ವಂ ದುಃಖ್ಯಸ್ಮೀತ್ಯಸ್ಯ ಬಾಧಯಾ ।
ದಶಮಂ ನವಮಸ್ಯೇವ ವೇದ ಚೇದವಿರುದ್ಧತಾ ॥ - ಉಪ. ೧೮-೧೮೧

(೫) ನ ಚೇಯಮವಗತಿರ್ನೋತ್ಪದ್ಯತೇ ಇತಿ ಶಕ್ಯಂ ವಕ್ತುಮ್ । ''ತದ್ಧಾಸ್ಯ ವಿಜಜ್ಞೌ'' (ಛಾಂ. ೬-೧೬-೩) ಇತ್ಯಾದಿಶ್ರುತಿಭ್ಯಃ । .... ನ ಚೇಯಮವಗತಿ ರನರ್ಥಿಕಾ ಭ್ರಾನ್ತಿರ್ವಾ ಇತಿ ಶಕ್ಯಂ ವಕ್ತುಮ್ । ಅವಿದ್ಯಾನಿವೃತ್ತಿಫಲದರ್ಶನಾದ್, ಬಾಧಕಜ್ಞಾನಾನ್ತರಾಭಾವಾಚ್ಚ ॥
- ಸೂ. ಭಾ. ೨-೧-೧೪-೪೩೮.

(೬) ತತ್ರ ಯೇಷಾಮೇತೌ ಪದಾರ್ಥೌ ಅಜ್ಞಾನಸಂಶಯವಿಪರ್ಯಯಪ್ರತಿಬದ್ಧೌ ತೇಷಾಂ ತತ್ತ್ವಮಸಿ ಇತ್ಯೇತದ್ವಾಕ್ಯಂ ಸ್ವಾರ್ಥೇ ಪ್ರಮಾಂ ನೋತ್ಪಾದಯಿತುಂ ಶಕ್ನೋತಿ । ಪದಾರ್ಥಜ್ಞಾನಪೂರ್ವಕತ್ವಾತ್ ವಾಕ್ಯಾರ್ಥಸ್ಯ ಇತ್ಯತಃ ತಾನ್ ಪ್ರತಿ ಏಷ್ಟವ್ಯಃ ಪದಾರ್ಥವಿವೇಕಪ್ರಯೋಜನಃ ಶಾಸ್ತ್ರಯುಕ್ತ್ಯಭ್ಯಾಸಃ ॥ - ಸೂ. ಭಾ. ೪-೧-೨-೫೦೬.

(೭) ಶರೀರಾರಮ್ಭಕಸ್ಯ ಕರ್ಮಣಃ ನಿಯತಫಲತ್ವಾತ್ ಸಮ್ಯಗ್ಜ್ಞಾನಪ್ರಾಪ್ತಾವಪಿ ಅವಶ್ಯಂಭಾವಿನೀ ಪ್ರವೃತ್ತಿರ್ವಾಙ್ಮನಃಕಾಯಾನಾಮ್ । ಲಬ್ಧವೃತ್ತೇಃ ಕರ್ಮಣೋ ಬಲೀಯಸ್ತ್ವಾತ್। ಮುಕ್ತೇಷ್ವಾದಿಪ್ರವೃತ್ತಿವತ್ । ತೇನ ಪಕ್ಷೇ ಪ್ರಾಪ್ತಂ ಜ್ಞಾನಪ್ರವೃತ್ತಿದೌರ್ಬಲ್ಯಮ್ । ತಸ್ಮಾತ್ ತ್ಯಾಗ ವೈರಾಗ್ಯಾದಿಸಾಧನಬಲಾವಲಮ್ಬೇನ ಆತ್ಮವಿಜ್ಞಾನಸ್ಮೃತಿಸನ್ತತಿರ್ನಿಯನ್ತವ್ಯಾ ಭವತಿ । ನ ತು ಅಪೂರ್ವಾ ಕರ್ತವ್ಯಾ । ಪ್ರಾಪ್ತತ್ವಾತ್ ಇತ್ಯವೋಚಾಮ । ತಸ್ಮಾತ್ ಪ್ರಾಪ್ತವಿಜ್ಞಾನಸ್ಮೃತಿಸನ್ತಾನನಿಯಮವಿಧ್ಯರ್ಥಾನಿ 'ವಿಜ್ಞಾಯ ಪ್ರಜ್ಞಾಂ ಕುರ್ವೀತ' ಇತ್ಯಾದಿವಾಕ್ಯಾನಿ ಅನ್ಯಾರ್ಥಾಸಂಭವಾತ್ ॥ - ಬೃ. ಭಾ. ೧-೪-೭-೧೪೨.

(೮) ಆತ್ಮಾವಗತೌ ಹಿ ಸತ್ಯಾಮ್ ಅನ್ಯದ್ ವಸ್ತು ಅನರ್ಥತ್ವೇನ ಅವಗಮ್ಯತೇ । ಅನಿತ್ಯ ದುಃಖಾಶುದ್ಧ್ಯಾದಿಬಹುದೋಷವತ್ತ್ವಾತ್ । ಆತ್ಮವಸ್ತುನಶ್ಚ ತದ್ವಿಲಕ್ಷಣತ್ವಾತ್ । ತಸ್ಮಾತ್ ಅನಾತ್ಮವಿಜ್ಞಾನಸ್ಮೃತೀನಾಮ್ ಆತ್ಮಾವಗತೇರಭಾವಪ್ರಾಪ್ತಿಃ ॥ - ಬೃ. ಭಾ. ೧-೪-೭-೧೩೮

(೯) ತಮ್ ಈದೃಶಮ್ ಆತ್ಮಾನಮೇವ ಧೀರೋ ಧೀಮಾನ್ ವಿಜ್ಞಾಯ ಉಪದೇಶತಃ ಶಾಸ್ತ್ರತಶ್ಚ ಪ್ರಜ್ಞಾಂ ಶಾಸ್ತ್ರಾಚಾರ್ಯೋಪದಿಷ್ಟವಿಷಯಾಂ ಜಿಜ್ಞಾಸಾಪರಿಸಮಾಪ್ತಿಕರೀಂ ಕುರ್ವೀತ ಬ್ರಾಹ್ಮಣಃ । ಏವಂ ಪ್ರಜ್ಞಾಕರಣಸಾಧನಾನಿ ಸಂನ್ಯಾಸಶಮದಮೋಪರಮತಿತಿಕ್ಷಾಸಮಾಧಾನಾನಿ ಕುರ್ಯಾತ್ ಇತ್ಯರ್ಥಃ ॥ - ಬೃ. ಭಾ. ೪-೪-೨೧-೩೦೦

(೧೦) ಅನ್ತಃಪ್ರಜ್ಞತ್ವಾದಿತ್ವ ಪ್ರತಿಷೇಧವಿಜ್ಞಾನಸಮಕಾಲಮೇವ ಆತ್ಮನಿ ಅನರ್ಥಪ್ರಪಞ್ಚ ನಿವೃತ್ತಿಲಕ್ಷಣಂ ಫಲಂ ಪರಿಸಮಾಪ್ತಮ್ ಇತಿ ತುರೀಯಾಧಿಗಮೇ ಪ್ರಮಾಣಾನ್ತರಂ ಸಾಧನಾನ್ತರಂ

ವಾ ನ ಮೃಗ್ಯಮ್ ರಜ್ಜುಸರ್ಪವಿವೇಕಸಮಕಾಲೇ ಇವ ರಜ್ಜ್ವಾಂ ಸರ್ಪನಿವೃತ್ತಿಫಲೇ ಸತಿ ರಜ್ಜ್ವಧಿಗಮಸ್ಯ ॥ - ಮಾಂ. ಭಾ. ೭-೩೯

(೧೧) ತ್ವಮರ್ಥಂ ಪ್ರತ್ಯಗಾತ್ಮಾನಂ ಪಶ್ಯೇದಾತ್ಮಾನಮಾತ್ಮನಿ ।
ವಾಕ್ಯಾರ್ಥಂ ತತ ಆತ್ಮಾನಂ ಸರ್ವಂ ಪಶ್ಯತಿ ಕೇವಲಮ್ ॥
ಸರ್ವಮಾತ್ಮೇತಿ ವಾಕ್ಯಾರ್ಥೇ ವಿಜ್ಞಾತೇಽಸ್ಯ ಪ್ರಮಾಣತಃ ।
ಅಸತ್ತ್ವೇ ಹ್ಯನ್ಯಮಾನಸ್ಯ ವಿಧಿಸ್ತಂ ಯೋಜಯೇತ್ ಕಥಮ್ ॥
- ಉಪ. ಸಾ. ೧೮-೨೧೨-೨೧೩

೭೫. ಸರಿಯಾಗಿ ನೋಡಿದರೆ ವೇದಾಂತವಾಕ್ಯದಿಂದ ಆತ್ಮಾನುಭವವುಂಟಾಗುವದೆಂದು ಹೇಳುವದೂ ಸರಿಯಾಗುವದಿಲ್ಲ. ಏಕೆಂದರೆ ನಿತ್ಯನಾಗಿ ಚೈತನ್ಯಸ್ವರೂಪನಾಗಿರುವ ಆತ್ಮನೇ ಅನುಭವವು ; ಆತ್ಮನನ್ನು ಅರಿತುಕೊಳ್ಳದಿರುವದು, ಅರಿತುಕೊಳ್ಳುವದು - ಎಂಬ ವಿಶೇಷಾವಸ್ಥೆಗಳು ಆತ್ಮನಲ್ಲಿ ಉಂಟಾಗುವಂತೆಯೇ ಇಲ್ಲ. ಆದ್ದರಿಂದ ದಶಮನ ಜ್ಞಾನದಂತೆ ಆತ್ಮನ ಜ್ಞಾನವು ಹೊಸದಾಗಿ ಉಂಟಾಗುವದೆಂಬುದೂ ಸರಿಯಲ್ಲ. ಆದರೂ ಆತ್ಮನು ಅನುಭವಸ್ವರೂಪನಾಗಿರುತ್ತಾನೆ ಎಂದು ತಿಳಿದುಕೊಳ್ಳುವಾಗ ಜಿಜ್ಞಾಸುವಿನ ಅಂತಃಕರಣವೃತ್ತಿಯು ಆತ್ಮಚೈತನ್ಯದಂತೆಯೇ ತೋರುತ್ತಾ ಹುಟ್ಟಿಕೊಳ್ಳುತ್ತದೆ ; ಆ ಚಿದಾಭಾಸವೃತ್ತಿಯನ್ನೇ ಆತ್ಮಾನುಭವವೆಂದು ವ್ಯವಹರಿಸುತ್ತಾರೆ. ಲೋಕದಲ್ಲಿ ಶಬ್ದಾದಿವಿಷಯಗಳ ಜ್ಞಾನಗಳು ಉಂಟಾದವೆಂದು ನಾವು ಹೇಳುವಲ್ಲಿ ಅಂತಃಕರಣವು ಇಂದ್ರಿಯಾದಿಗಳ ಮೂಲಕ ಆಯಾ ವಿಷಯಗಳನ್ನು ಅರಿತು ಅವುಗಳ ಆಕಾರವಾಗಿ ಪರಿಣಮಿಸುತ್ತದೆ ; ಆ ಪರಿಣಾಮರೂಪವಾದ ವೃತ್ತಿಗಳು ಆತ್ಮಚೈತನ್ಯಕ್ಕೆ ವಿಷಯವಾಗಿಯೇ ಆತ್ಮಚೈತನ್ಯವ್ಯಾಪ್ತವಾಗಿಯೇ ಹುಟ್ಟುತ್ತವೆ. ಅವು ಆತ್ಮವಿಜ್ಞಾನದಂತೆ ತೋರುತ್ತಿರುವದರಿಂದ ಅವನ್ನು ಆಯಾ ವಿಷಯದ 'ವಿಜ್ಞಾನ' ಎಂದು ಕರೆಯುತ್ತಾರೆ. ಅವು ಚಿದಾಭಾಸವಾಗಿರುತ್ತವೆಯಾದರೂ ಆತ್ಮನ ಧರ್ಮಗಳಲ್ಲ; ಜ್ಞಾನಸ್ವರೂಪನೇ ಆಗಿರುವ ಆತ್ಮನು ಅವಕ್ಕೆ ವಿಷಯನೂ ಅಲ್ಲ. ಈ ಕಾರಣದಿಂದಲೇ ವೃತ್ತಿವಾಚಕಗಳಾದ ಜ್ಞಾನ, ಅನುಭವ - ಮುಂತಾದ ಶಬ್ದಗಳಿಗೆ ಆತ್ಮನು ವಾಚ್ಯನಲ್ಲ, ಲಕ್ಷ್ಯನಾಗಿರುತ್ತಾನೆ ಎಂದು ನಾವು ಹಿಂದೆ (೬೭)ರಲ್ಲಿ ಹೇಳಿರುವದು.

(೧) ದೃಶಿರೂಪೇ ಸದಾ ನಿತ್ಯೇ ದರ್ಶನಾದರ್ಶನೇ ಮಯಿ ।
ಕಥಂ ಸ್ಯಾತಾಂ ತತೋ ನಾನ್ಯ ಇಷ್ಯತೇಽನುಭವಸ್ತತಃ ॥ - ಉಪ. ಸಾ. ೧೨-೯

(೨) ಇತೋಽನ್ಯೋಽನುಭವಃ ಕಶ್ಚಿದಾತ್ಮನೋ ನೋಪಪದ್ಯತೇ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಾರಮಿತಿ ಶ್ರುತೇಃ ॥ - ಉಪ. ಸಾ. ೧೮-೨೦೦

(೩) ವೃತ್ತಿರೇವಾನುಭೂಯೇತ ಸ್ವೇನೈವಾನುಭವಾತ್ಮನಾ ।

ತದಾಭಾಸತಯಾ ಜನ್ಮ ಧಿಯೋಽಸ್ಯಾನುಭವಃ ಸ್ಮೃತಃ ॥ - ಉಪ. ಸಾ. ೧೮-೧೯೩

(೪) ಆತ್ಮನಃ ಸ್ವರೂಪಂ ಜ್ಞಪ್ತಿರ್ನ ತತೋ ವ್ಯತಿರಿಚ್ಯತೇ । ಅತೋ ನಿತ್ಯೈವ । ತಥಾಪಿ ಬುದ್ಧೇರುಪಾಧಿಲಕ್ಷಣಾಯಾಃ ಚಕ್ಷುರಾದಿದ್ವಾರೈಃ ವಿಷಯಾಕಾರೇಣ ಪರಿಣಾಮಿನ್ಯಾಃ ಯೇ ಶಬ್ದಾದ್ಯಾಕಾರಾವಭಾಸಾಃ, ತೇ ಆತ್ಮವಿಜ್ಞಾನಸ್ಯ ವಿಷಯಭೂತಾಃ ಉತ್ಪದ್ಯಮಾನಾ ಏವ ಆತ್ಮವಿಜ್ಞಾನೇನ ವ್ಯಾಪ್ತಾ ಉತ್ಪದ್ಯನ್ತೇ । ತಸ್ಮಾತ್ ಆತ್ಮವಿಜ್ಞಾನಾವಭಾಸ್ಯಾಶ್ಚ ತೇ ವಿಜ್ಞಾನಶಬ್ದವಾಚ್ಯಾಶ್ಚ ಧಾತ್ವರ್ಥಭೂತಾಃ ಆತ್ಮನ ಏವ ಧರ್ಮಾಃ ವಿಕ್ರಿಯಾರೂಪಾಃ ಇತಿ ಅವಿವೇಕಿಭಿಃ ಪರಿಕಲ್ಪ್ಯನ್ತೇ ॥ - ತೈ. ಭಾ. ೨-೧-೧೦೬.

೭೬. ಜ್ಞಾನಕಾಂಡದಲ್ಲಿ ಕಂಡುಬರುವ ಬ್ರಹ್ಮವಾಕ್ಯದಿಂದಾಗುವ ಜ್ಞಾನವು ಯಾವ ಬಗೆಯಿಂದಲೂ ವಿಧೇಯವಲ್ಲ ಎಂಬುದೇ ಶಾಂಕರವೇದಾಂತದ ಸಿದ್ಧಾಂತವು. ಎಲ್ಲಿ ವಾಕ್ಯಜನ್ಯಜ್ಞಾನವಾದ ಮೇಲೆ ಮಾಡತಕ್ಕದ್ದು ಉಳಿದಿರುವದೋ, ಏನನ್ನು ಮಾಡಬೇಕು, ಯಾವ ಸಾಧನಗಳಿಂದ ಮಾಡಬೇಕು, ಹೇಗೆ ಮಾಡಬೇಕು ? - ಎಂಬ ಆಕಾಂಕ್ಷೆಯುಂಟಾಗಿ ಅದನ್ನು ಪೂರ್ಣಮಾಡುವ ವಾಕ್ಯಗಳು ಕಾಣಬರುವವೋ, ಅಲ್ಲೆಲ್ಲ ವಿಧಿಯು ಸಾರ್ಥಕವಾಗುತ್ತದೆ. ಆದರೆ ವಾಕ್ಯದಿಂದ ಬ್ರಹ್ಮಜ್ಞಾನವಾದ ಬಳಿಕ ಯಾವ ಆಕಾಂಕ್ಷೆಯೂ ಉಂಟಾಗುವದಿಲ್ಲ. ಮಾಡಬೇಕಾದದ್ದೂ ಉಳಿದಿರುವದಿಲ್ಲ (೫೧) ; ಏಕೆಂದರೆ ಆ ಜ್ಞಾನದಿಂದ ಅಬ್ರಹ್ಮತ್ವ ಅನಾತ್ಮತ್ವ - ಎರಡೂ ಹೋಗಿಬಿಡುತ್ತವೆ. ಜ್ಞಾನಕಾಂಡದಲ್ಲಿರುವ ಉಪಾಸನಾವಾಕ್ಯಗಳಲ್ಲಿ ವಾಕ್ಯಜ್ಞಾನವಾದ ಬಳಿಕ ಮಾಡತಕ್ಕದ್ದು ಉಳಿದಿರುತ್ತದೆ ಎಂಬುದು ನಿಜ. ಆದರೆ ಆ ವಾಕ್ಯಗಳು ನೇರಾಗಿ ಬ್ರಹ್ಮವನ್ನು ತಿಳಿಸುವದಕ್ಕೆ ಬಂದಿರುವದಿಲ್ಲ ; ಉಪಾಸನೆಯನ್ನು ವಿಧಿಸುವದಕ್ಕಾಗಿಯೇ ಬಂದಿರುತ್ತವೆ ಎಂದು ಆಗಲೆ (೭೧) ಹೇಳಿದ್ದಾಗಿದೆ. ಉಪಾಸನೆಯೂ ಜ್ಞಾನದಂತೆ ಮಾನಸವೇ ಆಗಿರುವದರಿಂದಲೂ ಉಪಾಸನೆಯನ್ನೂ ಶ್ರುತಿಯು ಜ್ಞಾನ, ವೇದನೆ - ಮುಂತಾದ ಜ್ಞಾನಪರ್ಯಾಯವಾದ ಶಬ್ದಗಳಿಂದ ಕರೆದಿರುವದರಿಂದಲೂ ಜ್ಞಾನವನ್ನು ಕೂಡ ಉಪಾಸನೆ ಎಂದು ಕರೆದಿರುವದು ಕಂಡುಬಂದಿರುವದರಿಂದಲೂ ಜ್ಞಾನವೆಂದರೆ ಉಪಾಸನೆಯೇ, ಉಪಾಸನೆಗಿಂತ ವ್ಯತಿರಿಕ್ತವಾದ ವೇದಾಂತಜ್ಞಾನವೇ ಇಲ್ಲ- ಎಂದು ಕೆಲವರು ಭಾವಿಸಿರುತ್ತಾರೆ. ಇದು ಸರಿಯಲ್ಲ. ಏಕೆಂದರೆ **ಉಪಾಸನೆಯು ಪುರುಷತಂತ್ರವಾಗಿಯೂ ಚೋದನಾತಂತ್ರವಾಗಿಯೂ ಇದೆ ;** ಎಂದರೆ ಪುರುಷನು ಮಾಡುವದಕ್ಕೂ, ಬಿಡುವದಕ್ಕೂ ಬೇರೆಯಾಗಿಯೇ ಮಾಡುವದಕ್ಕೂ ಬರತಕ್ಕ ಕ್ರಿಯೆಯಾಗಿದ್ದು ಹೀಗೇ ಮಾಡಬೇಕೆಂದು ಶಾಸ್ತ್ರವು ವಿಧಿಸುವದಕ್ಕೆ ಬರತಕ್ಕದ್ದಾಗಿದೆ. ಆದರೆ **ಜ್ಞಾನವು ಹೀಗೆ ಪುರುಷತಂತ್ರವಲ್ಲ, ಚೋದನಾತಂತ್ರವೂ ಅಲ್ಲ ; ಅದು ವಸ್ತುತಂತ್ರವಾಗಿದ್ದು ಪ್ರಮಾಣ**

**ದಿಂದ ವಸ್ತುವಿದ್ದಂತೆ ಆಗತಕ್ಕ ಅರಿವಾಗಿದೆ.** ಅದನ್ನು ಯಾವ ವಚನವೂ ವಿಧಿಸಲಾರದು. ಜ್ಞಾನವನ್ನು ವಿಧಿಸುವಂತೆ ತೋರುವ ವಾಕ್ಯಗಳೂ ಕಲ್ಲನ್ನು ಬೋಳಿಸುವದಕ್ಕೆ ಉಪಯೋಗಿಸಿದ ಕತ್ತಿಯಂತೆ ತಾವೇ ಮೊಂಡಾಗುವವು ; ಆದ್ದರಿಂದಲೇ ದ್ರಷ್ಟವ್ಯಾದಿಶಬ್ದಗಳು ವಿಧಿಪ್ರಧಾನವಲ್ಲವೆಂದು ನಾವು ಹಿಂದೆ (೭೫) ಹೇಳಿರುವದು. ಈ ಎಲ್ಲಾ ಕಾರಣಗಳಿಂದ ಉಪಾಸನಾವಾಕ್ಯಗಳೂ, ಬ್ರಹ್ಮವಾಕ್ಯಗಳೂ ಒಂದಕ್ಕೊಂದು ಅಂಗವಲ್ಲ. ಬ್ರಹ್ಮವಾಕ್ಯಗಳೂ ಬೇರೆ ಬೇರೆಯೇ ಆಗಿರುತ್ತವೆ ಎಂದು ತಿಳಿಯಬೇಕು. ಉಪಾಸನಾವಿಚಾರವನ್ನು ನಾವು ಮುಂದೆ ಸ್ವತಂತ್ರವಾಗಿ ಒಂದು ಪಾಠದಲ್ಲಿ ಮತ್ತೆ ತೆಗೆದುಕೊಳ್ಳುವೆವು.

(೧) ತತ್ರ ಹಿ ವಿಧೇಃ ಸಾಫಲ್ಯಂ ಯತ್ರ ವಿಧಿವಾಕ್ಯಶ್ರವಣಮಾತ್ರಜನಿತವಿಜ್ಞಾನ ವ್ಯತಿರೇಕೇಣ ಪುರುಷಪ್ರವೃತ್ತಿರ್ಗಮ್ಯತೇ । ಯಥಾ ''ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ'' ಇತ್ಯೇವಮಾದೌ । ನ ಹಿ ದರ್ಶಪೂರ್ಣವಿಧಿವಾಕ್ಯಜನಿತವಿಜ್ಞಾನಮೇವ ದರ್ಶಪೂರ್ಣ ಮಾಸಾನುಷ್ಠಾನಮ್ । ತಚ್ಚ ಅಧಿಕಾರಾದ್ಯಪೇಕ್ಷಾನುಭಾವಿ । ನ ತು ''ನೇತಿ ನೇತಿ'' ಇತ್ಯಾದ್ಯಾತ್ಮ ಪ್ರತಿಪಾದಕವಾಕ್ಯಜನಿತಜ್ಞಾನವ್ಯತಿರೇಕೇಣ ದರ್ಶಪೂರ್ಣಮಾಸಾದಿವತ್ ಪುರುಷವ್ಯಾಪಾರಃ ಸಂಭವತಿ । ಸರ್ವವ್ಯಾಪಾರೋಪಶಮಹೇತುತ್ವಾತ್ ತದ್ವಾಕ್ಯಜನಿತವಿಜ್ಞಾನಸ್ಯ । ನ ಹಿ ಉದಾಸೀನ ವಿಜ್ಞಾನಂ ಪ್ರವೃತ್ತಿಜನಕಮ್ । ಅಬ್ರಹ್ಮಾನಾತ್ಮವಿಜ್ಞಾನನಿವರ್ತಕತ್ವಾಚ್ಚ 'ಏಕಮೇವಾ-ದ್ವಿತೀಯಮ್', 'ತತ್ತ್ವಮಸಿ' ಇತ್ಯೇವಮಾದಿವಾಕ್ಯಾನಾಮ್ । ನ ಚ ತನ್ನಿವೃತ್ತೌ ಪ್ರವೃತ್ತಿರುಪಪದ್ಯತೇ । ವಿರೋಧಾತ್ ॥ - ಬೃ. ಭಾ. ೧-೪-೭-೧೩೭

(೨) ಯದುಕ್ತಂ 'ಯಜೇತ' ಇತ್ಯಾದೌ ಕಿಮ್, ಕೇನ, ಕಥಮ್ ? - ಇತಿ ಭಾವನಾ ಕಾಙ್ಕ್ಷಾಯಾಂ ಫಲಸಾಧನೇತಿಕರ್ತವ್ಯತಾಭಿಃ ಆಕಾಙ್ಕ್ಷಾಪನಯನಂ ಯಥಾ, ತದ್ವತ್ ಇಹಾಪಿ ಆತ್ಮವಿಜ್ಞಾನವಿಧಾವಪಿ ಉಪಪದ್ಯತೇ ಇತಿ । ತದಸತ್ । 'ಏಕಮೇವ ಅದ್ವಿತೀಯಮ್', 'ತತ್ತ್ವಮಸಿ', 'ನೇತಿ, ನೇತಿ', 'ಅನನ್ತರಮಬಾಹ್ಯಮ್', 'ಅಯಮಾತ್ಮಾ ಬ್ರಹ್ಮ' ಇತ್ಯಾದಿವಾಕ್ಯಾರ್ಥ ವಿಜ್ಞಾನಸಮಕಾಲಮೇವ ಸರ್ವಾಕಾಙ್ಕ್ಷಾವಿನಿವೃತ್ತೇಃ ॥

- ಬೃ. ಭಾ, ೧-೪-೭-೧೪೦

(೩) ಧ್ಯಾನಂ ಚಿನ್ತನಂ ಯದ್ಯಪಿ ಮಾನಸಮ್, ತಥಾಪಿ ಪುರುಷೇಣ ಕರ್ತುಮ್, ಅಕರ್ತುಮ್ , ಅನ್ಯಥಾ ವಾ ಕರ್ತುಂ, ಶಕ್ಯಮ್ । ಪುರುಷತನ್ತ್ರತ್ವಾತ್ । ಜ್ಞಾನಂ ತು ಪ್ರಮಾಣಜನ್ಯಮ್ । ಪ್ರಮಾಣಂ ಚ ಯಥಾಭೂತವಸ್ತುವಿಷಯಮ್, ಅತೋ ಜ್ಞಾನಂ ಕರ್ತುಮ್ ಅಕರ್ತುಮ್ ಅನ್ಯಥಾ ವಾ ಕರ್ತುಮ್ ಅಶಕ್ಯಮ್ । ಕೇವಲಂ ವಸ್ತುತನ್ತ್ರಮೇವ ತತ್ । ನ ಚೋದನಾತನ್ತ್ರಮ್ । ನಾಪಿ ಪುರುಷತನ್ತ್ರಮ್ । ತಸ್ಮಾತ್ ಮಾನಸತ್ವೇಽಪಿ ಜ್ಞಾನಸ್ಯ ಮಹದ್ ವೈಲಕ್ಷಣ್ಯಮ್ ॥ - ಸೂ. ಭಾ. ೧-೧-೪-೫೧

(೪) ಯಾ ತು ಪ್ರಸಿದ್ಧೇ ಅಗ್ನೌ ಅಗ್ನಿಬುದ್ಧಿಃ ನ ಸಾ ಚೋದನಾತನ್ತ್ರಾ, ನಾಪಿ ಪುರುಷತನ್ತ್ರಾ। ಕಿಂ ತರ್ಹಿ ಪ್ರತ್ಯಕ್ಷವಿಷಯವಸ್ತುತನ್ತ್ರೈವ ಇತಿ ಜ್ಞಾನಮೇವೈತತ್ ನ ಕ್ರಿಯಾ । ಏವಂ ಸರ್ವಪ್ರಮಾಣವಿಷಯವಸ್ತುಷು ವೇದಿತವ್ಯಮ್ । ತತ್ರ ಏವಂ ಸತಿ ಯಥಾಭೂತ-

ಬ್ರಹ್ಮಾತ್ಮವಿಷಯಮಪಿ ಜ್ಞಾನಂ ನ ಚೋದನಾತನ್ತ್ರಮ್ । ತದ್ವಿಷಯೇ ಲಿಙಾದಯಃ ಶ್ರೂಯಮಾಣಾ ಅಪಿ ಅನಿಯೋಜ್ಯವಿಷಯತ್ವಾತ್ ಕುಣ್ಠೀಭವನ್ತಿ ಉಪಲಾದಿಷು ಪ್ರಯುಕ್ತಕ್ಷುರತೈಕ್ಷ್ಣ್ಯಾದಿವತ್ । ಅಹೇಯಾನುಪಾದೇಯವಸ್ತು ವಿಷಯತ್ವಾತ್ ॥

- ಸೂ. ಭಾ ೧-೧-೪-೫೧

(೫) ಅತಃ ಪಾರ್ಥಗರ್ಥ್ಯಮೇವ ಉಪಾಸನಾವಾಕ್ಯಾನಾಂ ಬ್ರಹ್ಮವಾಕ್ಯಾನಾಂ ಚ ನ್ಯಾಯ್ಯಮ್, ನೈಕವಾಕ್ಯತ್ವಮ್ ॥ - ಸೂ. ಭಾ. ೩-೨-೨೧-೨೯೦

## ೧೧. ಸಾಕ್ಷಿ

೭೭. ವೇದಾಂತವು ತಿಳಿಸುವ ಬ್ರಹ್ಮವು ನಮ್ಮ ಆತ್ಮನೇ ಆಗಿರುತ್ತದೆ ಎಂದು ವೇದಾಂತಿಗಳು ಹೇಳುತ್ತಿರುವದರಿಂದಲೂ 'ಅಹಂ ಬ್ರಹ್ಮಾಸ್ಮಿ' ಮುಂತಾದ ವೇದ ವಾಕ್ಯಗಳಲ್ಲಿ ಆತ್ಮನನ್ನು ಅಹಂಶಬ್ದದಿಂದಲೇ ಕರೆದಿರುವದರಿಂದಲೂ ಆತ್ಮನು ಅಹಂ ಪ್ರತ್ಯಯಗಮ್ಯನು ಎಂದೇ ಅಜ್ಞರು ಭ್ರಮಿಸಿರುವ ಸಂಭವವಿದೆ. ಮೀಮಾಂಸಕರೂ ತಾರ್ಕಿಕರೂ ಆತ್ಮನು ಅಹಂಪ್ರತ್ಯಯಗಮ್ಯನು ಎಂದೇ ವಾದಿಸುತ್ತಾರೆ. ಆದರೆ ನಾನು ಎಂಬ ಅರಿವು ಉಂಟಾಗುತ್ತಿದ್ದರೂ ಚಾರ್ವಾಕರೂ ಬೌದ್ಧರೂ ದೇಹಾದಿಗಳಿಗಿಂತ ವ್ಯತಿರಿಕ್ತನಾದ ಆತ್ಮನನ್ನು ಒಪ್ಪುವದಿಲ್ಲ. ಇದು ಗಡಿಗೆ, ಇದು ಮೋಟುಮರ- ಎಂದು ಪ್ರತ್ಯಕ್ಷಾದಿಗಳಿಂದ ನಿಶ್ಚಿತವಾದ ಪ್ರತ್ಯಯವುಂಟಾದ ಕಡೆಯಲ್ಲಿ ಇದು ಗಡಿಗೆಯೆಂದು ಕೆಲವರು, ಅಲ್ಲವೆಂದು ಕೆಲವರು - ಹೀಗೆ ವಿವಾದವುಂಟಾಗಿರುವದು ಲೋಕದಲ್ಲಿ ಕಂಡಿರುವದಿಲ್ಲ. ಆದ್ದರಿಂದ ಆತ್ಮನು ಅಹಂಪ್ರತ್ಯಯಕ್ಕೆ ಪ್ರತ್ಯಕ್ಷವಾಗಿ ವಿಷಯ ನಾಗಿರುತ್ತಾನೆಂಬುದು ಸರಿಯಲ್ಲ ; ಏಕೆಂದರೆ ಅದು ವಾದಗ್ರಸ್ತವಾಗಿರುತ್ತದೆ. ಆತ್ಮನು ಇದಾನೆ ಎಂಬುದಕ್ಕೆ ಶ್ರುತಿಯಲ್ಲಿ ಹೇಳಿರುವ ಕೆಲವು ಗುರುತುಗಳನ್ನೇ ಹಿಡಿದು ಮೀಮಾಂಸಕರೇ ಮೊದಲಾದವರು ಆತ್ಮನನ್ನು ಅನುಮಾನದಿಂದಲೂ ಸಿದ್ಧ ಪಡಿಸಬಹುದೆಂದು ಭ್ರಮಿಸಿರುತ್ತಾರೆ. ಅಷ್ಟೆ. ಆತ್ಮನು ಪ್ರಮಾಣಗಮ್ಯನೆಂಬ ವಾದದಲ್ಲಿರುವ ದೋಷವನ್ನು ಹಿಂದೆ (೩೫)ರಲ್ಲಿ ತೋರಿಸಿಯೇ ಇದೆ. ಜನ್ಮಾಂತರಕ್ಕೆ ಸಂಬಂಧಪಡುವ ಆತ್ಮನನ್ನು ಪ್ರತ್ಯಕ್ಷಾದಿಗಳಿಂದ ಸಾಧಿಸುವದು ಎಂದಿಗೂ ಆಗಲಾರದು. ಉಪನಿಷತ್ತುಗಳಲ್ಲಿ ಈ ಅಹಂಪ್ರತ್ಯಯಗಮ್ಯವಾದದ್ದಕ್ಕಿಂತ ಬೇರೆಯಾದ ಸರ್ವಸಾಕ್ಷಿಯಾದ ಆತ್ಮನೊಬ್ಬನು ಇದಾನೆಂದು ಹೇಳಿರುತ್ತದೆ. ಮೀಮಾಂಸಕರಾಗಲಿ, ತಾರ್ಕಿಕರಾಗಲಿ ಈ ಆತ್ಮಸ್ವರೂಪವನ್ನು ಅರಿಯರು. ಉಪನಿಷತ್ತುಗಳಲ್ಲಿ ಮಾತ್ರವೇ ತಿಳಿಯಬರುವ ಈ ಅಸಂಸಾರಿಯಾದ ಆತ್ಮನನ್ನೇ

**ಔಪನಿಷದಪುರುಷ**ನೆಂದು ವೇದಾಂತಿಗಳು ಕರೆಯುತ್ತಾರೆ. ವೇದಾಂತವಚನಗಳು ಈ ಪರಮಾತ್ಮಸ್ವರೂಪವನ್ನು ತಿಳಿಸುವದರಲ್ಲಿಯೇ ಸಮನ್ವಯವಾಗಿರುತ್ತವೆ ಎಂದು ನಾವು ಹಿಂದೆ (೭೫, ೭೯) ತಿಳಿಸಿರುತ್ತೇವೆ.

(೧) ನನು ಆತ್ಮಾ ಅಹಂಪ್ರತ್ಯಯವಿಷಯತ್ವಾತ್ ಉಪನಿಷತ್ಸ್ವೇವ ವಿಜ್ಞಾಯತೇ ಇತ್ಯನುಪಪನ್ನಮ್। ನ । ತತ್ಸಾಕ್ಷಿತ್ವೇನ ಪ್ರತ್ಯುಕ್ತತ್ವಾತ್ । ನ ಹಿ ಅಹಂಪ್ರತ್ಯಯವಿಷಯಕರ್ತೃವ್ಯ-ತಿರೇಕೇಣ ತತ್ಸಾಕ್ಷೀ ಸರ್ವಭೂತಸ್ಥಃ, ಸಮಃ, ಏಕಃ, ಕೂಟಸ್ಥನಿತ್ಯಃ ಪುರುಷೋ ವಿಧಿಕಾಣ್ಡೇ ತರ್ಕಸಮಯೇ ವಾ ಕೇನಚಿತ್ ಅಧಿಗತಃ ಸರ್ವಸ್ಯ ಆತ್ಮಾ ॥ - ಸೂ. ಭಾ. ೧-೧-೪-೫೪

(೨) ತತ್ ಪ್ರತ್ಯಕ್ಷವಿಷಯಮೇವ ಇತಿ ಚೇತ್ । ನ । ವಾದಿವಿಪ್ರತಿ ಪತ್ತಿದರ್ಶನಾತ್ । ನ ಹಿ ದೇಹಾನ್ತರಸಂಬನ್ಧಿನಃ ಆತ್ಮನಃ ಪ್ರತ್ಯಕ್ಷೇಣ ಅಸ್ತಿತ್ವವಿಜ್ಞಾನೇ ಲೋಕಾಯತಿಕಾಃ ಬೌದ್ಧಾಶ್ಚ ನಃ ಪ್ರತಿಕೂಲಾಃ ಸ್ಯುಃ ನಾಸ್ತ್ಯಾತ್ಮಾ ಇತಿ ವದನ್ತಃ । ನ ಹಿ ಘಟಾದೌ ಪ್ರತ್ಯಕ್ಷವಿಷಯೇ ಕಶ್ಚಿತ್ ವಿಪ್ರತಿಪದ್ಯತೇ ನಾಸ್ತಿ ಘಟಃ ಇತಿ । ಸ್ಥಾಣ್ವಾದೌ ಪುರುಷಾದಿದರ್ಶನಾತ್ ನೇತಿ ಚೇತ್ । ನ । ನಿರೂಪಿತೇ ಅಭಾವಾತ್ । ನ ಹಿ ಪ್ರತ್ಯಕ್ಷೇಣ ನಿರೂಪಿತೇ ಸ್ಥಾಣ್ವಾದೌ ವಿಪ್ರತಿಪತ್ತಿರ್ಭವತಿ । ವೈನಾಶಿಕಾಸ್ತು ಅಹಮಿತಿ ಪ್ರತ್ಯಯೇ ಜಾಯಮಾನೇಽಪಿ ದೇಹಾನ್ತರವ್ಯತಿರಿಕ್ತಸ್ಯ ನಾಸ್ತಿತ್ವಮೇವ ಪ್ರತಿಜಾನತೇ । ತಸ್ಮಾತ್ ಪ್ರತ್ಯಕ್ಷವಿಷಯವೈಲಕ್ಷಣ್ಯಾತ್ ಪ್ರತ್ಯಕ್ಷಾತ್ ನಾತ್ಮಾಸ್ತಿತ್ವಸಿದ್ಧಿಃ । ತಥಾ ಅನುಮಾನಾದಪಿ । ಶ್ರುತ್ಯಾ ಆತ್ಮಾಸ್ತಿತ್ವೇ ಲಿಙ್ಗಸ್ಯ ದರ್ಶಿತತ್ವಾತ್ ಲಿಙ್ಗಸ್ಯ ಚ ಪ್ರತ್ಯಕ್ಷವಿಷಯತ್ವಾತ್ ನೇತಿ ಚೇತ್ । ನ । ಜನ್ಮಾನ್ತರಸಂಬನ್ಧಸ್ಯ ಅಗ್ರಹಣಾತ್ । ಆಗಮೇನ ತು ಆತ್ಮಾಸ್ತಿತ್ವೇ ಅವಗತೇ ವೇದಪ್ರದರ್ಶಿತಲೌಕಿಕಲಿಙ್ಗವಿಶೇಷೈಶ್ಚ ತದನುಸಾರಿಣೋ ಮೀಮಾಂಸಕಾಃ ತಾರ್ಕಿಕಾಶ್ಚ ಅಹಂ ಪ್ರತ್ಯಯಂ ಲಿಙ್ಗಾನಿ ಚ ವೈದಿಕಾನ್ಯೇವ ಸ್ವಮತಿಪ್ರಭವಾನಿ ಇತಿ ಕಲ್ಪಯನ್ತೋ ವದನ್ತಿ ಪ್ರತ್ಯಕ್ಷಶ್ಚ ಅನುಮೇಯಶ್ಚ ಆತ್ಮಾ ಇತಿ ॥ - ಬೃ. ಭಾ. ಅವ-೪

೭೮. ಅಹಂಪ್ರತ್ಯಯ ಗಮ್ಯನಾದ ಆತ್ಮನು ದೇಹಾಂತರಸಂಬಂಧಿ ಎಂಬುದು ಪ್ರತ್ಯಕ್ಷವಿಷಯವಲ್ಲವೆಂದು ಮೇಲೆ ಪ್ರತಿಪಾದಿಸಿರುತ್ತೇವೆ. ಈ ಅಹಂಪ್ರತ್ಯಯದಿಂದ ತಿಳಿಯಬರುವದು ದೇಹವೇ ; **ಚೈತನ್ಯದಿಂದೊಡಗೂಡಿದ** ದೇಹಕ್ಕಿಂತ ಬೇರೆಯ ಆತ್ಮನಿಲ್ಲ ಎಂದು **ಲೋಕಾಯತಿಕರು** ಹೇಳುತ್ತಾರೆ. ದೇಹಕ್ಕಿಂತ ವ್ಯತಿರಿಕ್ತವಾದ ವಿಜ್ಞಾನವೊಂದಿದೆಯೆಂದೂ ಅದು ತನ್ನನ್ನು ತಾನೇ ಅರಿಯುವದೆಂದೂ ಅದೇ ಆತ್ಮನೆಂದೂ ವಿಜ್ಞಾನವಾದಿಗಳಾದ ಬೌದ್ಧರು ವಾದಿಸುತ್ತಾರೆ.

ಆದರೆ ದೇಹವು ಚೈತನ್ಯದಿಂದೊಡಗೂಡಿದೆ ಎನ್ನುವದು ಅನುಭವಕ್ಕೆ ವಿರುದ್ಧವಾಗಿರುತ್ತದೆ. ಏಕೆಂದರೆ ಚೈತನ್ಯವು ವಿಷಯಿ, ದೇಹವು ಚಾರ್ವಾಕನ ಅಭಿಪ್ರಾಯದಂತೆ ನಾಲ್ಕು ಭೂತಗಳಿಂದಾಗಿರುವ ವಿಷಯ ; ವಿಷಯಿಯಾದ ಚೈತನ್ಯರೂಪನಾದ ಆತ್ಮನು ವಿಷಯವಾಗಿರುವ ದೇಹಕ್ಕಿಂತ ಬೇರೆ ಎಂದು ಹಿಡಿಯುವದೇ ಯುಕ್ತವಾಗಿರುತ್ತದೆ. ವಿಷಯವು ತನ್ನನ್ನು ತಾನೇ ಅರಿಯುವದೆನ್ನುವದು ತನ್ನ ಹೆಗಲಮೇಲೆ ತಾನೇ ಕುಳಿತಿರುವನೆಂಬಂತೆ ಹಾಸ್ಯಾಸ್ಪದವಾದ ಮಾತು. ಇದಲ್ಲದೆ

ದೇಹವೇ ಎಲ್ಲವನ್ನೂ ಅರಿಯುವ ಚೈತನ್ಯವಾದರೆ ಕುರುಡನು ಕನಸಿನಲ್ಲಿ ಹಿಂದೆ ತಾನು ಕಂಡದ್ದನ್ನು ಕಾಣುವದಾಗಲಾರದು ; ಏಕೆಂದರೆ ದೇಹಕ್ಕೆ ಕಾಣುವ ಸಾಧನವಾಗಿದ್ದ ಕಣ್ಣು ಹೋಗಿರುತ್ತದೆ ; ಆದರೂ ಕನಸಿನಲ್ಲಿ ಹಿಂದೆ ನೋಡಿದ್ದ ಹಿಮವತ್ಪರ್ವತದ ಕೋಡುಗಲ್ಲನ್ನು ಕಂಡೆನು ಎಂದು ಕುರುಡನು ಹೇಳುತ್ತಾನೆ. ಆದ್ದರಿಂದ ಕನಸಿನಲ್ಲಿ ಕಾಣುವ ಆತ್ಮನೇ ಎಚ್ಚರದಲ್ಲಿಯೂ ಕಾಣುತ್ತಾನೆ ಎನ್ನಬೇಕು. ಇದರಂತೆ ವಿಜ್ಞಾನವು ತಾನೇ ವಿಷಯಿ, ತಾನೇ ವಿಷಯ - ಎನ್ನುವದೂ ಅನುಭವ ವಿರುದ್ಧ. ವಿಜ್ಞಾನವು ಹುಟ್ಟುತ್ತಲೂ, ನಾಶವಾಗುತ್ತಲೂ ಇರುವದನ್ನು ಬೆಳಗಿ ತೋರಿಸುವ ಸಾಕ್ಷಿಚೈತನ್ಯವು ಆ ವಿಜ್ಞಾನಕ್ಕಿಂತ ಬೇರೆಯಾಗಿರಬೇಕೆನ್ನುವದೇ ಅನುಭವಕ್ಕೆ ಹೊಂದುಗೆಯಾಗಿರುತ್ತದೆ. ವಿಷಯದ ಅನುಭವದಿಂದ ವಾಸನೆ ಯುಂಟಾಗಿ ನಿಂತುಕೊಳ್ಳುವದು; ಬಳಿಕ ಕಾಲಾನುಕಾಲದಲ್ಲಿ ಸ್ಮೃತಿಯಾಗಲಿ **ಪ್ರತ್ಯಭಿಜ್ಞೆ**ಯಾಗಲಿ ಉಂಟಾಗುವದು - ಇವಕ್ಕೆಲ್ಲ ಆಶ್ರಯವು ಬೇಕು. ಈ ಆಶ್ರಯವು ಕಾಲತ್ರಯಸಂಬಂಧಿಯಾದ ಪ್ರಮಾತೃವೋ, ಕೂಟಸ್ಥಸಾಕ್ಷಿಯೋ ಆಗಿರಬೇಕು. ಕ್ಷಣಿಕವಿಜ್ಞಾನವಾದಿಗಳಾದ ಬೌದ್ಧರ ಪಕ್ಷದಲ್ಲಿ ಇದೊಂದೂ ಹೊಂದುವದಿಲ್ಲ. ವಿಜ್ಞಾನವು ತನಗಿಂತ ಬೇರೆಯಾದ ಮತ್ತೊಂದರಿಂದ ಅರಿಯಲ್ಪಡುವದೆಂದರೆ ಅದನ್ನು ಅರಿಯುವದಕ್ಕೆ ಮತ್ತೊಂದು ಬೇಕಾಗುವದು, ಅದನ್ನು ಅರಿಯುವದಕ್ಕೆ ಮತ್ತೊಂದು ಬೇಕಾಗುವದು ಹೀಗೆ - ವಿಜ್ಞಾನಗಳ ಪರಂಪರೆಗೆ ನಿಲುಗಡೆಯಿಲ್ಲದೆ ಹೋಗುವದು. ವಿಜ್ಞಾನವನ್ನು ಅರಿಯುವ ವಿಜ್ಞಾನವೂ ಮೊದಲಿನ ವಿಜ್ಞಾನದ ಸ್ವಭಾವದ್ದೇ ಆಗಿರುವದರಿಂದ ಒಂದು ಅರಿಯುವದು, ಮತ್ತೊಂದು ಅರಿಯಲ್ಪಡುವದು - ಎಂಬ ವಿಶೇಷವನ್ನು ಕಲ್ಪಿಸುವದು ಸಮನಾಗುವದಿಲ್ಲ ; ಏಕೆಂದರೆ ಒಂದು ದೀಪವನ್ನು ಮತ್ತೊಂದು ಬೆಳಗುವದೆಂದು ಯಾರೂ ಕಲ್ಪಿಸುವದಿಲ್ಲ. ಆದ್ದರಿಂದ ವಿಜ್ಞಾನವು ತನ್ನನ್ನು ತಾನೇ ಬೆಳಗುವದು ಎಂಬುದೇ ಸರಿ ಎಂದು ಬೌದ್ಧರು ತರ್ಕಿಸುತ್ತಾರೆ. ಆದರೆ ಇದು ಸರಿಯಲ್ಲ ; ಏಕೆಂದರೆ ವಿಜ್ಞಾನಗಳನ್ನೆಲ್ಲ ಅರಿಯುವದು ಸಾಕ್ಷಿಯೆಂದು ನಾವು ಹೇಳುವದರಿಂದ ಅದನ್ನು ಅರಿಯುವದಕ್ಕೆ ಮತ್ತೊಂದು ವಿಜ್ಞಾನವು ಬೇಕಾಗುವದಿಲ್ಲ. ಏಕೆಂದರೆ ಯಾವದು ಗ್ರಾಹ್ಯವೋ ಅದಕ್ಕೆ ಗ್ರಾಹಕಾಂತರವು ಬೇಕಾಗುವದು ; ನಿಯಮದಿಂದ ಗ್ರಾಹಕವೇ ಆಗಿರುವದಕ್ಕೆ ಮತ್ತೊಂದು ಗ್ರಾಹಕವು ಬೇಕೆಂಬುದಕ್ಕೆ ಯುಕ್ತಿಯಿಲ್ಲ. ದೀಪದಂತೆ ವಿಜ್ಞಾನವು ತನ್ನನ್ನು ತಾನೇ ಬೆಳಗುವದೆಂಬುದೂ ಸರಿಯಲ್ಲ. ಏಕೆಂದರೆ ತನ್ನನ್ನು ತಾನೇ ಬೆಳಗುವದೆಂಬ ಮಾತಿಗೆ ಅರ್ಥವಿಲ್ಲ. ದೀಪವು ತನ್ನನ್ನು ತಾನೇ ಬೆಳಗದಿರುವಾಗ ಹೇಗಿರುವದು ? - ಎಂಬ ವಿಶೇಷವನ್ನು ಕಲ್ಪಿಸುವದಕ್ಕೆ ಬರು ವಂತಿಲ್ಲ. ಬೆಳಗುವ ವಸ್ತು ಹತ್ತಿರವಿದ್ದಾಗ ಒಂದು ಅವಸ್ಥೆ, ಇಲ್ಲದಾಗ ಮತ್ತೊಂದು

- ಹೀಗೆ ವಿಶೇಷವಿರುವ ಗಡಿಗೆಯೇ ಮುಂತಾದವುಗಳು ಮಾತ್ರ ಪ್ರಕಾಶ್ಯ ಎನಿಸುತ್ತವೆ. ಹಾಗೆ ದೀಪವು ತನಗೆ ತಾನೇ ಒಮ್ಮೆ ಹತ್ತಿರವಿರುವದೆಂದೂ, ಒಮ್ಮೆ ಇರುವದಿಲ್ಲವೆಂದೂ ಕಲ್ಪಿಸುವದಕ್ಕೆ ಬರುವದಿಲ್ಲ. ವಿಜ್ಞಾನವನ್ನು ಅರಿಯುವದಕ್ಕೆ ಸಾಕ್ಷಿಗೆ ಮತ್ತೊಂದು ವಿಜ್ಞಾನರೂಪವಾದ ಕರಣವು ಬೇಕಾಗುವದರಿಂದ ಅನವಸ್ಥಾ ದೋಷವು ಬರುವದಿಲ್ಲವೆ ? - ಎಂದರೆ ಇಲ್ಲ. ಏಕೆಂದರೆ ಗಡಿಗೆಗೆ ದೀಪರೂಪ ವಾದ ಬೆಳಕು ಇದ್ದರೆ ಗ್ರಾಹ್ಯತ್ವವಿರುತ್ತದೆಯಾದರೂ ದೀಪವನ್ನು ನೋಡುವದಕ್ಕೆ ಮತ್ತೊಂದು ಬೆಳಕು ಬೇಕಾಗುವದಿಲ್ಲ ; ಇದರಂತೆ ವಿಜ್ಞಾನವನ್ನು ನೋಡುವದಕ್ಕೆ ಮತ್ತೊಂದು ವಿಜ್ಞಾನವು ಬೇಕೆನ್ನುವದು ಸರಿಯಾದ ತರ್ಕವಲ್ಲ.

(೧) ಕಿಮಾತ್ಮಕಂ ಚ ಪುನರಿದಂ ಚೈತನ್ಯಂ ಮನ್ಯತೇ ಯಸ್ಯ ಭೂತೇಭ್ಯ ಉತ್ಪತ್ತಿಮ್ ಇಚ್ಛತಿ ಇತಿ ಪರಃ ಪರ್ಯನುಯೋಕ್ತವ್ಯಃ । ನ ಹಿ ಭೂತಚತುಷ್ಟಯವ್ಯತಿರೇಕೇಣ ಲೋಕಾಯತಿಕಃ ಕಿಂಚಿತ್ ತತ್ತ್ವಂ ಪ್ರತ್ಯೇತಿ । ಯತ್ ಅನುಭವನಂ ಭೂತಭೌತಿಕಾನಾಂ ತತ್ ಚೈತನ್ಯಮ್ ಇತಿ ಚೇತ್? ತರ್ಹಿ ವಿಷಯತ್ವಾತ್ ತೇಷಾಂ ನ ತದ್ಧರ್ಮತ್ವಮ್ ಅಶ್ನುವೀತ । ಸ್ವಾತ್ಮನಿ ಕ್ರಿಯಾವಿರೋಧಾತ್ । ನ ಹ್ಯಗ್ನಿರುಷ್ಣಃ ಸನ್ ಸ್ವಾತ್ಮಾನಂ ದಹತಿ । ನ ಹಿ ನಟಃ ಶಿಕ್ಷಿತಃ ಸನ್ ಸ್ವಸ್ಕನ್ಧಮ್ ಅಧಿರೋಕ್ಷ್ಯತಿ । ನ ಹಿ ಭೂತಭೌತಿಕತದ್ಧರ್ಮೇಣ ಸತಾ ಚೈತನ್ಯೇನ ಭೂತಭೌತಿಕಾನಿ ವಿಷಯೀಕ್ರಿಯೇರನ್। ನ ಹಿ ರೂಪಾದಿಭಿಃ ಸ್ವರೂಪಂ ಪರರೂಪಂ ವಾ ವಿಷಯೀಕ್ರಿಯತೇ। ವಿಷಯೀಕ್ರಿಯನ್ತೇ ತು ಬಾಹ್ಯಾಧ್ಯಾತ್ಮಿಕಾನಿ ಭೂತಭೌತಿಕಾನಿ ಚೈತನ್ಯೇನ । ಅತಶ್ಚ ಯಥೈವ ಅಸ್ಯಾಭೂತಭೌತಿಕ ವಿಷಯಾಯಾಃ ಉಪಲಬ್ಧೇರ್ಭಾವೋಽಭ್ಯುಪಗಮ್ಯತೇ ಏವಂ ವ್ಯತಿರೇಕೋಽಪ್ಯಸ್ಯಾಃ ತೇಭ್ಯೋಽಭ್ಯುಪಗನ್ತವ್ಯಃ । ಉಪಲಬ್ಧಿಸ್ವರೂಪ ಏವ ಚ ನ ಆತ್ಮಾ ಇತಿ ಆತ್ಮನೋ ದೇಹವ್ಯತಿರಿಕ್ತತ್ವಮ್ ॥ - ಸೂ. ಭಾ. ೩-೩-೫೪-೪೧೮

(೨) ಯದಿ ಹಿ ದೇಹಸ್ಯೈವ ದರ್ಶನಾದಿಕ್ರಿಯಾ, ಸ್ವಪ್ನೇ ದೃಷ್ಟಸ್ಯೈವ ದರ್ಶನಂ ನ ಸ್ಯಾತ್ । ಅನ್ಧಃ ಸ್ವಪ್ನಂ ಪಶ್ಯನ್ ದೃಷ್ಟಪೂರ್ವಮೇವ ಪಶ್ಯತಿ ನ ಶಾಕದ್ವೀಪಾದಿಗತಮ್ ಅದೃಷ್ಟರೂಪಮ್ । ತತಶ್ಚ ಸಿದ್ಧಂ ಭವತಿ ಯಃ ಸ್ವಪ್ನೇ ಪಶ್ಯತಿ ದೃಷ್ಟಪೂರ್ವಂ ವಸ್ತು ಸ ಏವ ಪೂರ್ವಂ ವಿದ್ಯಮಾನೇ ಚಕ್ಷುಷಿ ಅದ್ರಾಕ್ಷೀತ್ ನ ದೇಹ ಇತಿ । ದೇಹಶ್ಚೇತ್ ದ್ರಷ್ಟಾ ನ ಯೇನ ಅದ್ರಾಕ್ಷೀತ್ ತಸ್ಮಿನ್ ಉದ್ಧೃತೇ ಚಕ್ಷುಷಿ ಸ್ವಪ್ನೇ ತದೇವ ದೃಷ್ಟಪೂರ್ವಂ ನ ಪಶ್ಯೇತ್। ಅಸ್ತಿ ಚ ಲೋಕೇ ಪ್ರಸಿದ್ಧಿಃ ಪೂರ್ವಂ ದೃಷ್ಟಂ ಮಯಾ ಹಿಮವತಃ ಶೃಙ್ಗಮ್ ಅದ್ಯಾಹಂ ಸ್ವಪ್ನೇ ಅದ್ರಾಕ್ಷಮ್ ಇತಿ ಉದ್ಧೃತಚಕ್ಷುಷಾಮ್ ಅನ್ಧಾನಾಮಪಿ । ತಸ್ಮಾತ್ ಅನುದ್ಧೃತೇಽಪಿ ಚಕ್ಷುಷಿ ಯಃ ಸ್ವಪ್ನದೃಕ್ ಸ ಏವ ದ್ರಷ್ಟಾ ನ ದೇಹಃ ಇತ್ಯವಗಮ್ಯತೇ ॥ -ಬೃ. ಭಾ. ೪-೩-೬-೧೬೮

(೩) ನ ಹಿ ಕಾಲತ್ರಯಸಂಬನ್ಧಿನಿ ಏಕಸ್ಮಿನ್ ಅನ್ವಯಿನಿ ಅಸತಿ ಕೂಟಸ್ಥೇ ವಾ ಸರ್ವಾರ್ಥದರ್ಶಿನಿ ದೇಶಕಾಲನಿಮಿತ್ತಾಪೇಕ್ಷವಾಸನಾಧಾನಸ್ಮೃತಿಪ್ರತಿಸನ್ಧಾನಾದಿವ್ಯವಹಾರಃ ೩೧-೬೩ ಸಂಭವತಿ॥ - ಸೂ. ಭಾ. ೨-೨-೩೧-೬೩

(೪) ನನು ವಿಜ್ಞಾನಸ್ಯ ಸ್ವರೂಪವ್ಯತಿರಿಕ್ತಗ್ರಾಹ್ಯತ್ವೇ ತದಪಿ ಅನ್ಯೇನ ಗ್ರಾಹ್ಯಮ್, ತದಪಿ ಅನ್ಯೇನ ಇತಿ ಅನವಸ್ಥಾ ಪ್ರಾಪ್ನೋತಿ । ಅಪಿ ಚ ಪ್ರದೀಪವತ್ ಅವಭಾಸಾತ್ಮಕತ್ವಾತ್ ಜ್ಞಾನಸ್ಯ

ಜ್ಞಾನಾನ್ತರಂ ಕಲ್ಪಯತಃ ಸಮತ್ವಾತ್ ಅವಭಾಸ್ಯಾವಭಾಸಕಭಾವಾನುಪಪತ್ತೇಃ ಕಲ್ಪನಾನರ್ಥಕ್ಯಮ್ ಇತಿ । ತದುಭಯಮಪಿ ಅಸತ್ । ವಿಜ್ಞಾನಗ್ರಹಣಮಾತ್ರೇ ಏವ ವಿಜ್ಞಾನಸಾಕ್ಷಿಣೋ ಗ್ರಹಣಾಕಾಙ್ಕ್ಷಾನುತ್ಪಾದಾತ್ ಅನವಸ್ಥಾಶಙ್ಕಾನುಪಪತ್ತೇಃ । ....... ಸ್ವಯಂಸಿದ್ಧಸ್ಯ ಚ ಸಾಕ್ಷಿಣಃ ಅಪ್ರತ್ಯಾಖ್ಯೇಯತ್ವಾತ್ ॥ - ಸೂ. ಭಾ. ೨-೨-೨೮-೬೦

(೫) ಯಶ್ಚ ಅನ್ಯೋ ವಿಜ್ಞಾನಸ್ಯ ಗ್ರಹೀತಾ ಸ ಆತ್ಮಾ ಜ್ಯೋತಿರನ್ತರಂ ವಿಜ್ಞಾನಾತ್। ತದಾ ಅನವಸ್ಥಾ ಇತಿ ಚೇತ್। ನ । ಗ್ರಾಹ್ಯತ್ವಮಾತ್ರಂ ಹಿ ತದ್ಗ್ರಾಹಕಸ್ಯ ವಸ್ತ್ವನ್ತರತ್ವೇ ಲಿಙ್ಗಮ್ ಉಕ್ತಂ ನ್ಯಾಯತಃ । ನ ತು ಏಕಾನ್ತತೋ ಗ್ರಾಹಕತ್ವೇ ತದ್ಗ್ರಾಹಕಾನ್ತರಾಸ್ತಿತ್ವೇ ವಾ ಕದಾಚಿದಪಿ ಲಿಙ್ಗಂ ಸಂಭವತಿ। ತಸ್ಮಾತ್ ನ ತದನವಸ್ಥಾ ಪ್ರಸಙ್ಗಃ । ವಿಜ್ಞಾನಸ್ಯ ವ್ಯತಿರಿಕ್ತಗ್ರಾಹ್ಯತ್ವೇ ಕರಣಾನ್ತರಾಪೇಕ್ಷಾಯಾಮ್ ಅನವಸ್ಥಾ ಇತಿ ಚೇತ್। ನ । ನಿಯಮಾಭಾವಾತ್। ನ ಹಿ ಸರ್ವತ್ರ ಅಯಂ ನಿಯಮೋ ಭವತಿ। ಯತ್ರ ವಸ್ತ್ವನ್ತರೇಣ ಗೃಹ್ಯತೇ ವಸ್ತ್ವನ್ತರಮ್, ತತ್ರ ಗ್ರಾಹ್ಯಗ್ರಾಹಕವ್ಯತಿರಿಕ್ತಂ ಕರಣಾನ್ತರಂ ಸ್ಯಾದ್ ಇತಿ ನೈಕಾನ್ತೇನ ನಿಯನ್ತುಂ ಶಕ್ಯತೇ । ವೈಚಿತ್ರ್ಯದರ್ಶನಾತ್। ಕಥಮ್ ? ಘಟಸ್ತಾವತ್ ಸ್ವಾತ್ಮವ್ಯತಿರಿಕ್ತೇನ ಆತ್ಮನಾ ಗೃಹ್ಯತೇ । ತತ್ರ ಪ್ರದೀಪಾದಿರಾಲೋಕೋ ಗ್ರಾಹ್ಯಗ್ರಾಹಕವ್ಯತಿರಿಕ್ತಂ ಕರಣಮ್ । ನ ಹಿ ಪ್ರದೀಪಾದ್ಯಾಲೋಕೋ ಘಟಾಂಶಶ್ಚಕ್ಷುರಂಶೋ ವಾ । ಘಟವತ್ ಚಕ್ಷುರ್ಗ್ರಾಹ್ಯತ್ವೇಽಪಿ ಪ್ರದೀಪಸ್ಯ, ಚಕ್ಷುಃ ಪ್ರದೀಪವ್ಯತಿರೇಕೇಣ ನ ಬಾಹ್ಯಮ್ ಆಲೋಕಸ್ಥಾನೀಯಂ ಕಿಂಚಿತ್ ಕರಣಾನ್ತರಮ್ ಅಪೇಕ್ಷತೇ। ತಸ್ಮಾತ್ ನೈವ ನಿಯನ್ತುಂ ಶಕ್ಯತೇ ಯತ್ರ ಯತ್ರ ವ್ಯತಿರಿಕ್ತಗ್ರಾಹ್ಯತ್ವಮ್, ತತ್ರ ತತ್ರ ಕರಣಾನ್ತರಂ ಸ್ಯಾದೇವ ಇತಿ। ತಸ್ಮಾತ್ ವಿಜ್ಞಾನಸ್ಯ ವ್ಯತಿರಿಕ್ತಗ್ರಾಹಕಗ್ರಾಹ್ಯತ್ವೇ ನ ಕರಣದ್ವಾರಾ ಅನವಸ್ಥಾ। ನಾಪಿ ಗ್ರಾಹಕತ್ವದ್ವಾರಾ ಕದಾಚಿದಪಿ ಉಪಪಾದಯಿತುಂ ಶಕ್ಯತೇ॥ - ಬೃ.ಭಾ ೪-೩-೭-೧೭೯

(೬) ಯತ್ತೂಚ್ಯತೇ ಪ್ರದೀಪಃ ಆತ್ಮಾನಂ ಘಟಂ ಚ ಅವಭಾಸಯತಿ ಇತಿ। ತದಸತ್। ಕಸ್ಮಾತ್? ಯದಾ ಆತ್ಮಾನಂ ನಾವಭಾಸಯತಿ ತದಾ ಕೀದೃಶಃ ಸ್ಯಾತ್? ನ ಹಿ ತದಾ ಪ್ರದೀಪಸ್ಯ ಸ್ವತೋ ವಾ ಪರತೋ ವಾ ವಿಶೇಷಃ ಕಶ್ಚಿತ್ ಉಪಲಭ್ಯತೇ । ಸ ಹ್ಯವಭಾಸ್ಯೋ ಭವತಿ ಯಸ್ಯಾವಭಾಸಕಸಂನಿಧೌ ಅಸಂನಿಧೌ ಚ ವಿಶೇಷಃ ಕಶ್ಚಿದುಪಲಭ್ಯತೇ । ನ ಹಿ ಪ್ರದೀಪಸ್ಯ ಸ್ವಾತ್ಮಸಂನಿಧಿರಸನ್ನಿಧಿರ್ವಾ ಶಕ್ಯಃ ಕಲ್ಪಯಿತುಮ್ । ಅಸತಿ ಚ ಕಾದಾಚಿತ್ಕೇ ವಿಶೇಷೇ ಆತ್ಮಾನಂ ಪ್ರದೀಪಃ ಪ್ರಕಾಶಯತಿ ಇತಿ ಮೃಷೈವ ಉಚ್ಯತೇ॥ -ಬೃ. ಭಾ. ೪.೩.೭-೧೭೮

೭೯. ವಿಜ್ಞಾನವು ಸ್ವಯಂಪ್ರಕಾಶವೆಂಬ ಬೌದ್ಧರ ಪಕ್ಷಕ್ಕೂ ಸಾಕ್ಷಿಯು ಸ್ವಯಂಪ್ರಕಾಶವೆಂಬ ವೇದಾಂತಿಗಳ ಪಕ್ಷಕ್ಕೂ ಹೆಚ್ಚು ಕಡಿಮೆಯೇನೂ ಇಲ್ಲವೆಂದು ಬೌದ್ಧರ ನಂಬಿಕೆ. ಆದರೆ ಈ ಅಭಿಪ್ರಾಯವು ತಪ್ಪು. ಏಕೆಂದರೆ: ವಿಜ್ಞಾನವು ಹುಟ್ಟುಹೊಂದುಗಳುಳ್ಳದ್ದು, ಸಾಕ್ಷಿಯು ಕೂಟಸ್ಥನಿತ್ಯವು. ವಿಜ್ಞಾನವು ಅನೇಕ; ಸಾಕ್ಷಿಚೈತನ್ಯವು ಒಂದು. ವಿಜ್ಞಾನವು ದೀಪದಂತೆ ತನ್ನನ್ನು ಬೆಳಗುತ್ತದೆಯಾದ್ದರಿಂದ ಅದು ಸ್ವಯಂಪ್ರಕಾಶವು ಎಂದು ಬೌದ್ಧರೆನ್ನುತ್ತಾರೆ; ಆದರೆ ದೀಪವು ತನ್ನನ್ನು ತಾನೇ ಬೆಳಗುವದೆಂಬ ಮಾತಿಗೆ ಅರ್ಥವಿಲ್ಲವೆಂದು ನಾವು ಆಗಲೆ ತೋರಿಸಿಕೊಟ್ಟಿರುತ್ತೇವೆ. ದೀಪವು ಎಲ್ಲವನ್ನೂ ಬೆಳಗಿದರೂ ತನ್ನನ್ನು ಬೆಳಗುವದಕ್ಕೆ ಬೇರೆಯಾದ

ಮತ್ತೊಂದು ವಿಜ್ಞಾನವನ್ನು ಬಯಸುವಂತೆ ವಿಜ್ಞಾನವೂ ತನಗಿಂತ ಬೇರೆಯಾದ ಕೂಟಸ್ಥವಿಜ್ಞಾನರೂಪನಾದ ಸಾಕ್ಷಿಯನ್ನು ಬಯಸುತ್ತದೆ ಎಂಬ ಪಕ್ಷವೇ ಸರಿಯಾದದ್ದು.

(೧) ಸಾಕ್ಷಿಣೋಽವಗನ್ತುಃ ಸ್ವಯಂಸಿದ್ಧತಾಮ್ ಉಪಕ್ಷಿಪತಾ ಸ್ವಯಂ ಪ್ರಥತೇ ವಿಜ್ಞಾನಮ್ ಇತ್ಯೇಷ ಏವ ಮಮ ಪಕ್ಷಃ ತ್ವಯಾ ವಾಚೋಯುಕ್ತ್ಯನ್ತರೇಣ ಆಶ್ರಿತಃ ಇತಿ ಚೇತ್। ನ। ವಿಜ್ಞಾನಸ್ಯ ಉತ್ಪತ್ತಿಪ್ರಧ್ವಂಸಾನೇಕತ್ವಾದಿವಿಶೇಷವತ್ತ್ವಾಭ್ಯುಪಗಮಾತ್, ಅತಃ ಪ್ರದೀಪವದ್ ವಿಜ್ಞಾನಸ್ಯಾಪಿ ವ್ಯತಿರಿಕ್ತಾವಗಮ್ಯತ್ವಮ್ ಅಸ್ಮಾಭಿಃ ಪ್ರಸಾಧಿತಮ್॥ -ಸೂ. ಭಾ. ೨-೨-೨೮-೬೦

(೨) ಚೈತನ್ಯಗ್ರಾಹ್ಯತ್ವಂ ತು ಘಟಾದಿಭಿರವಿಶಿಷ್ಟಂ ಪ್ರದೀಪಸ್ಯ । ತಸ್ಮಾತ್ ವಿಜ್ಞಾನಸ್ಯ ಆತ್ಮಗ್ರಾಹ್ಯಗ್ರಾಹಕತ್ವೇ ನ ಪ್ರದೀಪೋ ದೃಷ್ಟಾನ್ತಃ। ಚೈತನ್ಯಗ್ರಾಹ್ಯತ್ವಂ ಚ ವಿಜ್ಞಾನಸ್ಯ ಬಾಹ್ಯವಿಷಯೈಃ ಅವಿಶಿಷ್ಟಮ್ । ಚೈತನ್ಯಗ್ರಾಹ್ಯತ್ವೇ ಚ ವಿಜ್ಞಾನಸ್ಯ, ಕಿಂ ಗ್ರಾಹ್ಯವಿಜ್ಞಾನಗ್ರಾಹ್ಯತೈವ, ಕಿಂ ವಾ ಗ್ರಾಹಕವಿಜ್ಞಾನಗ್ರಾಹ್ಯತಾ? ಇತಿ ತತ್ರ ಸನ್ದಿಹ್ಯಮಾನೇ ವಸ್ತುನಿ, ಯೋಽನ್ಯತ್ರ ದೃಷ್ಟೋ ನ್ಯಾಯಃ ಸ ಕಲ್ಪಯಿತುಂ ಯುಕ್ತಃ, ನ ತು ದೃಷ್ಟವಿಪರೀತಃ। ತಥಾ ಚ ಸತಿ ಯಥಾ ವ್ಯತಿರಿಕ್ತೇನೈವ ಗ್ರಾಹಕೇಣ ಬಾಹ್ಯಾನಾಂ ಪ್ರದೀಪಾನಾಂ ಗ್ರಾಹ್ಯತ್ವಂ ದೃಷ್ಟಮ್, ತಥಾ ವಿಜ್ಞಾನಸ್ಯಾಪಿ ಚೈತನ್ಯಗ್ರಾಹ್ಯತ್ವಾತ್ ಪ್ರಕಾಶಕತ್ವೇ ಸತ್ಯಪಿ ಪ್ರದೀಪವತ್ ವ್ಯತಿರಿಕ್ತಚೈತನ್ಯಗ್ರಾಹ್ಯತ್ವಂ ಯುಕ್ತಂ ಕಲ್ಪಯಿತುಮ್, ನ ತು ಅನನ್ಯಗ್ರಾಹ್ಯತ್ವಮ್॥ -ಬೃ. ಭಾ. ೪-೩-೭-೧೭೮

೮೦. ಬೌದ್ಧರು ವಿಜ್ಞಾನವನ್ನು ಕ್ಷಣಿಕವೆಂದದ್ದರಿಂದ ಅದಕ್ಕಿಂತ ಬೇರೆಯಾದ ವಿಜ್ಞಾತೃವೊಬ್ಬನಿರಬೇಕೆಂದು ಕಲ್ಪಿಸುವ ಆವಶ್ಯಕತೆಯುಂಟಾಗಬಹುದು. ತಾರ್ಕಿಕರೂ ಮೀಮಾಂಸಕರೂ ಅಹಂಪ್ರತ್ಯಯಕ್ಕೆ ಗೋಚರನಾದ ಆತ್ಮನನ್ನು ಸ್ಥಿರವೆಂದು ಒಪ್ಪಿರುವದರಿಂದ ಅವರ ಪಕ್ಷದಲ್ಲಿ ಯಾವ ದೋಷವೂ ಕಾಣುವದಿಲ್ಲ. ಎಲ್ಲರ ಅನುಭವದಲ್ಲಿ ಸಿದ್ಧನಾಗಿರುವ ಈ ವಿಜ್ಞಾತೃವಿಗಿಂತ ವ್ಯತಿರಿಕ್ತನಾದ ಆತ್ಮನೊಬ್ಬನನ್ನು ಕಲ್ಪಿಸುವದಕ್ಕೆ ಯಾವ ಪ್ರಮಾಣವಿದೆ ? ಆ ಕಲ್ಪನೆಯಿಂದ ಪ್ರಯೋಜನವಾದರೂ ಏನು?- ಎಂದು ಕೆಲವರು ಕೇಳಬಹುದು.

ಆದರೆ ವೇದಾಂತಿಗಳು ಹೇಳುವ ಸಾಕ್ಷಿಯು ಶ್ರುತಿಪ್ರಮಾಣದಿಂದ ತಿಳಿದು ಬರುವವನಾಗಿದ್ದಾನೆ. ಈ ಸಾಕ್ಷಿಯ ಸ್ವರೂಪದಲ್ಲಿಯೇ ಅಹಂಪ್ರತ್ಯಯಗಮ್ಯತ್ವವನ್ನು ಸಾಮಾನ್ಯಜನರೂ ಮೀಮಾಂಸಕರೂ ಕಲ್ಪಿಸಿಕೊಂಡಿರುತ್ತಾರೆ. ಈ ಕಲ್ಪಿತರೂಪಕ್ಕೆ ಪ್ರಮಾತೃ ಎಂದೂ ಹೆಸರು. ಸಾಕ್ಷಿಯಲ್ಲಿ ಪ್ರಮಾತೃತ್ವವು ಅಧ್ಯಸ್ತವಾಗಿದೆ ಎಂದು ಹಿಂದೆ (೨೮) ತಿಳಿಸಿರುತ್ತೇವೆ. ಅಹಂಪ್ರತ್ಯಯಗಮ್ಯನಾದ, ಅಹಂಪ್ರತ್ಯಯಕ್ಕೆ ಆಶ್ರಯಿಯಾದ ಈ ಆತ್ಮನು ದ್ರಷ್ಟೃವಾದರೂ ಪ್ರಮಾಣಗಳ ಮೂಲಕವಾಗಿಯೇ ವಿಷಯಗಳನ್ನು ಅರಿಯುತ್ತಾನೆ ; ಸಾಕ್ಷಿಯಂತೆ ನೇರಾಗಿ ನೋಡುವವನಲ್ಲ. ಸೂರ್ಯನು ಎಲ್ಲವನ್ನೂ ನೇರಾಗಿ ಬೆಳಗುವಂತೆ ಸಾಕ್ಷಿಯಾದ ಆತ್ಮನು ಎಲ್ಲವನ್ನೂ ಅರಿಯುತ್ತಾನೆ, ಅನಾತ್ಮವೆಲ್ಲವೂ ಅವನಿಗೆ ಸಾಕ್ಷ್ಯವಾಗಿರುತ್ತದೆ. ಪ್ರಮಾತೃವು

ಪ್ರಮಾಣವಾದ ಅಂತಃಕರಣದಿಂದ ಎಲ್ಲವನ್ನೂ ಅರಿಯುವವನಾದ್ದರಿಂದಲೂ ಅಂತಃಕರಣವು ಆಯಾ ವಿಷಯದ ಆಕಾರವನ್ನು ತಳೆದೇ ಅರಿಯಬೇಕಾಗಿರುವದರಿಂದಲೂ ಉಪಾಧಿಯಾದ ಅಂತಃಕರಣದ ವಿಕಾರಗಳು ಪ್ರಮಾತೃವಿಗೂ ಆಗುತ್ತವೆ; ಆದರೆ ಸಾಕ್ಷಿಯು ಯಾವ ವಿಕಾರವೂ ಇಲ್ಲದೆ ಏಕಕಾಲಕ್ಕೆ ಎಲ್ಲವನ್ನೂ ಅರಿಯುತ್ತಿರುತ್ತಾನೆ. ಪ್ರಮಾತೃವು ಕರ್ತೃವಾದ್ದರಿಂದ ಆಯಾ ಕರ್ಮಗಳನ್ನು ಮಾಡಿ ಆಯಾ ಫಲಗಳನ್ನು ಅನುಭವಿಸುತ್ತಿರುತ್ತಾನೆ; ಆದರೆ ಸಾಕ್ಷಿಯು ಈ ಕರ್ತೃಭೋಕ್ತೃವನ್ನು ನೋಡುತ್ತಿರುವದರಿಂದ ಅವನಲ್ಲಿ ಯಾವ ಕರ್ತೃತ್ವಭೋಕ್ತೃತ್ವವೂ ಇರುವದಿಲ್ಲ. ಸಾಕ್ಷಿರೂಪನಾದ ಆತ್ಮನು ನಮ್ಮೆಲ್ಲರ ಸ್ವರೂಪವೇ ಆಗಿರುವದರಿಂದ ಅವನನ್ನು ಇಲ್ಲವೆನ್ನುವದು ಆಗಲಾರದೆಂದು ಹಿಂದೆ (೫೩) ತಿಳಿಸಿದ್ದೂ ಆಗಿದೆ. ಸಾಕ್ಷಿಸ್ವರೂಪವನ್ನು ಒಪ್ಪದಿದ್ದರೆ ಸರ್ವವಿಷಯಗಳನ್ನೂ ಒಂದೇ ಕಾಲಕ್ಕೆ ಅನುಸಂಧಾನಮಾಡುವದೆಂಬ ಅನುಭವವನ್ನು ಉಪಪಾದನೆ ಮಾಡಲಾಗದು ಎಂಬುದನ್ನು ಈಗ ತಿಳಿಸಿರುತ್ತೇವೆ. ಸಾಕ್ಷಿಸ್ವರೂಪವನ್ನೂ ಅಹಂಪ್ರತ್ಯಯಿಯನ್ನೂ ಬಿಡಿಸಿ ತಿಳಿದುಕೊಳ್ಳದೆ ಒಂದರಲ್ಲೊಂದನ್ನು ಅಧ್ಯಾಸಮಾಡಿಕೊಂಡಿರುವದೇ ಕರ್ತೃತ್ವಭೋಕ್ತೃತ್ವಕ್ಕೆ ಕಾರಣವಾಗಿರುವದರಿಂದ ಸಾಕ್ಷಿಸ್ವರೂಪವನ್ನು ತಿಳಿದುಕೊಂಡರೆ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರಾನರ್ಥವು ನಾಶವಾಗುವದೇ ಪ್ರಯೋಜನವು.

(೧) ತಯೋಃ ಪರಿಷ್ವಕ್ತಯೋಃ ಅನ್ಯಃ ಏಕಃ ಕ್ಷೇತ್ರಜ್ಞಃ ಲಿಙ್ಗೋಪಾಧಿಃ, ವೃಕ್ಷಮಾಶ್ರಿತಃ ಪಿಪ್ಪಲಂ ಕರ್ಮನಿಷ್ಪನ್ನಂ ಸುಖದುಃಖಲಕ್ಷಣಂ ಫಲಂ ಸ್ವಾದು ಅನೇಕವಿಚಿತ್ರವೇದನಾಸ್ವಾದರೂಪಂ ಸ್ವಾದು ಅತ್ತಿ ಭಕ್ಷಯತಿ ಉಪಭುಙ್ಕ್ತೇ ಅವಿವೇಕತಃ। ಅನಶ್ನನ್ ಅನ್ಯಃ ಇತರಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಸರ್ವಜ್ಞಃ ಸರ್ವಸತ್ತ್ವೋಪಾಧಿಃ ಈಶ್ವರೋ ನಾಶ್ನಾತಿ । ಪ್ರೇರಯಿತಾ ಹ್ಯಸೌ ಉಭಯೋಃ ಭೋಜ್ಯಭೋಕ್ತ್ರೋಃ ನಿತ್ಯಸಾಕ್ಷಿತ್ವಸತ್ತಾಮಾತ್ರೇಣ॥

-ಮುಂ. ಭಾ. ೩-೧-೧-೯೧

(೨) ತೇನೈವ ಹಿ ಅಹಂಕರ್ತ್ರಾ ಅಹಂಪ್ರತ್ಯಯವಿಷಯೇಣ ಪ್ರತ್ಯಯಿನಾ ಸರ್ವಾಃ ಕ್ರಿಯಾಃ ನಿರ್ವರ್ತ್ಯನ್ತೇ। ತತ್ಫಲಂ ಚ ಸ ಏವ ಅಶ್ನಾತಿ । ''ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ'' (ಮುಂ. ೩-೧-೧) ಇತಿ ಮನ್ತ್ರವರ್ಣಾತ್ । ''ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ'' ಇತಿ ಚ ॥ -ಸೂ. ಭಾ. ೧-೧-೪-೪೯

(೩) ಯದಿ ಹಿ ತವ ಪರಿಣಾಮಿತ್ವಂ ಸ್ಯಾತ್ ಅಶೇಷಸ್ವವಿಷಯಚಿತ್ತಪ್ರಚಾರೋಪಲಬ್ಧಿರ್ನ ಸ್ಯಾತ್ ಚಿತ್ತಸ್ಯೇವ ಸ್ವವಿಷಯೇ, ಯಥಾ ಚ ಇನ್ದ್ರಿಯಾಣಾಂ ಸ್ವವಿಷಯೇಷು । ನ ಚ ತಥಾ ಆತ್ಮನಃ ತವ ಸ್ವವಿಷಯೈಕದೇಶೋಪಲಬ್ಧಿಃ । ಅತಃ ಕೂಟಸ್ಥತೈವ ತವ ಇತಿ ॥ -ಉಪ. ಸಾ. ಗದ್ಯ-೪೯

(೪) ಏವಂ ಅಹಂಪ್ರತ್ಯಯಿನಮ್ ಅಶೇಷಸ್ವಪ್ರಚಾರಸಾಕ್ಷಿಣಿ ಪ್ರತ್ಯಗಾತ್ಮನಿ ಅಧ್ಯಸ್ಯ ತಂ ಚ ಪ್ರತ್ಯಗಾತ್ಮಾನಂ ಸರ್ವಸಾಕ್ಷಿಣಂ ತದ್ವಿಪರ್ಯಯೇಣ ಅನ್ತಃಕರಣಾದಿಷು ಅಧ್ಯಸ್ಯತಿ॥

-ಅಧ್ಯಾ. ಭಾ-೮

೮೧. ಆತ್ಮನ ಪ್ರಮಾತೃತ್ವವು ದೇಹೇಂದ್ರಿಯಮನಸ್ಸುಗಳ ಧರ್ಮದ ಅಧ್ಯಾಸ ದಿಂದ ಆಗಿರುವದರಿಂದ ಇಂದ್ರಿಯಮನಸ್ಸುಗಳ ಸಂಬಂಧದಿಂದ ಆಗುವ ಆತ್ಮನ ದೃಷ್ಟಿಯು ಅನಿತ್ಯವಾಗಿರುತ್ತದೆ. ಈ ದೃಷ್ಟಿಯೂ ಜ್ಞಾನವೂ ಅನಿತ್ಯವಾಗಿರುವದರಿಂದ ಕುರುಡನು, ಕಣ್ಣುಕಾಣುವವನು, ಜ್ಞಾನಿಯು, ಅಜ್ಞಾನಿಯು- ಎಂಬ ವಿಭಾಗವು ಆಗಿರುತ್ತದೆ. ಇಂದ್ರಿಯಗಳಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಎಂಬ ವಿಶೇಷವು ಅರಿಯಲ್ಪಡುತ್ತದೆ, ಸಾಕ್ಷಿಯಾದ ಆತ್ಮನು ಯಾವಾಗಲೂ ಶಬ್ದಾದಿಗಳನ್ನು ಅರಿಯುವ ನಿತ್ಯಚೈತನ್ಯಸ್ವರೂಪನಾಗಿರುತ್ತಾನೆ. ಜ್ಞಾತೃ, ಉಪಲಬ್ಧೃ, ವಿದ್ವಾನ್, ಜ್ಞಃ- ಮುಂತಾದ ಪರ್ಯಾಯಶಬ್ದಗಳನ್ನೆಲ್ಲ ಪ್ರಮಾತೃವಿಗೆ ಉಪಯೋಗಿಸುತ್ತಾರೆ. ಆಯಾ ಬುದ್ಧಿವೃತ್ತಿಗೂ ಸಾಕ್ಷಿಗೂ ವಿವೇಕವನ್ನು ಮಾಡಿಕೊಳ್ಳದೆ ಇರುವದೆಂಬ ಅವಿದ್ಯೆಯಿಂದ ಆತ್ಮನು ಶಬ್ದಾದಿಗಳನ್ನು ಅರಿಯುತ್ತಾನೆ ಎಂದು ವ್ಯವಹರಿಸುತ್ತಾರೆ; ಇದರಂತೆ ಆತ್ಮಾನಾತ್ಮವಿವೇಕವನ್ನು ಮಾಡಿಕೊಂಡು ಅರಿಯುವ ವಿದ್ಯೆಯಿಂದ ಆತ್ಮ ಜ್ಞಾನಿ ಎಂದು ವ್ಯವಹರಿಸುತ್ತಾರೆ. ನಿಜವಾಗಿ ಆತ್ಮನಲ್ಲಿ ಈ ಅನಿತ್ಯವಾದ ದೃಷ್ಟ್ಯಾದಿ ಗಳಾಗಲಿ ಜ್ಞಾನವಾಗಲಿ ಇರುವದಿಲ್ಲ. ಅವನು ಯಾವಾಗಲೂ ಅನಿತ್ಯದೃಷ್ಟ್ಯಾದಿ ಗಳನ್ನೂ ನೋಡುತ್ತಿರುವ ನಿತ್ಯದೃಷ್ಟಿಸ್ವರೂಪನು, ನಿತ್ಯಜ್ಞಾನಸ್ವರೂಪನು.

(೧) ಕಿಂ ದ್ವೇ ದೃಷ್ಟೀ ದ್ರಷ್ಟುರ್ನಿತ್ಯಾ ಅದೃಶ್ಯಾ, ಅನ್ಯಾ ಅನಿತ್ಯಾ ದೃಶ್ಯಾ ಇತಿ? ಬಾಢಮ್। ಪ್ರಸಿದ್ಧಾ ತಾವತ್ ಅನಿತ್ಯಾ ದೃಷ್ಟಿಃ ಅನ್ಧಾನನ್ಧತ್ವದರ್ಶನಾತ್। ನಿತ್ಯೈವ ಚೇತ್ ಸರ್ವೋಽನನ್ಧ ಏವ ಸ್ಯಾತ್ ದ್ರಷ್ಟುಸ್ತು ನಿತ್ಯಾ ದೃಷ್ಟಿಃ । "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" ಇತಿ ಶ್ರುತೇಃ। ಅನುಮಾನಾಚ್ಚ । ಅನ್ಧಸ್ಯಾಪಿ ಘಟಾದ್ಯಾಭಾಸವಿಷಯಾ ಸ್ವಪ್ನೇ ದೃಷ್ಟಿರುಪಲಭ್ಯತೇ। ಸಾ ತರ್ಹಿ ಇತರದೃಷ್ಟಿನಾಶೇ ನ ನಶ್ಯತಿ। ಸಾ ದ್ರಷ್ಟುರ್ದೃಷ್ಟಿಃ। ತಯಾ ಅವಿಪರಿಲುಪ್ತಯಾ ನಿತ್ಯಯಾ ದೃಷ್ಟ್ಯಾ ಸ್ವರೂಪಭೂತಯಾ ಸ್ವಯಂಜ್ಯೋತಿಃಸಮಾಖ್ಯಯಾ ಇತರಾಮ್ ಅನಿತ್ಯಾಂ ದೃಷ್ಟಿಂ ಸ್ವಪ್ನಬುದ್ಧಾನ್ತಯೋಃ ವಾಸನಾಪ್ರತ್ಯಯರೂಪಾಂ ನಿತ್ಯಮೇವ ಪಶ್ಯನ್ ದೃಷ್ಟೇರ್ದ್ರಷ್ಟಾ ಭವತಿ ॥

-ಬೃ.ಭಾ.೧-೪-೧೦-೧೬೧

(೨) ಅಥ ಅಪಿ ಯಃ ಅಸ್ಮಿನ್ ದೇಹೇ ವೇದ । ಕಥಮ್ ? ಇದಂ ಸುಗನ್ಧಿ ದುರ್ಗನ್ಧಿ ವಾ ಜಿಘ್ರಾಣೀತಿ । ಅಸ್ಯ ಗನ್ಧಂ ವಿಜಾನೀಯಾಮಿತಿ। ಸ ಆತ್ಮಾ। ತಸ್ಯ ಗನ್ಧಾಯ ಗನ್ಧವಿಜ್ಞಾನಾಯ ಘ್ರಾಣಮ್ । ಅಥ ಯೋ ವೇದ ಇದಂ ವಚನಮ್ ಅಭಿವ್ಯಾಹರಾಣಿ ಇತಿ ವದಿಷ್ಯಾಮಿ ಇತಿ ಸ ಆತ್ಮಾ। ಅಭಿವ್ಯಾಹರಣಕ್ರಿಯಾಸಿದ್ಧಯೇ ಕರಣಂ ವಾಗಿನ್ದ್ರಿಯಮ್। ಅಥ ಯೋ ವೇದ ಇದಂ ಶೃಣವಾನಿ ಇತಿ ಸ ಆತ್ಮಾ। ಶ್ರವಣಾಯ ಶ್ರೋತ್ರಮ್ । ಅಥ ಯೋ ವೇದ ಇದಂ ಮನ್ವಾನೀತಿ ಮನನವ್ಯಾಪಾರಮ್ ಇನ್ದ್ರಿಯಾಸಂಸ್ಪೃಷ್ಟಂ ಕೇವಲಂ ಮನ್ವಾನಿ ಇತಿ ವೇದ ಸ ಆತ್ಮಾ । ಮನನಾಯ ಮನಃ 'ಯೋ ವೇದ ಸ ಆತ್ಮಾ' ಇತ್ಯೇವಂ ಸರ್ವತ್ರ ಪ್ರಯೋಗಾತ್ ವೇದನಮ್ ಅಸ್ಯ ಸ್ವರೂಪಮ್ ಇತ್ಯವಗಮ್ಯತೇ । ಯಥಾ ಯಃ ಪುರಸ್ತಾತ್ ಪ್ರಕಾಶಯತಿ ಸ ಆದಿತ್ಯಃ ಯೋ ದಕ್ಷಿಣತಃ, ಯಃ ಪಶ್ಚಾತ್ ಯ ಉತ್ತರತಃ, ಯ ಊರ್ಧ್ವಂ ಪ್ರಕಾಶಯತಿ ' ಸ ಆದಿತ್ಯಃ' ಇತ್ಯುಕ್ತೇ

ಪ್ರಕಾಶಸ್ವರೂಪಃ ನ ಇತಿ ಗಮ್ಯತೇ । ದರ್ಶನಾದಿಕ್ರಿಯಾನಿರ್ವರ್ತ್ಯರ್ಥಾನಿ ತು ಚಕ್ಷುರಾದಿಕರಣಾನಿ॥
- ಛಾಂ. ಭಾ. ೮-೧೨-೫-೬೮೧

(೩) ಯಥಾ ಬುದ್ಧ್ಯಾದ್ಯಾಹೃತಸ್ಯ ಶಬ್ದಾದ್ಯರ್ಥಸ್ಯ ಅವಿಕ್ರಿಯ ಏವ ಸನ್ ಬುದ್ಧಿವೃತ್ತ್ಯಾ ಅವಿವೇಕವಿಜ್ಞಾನೇನ ಅವಿದ್ಯಯಾ ಉಪಲಬ್ಧಾ ಆತ್ಮಾ, ಕಲ್ಪ್ಯತೇ ಏವಮೇವ ಆತ್ಮಾನಾತ್ಮ-ವಿವೇಕಜ್ಞಾನೇನ ಬುದ್ಧಿವೃತ್ತ್ಯಾ ವಿದ್ಯಯಾ ಅಸತ್ಯರೂಪಯೈವ ಪರಮಾರ್ಥತೋಽವಿಕ್ರಿಯ ಏವ ಆತ್ಮಾ ವಿದ್ವಾನ್ ಉಚ್ಯತೇ॥
- ಗೀ. ಭಾ. ೨.೨೧-೪೩

(೪) ಆತ್ಮನಃ ಸತ್ತಾಮಾತ್ರ ಏವ ಜ್ಞಾನಕರ್ತೃತ್ವಮ್ ನ ತು ವ್ಯಾಪೃತತಯಾ । ಯಥಾ ಸವಿತುಃ, ಸತ್ತಾಮಾತ್ರ ಏವ ಪ್ರಕಾಶನಕರ್ತೃತ್ವಮ್ ನ ತು ವ್ಯಾಪೃತತಯಾ ಇತಿ, ತದ್ವತ್॥
- ಛಾಂ. ಭಾ. ೮-೧೨-೫-೬೮೨

೮೨. ಸಾಕ್ಷಿಯಾದ ಆತ್ಮನ ದೃಷ್ಟಿಯು ನಿತ್ಯವಾಗಿರುತ್ತದೆ ಎಂಬಲ್ಲಿ ಸ್ವಲ್ಪ ವಿಮರ್ಶೆ ಮಾಡತಕ್ಕದ್ದಿದೆ. ಆತ್ಮನಲ್ಲಿರುವ ದೃಷ್ಟಿ, ಶ್ರುತಿ- ಮುಂತಾದವುಗಳು ಎಂದಿಗೂ ಲೋಪವಿಲ್ಲದೆ ಇರುತ್ತವೆ ಎಂದು (ಬೃ. ೪-೩-೨೩ ರಿಂದ ೩೦ ರವರೆಗೆ) ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದ ಸಾಕ್ಷಿಯಲ್ಲಿಯೂ ದೃಷ್ಟ್ಯಾದಿಧರ್ಮಗಳು ಅನೇಕವಾಗಿರುತ್ತವೆಯೆಂದೂ ಅವುಗಳು ಒಂದಕ್ಕಿಂತ ಒಂದು ಬೇರೆಯಾಗಿದ್ದರೂ ಆತ್ಮನೊಡನೆ ಅವು ಒಂದಾಗಿರುತ್ತವೆಯೆಂದೂ ಆತ್ಮನು ತನ್ನ ರೂಪದಿಂದ ಒಬ್ಬನೂ ಧರ್ಮಗಳ ರೂಪದಿಂದ ಅನೇಕನೂ ಆಗಿರುತ್ತಾನೆಂದೂ **ಭರ್ತೃಪ್ರಪಂಚರೇ ಮುಂತಾದ** ಕೆಲವರು ಪ್ರಾಚೀನವೇದಾಂತಿಗಳು ಭಾವಿಸಿದ್ದರು. ಗೋವೆಂಬುದು ಸ್ವತಃ ಒಂದೇ ಆಗಿದ್ದರೂ ಅದರ ಧರ್ಮಗಳಾದ ಗಂಗೆದೊಗಲು ಮುಂತಾದವುಗಳು ಅನೇಕವಾಗಿರುವಂತೆ ಏಕತ್ವವೂ ನಾನಾತ್ವವೂ ಒಬ್ಬ ಆತ್ಮನಲ್ಲಿಯೇ ಇರಬಹುದೆಂದು ಅವರ ಅಭಿಪ್ರಾಯವಿತ್ತು. ಆತ್ಮನು ನಾನಾರಸನಾಗಿರುವನೆಂಬ ಈ ವಾದವನ್ನು ಖಂಡಿಸಿ ಅವನು ಏಕರಸನಾಗಿ ಒಬ್ಬನೇ ಆಗಿರುತ್ತಾನೆಂದು ಆಚಾರ್ಯರು ಸಿದ್ಧಪಡಿಸಿ ಕೊಟ್ಟಿರುತ್ತಾರೆ. ಆತ್ಮನು ಚೈತನ್ಯಮಾತ್ರಸ್ವಭಾವನಾಗಿದ್ದರೂ ಚಕ್ಷುರಾದ್ಯುಪಾಧಿಗಳಿಂದ ದೃಷ್ಟಿ, ಶ್ರುತಿ, ಮುಂತಾದ ರೂಪಗಳಿಂದ ಜಾಗ್ರತ್ಸ್ವಪ್ನಗಳಲ್ಲಿ ಅನೇಕವಾಗಿ ಕಾಣುತ್ತಿರುತ್ತಾನೆ. ಆದರೆ ಸುಷುಪ್ತಿಯಲ್ಲಿ ಉಪಾಧಿಗಳ ವ್ಯಾಪಾರವು ನಿಲ್ಲಲಾಗಿ ಆತ್ಮನಲ್ಲಿ ಯಾವ ದೃಷ್ಟ್ಯಾದಿಭೇದಗಳೂ ಕಾಣುವದಿಲ್ಲ; ಆಗ ಅವನು ಚಿನ್ಮಾತ್ರನಾಗಿಯೇ ಇರುತ್ತಾನೆ. ಆದರೂ ಆಗ ಅಲ್ಲಿ ವಿಷಯಗಳಿಲ್ಲದ್ದರಿಂದ ಈ ದೃಷ್ಟ್ಯಾದಿಗಳು ಕಾಣುವದಿಲ್ಲ ಎಂದು ತಿಳಿಸುವದಕ್ಕಾಗಿ ಎಚ್ಚರದಲ್ಲಿ ಪ್ರಾಪ್ತವಾಗಿದ್ದ ದೃಷ್ಟ್ಯಾದಿಭೇದವನ್ನೇ ಅನುವಾದಮಾಡಿಕೊಂಡು ದೃಷ್ಟ್ಯಾದಿಗಳು ಅಲ್ಲಿ ಇರುತ್ತವೆಯೆಂದು ಶ್ರುತಿಯು ಹೇಳಿರುತ್ತದೆಯೇ ಹೊರತು ನಿಜವಾಗಿ ಆತ್ಮನಲ್ಲಿ ದೃಷ್ಟ್ಯಾದಿಗಳು ಬೇರೆಬೇರೆಯಾಗಿವೆ ಎಂಬ ಅಭಿಪ್ರಾಯದಿಂದಲ್ಲ. ಲೋಕದಲ್ಲಿಯೂ 'ಕಣ್ಣಿನಿಂದ

ಕಾಣುತ್ತಾನೆ,' 'ಕಿವಿಯಿಂದ ಕೇಳುತ್ತಾನೆ'- ಎಂದು ಮುಂತಾಗಿ ಹೇಳುವದರ ಬದಲು 'ಕಣ್ಣಿನಿಂದ ರೂಪವನ್ನು ಅರಿತುಕೊಳ್ಳುತ್ತಾನೆ', 'ಕಿವಿಯಿಂದ ಶಬ್ದವನ್ನು ಅರಿತು ಕೊಳ್ಳುತ್ತಾನೆ'- ಎಂದು ಮುಂತಾಗಿ ದೃಷ್ಟ್ಯಾದಿಗಳನ್ನು ಅರಿವೆಂಬ ಶಬ್ದದಿಂದಲೇ ಹೇಳುವದುಂಟು. ಹೇಗೆ ಸ್ವಚ್ಛವಾದ ಒಂದೇ ಸ್ಫಟಿಕವೇ ಹಸಿರು, ಕಪ್ಪು, ಕೆಂಪು- ಮುಂತಾದ ಬಣ್ಣಗಳ ಉಪಾಧಿಗಳ ಸಂಬಂಧದಿಂದ ಆಯಾ ಬಣ್ಣದ್ದಾಗಿ ಕಾಣು ತ್ತದೆಯೇ ಹೊರತು ನಿಜವಾಗಿಯೂ ಅದು ಆಗ ಆಯಾ ಬಣ್ಣವನ್ನೇ ಹೊಂದುತ್ತದೆ ಯೆಂದು ಕಲ್ಪಿಸುವದಕ್ಕಾಗುವದಿಲ್ಲವೋ ಅದರಂತೆಯೇ ಇಲ್ಲಿಯೂ ತಿಳಿಯಬೇಕು

(೧) ನ ಹಿ ದೃಷ್ಟ್ಯಾದಿಧರ್ಮಭೇದಪ್ರದರ್ಶನಪರಮಿದಂ ವಾಕ್ಯಮ್ ' ಯದ್ವೈ ತತ್' ಇತ್ಯಾದಿ। ಕಿಂ ತರ್ಹಿ ? ಯದಿ ಚೈತನ್ಯಾತ್ಮಜ್ಯೋತಿಃ ಕಥಂ ನ ಜಾನಾತಿ ಸುಷುಪ್ತೇ ? ನೂನಮತೋ ನ ಚೈತನ್ಯಾತ್ಮಜ್ಯೋತಿಃ ಇತ್ಯೇವಮಾಶಙ್ಕಾಪ್ರಾಪ್ತೌ ತನ್ನಿರಾಕರಣಾಯ ಏತದ್ ಆರಬ್ಧಮ್ 'ಯದ್ವೈ ತತ್' ಇತ್ಯಾದಿ ।...... ಯದಸ್ಯ ಜಾಗ್ರತ್ಸ್ವಪ್ನಯೋಃ ಚಕ್ಷುರಾದ್ಯನೇಕೋಪಾಧಿದ್ವಾರಂ ಚೈತನ್ಯಾತ್ಮ ಜ್ಯೋತಿಃಸ್ವಾಭಾವ್ಯಮ್ ಉಪಲಕ್ಷಿತಂ ದೃಷ್ಟ್ಯಾದ್ಯಭಿಧೇಯವ್ಯವಹಾರಾಪನ್ನಮ್, ಸುಷುಪ್ತೇ ಉಪಾಧಿಭೇದವ್ಯಾಪಾರನಿವೃತ್ತೌ ಅನುದ್ಭಾಸ್ಯಮಾನತ್ವಾತ್ ಅನುಪಲಕ್ಷ್ಯಮಾಣಸ್ವಭಾವಮಪಿ ಉಪಾಧಿಭೇದೇನ ಭಿನ್ನಮಿವ ಯಥಾಪ್ರಾಪ್ತಾನುವಾದೇನೈವ ವಿದ್ಯಮಾನವತ್ ಉಚ್ಯತೇ। ..... ತತ್ರ ದೃಷ್ಟ್ಯಾದಿಭೇದಕಲ್ಪನಾ ವಿವಕ್ಷಿತಾರ್ಥಾನಭಿಜ್ಞತಯಾ॥ -ಬೃ.ಭಾ.೪-೩-೩೦-೨೨೯

(೨) ದೃಷ್ಟಿಃ ಸ್ಪೃಷ್ಟಿಃ ಶ್ರುತಿರ್ಘ್ರಾತಿರ್ಮತಿರ್ವಿಜ್ಞಾತಿರೇವ ಚ।

ಶಕ್ತಯೋಽನ್ಯಾಶ್ಚ ಭಿದ್ಯನ್ತೇ ಚಿದ್ರೂಪತ್ವೇಽಪ್ಯುಪಾಧಿಭಿಃ॥ -ಉಪ.೧೮-೫೪

(೩) ಶಬ್ದಪ್ರವೃತ್ತೇಶ್ಚ । ಲೌಕಿಕೀ ಚ ಶಬ್ದಪ್ರವೃತ್ತಿಃ'ಚಕ್ಷುಷಾ ರೂಪಂ ವಿಜಾನಾತಿ', 'ಶ್ರೋತ್ರೇಣ ಶಬ್ದಂ ವಿಜಾನಾತಿ', 'ರಸನೇನ ಅನ್ನಸ್ಯ ರಸಂ ವಿಜಾನಾತಿ' ಇತಿ ಚ ಸರ್ವತ್ರೈವ ಚ ದೃಷ್ಟ್ಯಾದಿಶಬ್ದಾಭಿಧೇಯಾನಾಂ ವಿಜ್ಞಾನಶಬ್ದವಾಚ್ಯತಾಮೇವ ದರ್ಶಯತಿ। ಶಬ್ದಪ್ರವೃತ್ತಿಶ್ಚ ಪ್ರಮಾಣಮ್। ದೃಷ್ಟಾನ್ತೋಪಪತ್ತೇಶ್ಚ । ಯಥಾ ಹಿ ಲೋಕೇ ಸ್ವಚ್ಛಸ್ವಾಭಾವ್ಯಯುಕ್ತಃ ಸ್ಫಟಿಕಃ ತನ್ನಿಮಿತ್ತಮೇವ ಕೇವಲಂ ಹರಿತನೀಲಲೋಹಿತಾದ್ಯುಪಾಧಿಭೇದಸಂಯೋಗಾತ್ ತದಾಕಾರತ್ವಂ ಭಜತೇ। ನ ಚ ಸ್ವಚ್ಛಸ್ವಾಭಾವ್ಯವ್ಯತಿರೇಕೇಣ ಹರಿತನೀಲಲೋಹಿತಾದಿಲಕ್ಷಣಾ ಧರ್ಮಭೇದಾಃ ಸ್ಫಟಿಕಸ್ಯ ಕಲ್ಪಯಿತುಂ ಶಕ್ಯನ್ತೇ। ತಥಾ ಚಕ್ಷುರಾದ್ಯುಪಾಧಿಭೇದಸಂಯೋಗಾತ್ ಪ್ರಜ್ಞಾನಸ್ವಭಾವಸ್ಯೈವ ಆತ್ಮಜ್ಯೋತಿಷೋ ದೃಷ್ಟ್ಯಾದಿಶಕ್ತಿಭೇದಃ ಉಪಲಕ್ಷ್ಯತೇ। ಪ್ರಜ್ಞಾನಘನಸ್ಯ ಸ್ವಚ್ಛಸ್ವಾಭಾವ್ಯಾತ್ ಸ್ಫಟಿಕಸ್ವಚ್ಛಸ್ವಾಭಾವ್ಯವತ್॥ -ಬೃ.ಭಾ.೪-೩-೩೦-೨೩೦

೮೩.ಇಂದ್ರಿಯಗಳಲ್ಲಿ ಶಬ್ದಾದಿಗಳನ್ನು ಅರಿಯುವ ಅನಿತ್ಯಜ್ಞಾನ, ಸಾಕ್ಷಿ ಯಾದ ಆತ್ಮನಲ್ಲಿ ನಿತ್ಯವಾದ ಜ್ಞಾನ- ಎಂದು ಎರಡು ಬಗೆಯ ಜ್ಞಾನಗಳೆಂದು ಭಾವಿಸುವದು ತಪ್ಪು. ಆತ್ಮನೇ ಇಂದ್ರಿಯಾದಿಗಳ ಮೂಲಕವಾಗಿ ಶಬ್ದಾದಿಗಳನ್ನು ಅರಿಯುವವನು; ಅಥವಾ, ಪ್ರಮಾತೃತ್ವವು ಆವಿದ್ಯಕವಾಗಿರುವದರಿಂದ ಆತ್ಮನ ಜ್ಞಾನವೇ ಇಂದ್ರಿಯಾದಿಗಳ ಮೂಲಕವಾಗಿ ಶಬ್ದಾದಿಗಳ ಜ್ಞಾನವೆಂದು ತೋರಿ

ಕೊಳ್ಳುತ್ತಿರುವದು ಎಂಬುದೇ ಸರಿಯಾದ ತಿಳಿವಳಿಕೆ. ಇಂದ್ರಿಯಗಳಲ್ಲಿ ಸ್ವತಃ ಜ್ಞಾನವಿದೆ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಇಂದ್ರಿಯಗಳೆಲ್ಲವೂ ವಿಷಯಗಳಂತೆ ಭೌತಿಕವೇ ಆಗಿರುವದರಿಂದ ಅವೂ ಶಬ್ದಾದಿಗಳಂತೆ ಮತ್ತೊಂದರಿಂದ ಅರಿಯಲ್ಪಡಬೇಕಾಗಿದೆಯೇ ಹೊರತು ತಾವುತಾವೇ ಬೆಳಗುವಹಾಗಿಲ್ಲ; ಶಬ್ದವು ಸ್ಪರ್ಶವನ್ನು, ಸ್ಪರ್ಶವು ರಸವನ್ನು- ಹೀಗೆ ಒಂದನ್ನೊಂದು ಹೇಗೆ ಬೆಳಗಲಾರವೋ ಹಾಗೆಯೇ ಇಂದ್ರಿಯಗಳೂ ಒಂದನ್ನೊಂದು ಬೆಳಗಲಾರವು. ಅಂತಃಕರಣದ ವೃತ್ತಿಗಳಲ್ಲಿ ತೋರುವ ಜ್ಞಾನವೆಂಬುದು ಕೂಡ ಸಾಕ್ಷಿಚೈತನ್ಯದ ಹೊಳಪೇ ಎಂದೂ ಅದು ಜ್ಞಾನಶಬ್ದವಾಚ್ಯವಾಗಿದ್ದರೂ ನಿಜವಾಗಿ ಆ ಶಬ್ದಕ್ಕೆ ಲಕ್ಷ್ಯಾರ್ಥವಾದ ಆತ್ಮಚೈತನ್ಯವೊಂದೇ ತಾತ್ತ್ವಿಕವಾದ ಜ್ಞಾನವೆಂದೂ ಆಗಲೆ (೬೭-೭೫) ತಿಳಿಸಿರುತ್ತೇವೆ. ಆದ್ದರಿಂದ ಕಬ್ಬಿಣವು ಸುಡುವದಕ್ಕೆ ಬೆಂಕಿಯು ಕಾರಣವಾಗಿರುವಂತೆ ಇಂದ್ರಿಯಗಳು ಇಂದ್ರಿಯಗಳಾಗುವದಕ್ಕೆ- ಎಂದರೆ ಅವು ರೂಪಾದಿಗಳನ್ನು ಅರಿಯುವದಕ್ಕೆ- ಮೂಲಕಾರಣವಾದದ್ದೂ ಮನಸ್ಸು ಮನಸ್ಸಾಗುವದಕ್ಕೆ - ಎಂದರೆ ತನ್ನ ವೃತ್ತಿಗಳ ಮೂಲಕ ವಿಷಯಗಳನ್ನು ಬೆಳಗುವದಕ್ಕೆ - ಮೂಲಕಾರಣವಾದದ್ದೂ ಸಾಕ್ಷಿಚೈತನ್ಯವೇ ಎಂದೂ ಆ ಸ್ವರೂಪಜ್ಞಾನದಿಂದಲೇ ಮನಸ್ಸಿನಲ್ಲಿಯೂ ಇಂದ್ರಿಯಗಳಲ್ಲಿಯೂ ಬೇರೆಬೇರೆಯ ಅರಿವುಗಳಿದ್ದಂತೆ ತೋರುತ್ತಿರುವದೆಂತಲೂ ತಿಳಿಯಬೇಕು. ಆತ್ಮನು ಮನಸ್ಸನ್ನೂ ಇಂದ್ರಿಯಗಳನ್ನೂ ವಿಷಯಗಳನ್ನೂ ಎಲ್ಲವನ್ನೂ ಬೆಳಗುತ್ತಿರುತ್ತಾನೆ. ಸಾಕ್ಷಿಯ ಚೈತನ್ಯದಿಂದ ಬೆಳಗಲ್ಪಡದೆ ಇರುವದು ಯಾವದೊಂದೂ ಇರುವದಿಲ್ಲ.

(೧) ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ॥
-ಛಾಂ. ೬-೭-೬.

(೨) ದೇಹಾದಿಸಙಘಾತಸ್ಯಾಪಿ ಶಬ್ದಾದಿಸ್ವರೂಪತ್ವಾವಿಶೇಷಾತ್ ವಿಜ್ಞೇಯತ್ವಾವಿಶೇಷಾಚ್ಚ ನ ಯುಕ್ತಂ ವಿಜ್ಞಾತೃತ್ವಮ್। ಯದಿ ಹಿ ದೇಹಾದಿಸಙ್ಘಾತೋ ರೂಪಾದ್ಯಾತ್ಮಕಃ ಸನ್ ರೂಪಾದೀನ್ ವಿಜಾನೀಯಾತ್, ತರ್ಹಿ ಬಾಹ್ಯಾ ಅಪಿ ರೂಪಾದಯಃ ಅನ್ಯೋನ್ಯಂ ಸ್ವಂ ಸ್ವಂ ರೂಪಂ ಚ ವಿಜಾನೀಯುಃ। ನ ಚೈತದಸ್ತಿ। ತಸ್ಮಾತ್, ದೇಹಾದಿಲಕ್ಷಣಾಂಶ್ಚ ರೂಪಾದೀನ್ ಏತೇನೈವ ದೇಹಾದಿವ್ಯತಿರಿಕ್ತೇನೈವ ವಿಜ್ಞಾನಸ್ವಭಾವೇನ ಆತ್ಮನಾ ವಿಜಾನಾತಿ ಲೋಕಃ। ಯಥಾ 'ಯೇನ ಲೋಹೋ ದಹತಿ ಸೋಽಗ್ನಿಃ' ಇತಿ ತದ್ವತ್। ಆತ್ಮನಃ ಅವಿಜ್ಞೇಯಂ ಕಿಮತ್ರ ಅಸ್ಮಿನ್ ಲೋಕೇ ಪರಿಶಿಷ್ಯತೇ ನ ಕಿಂಚಿತ್ ಪರಿಶಿಷ್ಯತೇ। ಸರ್ವಮೇವ ತು ಆತ್ಮನಾ ವಿಜ್ಞೇಯಮ್॥
-ಕ.ಭಾ. ೨-೧-೩-೧೧೪

(೩) ನ ಚಾಸ್ತಿ ಶಬ್ದಾದಿರನನ್ಯವೇದನಃ
ಪರಸ್ಪರೇಣಾಪಿ ನ ಚೈವ ದೃಶ್ಯತೇ ।

ಪರೇಣ ದೃಶ್ಯಾಸ್ತು ಯಥಾ ರಸಾದಯಃ
ತಥೈವ ದೃಶ್ಯತ್ವತ ಏವ ದೈಹಿಕಾಃ

-ಉಪ ಪದ್ಯ. ೧೪-೪೧.

(೪) ಶ್ರೋತ್ರಂ ತಾವತ್ ಸ್ವವಿಷಯವ್ಯಞ್ಜನಸಮರ್ಥಂ ದೃಷ್ಟಮ್ । ತಚ್ಚ ಸ್ವವಿಷಯ ವ್ಯಞ್ಜನಸಾಮರ್ಥ್ಯಂ ಶ್ರೋತ್ರಸ್ಯ ಚೈತನ್ಯೇ ಹಿ ಆತ್ಮಜ್ಯೋತಿಷಿ ನಿತ್ಯೇ ಅಸಂಹತೇ ಸರ್ವಾನ್ತರೇ ಸತಿ ಭವತಿ, ನಾಸತಿ ಇತ್ಯತಃ 'ಶ್ರೋತ್ರಸ್ಯ ಶ್ರೋತ್ರಮ್' ಇತ್ಯಾದಿ ಉಪಪದ್ಯತೇ॥

-ಕೇ. ಭಾ. ೧-೨-೧೭

(೫) ಶ್ರೋತ್ರಾದ್ಯೇವ ಸರ್ವಸ್ಯ ಆತ್ಮಭೂತಂ ಚೇತನಮ್ ಇತಿ ಪ್ರಸಿದ್ಧಮ್ । ತದಿಹ ನಿವರ್ತ್ಯತೇ। ಅಸ್ತಿ ಕಿಮಪಿ ವಿದ್ವದ್ಬುದ್ಧಿಗಮ್ಯಂ ಸರ್ವಾನ್ತರತಮಂ ಕೂಟಸ್ಥಮ್ ಅಜಮ್ ಅಜರಮ್ ಅಮೃತಮ್ ಅಭಯಮ್ ಶ್ರೋತ್ರಾದೇರಪಿ ಶ್ರೋತ್ರಾದಿ ತತ್ಸಾಮರ್ಥ್ಯನಿಮಿತ್ತಮ್ ಇತಿ॥

-ಕೇ. ಭಾ.೧-೨-೧೭

(೬) ತಥಾ ಮನಸಃ ಅನ್ತಃಕರಣಸ್ಯ ಮನಃ। ನ ಹಿ ಅನ್ತಃಕರಣಮ್ ಅನ್ತರೇಣ ಚೈತನ್ಯ ಜ್ಯೋತಿಷಾ ದೀಪಿತಂ ಸ್ವವಿಷಯಸಙ್ಕಲ್ಪಾಧ್ಯವಸಾಯಾದಿ ಸಮರ್ಥಂ ಸ್ಯಾತ್ । ತಸ್ಮಾತ್ ಮನಸೋಽಪಿ ಮನಃ ಇತಿ॥ -ಕೇ. ಭಾ.೧-೨-೧೮

ಬುದ್ಧೌ ಬೋಧೋ ನ ತದ್ಧರ್ಮಸ್ತಥೈವ ಸ್ಯಾದ್ ವಿಧರ್ಮತಃ ॥

ಬುದ್ಧೌ ಬೋಧೋ ನ ತದ್ಧರ್ಮಸ್ತಥೈವ ಸ್ಯಾದ್ ವಿಧರ್ಮತಃ ॥

-ಉಪ.ಪದ್ಯ.೧೭-೩೫.

೮೪. ಆತ್ಮನ ನಿಜವಾದ ಸ್ವರೂಪವನ್ನು ನಿರ್ಧರಿಸುವದಕ್ಕೆ ಹೊರಟವರಿಗೆ ಕ್ರಿಯಾಸಾಮಾನ್ಯವನ್ನು ಮಾಡುವದು, ಎಂದರೆ ಮಾತಾಡುವದು, ನೋಡುವದು, ಕೇಳುವದು, ಆಲೋಚಿಸುವದು- ಮುಂತಾದ ಕ್ರಿಯೆಗಳಿಂದ ಕೂಡಿರುವದು ಆತ್ಮನ ನಿಜವಾದ ಸ್ವರೂಪವಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. ಪೈರು ಕೊಯ್ಯುವವನು, ಅಡಿಗೆ ಮಾಡುವವನು- ಮುಂತಾದವು ಹೇಗೆ ಆಯಾ ಕ್ರಿಯೆಯಿಂದ ಬಂದ ಹೆಸರುಗಳೋ ಅವು ಹೇಗೆ ಮನುಷ್ಯನ ಪೂರ್ಣಸ್ವರೂಪವನ್ನು ತಿಳಿಸುವದಿಲ್ಲವೋ ಹಾಗೆ ಪ್ರಾಣಿ, ಮಾತಾಡುವವನು, ನೋಡುವವನು, ಕೇಳುವವನು, ಆಲೋಚಿಸು ವವನು -ಎಂಬುದೇ ಮುಂತಾದವು ಆಯಾ ಕ್ರಿಯೆಗಳಿರುವಾಗ ಆತ್ಮನಿಗೆ ಕೊಡಬಹು ದಾದ ಹೆಸರುಗಳಾಗಿರುತ್ತವೆಯೇ ಹೊರತು ಅವನಿಗೆ ಯಾವಾಗಲೂ ಇರುವ ಹೆಸರುಗಳಲ್ಲ. ಮಾತಾಡುತ್ತಿದ್ದರೆ ವಕ್ತೃವೇ -ಎಂಬ ನಿಯಮವಿದೆ; ಮಾತಾಡದೆ ಇರುವಾಗ, ಉದಾಹರಣೆಗೆ ಸುಮ್ಮನೆ ನೋಡುತ್ತಿರುವಾಗ, ವಕ್ತೃವಲ್ಲವೇ ಅಲ್ಲ. ಆದರೂ ಈ ಯಾವ ಕ್ರಿಯೆಯನ್ನು ಮಾಡುತ್ತಿರಲಿ ಮಾಡದಿರಲಿ, ಆತ್ಮನ ಸ್ವರೂಪವಾದ ಸಾಕ್ಷಿಚೈತನ್ಯವು ಇದ್ದೇ ಇರುವದು. ಆದ್ದರಿಂದ ಎಲ್ಲಾ

ಕ್ರಿಯಾವಸ್ಥೆಗಳನ್ನೂ ಕ್ರಿಯಾಭಾವದ ಅವಸ್ಥೆಗಳನ್ನೂ ವ್ಯಾಪಿಸಿಕೊಂಡಿರುವದರಿಂದ ಸಾಕ್ಷಿಸ್ವರೂಪವೇ ಆತ್ಮನು. ಆದ್ದರಿಂದ ಎಲ್ಲಿಯವರೆಗೆ ನೋಡುತ್ತೇನೆ, ಕೇಳುತ್ತೇನೆ- ಎಂದು ಮುಂತಾಗಿರುವ ರೂಪದಿಂದ ನಮ್ಮನ್ನು ನಾವು ಎಣಿಸಿಕೊಳ್ಳುವೆವೋ ಅಲ್ಲಿಯವರೆಗೆ ನಮ್ಮ ಸ್ವರೂಪವನ್ನು ನಾವು ಪೂರ್ಣವಾಗಿ ಅರಿಯೆವು; ಪ್ರಮಾತೃ ಸ್ವರೂಪವು ಪೂರ್ಣವಲ್ಲ. ಆ ಸ್ವರೂಪವನ್ನು ಬೆಳಗುವ, ಆ ಸ್ವರೂಪವಿಲ್ಲದಾಗಲೂ ಇರುವ, ಸಾಕ್ಷಿಚೈತನ್ಯವೇ ನಮ್ಮ ಸ್ವರೂಪವೆಂದು ಅರಿತು ಕೊಂಡರೇ ಪೂರ್ಣವಾಗಿ ಅರಿತುಕೊಂಡಂತೆ ಆಗುವದು.

(೧) ಪ್ರಾಣನ್ನೇವ ಪ್ರಾಣನಕ್ರಿಯಾಮೇವ ಕುರ್ವನ್ ಪ್ರಾಣೋ ನಾಮ ಪ್ರಾಣಸಮಾಖ್ಯಃ ಪ್ರಾಣಾಭಿಧಾನೋ ಭವತಿ। ಪ್ರಾಣನಕ್ರಿಯಾಕರ್ತೃತ್ವಾದ್ ಹಿ ಪ್ರಾಣಃ ಪ್ರಾಣಿತಿ ಇತ್ಯುಚ್ಯತೇ ನಾನ್ಯಾಂ ಕ್ರಿಯಾಂ ಕುರ್ವನ್। ಯಥಾ ಲಾವಕಃ, ಪಾಚಕಃ ಇತಿ। ತಸ್ಮಾತ್ ಕ್ರಿಯಾನ್ತರವಿಶಿಷ್ಟಸ್ಯ ಅನುಪಸಂಹಾರಾತ್ ಅಕೃತ್ಸ್ನೋ ಹಿ ಸಃ । ತಥಾ ವದನ್ ವದನಕ್ರಿಯಾಂ ಕುರ್ವನ್ ವಕ್ತೀತಿ ವಾಕ್। ಪಶ್ಯನ್ ಚಕ್ಷುಃ। ಚಷ್ಟೇ ಇತಿ ಚಕ್ಷುಃ, ದ್ರಷ್ಟಾ। ಶೃಣ್ವನ್ ಶೃಣೋತೀತಿ ಶ್ರೋತ್ರಮ್ ।....ಮನ್ವಾನೋ ಮನಃ । ಮನುತೇ ಇತಿ । ಜ್ಞಾನಶಕ್ತಿವಿಕಾಸಾನಾಂ ಸಾಧಾರಣಂ ಕರಣಂ ಮನಃ । ಮನುತೇ ಅನೇನ ಇತಿ । ಪುರುಷಸ್ತು ಕರ್ತಾ ಸನ್ ಮನ್ವಾನೋ ಮನಃ ಇತ್ಯುಚ್ಯತೇ । ತಾನ್ಯೇತಾನಿ ಪ್ರಾಣಾದೀನಿ ಅಸ್ಯ ಆತ್ಮನಃ ಕರ್ಮನಾಮಾನಿ, ಕರ್ಮಜಾನಿ ನಾಮಾನಿ ಕರ್ಮನಾಮಾನ್ಯೇವ । ನ ತು ವಸ್ತುಮಾತ್ರವಿಷಯಾಣಿ । ಅತಃ ನ ಕೃತ್ಸ್ನಾತ್ಮವಸ್ತ್ವವದ್ಯೋತಕಾನಿ । ಏವಂ ಹಿ ಅಸೌ ಆತ್ಮಾ ಪ್ರಾಣನಾದಿಕ್ರಿಯಯಾ ತತ್ತತ್ಕ್ರಿಯಾಜನಿತಪ್ರಾಣಾದಿನಾಮರೂಪಾಭ್ಯಾಂ ವ್ಯಾಕ್ರಿಯಮಾಣಃ, ಅವದ್ಯೋತ್ಯಮಾನೋಽಪಿ। ಸ ಯಃ ಅತಃ ಅಸ್ಮಾತ್ ಪ್ರಾಣನಾದಿಕ್ರಿಯಾಸಮುದಾಯಾದ್ ಏಕೈಕಂ ಪ್ರಾಣಂ ಚಕ್ಷುಃ ಇತಿ ವಾ ವಿಶಿಷ್ಟಂ ಅನುಪಸಂಹೃತೇತರವಿಶಿಷ್ಟಕ್ರಿಯಾತ್ಮಕಂ ಮನಸಾ ಅಯಮ್ ಆತ್ಮಾ ಇತಿ ಉಪಾಸ್ತೇ ಚಿನ್ತಯತಿ ನ ಸ ವೇದ ನ ಸ ಜಾನಾತಿ ಬ್ರಹ್ಮ । ಕಸ್ಮಾತ್? ಅಕೃತ್ಸ್ನೋ ಅಸಮಸ್ತೋ ಹಿ ಯಸ್ಮಾತ್ ಏಷಃ ಆತ್ಮಾ ಅಸ್ಮಾತ್ ಪ್ರಾಣನಾದಿಸಮುದಾಯಾತ್। ಅತಃ ಪ್ರವಿಭಕ್ತಃ ಏಕೈಕೇನ ವಿಶೇಷಣೇನ ವಿಶಿಷ್ಟಂ ಇತರಧರ್ಮಾನ್ತರಾನುಪಸಂಹಾರಾತ್ ಭವತಿ। ಯಾವತ್ ಅಯಮ್ ಏವಂ ವೇದ ಪಶ್ಯಾಮಿ, ಶೃಣೋಮಿ, ಸ್ಪೃಶಾಮಿ ಇತಿ ವಾ ಸ್ವಭಾವಪ್ರವೃತ್ತಿ ವಿಶಿಷ್ಟಂ ವೇದ ತಾವತ್ ಅಞ್ಜಸಾ ಕೃತ್ಸ್ನಮ್ ಆತ್ಮಾನಂ ನ ವೇದ॥ -ಬೃ.ಭಾ.೧-೪-೭-೧೩೧

(೨) ಕಥಂ ಪುನಃ ಪಶ್ಯನ್ ವೇದ ಇತಿ? ಆಹ - ಆತ್ಮೇತ್ಯೇವ । ಆತ್ಮೇತಿ ಪ್ರಾಣಾದೀನಿ ವಿಶೇಷಣಾನಿ ಯಾನ್ಯುಕ್ತಾನಿ ತಾನಿ ಯಸ್ಯ ಸ ಆಪ್ನುವನ್ ತಾನಿ ಆತ್ಮಾ ಇತ್ಯುಚ್ಯತೇ । ನ ತಥಾ ಕೃತ್ಸ್ನ ವಿಶೇಷಣೋಪಸಂಹಾರೀ ಸನ್ ಕೃತ್ಸ್ನೋ ಭವತಿ । ವಸ್ತುಮಾತ್ರರೂಪೇಣ ಹಿ ಪ್ರಾಣಾದ್ಯು ಪಾಧಿವಿಶೇಷಕ್ರಿಯಾಜನಿತಾನಿ ವಿಶೇಷಣಾನಿ ವ್ಯಾಪ್ನೋತಿ । ತಥಾ ಚ ವಕ್ಷ್ಯತಿ- 'ಧ್ಯಾಯತೀವ ಲೇಲಾಯತೀವ' ಇತಿ । ತಸ್ಮಾತ್ ಆತ್ಮಾ ಇತ್ಯೇವ ಉಪಾಸೀತ । ಏವಂ ಕೃತ್ಸ್ನೋ ಹಿ ಅಸೌ ಸ್ವೇನ ವಸ್ತುರೂಪೇಣ ಗೃಹ್ಯಮಾಣೋ ಭವತಿ। ಕಸ್ಮಾತ್ ಕೃತ್ಸ್ನಃ? ಇತ್ಯಾಶಙ್ಕ್ಯ ಆಹ, ಅತ್ರ ಅಸ್ಮಿನ್ ಆತ್ಮನಿ ಹಿ ಯಸ್ಮಾತ್ ನಿರುಪಾಧಿಕೇ ಜಲಸೂರ್ಯಪ್ರತಿಬಿಮ್ಬಭೇದಾಃ ಇವ ಆದಿತ್ಯೇ

ಪ್ರಾಣಾದ್ಯುಪಾಧಿಕೃತಾಃ ವಿಶೇಷಾಃ ಪ್ರಾಣಾದಿಕರ್ಮಜನಾಮಾಭಿಧೇಯಾಃ ಯಥೋಕ್ತಾಃ ಹಿ ಏತೇ ಏಕಮ್ ಅಭಿನ್ನತಾಂ ಭವನ್ತಿ ಪ್ರತಿಪದ್ಯನ್ತೇ॥ -ಬೃ. ಭಾ.೧-೪-೭-೧೩೩

೮೫. ಇನ್ನೊಂದು ವಿಷಯವನ್ನು ಪ್ರಸ್ತಾಪಿಸಿ ಈ ವಿಚಾರವನ್ನು ಉಪಸಂಹರಿಸುವೆವು. ಸಾಕ್ಷಿಯನ್ನೊಪ್ಪದಿದ್ದರೆ ಸರ್ವವಿಷಯಗಳನ್ನೂ ಅನುಸಂಧಾನ ಮಾಡುವದೆಂಬ ಅನುಭವವನ್ನು ಉಪಪಾದನೆಮಾಡುವದು ಆಗಲಾರದೆಂದು ಹಿಂದೆ (೭೮, ೮೦) ಹೇಳಿರುತ್ತೇವಷ್ಟೆ. ಇದರ ಅಭಿಪ್ರಾಯವನ್ನು ಚೆನ್ನಾಗಿ ಗ್ರಹಿಸದೆ ಇರುವವರು ಕೆಲವರು ಶಂಕಿಸುವದೇನೆಂದರೆ ಯಾವ ನಾನು ಶಬ್ದವನ್ನು ಕೇಳಿದೆನೋ ಆ ನಾನೇ ರೂಪವನ್ನು ನೋಡುತ್ತಿದೇನೆ ಎಂದು ಪ್ರಮಾತ್ರೈಕ್ಯವನ್ನು ಗುರುತಿಸುವದಕ್ಕೆ ಒಬ್ಬ ಸಾಕ್ಷಿಯು ಬೇಕಷ್ಟೆ. ಆ ಪ್ರಮಾತೃವು ಪ್ರತಿಯೊಂದು ಶರೀರಕ್ಕೂ ಬೇರೆ ಬೇರೆಯಾಗಿರುವದರಿಂದ ಒಬ್ಬೊಬ್ಬ ಪ್ರಮಾತೃವಿಗೂ ಒಬ್ಬೊಬ್ಬ ಸಾಕ್ಷಿಯು ಬೇಕು. ಹಾಗಿಲ್ಲದಿದ್ದರೆ ಚೈತ್ರನು ಅರಿತದ್ದನ್ನು ಮೈತ್ರನೂ ಅರಿತನು ಎಂದು ಅನುಸಂಧಾನ ಮಾಡಬಹುದಾಗುತ್ತದೆ. ಈ ಕಾರಣದಿಂದ ಪ್ರಮಾತೃಗಳಂತೆ ಜೀವಸಾಕ್ಷಿಗಳೂ ಬೇರೆಬೇರೆಯಾಗಿರಬೇಕೆಂದು ಅವರ ಅಭಿಪ್ರಾಯವಿರುತ್ತದೆ.

ಈ ಅಭಿಪ್ರಾಯವು ಸರಿಯಲ್ಲ. ಏಕೆಂದರೆ ಸಾಕ್ಷಿಯು ಉಪನಿಷನ್ಮಾತ್ರವೇದ್ಯನೆಂದು ಹಿಂದೆ (೭೭) ತಿಳಿಸಿದ್ದಾಗಿದೆ. ಆದರೆ ಯಾವ ಉಪನಿಷತ್ತಿನಲ್ಲಿಯೂ ಅನೇಕ ಸಾಕ್ಷಿಗಳನ್ನು ಹೇಳಿಲ್ಲ. ಅದಕ್ಕೆ ಬದಲು ಒಬ್ಬನೇ ಸಾಕ್ಷಿಯು ಎಲ್ಲಾ ಭೂತಗಳಲ್ಲಿಯೂ ಇರುವನೆಂದು **ಶ್ವೇತಾಶ್ವತರೋಪನಿಷತ್ತಿನಲ್ಲಿ** ಸುಸ್ಪಷ್ಟವಾಗಿ ಹೇಳಿರುತ್ತದೆ (ಶ್ವೇ. ೬-೧೧). ಎಲ್ಲಾ ವಿಷಯಗಳನ್ನೂ ಅನುಸಂಧಾನಮಾಡುವವನೊಬ್ಬನಿರಬೇಕೆಂಬ ಯುಕ್ತಿಯಿಂದ ಸಾಕ್ಷಿಯನ್ನು ಅನುಮಾನಿಸಬೇಕಾದದ್ದೂ ಇರುವದಿಲ್ಲ. ಏಕೆಂದರೆ ಸಾಕ್ಷಿಯು ಸ್ವಯಂಸಿದ್ಧನಾಗಿರುತ್ತಾನೆಂದೂ ಶಾಸ್ತ್ರವು ಸಾಕ್ಷ್ಯದ ಧರ್ಮವನ್ನು ಸಾಕ್ಷಿಯಲ್ಲಿಲ್ಲವೆಂದು ತಿಳಿಸುವದರಿಂದ ಮಾತ್ರವೇ ಆತ್ಮನ ವಿಷಯಕ್ಕೆ ಪ್ರಮಾಣವೆನಿಸಿರುವದೆಂದೂ (೫೩) ಹಿಂದೆ ತಿಳಿಸಿಕೊಟ್ಟಿರುತ್ತೇವೆ. ಆತ್ಮನನ್ನು ತರ್ಕದಿಂದ ಸಾಧಿಸುವದಾದರೆ ಆ ತರ್ಕವನ್ನು ಒಪ್ಪದವರೂ, ಅಥವಾ ತರ್ಕವನ್ನು ಮತ್ತೊಂದು ವಿಧವಾಗಿಯೂ ಹೊಂದಿಸಬಹುದೆಂದು ಹೇಳುವವರೂ, ಸಾಕ್ಷಿಯನ್ನು ಒಪ್ಪದೆಯೂ ಇರಬಹುದಾಗುವದು. **ಸಾಕ್ಷಿಯನ್ನು ಪ್ರಮಾಣದಿಂದಲಾಗಲಿ ತರ್ಕದಿಂದಲಾಗಲಿ ಸಾಧಿಸುವದಕ್ಕಾಗಲಿ ನಿರಾಕರಿಸುವದಕ್ಕಾಗಲಿ ಹೊರಡುವವನೇ ಪ್ರಮಾಣತರ್ಕಗಳಿಗೂ ಸಾಕ್ಷಿಯಾಗಿರುವದರಿಂದ ಅವನನ್ನು ಇಲ್ಲವೆನ್ನುವದು ಯಾರಿಂದಲೂ ಆಗಲಾರದೆಂಬುದೇ ಸರಿಯಾದ ಸಿದ್ಧಾಂತವು.** ಸಾಕ್ಷಿಗಳು ಅನೇಕರೆಂದು ವಾದಕ್ಕಾಗಿ ಒಪ್ಪಿಕೊಂಡರೂ ಅವರ ಅನೇಕತ್ವವನ್ನು

ಅರಿಯುವದಕ್ಕೆ ಒಬ್ಬ ಸಾಕ್ಷಿಯು ಬೇಕಾಗುವದರಿಂದಲೂ ಸಾಕ್ಷಿಗಳು ಸಾಕ್ಷ್ಯರೂಪರೆಂದು ಒಪ್ಪುವವರು ವ್ಯಾಹತವಚನದವರಾಗುವದರಿಂದಲೂ ಸಾಕ್ಷಿನಾನಾತ್ವವು ತರ್ಕವಿರುದ್ಧವೂ ಆಗುತ್ತದೆ. ಆದ್ದರಿಂದ ಒಂದು ಅಂತಃಕರಣದ ವೃತ್ತಿಗಳಿಗೆಲ್ಲ ಒಬ್ಬ ಸಾಕ್ಷಿಯಿರುವಂತೆ ಎಲ್ಲಾ ಅಂತಃಕರಣಗಳಿಗೂ ಒಬ್ಬನೇ ಸಾಕ್ಷಿಯೆಂದೂ ಆ ಒಬ್ಬ ಸಾಕ್ಷಿಯಲ್ಲಿಯೇ ಉಪಾಧಿವಶದಿಂದ ನಾನಾಪ್ರಮಾತೃತ್ವದ ವ್ಯವಹಾರವು ಉಂಟಾಗಿರುವದೆಂದೂ ತಿಳಿಯಬೇಕು. ಈ ವಿಷಯವನ್ನು ಮುಂದೆ (೧೪೦) ಮತ್ತೆ ಪ್ರಸ್ತಾಪಿಸಲಾಗುವದು.

ಇನ್ನು ಆತ್ಮೈಕತ್ವವಾದದಲ್ಲಿ ಇದನ್ನು ಮಾಡಬೇಕು, ಇದನ್ನು ಮಾಡಬಾರದು- ಎಂಬ ಶಾಸ್ತ್ರವು ಹೇಗೆ ಹೊಂದುತ್ತದೆ ? ಇಂಥವನಿಗೆ ಇಂಥ ಧರ್ಮ ಎಂಬ ನಿಯಮವಿರುವದಕ್ಕೇ ಕಾರಣವಿರುವದಿಲ್ಲವಲ್ಲ ! ಇದಲ್ಲದೆ ಒಬ್ಬನು ಮಾಡಿದ್ದರ ಫಲವಿನ್ನು ಇನ್ನೊಬ್ಬನು ಅನುಭವಿಸಬೇಕಾಗುವದಲ್ಲ ! ಒಬ್ಬನು ಅನುಭವಿಸಿದ್ದನ್ನು ಇನ್ನೊಬ್ಬನು ಅನುಸಂಧಾನಮಾಡಬೇಕಾಗುವದಲ್ಲ !- ಎಂದು ಆಕ್ಷೇಪಿಸಬಹುದು. ಆದರೆ ಪ್ರಮಾತೃವಾದ ಜೀವನು ದೇಹಾದ್ಯುಪಾಧಿಗಳಿಂದ ಜೀವನೆನಿಸಿರುವದರಿಂದ ಉಪಾಧಿಗಳು ಬೇರೆಬೇರೆಯಾಗಿರುವಲ್ಲಿ ಜೀವೈಕ್ಯವಿರುವದಿಲ್ಲವಾದ್ದರಿಂದ ಈ ದೋಷವು ಬರುವದಿಲ್ಲ. ಇದನ್ನು ಮುಂದೆ (೧೩೮) ಜೀವವಿಚಾರದಲ್ಲಿ ವಿವರಿಸುವೆವು.

(೧) ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥
-ಶ್ವೇ.೬-೧೧.

(೨) ಯಥಾತ್ಮಬುದ್ಧಿಚಾರಾಣಾಂ ಸಾಕ್ಷೀ ತದ್ವತ್ ಪರೇಷ್ವಪಿ ।
ನೈವಾಪೋಢುಂ ನ ವಾಽಽದಾತುಂ ಶಕ್ಯಸ್ತಸ್ಮಾತ್ಪರೋ ಹ್ಯಹಮ್ ॥
-ಉಪ. ಪದ್ಯ. ೭-೨.

(೩) ಉಪಾಧಿತನ್ತ್ರೋ ಹಿ ಜೀವಃ ಇತ್ಯುಕ್ತಮ್ । ಉಪಾಧ್ಯಸನ್ತಾನಾಚ್ಚ ನಾಸ್ತಿ ಜೀವಸನ್ತಾನಃ ॥
-ಸೂ.ಭಾ.೨-೩-೪೯-೧೬೭

# ೧೨. ಆತ್ಮನಿಗೆ ಜಗತ್ಕಾರಣತ್ವ

೮೬. ಬ್ರಹ್ಮವು ನಿರ್ವಿಶೇಷವಾಗಿರುವದರಿಂದ ಅದನ್ನು ಸ್ವರೂಪದಿಂದಲೇ ತಿಳಿಸುವದು ಆಗಲಾರದು. ಅದರಲ್ಲಿ ಸಾಕ್ಷಿತ್ವವನ್ನು ಅಧ್ಯಾರೋಪಮಾಡಿ ಅದಕ್ಕೆ ಸಾಕ್ಷ್ಯದ ಧರ್ಮಗಳಿರುವದಿಲ್ಲವೆಂದು ತೋರಿಸಿಕೊಡುವಂತೆಯೇ ಜಗತ್ಕಾರಣತ್ವವನ್ನು ಅಧ್ಯಾರೋಪಮಾಡಿ ಅದರಲ್ಲಿ ಕಾರ್ಯರೂಪವಾದ ಜಗತ್ತು ಇಲ್ಲವೇ ಇಲ್ಲವೆಂದು ತೋರಿಸಿಕೊಟ್ಟಿರುತ್ತದೆ. ಕಾರಣ, ಪ್ರಕೃತಿ- ಇವು ಪರ್ಯಾಯಗಳು; ಕಾರ್ಯ, ವಿಕೃತಿ, ವಿಕಾರ- ಇವೂ ಪರ್ಯಾಯಗಳು.

ಮಣ್ಣಿನಿಂದ ಹುಟ್ಟಿ ಮಣ್ಣಿನಲ್ಲಿಯೇ ಇದ್ದು ಮಣ್ಣಿನಲ್ಲಿಯೇ ಲಯವಾಗುವ ಗಡಿಗೆ ಮಡಕೆ ಕುಡಿಕೆ ಮುಂತಾದವುಗಳು ಮಣ್ಣಿಗಿಂತ ಬೇರೆಯಾಗಿರುವದಿಲ್ಲ; ಅದರಂತೆ ಬ್ರಹ್ಮದಿಂದ ಹುಟ್ಟಿ ಬ್ರಹ್ಮದಲ್ಲಿಯೇ ಇದ್ದು ಬ್ರಹ್ಮದಲ್ಲಿಯೇ ಲಯವಾಗುವ ಜಗತ್ತು ಬ್ರಹ್ಮಕ್ಕಿಂತ ಬೇರೆಯಾಗಿರುವದಿಲ್ಲ. ಆದ್ದರಿಂದಲೇ ಮಣ್ಣೊಂದನ್ನು ತಿಳಿದರೆ ಅದರ ಕಾರ್ಯವನ್ನೆಲ್ಲ ತಿಳಿದಂತಾಯಿತೆಂದು ಶ್ರುತಿ ಹೇಳುತ್ತದೆ, ಕಾರ್ಯವು ಬರಿಯ ಮಾತಿನಿಂದಾದ ಹೆಸರು ಮಾತ್ರ, ಎಂದೂ ಹೇಳುತ್ತದೆ; ಆ ದೃಷ್ಟಾಂತಬಲದಿಂದ ಬ್ರಹ್ಮವೊಂದನ್ನು ತಿಳಿದರೆ ಜಗತ್ತೆಲ್ಲವನ್ನೂ ತಿಳಿದಂತಾಯಿತೆಂದೂ ಹೇಳುತ್ತದೆ.

(೧)''ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ''-(ಛಾಂ.೩-೧೪-೧) ಸರ್ವಮಿದಂ ವಿಕಾರಜಾತಂ ಬ್ರಹ್ಮೈವ ತಜ್ಜತ್ವಾತ್, ತಲ್ಲತ್ವಾತ್, ತದನತ್ವಾಚ್ಚ॥ - ಸೂ. ಭಾ. ೧-೨-೧-೧೪೭

(೨) ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ದೃಷ್ಟಾನ್ತಾಪೇಕ್ಷಾಯಾಮ್ ಉಚ್ಯತೇ ''ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮಿತಿ'' (ಛಾಂ. ೬-೧-೪) ಇತಿ । ಏತದುಕ್ತಂ ಭವತಿ- ಏಕೇನ ಮೃತ್ಪಿಣ್ಡೇನ ಪರಮಾರ್ಥತೋ ಮೃದಾತ್ಮನಾ ವಿಜ್ಞಾತೇನ ಸರ್ವಂ ಮೃನ್ಮಯಂ ಘಟಶರಾವೋದಞ್ಚನಾದಿಕಂ ಮೃದಾತ್ಮಕತ್ವಾವಿಶೇಷಾತ್ ವಿಜ್ಞಾತಂ ಭವೇತ್ । ಯತೋ ವಾಚಾರಮ್ಭಣಂ ವಿಕಾರೋ ನಾಮಧೇಯಮ್ ವಾಚೈವ ಕೇವಲಮ್ ಅಸ್ತೀತ್ಯಾರಭ್ಯತೇ ವಿಕಾರಃ, ಘಟಃ ಶರಾವಃ, ಉದಞ್ಚನಂ ಚ ಇತಿ । ನ ತು ವಸ್ತುವೃತ್ತೇನ ವಿಕಾರೋ ನಾಮ ಕಶ್ಚಿತ್ ಅಸ್ತಿ। ನಾಮಧೇಯಮಾತ್ರಂ ಹ್ಯೇತತ್ ಅನೃತಮ್ । ಮೃತ್ತಿಕಾ ಇತ್ಯೇವ ಸತ್ಯಮಿತಿ । ಏಷ ಬ್ರಹ್ಮಣೋ ದೃಷ್ಟಾನ್ತಃ ಆಮ್ನಾತಃ । ತತ್ರ ಶ್ರುತಾತ್ ವಾಚಾರಮ್ಭಣಶಬ್ದಾತ್ ದಾರ್ಷ್ಟಾನ್ತಿಕೇಽಪಿ ಬ್ರಹ್ಮವ್ಯತಿರೇಕೇಣ ಕಾರ್ಯಜಾತಸ್ಯ ಅಭಾವಃ ಇತಿ ಗಮ್ಯತೇ॥ -ಸೂ.ಭಾ. ೨-೧-೧೪-೪೩೩

೮೭. ಶ್ರುತಿಯಲ್ಲಿ ಹೇಳಿರುವ ಜಗತ್ಕಾರಣವಾದದಿಂದ ಜಗತ್ತು ಬ್ರಹ್ಮಕ್ಕಿಂತ ವ್ಯತಿರಿಕ್ತವಾಗಿಲ್ಲ ಎಂಬ ಸಿದ್ಧಾಂತವೇ ಅಲ್ಲದೆ ಅಚೇತನವಾದ ಪ್ರಧಾನ, ಪರಮಾಣು

ಗಳು- ಮುಂತಾದ ಕಾರಣಗಳನ್ನು ಹೇಳುವ ಸಾಂಖ್ಯವೈಶೇಷಿಕಾದಿಗಳ ಮತವು ಸರಿಯಲ್ಲವೆಂಬ ಉಪಸಿದ್ಧಾಂತವೂ ಏರ್ಪಡುತ್ತದೆ. ಆದ್ದರಿಂದ ಜಗತ್ತು ತೋರುತ್ತಿರುವದರಿಂದಲೂ ವ್ಯವಹಾರಕ್ಕೆ ಉಪಯೋಗವಾಗುತ್ತಿರುವದರಿಂದಲೂ ಅದು ಸತ್ಯವಾಗಿರಬೇಕೆಂದು ನಂಬಿರುವ ಜನರಿಗೆ **ಅಚೇತನವಾದದ್ದು ಯಾವದೂ ಕಾರಣವಲ್ಲವೆಂದು ತಿಳಿಯಪಡಿಸುವದಕ್ಕಾಗಿ ಜಗತ್ಕಾರಣವಾದವನ್ನು ಉಪದೇಶಿಸಿದೆಯೇ ಹೊರತು ಬ್ರಹ್ಮವು ನಿಜವಾಗಿ ಕಾರ್ಯಕಾರಣಭಾವವುಳ್ಳದ್ದು ಎಂಬ ಅಭಿಪ್ರಾಯದಿಂದಲ್ಲ.** ಶ್ರುತಿಯ ಅಭಿಪ್ರಾಯವನ್ನು ಚೆನ್ನಾಗಿ ತಿಳಿದುಕೊಂಡಿರುವವರಿಗೆ ಜನ್ಮರಹಿತವೂ ಅದ್ವಿತೀಯವೂ ಎಲ್ಲರ ಆತ್ಮನೂ ಆಗಿರುವದೇ ಬ್ರಹ್ಮವೆಂದು ಸ್ಪಷ್ಟವಾಗಿ ಮನದಟ್ಟಾಗಿರುತ್ತದೆ.

(೧) ಉಪಲಮ್ಭಾತ್ ಸಮಾಚಾರಾದಸ್ತಿ ವಸ್ತುತ್ವವಾದಿನಾಮ್।
ಜಾತಿಸ್ತು ದೇಶಿತಾ ಬುದ್ಧೈರಜಾತೇಸ್ತ್ರಸತಾಂ ಸದಾ ॥ -ಮಾಂ. ಕಾ. ೪-೪೨.

(೨) ಅಸ್ತಿ ವಸ್ತುಭಾವಃ ಇತಿ ವದನಶೀಲಾನಾಂ ದೃಢಾಗ್ರಹವತಾಂ ಶ್ರದ್ಧಧಾನಾನಾಂ ಮನ್ದವಿವೇಕಿನಾಮ್ ಅರ್ಥೋಪಾಯತ್ವೇನ ಸಾ ದೇಶಿತಾ ಜಾತಿಃ। ತಾಂ ಗೃಹ್ಣನ್ತು ತಾವತ್। ವೇದಾನ್ತಾಭ್ಯಾಸಿನಾಂ ತು ಸ್ವಯಮೇವ ಅಜಾದ್ವಯಾತ್ಮವಿಷಯೋ ವಿವೇಕೋ ಭವಿಷ್ಯತಿ ಇತಿ। ನ ತು ಪರಮಾರ್ಥಬುದ್ಧ್ಯಾ॥ -ಮಾಂ.ಕಾ.ಭಾ.೪-೪೨-೨೮೭

೮೮. ಜಗತ್ತಿಗೆ ಪ್ರಧಾನಾದಿಗಳು ಕಾರಣವೆಂದು ಹೇಳುವವರ ಮತಗಳು ಸರಿಯಲ್ಲವೆಂಬುದನ್ನು ಜಗತ್ತಿನ ಸ್ವಭಾವವಿಮರ್ಶೆಯಿಂದಲೂ ಶ್ರುತಿಯ ಬಲದಿಂದಲೂ ನಿರ್ಣಯಿಸಬಹುದು.. ಈ ಜಗತ್ತು ನಾಮರೂಪಗಳಾಗಿ ವಿಂಗಡಿಸಿಕೊಂಡಿದೆ; ಅನೇಕ ಕರ್ತೃಭೋಕ್ತೃಗಳಿಂದ ಕೂಡಿರುತ್ತದೆ; ಇಂಥ ದೇಶದಲ್ಲಿ ಇಂಥ ಕಾಲದಲ್ಲಿ ಇಂಥ ನಿಮಿತ್ತಗಳಿಂದಾಗುವ ಇಂಥ ಕ್ರಿಯೆಗೆ ಇಂಥಿಂಥ ಫಲಗಳು ಎಂಬ ವ್ಯವಸ್ಥೆಯುಳ್ಳದ್ದಾಗಿದೆ. ಇದರ ರಚನೆಯು ಹೀಗಾಗಿರಬೇಕೆಂದು ಎಂಥ ಪ್ರಜ್ಞಾವಂತರಾದ ಶಿಲ್ಪಿಗಳೂ ಮನಸ್ಸಿನಿಂದ ಊಹಿಸುವದಕ್ಕೆ ಕೂಡ ಆಗುವಂತಿಲ್ಲ. ಇಂಥ ಜಗತ್ತಿನ ಸೃಷ್ಟಿಯು ಇದರ ಸ್ವಭಾವವನ್ನು ಬಲ್ಲ ಸರ್ವಜ್ಞನಾದ ಇದೆಲ್ಲವನ್ನೂ ಸೃಷ್ಟಿಸಬಲ್ಲ ಸರ್ವಶಕ್ತನಾದ ಪರಮೇಶ್ವರನಿಂದಲ್ಲದೆ ಅಚೇತನವಾದ ಪ್ರಧಾನದಿಂದಲಾಗಲಿ ಅಣುಗಳಿಂದಲಾಗಲಿ ಅಭಾವದಿಂದಲಾಗಲಿ ಅಥವಾ ಅಸರ್ವಜ್ಞನೂ ಅಲ್ಪಶಕ್ತಿಯುತನೂ ಆದ ಯಾವನಾದರೊಬ್ಬ ಸಂಸಾರಿಯಿಂದಲಾಗಲಿ ಆಗಲಾರದು. ಜಗತ್ತಿನ ಸ್ವಭಾವವೇ ಹೀಗೆಂದೂ ಇದಕ್ಕೆ ಯಾವ ಕಾರಣವೂ ಬೇಕಿಲ್ಲವೆಂದೂ ಹೇಳುವಹಾಗಿಲ್ಲ; ಏಕೆಂದರೆ ದೇಶಕಾಲನಿಮಿತ್ತಗಳ ವ್ಯವಸ್ಥೆಯು ಕ್ರಿಯಾಫಲಗಳಿಗೆ ಬೇಕಾಗಿದೆ ಎಂದು ತಿಳಿಸಿರುತ್ತೇವೆ. ಶ್ರುತಿಪ್ರಮಾಣಕ್ಕಂತೂ ಸಾಂಖ್ಯಾದಿವಾದಗಳೂ

ವಿರುದ್ಧವಾಗಿಯೇ ಇವೆ. ಏಕೆಂದರೆ ಬ್ರಹ್ಮವೇ ಜಗತ್ಕಾರಣವೆಂದೂ ಬ್ರಹ್ಮವು ಆಲೋಚಿಸಿ ಸೃಷ್ಟಿಸುವ ಚೇತನವೆಂದೂ ಸ್ಪಷ್ಟವಾಗಿ ಶ್ರುತಿಯಲ್ಲಿ ಹೇಳಿರುತ್ತದೆ.

(೧) ಅಸ್ಯ ಜಗತೋ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲನಿಮಿತ್ತಕ್ರಿಯಾಫಲಾಶ್ರಯಸ್ಯ ಮನಸಾಪಿ ಅಚಿನ್ತ್ಯರಚನಾರೂಪಸ್ಯ ಜನ್ಮಸ್ಥಿತಿಭಙ್ಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾತ್ ಭವತಿ 'ತದ್ ಬ್ರಹ್ಮ' ಇತಿ ವಾಕ್ಯಶೇಷಃ ||....ನ ಯಥೋಕ್ತವಿಶೇಷಣಸ್ಯ ಜಗತಃ ಯಥೋಕ್ತವಿಶೇಷಣಮ್ ಈಶ್ವರಂ ಮುಕ್ತ್ವಾ ಅನ್ಯತಃ ಪ್ರಧಾನಾತ್ ಅಚೇತನಾತ್, ಅಣುಭ್ಯಃ, ಅಭಾವಾತ್, ಸಂಸಾರಿಣೋ ವಾ ಉತ್ಪತ್ತ್ಯಾದಿ ಸಂಭಾವಯಿತುಂ ಶಕ್ಯಮ್। ನ ಚ ಸ್ವಭಾವತಃ। ವಿಶಿಷ್ಟದೇಶಕಾಲನಿಮಿತ್ತಾನಾಮ್ ಇಹ ಉಪಾದಾನಾತ್।। -ಸೂ. ಭಾ. ೧-೧-೨-೨೪,೨೬

(೨) ನ ಸಾಂಖ್ಯಪರಿಕಲ್ಪಿತಮ್ ಅಚೇತನಂ ಪ್ರಧಾನಂ ಜಗತಃ ಕಾರಣಂ ಶಕ್ಯಂ ವೇದಾನ್ತೇಷು ಆಶ್ರಯಿತುಮ್ । ಅಶಬ್ದಂ ಹಿ ತತ್। ಕಥಮಶಬ್ದತ್ವಮ್ ? ಈಕ್ಷತೇಃ। ಈಕ್ಷಿತೃತ್ವಶ್ರವಣಾತ್ ಕಾರಣಸ್ಯ।। -ಸೂ. ಭಾ.೧-೧-೫-೬೭

(೩) ಯತೋ ವಾ ಇಮಾನಿ ಭೂತಾನಿ ಜಾಯನ್ತೇ। ಯೇನ ಜಾತಾನಿ ಜೀವನ್ತಿ। ಯತ್ಪ್ರಯನ್ತ್ಯಭಿಸಂವಿಶನ್ತಿ। ತದ್ವಿಜಿಜ್ಞಾಸಸ್ವ। ತದ್ಬ್ರಹ್ಮೇತಿ।। -ತೈ.೩-೧.

(೪) ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ। ತತ್ತೇಜೋಽಸೃಜತ।।

-ಸೂ. ಭಾ.೧-೧-೫.

(೫) ಆತ್ಮಾ ವಾ ಇದಮೇಕ ಏವಾಗ್ರ ಆಸೀತ್। ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ ಇಮಾನ್ನು ಲೋಕಾನ್ನು ಸೃಜಾ ಇತಿ। ಸ ಇಮಾಲ್ಲೋಕಾನಸೃಜತ।। -ಐ.೧-೧-೨.

(೬) ಸ ಈಕ್ಷಾಂಚಕ್ರೇ। ಸ ಪ್ರಾಣಮಸೃಜತ।। -ಪ್ರ.೬-೩, ೪.

(೭) ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ।

ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ।। -ಮುಂ. ೧-೧-೯-೨೪

೮೯. ಚೇತನವಾದ ಬ್ರಹ್ಮವು ಜಗತ್ತಿಗೆ ಉಪಾದಾನಕಾರಣವೆಂಬುದು ಲೋಕಾನುಭವಕ್ಕೆ ವಿರುದ್ಧವಾಗಿರುತ್ತದೆ. ಏಕೆಂದರೆ ಚೇತನನಾದ ಕುಂಬಾರನು ಗಡಿಗೆಗೆ ನಿಮಿತ್ತಕಾರಣನಾಗಿರುತ್ತಾನೆಯೇ ಹೊರತು ಮಣ್ಣಿನಂತೆ ಉಪಾದಾನ ಕಾರಣನಾಗಿರುವದಿಲ್ಲ. ಆದ್ದರಿಂದ ಬ್ರಹ್ಮವು ಜಗತ್ತಿಗೆ ಕಾರಣವಾದರೆ ಬರಿಯ ನಿಮಿತ್ತವಾಗಿರುತ್ತದೆ ಎಂದಷ್ಟೇ ಸಿದ್ಧವಾಗುತ್ತದೆ. ಆದ್ದರಿಂದ ಪ್ರಧಾನವಾದಿಗಳು ಹೇಳುವಂತೆ ಪ್ರಧಾನವೋ ಅಥವಾ ವೈಶೇಷಿಕರು ಹೇಳುವಂತೆ ಪರಮಾಣುಗಳೋ ಜಗತ್ತಿಗೆ ಉಪಾದಾನಕಾರಣವಾಗಿರಬೇಕೆಂದು ಏತಕ್ಕೆ ತರ್ಕಿಸಬಾರದು? -ಎಂಬ ಶಂಕೆಯೊಂದು ಉಂಟಾಗಬಹುದು. ವೈಶೇಷಿಕರ ಮತದಂತೆ ನೂಲು ಬಟ್ಟೆಗೆ ಸಮವಾಯಿಕಾರಣವು ; ನೂಲುಗಳ ಸಂಯೋಗವು ಅದಕ್ಕೆ ಅಸಮವಾಯಿ

ಕಾರಣವು. ನೇಯುವವನು ನಿಮಿತ್ತಕಾರಣನು. (ವೈಶೇಷಿಕರು ಕಾರಣವನ್ನು ಸಮವಾಯಿ, ಅಸಮವಾಯಿ, ನಿಮಿತ್ತ- ಎಂದು ಮೂರು ಬಗೆಯಾಗಿ ವಿಂಗಡಿಸಿರುತ್ತಾರೆ; ಸಾಂಖ್ಯರೂ ವೇದಾಂತಿಗಳೂ ನಿಮಿತ್ತಕಾರಣವಲ್ಲದ್ದನ್ನೆಲ್ಲ ಉಪಾದಾನಕಾರಣದಲ್ಲಿಯೇ ಅಡಕಮಾಡಿರುತ್ತಾರೆ.)

ಆದರೆ ಈಶ್ವರನು ಕೇವಲ ನಿಮಿತ್ತಕಾರಣನೆಂಬ ವಾದವು ತರ್ಕವಿರುದ್ಧವಾಗಿರುತ್ತದೆ. ಏಕೆಂದರೆ ಜಗತ್ತಿಗೆ ಉಪಾದಾನಕಾರಣವು ಯಾವದೂ ಸಿದ್ಧವಾಗಿರುವದಿಲ್ಲ; ಈಶ್ವರನು ನಮ್ಮಗಳಿಗೆ ಪ್ರತ್ಯಕ್ಷಾದಿಗಳಿಂದ ಗೊತ್ತಿಲ್ಲದ ಯಾವದೋ ಒಂದು ಉಪಾದಾನವನ್ನು ಉಪಯೋಗಿಸಿಕೊಂಡು ಜಗತ್ತನ್ನು ನಿರ್ಮಿಸುತ್ತಾನೆಂದು ಕಲ್ಪಿಸುವದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ. ಕುಂಬಾರನ ದೃಷ್ಟಾಂತದಿಂದ ಹಾಗೆಂದು ಕಲ್ಪಿಸುವದಕ್ಕೆ ಹೊರಟರೆ, ಅಥವಾ ರಾಜನ ದೃಷ್ಟಾಂತದಿಂದ ಜಗತ್ತಿಗೆ ಒಬ್ಬ ಈಶ್ವರನಿರಬೇಕೆಂದು ಕಲ್ಪಿಸಿದರೆ, ಈಶ್ವರನೂ ಕುಂಬಾರನಂತೆ ಅಥವಾ ರಾಜನಂತೆ ಸಂಸಾರಿಯಾಗುತ್ತಾನೆ, ಜಗತ್ತನ್ನು ಸೃಷ್ಟಿಸಬಲ್ಲ ಈಶ್ವರನಾಗಲಾರನು. ಈಶ್ವರ, ಜೀವರು, ಉಪಾದಾನಕಾರಣ- ಎಂದು ಒಂದನ್ನೊಂದು ಪರಿಚ್ಛೇದಗೊಳಿಸುವ ವಸ್ತುತ್ರಯವನ್ನು ಕಲ್ಪಿಸಿದರೆ ಈಶ್ವರನು ಪರಿಚ್ಛಿನ್ನನೆಂಬ ಅನಿಷ್ಟವು ಬಂದೊದಗುವದು. ಪರಮಾತ್ಮನು ಬಹುವಾಗುವೆನು- ಎಂದು ಯೋಚಿಸಿ ಸೃಷ್ಟಿಸಿದನು ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿರುವದರಿಂದಲೂ ಬ್ರಹ್ಮದಿಂದಲೇ ಸೃಷ್ಟಿಪ್ರಲಯಗಳಾಗುವವೆಂದೂ ಅದೇ ತನ್ನನ್ನು ತಾನೇ ಮಾಡಿಕೊಂಡಿತೆಂದು ಹೇಳುವದರಿಂದಲೂ ಕೇವಲ ನಿಮಿತ್ತಕಾರಣವಾದವು ಶ್ರುತಿವಿರುದ್ಧವೂ ಆಗಿರುತ್ತದೆ. ಈ ನಿಮಿತ್ತಕಾರಣವಾದವನ್ನು **ಶಾರೀರಕದ ಪತ್ಯಧಿಕರಣದ** (೨-೨-೩೭ ರಿಂದ ೪೧ರ ವರೆಗಿನ ಸೂತ್ರದ) ಭಾಷ್ಯದಲ್ಲಿ ಖಂಡಿಸಿರುತ್ತದೆ.

(೧) ನ ಹಿ ಅಪ್ರತ್ಯಕ್ಷಂ ರೂಪಾದಿಹೀನಂ ಚ ಪ್ರಧಾನಮ್ ಈಶ್ವರಸ್ಯ ಅಧಿಷ್ಠೇಯಂ ಸಂಭವತಿ । ಮೃದಾದಿವೈಲಕ್ಷಣ್ಯಾತ್॥ -ಸೂ. ಭಾ. ೨-೨-೩೯-೭೭

(೨) ಸಾಧಿಷ್ಠಾನೋ ಹಿ ಲೋಕೇ ಸಶರೀರೋ ರಾಜಾ ರಾಷ್ಟ್ರಸ್ಯ ಈಶ್ವರೋ ದೃಶ್ಯತೇ, ನ ನಿರಧಿಷ್ಠಾನಃ । ಅತಶ್ಚ ತದ್ದೃಷ್ಟಾನ್ತವಶೇನ ಅದೃಷ್ಟಮ್ ಈಶ್ವರಂ ಕಲ್ಪಯಿತುಮ್ ಇಚ್ಛತಃ, ಈಶ್ವರಸ್ಯಾಪಿ ಕಿಂಚಿತ್ ಶರೀರಂ ಕರಣಾಯತನಂ ವರ್ಣಯಿತವ್ಯಂ ಸ್ಯಾತ್ । ನ ಚ ತದ್ವರ್ಣಯಿತುಂ ಶಕ್ಯತೇ। ಸೃಷ್ಟ್ಯುತ್ತರಕಾಲಭಾವಿತ್ವಾತ್ ಶರೀರಸ್ಯ, ಪ್ರಾಕ್ಸೃಷ್ಟೇಸ್ತದನುಪಪತ್ತೇಃ । ನಿರಧಿಷ್ಠಾನತ್ವೇ ಚ ಈಶ್ವರಸ್ಯ ಪ್ರವರ್ತಕತ್ವಾನುಪಪತ್ತಿಃ । ಏವಂ ಲೋಕೇ ದೃಷ್ಟತ್ವಾತ್ । **'ಕರಣವಚ್ಚೇನ್ನ ಭೋಗಾದಿಭ್ಯಃ'**। ಅಥ ಲೋಕದರ್ಶನಾನುಸಾರೇಣ ಈಶ್ವರಸ್ಯಾಪಿ ಕಿಂಚಿತ್ ಕರಣಾನಾಮ್ ಆಯತನಂ ಶರೀರಂ ಕಾಮೇನ ಕಲ್ಪ್ಯೇತ । ಏವಮಪಿ ನೋಪಪದ್ಯತೇ । ಸಶರೀರತ್ವೇ ಹಿ ಸತಿ

ಸಂಸಾರಿವತ್ ಭೋಗಾದಿಪ್ರಸಙ್ಗಾತ್ ಈಶ್ವರಸ್ಯಾಪ್ಯನೀಶ್ವರತ್ವಂ ಪ್ರಸಜ್ಯೇತ ॥

-ಸೂ. ಭಾ.೨-೨-೪೦-೭೯

(೩) ಯದ್ ಹಿ ಲೋಕೇ ಇಯತ್ತಾಪರಿಚ್ಛಿನ್ನಂ ವಸ್ತು ಘಟಾದಿ ತತ್ ಅನ್ತವತ್ ದೃಷ್ಟಮ್। ತಥಾ ಪ್ರಧಾನಪುರುಷೇಶ್ವರತ್ರಯಮಪಿ ಇಯತ್ತಾಪರಿಚ್ಛಿನ್ನತ್ವಾತ್ ಅನ್ತವತ್ ಸ್ಯಾತ್॥

-ಸೂ. ಭಾ.೨-೨-೪೧-೮೦

(೪) ಅಭಿಧ್ಯೋಪದೇಶಶ್ಚ ಆತ್ಮನಃ ಕರ್ತೃತ್ವಪ್ರಕೃತಿತ್ವೇ ಗಮಯತಿ ''ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ'' (ತೈ.) 'ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ' ಇತಿ ಚ (ಛಾಂ.)। ತತ್ರ ಅಭಿಧ್ಯಾನಪೂರ್ವಿಕಾಯಾಃ ಸ್ವಾತನ್ತ್ರ್ಯಪ್ರವೃತ್ತೇಃ ಕರ್ತೇತಿ ಗಮ್ಯತೇ। 'ಬಹು ಸ್ಯಾಮ್' ಇತಿ ಪ್ರತ್ಯಗಾತ್ಮವಿಷಯತ್ವಾತ್ ಬಹುಭವನಾಭಿಧ್ಯಾನಸ್ಯ ಪ್ರಕೃತಿಃ ಇತ್ಯಪಿ ಗಮ್ಯತೇ॥

-ಸೂ. ಭಾ.೧-೪-೨೪-೩೯೨

(೫) ಇತಶ್ಚ ಪ್ರಕೃತಿರ್ಬ್ರಹ್ಮ। ಯತ್ಕಾರಣಂ ಸಾಕ್ಷಾದ್ ಬ್ರಹ್ಮೈವ ಕಾರಣಮುಪಾದಾಯ ಉಭೌ ಪ್ರಭವಪ್ರಲಯೌ ಆಮ್ನಾಯೇತೇ ''ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯನ್ತೇ। ಆಕಾಶಂ ಪ್ರತ್ಯಸ್ತಂ ಯನ್ತಿ'' (ಛಾಂ. ೧-೯-೧) ಇತಿ। ಯದ್ ಹಿ ಯಸ್ಮಾತ್ ಪ್ರಭವತಿ ? ಯಸ್ಮಿಂಶ್ಚ ಪ್ರಲೀಯತೇ ತತ್ ತಸ್ಯ ಉಪಾದಾನಂ ಪ್ರಸಿದ್ಧಮ್। ಯಥಾ ವ್ರೀಹಿಯವಾದೀನಾಂ ಪೃಥಿವೀ॥ - ಸೂ. ಭಾ. ೧-೪-೨೫-೩೯೩

(೬) ''ತದಾತ್ಮಾನಂ ಸ್ವಯಮಕುರುತ'' (ತೈ.೨-೭) ಇತಿ ಆತ್ಮನಃ ಕರ್ಮತ್ವಂ ಕರ್ತೃತ್ವಂ ಚ ದರ್ಶಯತಿ।...ಸ್ವಯಮಿತಿ ಚ ವಿಶೇಷಣಾತ್ ನಿಮಿತ್ತಾನ್ತರಾನಪೇಕ್ಷತ್ವಮಪಿ ಪ್ರತೀಯತೇ॥

-ಸೂ. ಭಾ.೧-೪-೨೬-೩೯೪

(೭) ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿನ್ತ್ಯಮ್। ಸಂಯೋಗ ಏಷಾಂ ನ ತ್ವಾತ್ಮಭಾವಾದಾತ್ಮಾಪ್ಯನೀಶಃ ಸುಖದುಃಖಹೇತೋಃ॥ -ಶ್ವೇ.೧-೨.

೯೦. ಚೇತನಾಚೇತನರೂಪವಾದ ಜಗತ್ತಿಗೆ ಚೇತನವಾದ ಬ್ರಹ್ಮವು ಉಪಾದಾನಕಾರಣವೆಂಬುದು ತರ್ಕವಿರುದ್ಧವಾಗಿರುತ್ತದೆ ಎಂದು ತೋರಬಹುದು. ಏಕೆಂದರೆ ಚೇತನವು ಅಚೇತನಕ್ಕೆ ಕಾರಣವಾಗಬಹುದಾದರೆ ಕಾರ್ಯಕಾರಣಗಳಿಗೆ ವೈಲಕ್ಷಣ್ಯವೂ ಇರಬಹುದೆಂದಾಗುವದು. ಆಗ ಮಣ್ಣಿನಿಂದ ಚಿನ್ನದ ಒಡವೆಗಳೂ ಚಿನ್ನದಿಂದ ಮಣ್ಣಿನ ಗಡಿಗೆಯೇ ಮುಂತಾದವೂ ಆಗಬಹುದೆಂದಾಗುವದು. ಬ್ರಹ್ಮವು ಚೇತನವಾಗಿರುವದೆಂದು ಶ್ರುತಿಯಲ್ಲಿರುವದರಿಂದ ಜಗತ್ತೂ ಚೇತನವೇ ಆಗಿದೆ ಎಂದು ಅನುಮಾನಿಸೋಣವೆಂದರೆ ಜಗತ್ತಿನಲ್ಲಿ ಚೇತನಾಚೇತನವಿಭಾಗವು ಸುಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಜಗತ್ತಿನ ಸ್ವಭಾವಕ್ಕನುಗುಣವಾಗಿ ಅಚೇತನ ವಸ್ತುವನ್ನೇ ಉಪಾದಾನಕಾರಣವೆಂದು ಹಿಡಿಯುವದು ಯುಕ್ತವಾಗಿದೆ ಎಂದು ಪ್ರಧಾನಕಾರಣವಾದಿಗಳೇ ಮುಂತಾದವರು ಹೇಳುತ್ತಿದ್ದರು.

ಆದರೆ ಉಪಾದಾನಕ್ಕೂ ಕಾರ್ಯಕ್ಕೂ ಸಾಲಕ್ಷಣ್ಯವಿರಬೇಕೆಂಬ ವಾದವೇ ಸರಿಯಲ್ಲ. ಏಕೆಂದರೆ ಸಂಪೂರ್ಣವಾಗಿ ಸಾಲಕ್ಷಣ್ಯವಿದ್ದರೆ ಇದು ಕಾರಣ, ಇದು ಕಾರ್ಯ ಎಂಬ ವಿಶೇಷವೇ ಇರದೆಹೋಗುವದು. ಲೋಕದಲ್ಲಿಯೂ ಮನುಷ್ಯನ ಶರೀರದಿಂದ ಅದಕ್ಕಿಂತ ವಿಲಕ್ಷಣವಾದ ಕೂದಲೂ ಉಗುರೂ ಹುಟ್ಟುವದು ಕಂಡೂ ಇದೆ. ಕಾರ್ಯಕಾರಣಗಳಿಗೆ ಒಂದಿಷ್ಟಾದರೂ ಸಾಲಕ್ಷಣ್ಯವಿರಬೇಕಲ್ಲ !- ಎಂದರೆ ಬ್ರಹ್ಮಕ್ಕೂ ಜಗತ್ತಿಗೂ 'ಸತ್ತ್ವ' (ಇರವು) ಎಂಬ ಸಾಲಕ್ಷಣ್ಯವು ಇದ್ದೇ ಇದೆ.

ಬ್ರಹ್ಮವು ಚೈತನ್ಯವಾಗಿರುವದರಿಂದ ಅದರಿಂದ ಜಗತ್ತು ಹುಟ್ಟಿದ್ದರೆ ಅದರ ಚೈತನ್ಯದಿಂದ ಕೂಡಿರಬೇಕಾಗಿತ್ತು ಎಂದು ಅನುಮಾನಿಸೋಣ ಎಂದು ಶಂಕಾಕಾರನು ಕೇಳಬಹುದು. ಆದರೆ ಯಾವದು ಚೈತನ್ಯದಿಂದ ಹುಟ್ಟಿರುವದೋ ಅದು ಚೈತನ್ಯದಿಂದ ಕೂಡಿರುತ್ತದೆ; ಯಾವದು ಹುಟ್ಟಿಲ್ಲವೋ ಅದು ಚೈತನ್ಯದಿಂದ ಕೂಡಿರುವದಿಲ- ಎಂಬ ಅನ್ವಯವ್ಯತಿರೇಕವ್ಯಾಪ್ತಿಗಳನ್ನು ತೋರಿಸುವದು ಯಾರಿಂದಲೂ ಆಗಲಾರದು. ಏಕೆಂದರೆ ಇಂಥದ್ದೊಂದು ಅಚೇತನವಾಗಿರುತ್ತದೆ ಯಾದ್ದರಿಂದ ಬ್ರಹ್ಮದಿಂದ ಹುಟ್ಟಿಲ್ಲ ಎಂಬ ದೃಷ್ಟಾಂತವನ್ನು ವೇದಾಂತಿಗಳಿಗೆ ಒಪ್ಪಿಗೆ ಯಾಗುವಂತೆ ಯಾರೂ ಉದಾಹರಿಸಲಾರರು; ಏಕೆಂದರೆ ಎಲ್ಲವೂ ಬ್ರಹ್ಮದಿಂದ ಹುಟ್ಟಿದೆ ಎಂಬುದೇ ವೇದಾಂತಿಗಳ ಮತವು. ಬ್ರಹ್ಮದಿಂದ ಎಲ್ಲವೂ ಹುಟ್ಟಿದರೆ ಕೆಲವು ವಸ್ತುಗಳು ಚೇತನ, ಮಿಕ್ಕವು ಅಚೇತನ- ಎಂಬ ವಿಭಾಗವೇಕೆ ? ಎಂದು ಪ್ರತಿವಾದಿಯು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ : ಅಚೇತನವಸ್ತುಗಳಲ್ಲಿ ಚೈತನ್ಯವು ಕಾಣದೆ ಇರುವದರಿಂದ ಅವನ್ನು ಅಚೇತನವೆಂದು ವ್ಯವಹರಿಸುತ್ತಾರೆ. ಚೇತನಸ್ವರೂಪವೆಂದು ಗೊತ್ತಾಗಿರುವ ಪ್ರಾಣಿಗಳಲ್ಲಿಯೂ ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಚೈತನ್ಯವು ಕಾಣದೆ ಇರುವದೂ ಉಂಟು. ಆದ್ದರಿಂದ ಚೇತನವಾದ ಬ್ರಹ್ಮದಿಂದ ಜಗತ್ತು ಉಂಟಾಗಿದೆ ಎಂಬುದು ತರ್ಕವಿರುದ್ಧವಲ್ಲ. ಇನ್ನೊಂದು ಮಾತು; ಚೇತನದಿಂದ ಅಚೇತನವು ಹುಟ್ಟಲಾರದೆಂದು ತರ್ಕಿಸುವವರಿಗೆ ಅಚೇತನದಿಂದ ಚೇತನವು ಹುಟ್ಟಲಾರದು ಎಂಬ ಪ್ರತಿತರ್ಕವನ್ನೂ ನಾವು ಮುಂದೊಡ್ಡ ಬಹುದಾಗಿರುತ್ತದೆ. ಆದ್ದರಿಂದ ವೈಲಕ್ಷಣ್ಯತರ್ಕವು ಸರಿಯಲ್ಲ. ಶ್ರುತಿಯು ಚೇತನವಾದ ಬ್ರಹ್ಮವು ಚೇತನಾಚೇತನವಾಗಿರುವ ಜಗತ್ತಾಯಿತೆಂದು ಹೇಳಿರುವದ ರಿಂದ ಬ್ರಹ್ಮವಾದವು ಶ್ರುತಿಸಮ್ಮತವಾಗಿದೆ, ತರ್ಕಾವಿರುದ್ಧವೂ ಆಗಿದೆ.

(೧) ಯದುಕ್ತಂ ವಿಲಕ್ಷಣತ್ವಾತ್ ನೇದಂ ಜಗತ್ ಬ್ರಹ್ಮಪ್ರಕೃತಿಕಮ್ ಇತಿ। ನಾಯಮ್ ಏಕಾನ್ತಃ। ದೃಶ್ಯತೇ ಹಿ ಲೋಕೇ ಚೇತನತ್ವೇನ ಪ್ರಸಿದ್ಧ್ಯೇಭ್ಯಃ ಪುರುಷಾದಿಭ್ಯೋ ವಿಲಕ್ಷಣಾನಾಂ

ಕೇಶನಖಾದೀನಾಮ್ ಉತ್ಪತ್ತಿಃ, ಅಚೇತನತ್ವೇನ ಚ ಪ್ರಸಿದ್ಧೇಭ್ಯಃ ಗೋಮಯಾದಿಭ್ಯೋ ವೃಶ್ಚಿಕಾದೀನಾಮ್।.......ಮಹಾಂಶ್ಚಾಯಂ ಪಾರಿಣಾಮಿಕಃ ಸ್ವಭಾವವಿಪ್ರಕರ್ಷಃ ಪುರುಷಾದೀನಾಂ ಕೇಶನಖಾದೀನಾಂ ಚ ಸ್ವರೂಪಾದಿಭೇದಾತ್॥ -ಸೂ. ಭಾ. ೨-೧-೬-೪೧೫

(೨) ವಿಲಕ್ಷಣತ್ವೇನ ಚ ಕಾರಣೇನ ಬ್ರಹ್ಮಪ್ರಕೃತಿಕತ್ವಂ ಜಗತೋ ದೂಷಯತಾ ಕಿಮ್ ಅಶೇಷಸ್ಯ ಬ್ರಹ್ಮಸ್ವಭಾವಸ್ಯ ಅನನುವರ್ತನಂ ವಿಲಕ್ಷಣತ್ವಮ್ ಅಭಿಪ್ರೇಯತೇ; ಉತ ಯಸ್ಯ ಕಸ್ಯಚಿತ್, ಅಥ ಚೈತನ್ಯಸ್ಯ ? ಇತಿ ವಕ್ತವ್ಯಮ್। ಪ್ರಥಮೇ ವಿಕಲ್ಪೇ ಸಮಸ್ತಪ್ರಕೃತಿವಿಕಾರೋಚ್ಛೇದ ಪ್ರಸಙ್ಗಃ। ನ ಹಿ ಅಸತ್ಯತಿಶಯೇ ಪ್ರಕೃತಿವಿಕಾರಃ ಇತಿ ಭವತಿ। ದ್ವಿತೀಯೇ ಚ ಅಸಿದ್ಧತ್ವಮ್। ದೃಶ್ಯತೇ ಹಿ ಸತ್ತಾಲಕ್ಷಣೋ ಬ್ರಹ್ಮಸ್ವಭಾವಃ ಆಕಾಶಾದಿಷು ಅನುವರ್ತಮಾನಃ ಇತ್ಯುಕ್ತಮ್ । ತೃತೀಯೇ ತು ದೃಷ್ಟಾನ್ತಾಭಾವಃ। ಕಿಂ ಹಿ ಯತ್ ಚೈತನ್ಯೇನ ಅನನ್ವಿತಂ ತತ್ ಅಬ್ರಹ್ಮಪ್ರಕೃತಿಕಮ್ ದೃಷ್ಟಮ್ ಇತಿ ಬ್ರಹ್ಮವಾದಿನಂ ಪ್ರತಿ ಉದಾಹ್ರಿಯೇತ ? ಸಮಸ್ತಸ್ಯ ವಸ್ತುಜಾತಸ್ಯ ಬ್ರಹ್ಮಪ್ರಕೃತಿಕತ್ವಾಭ್ಯುಪ ಗಮಾತ್॥ -ಸೂ. ಭಾ. ೨-೧-೬-೪೧೬

(೩) ಯೋಽಪಿ ಚೇತನಕಾರಣಶ್ರವಣಬಲೇನೈವ ಸಮಸ್ತಸ್ಯ ಜಗತಃ ಚೇತನತಾಂ ಉತ್ಪ್ರೇಕ್ಷತೇ। ತಸ್ಯಾಪಿ 'ವಿಜ್ಞಾನಂ ಚಾವಿಜ್ಞಾನಂ ಚ' ಇತಿ ಚೇತನಾಚೇತನವಿಭಾಗಶ್ರವಣಂ ವಿಭಾವನಾವಿಭಾವನಾಭ್ಯಾಂ ಚೈತನ್ಯಸ್ಯ ಶಕ್ಯತ ಏವ ಯೋಜಯಿತುಮ್॥

-ಸೂ. ಭಾ. ೨-೧-೬-೪೧೯

(೪) ತತ್ರ ಯಥಾ ಚೇತನಸ್ಯಾಚೇತನಭಾವೋ ನೋಪಪದ್ಯತೇ ವಿಲಕ್ಷಣತ್ವಾತ್, ಏವಮ್ ಅಚೇತನಸ್ಯಾಪಿ ಚೇತನಭಾವೋ ನೋಪಪದ್ಯತೇ । ಪ್ರತ್ಯುಕ್ತತ್ವಾತ್ ತು ವಿಲಕ್ಷಣತ್ವಸ್ಯ ಯಥಾಶ್ರುತ್ಯೇವ ಚೇತನಂ ಕಾರಣಂ ಗ್ರಹೀತವ್ಯಂ ಭವತಿ॥ -ಸೂ. ಭಾ. ೨-೧-೬-೪೧೯

೯೧. ಬ್ರಹ್ಮವು ಜಗದ್ರೂಪವಾಯಿತು ಎಂದು ಶ್ರುತಿಯಲ್ಲಿರುವದರ ಅಕ್ಷರಾರ್ಥವನ್ನು ಹಿಡಿದು ಹಾಲು ಮೊಸರಾಗುವಂತೆ ಬ್ರಹ್ಮವು ಜಗತ್ತಾಗಿ ಪರಿಣಮಿಸುವದೆಂದು ಕೆಲವರು ಅಭಿಪ್ರಾಯಪಟ್ಟಿರುವರು. ಈ ವಾದವು ಬ್ರಹ್ಮವು ನಿರವಯವವೆಂಬ ವಾದಕ್ಕೆ ವಿರುದ್ಧವಾಗಿರುತ್ತದೆ. ಬ್ರಹ್ಮವು ಅಜವೆಂದು ಸ್ಪಷ್ಟವಾಗಿ ಹೇಳಿರುವದರಿಂದ ಅದು ನಿಜವಾಗಿಯೂ ಚೇತನಾಚೇತನರೂಪವಾದ ಜಗತ್ತಾಗಿ ಪರಿಣಮಿಸಿರುವದೆಂಬ ವಾದವು ಶ್ರುತಿವಿರುದ್ಧವಾಗಿರುತ್ತದೆ. ಬ್ರಹ್ಮವು ಜಗದ್ರೂಪವಾಗಿ ಪರಿಣಮಿಸಿದಮೇಲೂ ಕಾರ್ಯಕ್ಕಿಂತ ಬೇರೆಯಾಗಿ ತನ್ನ ಅವಿಕೃತರೂಪದಿಂದ ಇದ್ದುಕೊಂಡಿರುವದೆಂದು ಶ್ರುತಿಯು ಹೇಳುವದರಿಂದಲೂ ಬ್ರಹ್ಮವು ನಿರವಯವವಾಗಿರುವದರಿಂದಲೂ ಶ್ರುತಿಯು ಪರಿಣಾಮವನ್ನು ಹೇಳುವದಕ್ಕೆ ಬಂದಿಲ್ಲವೆಂದು ಸ್ಪಷ್ಟವಾಗುತ್ತದೆ. ಬ್ರಹ್ಮವು ಜಗದ್ರೂಪವಾಯಿತೆಂಬ ಶ್ರುತಿಯ ಅಭಿಪ್ರಾಯವನ್ನು ಮುಂದಿನ ಮೂರು ಪಾಠಗಳಲ್ಲಿ ಸ್ಪಷ್ಟಪಡಿಸುವೆವು. ಪ್ರಧಾನಪರಿಣಾಮವಾದವು ಹೇಗೆ ಶ್ರುತಿಯುಕ್ತಿವಿರುದ್ಧವೋ, ಬ್ರಹ್ಮಪರಿಣಾಮವಾದವೂ ಹಾಗೆಯೇ ಶ್ರುತಿಯುಕ್ತಿ

ವಿರುದ್ಧವಾಗಿರುತ್ತದೆ ಎಂಬುದನ್ನು ಜಿಜ್ಞಾಸುಗಳು ಮರೆಯಬಾರದು. ಉಪಾಸನೆಯಿಂದ ಬ್ರಹ್ಮಸ್ವರೂಪದ ಪ್ರಾಪ್ತಿಯಾಗುವದೆಂದು ಶ್ರುತಿಗಳು ಹೇಳಿರುವದರಿಂದ ಈ ತಪ್ಪು ಅಭಿಪ್ರಾಯವಾಗಿರುತ್ತದೆ. ಉಪಾಸನಾವಾಕ್ಯಗಳಗತಿಯನ್ನು ನಾವು ಉಪಾಸನಾ ವಿಚಾರದ (೨೩ನೆಯ) ಪಾಠದಲ್ಲಿ ವಿಮರ್ಶಿಸುವೆವು.

(೧) ಕ್ಷೀರವತ್ಸರ್ವಪರಿಣಾಮಪಕ್ಷೇ ಸರ್ವಶ್ರುತಿಸ್ಮೃತಿಕೋಪಃ। ಸ ಚಾನಿಷ್ಟಃ। 'ನಿಷ್ಕಲಂ ನಿಷ್ಕ್ರಿಯಂ ಶಾನ್ತಮ್' 'ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯನ್ತರೋ ಹ್ಯಜಃ, 'ಆಕಾಶವತ್ಸರ್ವಗತಶ್ಚ ನಿತ್ಯಃ', 'ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತಃ','ನ ಜಾಯತೇ ಮ್ರಿಯತೇ ವಾ ಕದಾಚಿತ್', 'ಅವ್ಯಕ್ತೋಽಯಮ್' ಇತ್ಯಾದಿ ಶ್ರುತಿಸ್ಮೃತಿನ್ಯಾಯ ವಿರುದ್ಧಾ ಏತೇ ಸರ್ವೇ ಪಕ್ಷಾಃ॥ -ಬೃ.ಭಾ.೨-೧-೨೦-೩೧೪

(೨) ಯಥೈವ ಹಿ ಬ್ರಹ್ಮಣೋ ಜಗದುತ್ಪತ್ತಿಃ ಶ್ರೂಯತೇ, ಏವಂ ವಿಕಾರವ್ಯತಿರೇಕೇಣಾಪಿ ಬ್ರಹ್ಮಣೋಽವಸ್ಥಾನಂ ಶ್ರೂಯತೇ । ಪ್ರಕೃತಿವಿಕಾರಯೋಃ ಭೇದೇನ ವ್ಯಪದೇಶಾತ್ । 'ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಛಾಂ.೬-೩-೨) ಇತಿ, ''ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ। ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ'' (ಛಾಂ.೩-೧೨-೬) ಇತಿ ಚೈವಂಜಾತೀಯಕಾತ್॥ -ಸೂ.ಭಾ. ೨-೧-೨೭-೪೬೩

(೩) ''ಉಪಾಸಕೋಽಹಂ ಮಮ ಉಪಾಸ್ಯಂ ಬ್ರಹ್ಮ । ತದುಪಾಸನಂ ಕೃತ್ವಾ ಜಾತೇ ಬ್ರಹ್ಮಣಿ ಇದಾನೀಂ ವರ್ತಮಾನಃ ಅಜಂ ಬ್ರಹ್ಮ ಶರೀರಪಾತಾತ್ ಊರ್ಧ್ವಂ ಪ್ರತಿಪತ್ಸ್ಯೇ। ಪ್ರಾಗುತ್ಪತ್ತೇಶ್ಚ ಅಜಮಿದಂ ಸರ್ವಮ್ ಅಹಂ ಚ । ಯದಾತ್ಮಕೋಽಹಂ ಪ್ರಾಗುತ್ಪತ್ತೇಃ ಇದಾನೀಂ ಜಾತಃ, ಜಾತೇ ಬ್ರಹ್ಮಣಿ ಚ ವರ್ತಮಾನಃ ಉಪಾಸನಯಾ ಪುನಸ್ತದೇವ ಪ್ರತಿಪತ್ಸ್ಯೇ'' ಇತ್ಯೇವಮ್ ಉಪಾಸನಾಶ್ರಿತೋ ಧರ್ಮಃ ಸಾಧಕಃ ಯೇನೈವಂ ಕ್ಷುದ್ರಬ್ರಹ್ಮವಿತ್ ತೇನಾಸೌ ಕಾರಣೇನ ಕೃಪಣೋ ದೀನಃ ಅಲ್ಪಕಃ ಸ್ಮೃತೋ ನಿತ್ಯಾಜಬ್ರಹ್ಮದರ್ಶಿಭಿಃ ಇತ್ಯಭಿಪ್ರಾಯಃ ॥

-ಮಾಂ.ಕಾ.ಭಾ.೩-೧-೧೨೮.

೯೨. 'ಬ್ರಹ್ಮವು ತನ್ನನ್ನು ತಾನೇ ಜಗತ್ತಾಗಿ ಮಾಡಿಕೊಂಡಿತು' ಎಂದು ಸ್ಪಷ್ಟವಾಗಿ ಶ್ರುತಿಯು ಹೇಳುತ್ತಿದೆ. 'ಆತ್ಮಕೃತೇಃ ಪರಿಣಾಮಾತ್' (೧-೪-೬) ಎಂದು ಸೂತ್ರಕಾರರೂ ಬ್ರಹ್ಮಪರಿಣಾಮವನ್ನು ಹೇಳಿರುತ್ತಾರೆ. ಹೀಗಿರುವಲ್ಲಿ ಶ್ರುತಿಯಾಗಲಿ ಸೂತ್ರಕಾರರಾಗಲಿ ಪರಿಣಾಮವನ್ನು ಹೇಳುವದಕ್ಕೆ ಬಂದಿಲ್ಲವೆಂದು ಹೇಗೆ ತಿಳಿಯುವದು? -ಎಂದು ಕೆಲವರ ಮನಸ್ಸಿನಲ್ಲಿ ಶಂಕೆಯುಂಟಾಗಬಹುದು.

ಆದರೆ ಬ್ರಹ್ಮವು ನಿಜವಾಗಿ ಪರಿಣಾಮವಾಗುವದೆಂಬುದು ಶ್ರುತಿಸ್ಮೃತಿ ನ್ಯಾಯವಿರುದ್ಧವೆಂದು ಮೇಲೆ ಹೇಳಿರುತ್ತೇವೆ. ಬ್ರಹ್ಮವು ಅಜವೂ ಅದ್ವಯವೂ

ಆಗಿದೆ, ಆದಕ್ಕೆ ಜಗದ್ರೂಪದಿಂದ ಪರಿಣಾಮವೂ ಉಂಟು- ಎಂಬುದು ವ್ಯಾಹತವಾದ ಮಾತೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಬ್ರಹ್ಮವು ಜನ್ಮರಹಿತವೆಂದು ಹೇಳುವ ಶ್ರುತಿಗಳು ಪರಿಣಾಮಶ್ರುತಿಗಳಿಗಿಂತ ಪ್ರಬಲವೆಂದು ಏತಕ್ಕೆ ಹಿಡಿಯಬೇಕೆಂಬುದನ್ನು ಮುಂದಿನ ಮೂರು ಪಾಠಗಳಲ್ಲಿ ನಾವು ವಿವರಿಸುವೆವು. ಸೂತ್ರಕಾರರು ''ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ'' (೨-೧-೧೪) ಎಂಬೀ ಮುಂತಾದ ಸೂತ್ರಗಳಿಂದ ಕಾರ್ಯವು ಕಾರಣಕ್ಕಿಂತ ಬೇರೆಯಾಗಿಲ್ಲವೆಂಬ ಸಿದ್ಧಾಂತವನ್ನೇ ಅವಲಂಬಿಸಿರುತ್ತಾರೆ. ವ್ಯವಹಾರಾಭಿಪ್ರಾಯದಿಂದ ಭೋಕ್ತೃಭೋಗ್ಯರೂಪವಾದ ಜಗತ್ತೆಂಬ ಕಾರ್ಯವನ್ನು ಒಪ್ಪಿರುತ್ತಾರೆ. ಕಾರ್ಯವನ್ನು ತಿರಸ್ಕಾರಮಾಡದೆ ಪರಿಣಾಮವಾದವನ್ನು ಅವಲಂಬಿಸಿರುವದು ಉಪಾಸನೆಗಳನ್ನು ಹೇಳುವದಕ್ಕೆ. ಇದೆಲ್ಲವೂ ಮುಂದೆ ಕ್ರಮಕ್ರಮವಾಗಿ ಸ್ಪಷ್ಟವಾಗುವದು.

(೧) ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ ॥ -ಸೂ. ೨-೧-೧೪.

ಕಾರ್ಯಮ್ ಆಕಾಶಾದಿಕಂ ಬಹುಪ್ರಪಞ್ಚಂ ಜಗತ್, ಕಾರಣಂ ಪರಂ ಬ್ರಹ್ಮ । ತಸ್ಮಾತ್ ಕಾರಣಾತ್ ಪರಮಾರ್ಥತೋಽನನ್ಯತ್ವಂ ವ್ಯತಿರೇಕೇಣ ಅಭಾವಃ ಕಾರ್ಯಸ್ಯ ಅವಗಮ್ಯತೇ । ಕುತಃ ? ಆರಮ್ಭಣಶಬ್ದಾದಿಭ್ಯಃ ॥ -ಸೂ. ಭಾ. ೨-೧-೧೪-೪೩೩

(೨) 'ಆರಮ್ಭಣಶಬ್ದಾದಿಭ್ಯಃ' ಇತ್ಯಾದಿಶಬ್ದಾತ್ ''ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ'' (ಛಾಂ. ೬-೮-೭), ''ಇದಂ ಸರ್ವಂ ಯದಯಮಾತ್ಮಾ'' (ಬೃ.೨-೪-೬), ''ಬ್ರಹ್ಮೈವೇದಂ ಸರ್ವಮ್'' (?), ''ಆತ್ಮೈವೇದಂ ಸರ್ವಮ್'' (ಛಾಂ. ೭-೨೫-೨), ''ನೇಹ ನಾನಾಸ್ತಿ ಕಿಂಚನ'' (ಬೃ. ೪-೪-೧೯) ಇತ್ಯೇವಮಾದ್ಯಪಿ ಆತ್ಮೈಕತ್ವಪ್ರತಿಪಾದನಪರಂ ವಚನಜಾತಮ್ ಉದಾಹರ್ತವ್ಯಮ್ ॥ - ಸೂ. ಭಾ. ೨-೧-೧೪-೪೩೪

(೩) ಭಾವೇ ಚೋಪಲಬ್ಧೇಃ ॥ -ಸೂ. ೨-೧-೧೫

ಇತಶ್ಚ ಕಾರಣಾದನನ್ಯತ್ವಂ ಕಾರ್ಯಸ್ಯ । ಯತ್ಕಾರಣಂ ಭಾವೇ ಏವ ಕಾರಣಸ್ಯ ಕಾರ್ಯಮ್ ಉಪಲಭ್ಯತೇ, ನಾಭಾವೇ । ತದ್ ಯಥಾ । ಸತ್ಯಾಂ ಮೃದಿ ಘಟಃ ಉಪಲಭ್ಯತೇ, ಸತ್ಸು ಚ ತನ್ತುಷು ಪಟಃ । ನ ಚ ನಿಯಮೇನ ಅನ್ಯಭಾವೇ ಅನ್ಯಸ್ಯ ಉಪಲಬ್ಧಿರ್ದೃಷ್ಟಾ ॥

-ಸೂ. ಭಾ. ೨-೧-೧೫-೪೪೨

# ೧೩. ಸತ್ಕಾರ್ಯವಾದ

೯೩ ಬ್ರಹ್ಮಕ್ಕೂ ಜಗತ್ತಿಗೂ ಕಾರ್ಯಕಾರಣಭಾವವನ್ನು ಒಪ್ಪಿರುವದು ಸದ್ರೂಪವಾದ ಬ್ರಹ್ಮವೊಂದೇ ಸತ್ಯವೆಂದೂ ಅದರಲ್ಲಿ ಕಾರ್ಯವಾದ ಜಗತ್ತು ಇಲ್ಲವೇ ಇಲ್ಲವೆಂದೂ ತಿಳಿಸುವದಕ್ಕೆ (೮೬). ಬ್ರಹ್ಮಕಾರಣವಾದವು ಪ್ರಧಾನಕಾರಣವಾದವೇ ಮುಂತಾದವುಗಳನ್ನು ತಳ್ಳಿಹಾಕುವದಕ್ಕೂ ಆಸ್ತಿಕರಿಗೆ ಕ್ರಮಕ್ರಮವಾಗಿ ಅಜಾದ್ವಿತೀಯ ಬ್ರಹ್ಮವನ್ನು ತಿಳಿಸಿಕೊಡುವದಕ್ಕೂ ಉಪಯೋಗವಾಗುತ್ತದೆ ಎಂದೂ (೮೭) ತಿಳಿಸಿದ್ದಾಗಿದೆ. ಸರಿಯಾಗಿ ವಿಮರ್ಶಿಸಿ ನೋಡಿದರೆ ಕಾರ್ಯಕಾರಣಭಾವವೆಂಬುದೇ ಯುಕ್ತಿಗೆ ಹೊಂದುವಹಾಗಿಲ್ಲ. ಏಕೆಂದರೆ ಕಾರಣವು ಸತ್ತೋ, ಅಸತ್ತೋ, ಸದಸತ್ತೋ? ಕಾರ್ಯವೂ ಸತ್ತೋ, ಅಸತ್ತೋ, ಸದಸತ್ತೋ?-ಎಂದು ಮೊದಲು ವಿಂಗಡಿಸಿ ಕೇಳೋಣ. ಸತ್ತಾದದ್ದು ಹುಟ್ಟುವದಿಲ್ಲ; ಉದಾಹರಣೆಗೆ ಮಣ್ಣು ಮುಂತಾದದ್ದು ಹುಟ್ಟುವದಿಲ್ಲ. ಅಸತ್ತಾದ ಶಶವಿಷಾಣಾದಿಗಳೂ ಹುಟ್ಟುವದಿಲ್ಲ. ಇದರಂತೆ ಅಸತ್ತಿನಿಂದ ಅಸತ್ತು ಹುಟ್ಟುವದಿಲ್ಲ, ಸತ್ತೂ ಹುಟ್ಟುವದಿಲ್ಲ; ಸತ್ತಿನಿಂದ ಸತ್ತು ಹುಟ್ಟುವದಿಲ್ಲ, ಅಸತ್ತು ಹುಟ್ಟುವಹಾಗೆಯೇ ಇಲ್ಲ, ಸದಸತ್ತು ಎಂಬುದು ತನಗೆತಾನೇ ವಿರುದ್ಧವಾದ ಮಾತು. ಆದ್ದರಿಂದ ಯಾವದೂ ಹೇಗೂ ಹುಟ್ಟುವದೇ ಇಲ್ಲ, ಕಾರ್ಯವು ಹುಟ್ಟುತ್ತದೆ ಎಂಬುದು ಬರಿಯ ವಿಕಲ್ಪ-ಎಂದು ತರ್ಕದಿಂದ ಏರ್ಪಡುತ್ತದೆ. ಆದ್ದರಿಂದ ವೇದಾಂತಿಗಳು ಹೇಳುವ ಬ್ರಹ್ಮಕಾರಣವಾದವು ಕಾರ್ಯಕಾರಣವಾದವನ್ನು ಗಟ್ಟಿಗೊಳಿಸುವದಕ್ಕಲ್ಲ, ಇತರವಾದಿಗಳು ಹೇಳುವ ಸತ್ಕಾರ್ಯವಾದ, ಅಸತ್ಕಾರ್ಯವಾದ- ಮುಂತಾದ ವಾದಗಳನ್ನು ತಳ್ಳಿಹಾಕುವದಕ್ಕೆ ಎಂದು ತಿಳಿಯಬೇಕು.

(೧) ನನು ಮೃದೋ ಘಟೋ ಜಾಯತೇ ಪಿತುಶ್ಚ ಪುತ್ರಃ । ಸತ್ಯಮ್ । ಅಸ್ತಿ ಜಾಯತೇ ಇತಿ ಪ್ರತ್ಯಯಃ ಶಬ್ದಶ್ಚ ಮೂಢಾನಾಮ್। ತಾವೇವ ತು ಶಬ್ದಪ್ರತ್ಯಯೌ ವಿವೇಕಿಭಿಃ ಪರೀಕ್ಷ್ಯೇತೇ ಕಿಂ ಸತ್ಯಮೇವ ತೌ ಉತ ಮೃಷಾ ಇತಿ । ಯಾವತಾ ಪರೀಕ್ಷ್ಯಮಾಣೇ ಶಬ್ದಪ್ರತ್ಯಯವಿಷಯಂ ವಸ್ತು ಘಟಪುತ್ರಾದಿಲಕ್ಷಣಂ ಶಬ್ದಮಾತ್ರಮೇವ ತತ್। 'ವಾಚಾರಮ್ಭಣಮ್' ಇತಿ ಶ್ರುತೇಃ । ಸಚ್ಚೇನ್ನ ಜಾಯತೇ । ಸತ್ತ್ವಾತ್ । ಮೃತ್ಪಿತ್ರಾದಿವತ್। ಯದ್ಯಸತ್ ತಥಾಪಿ ನ ಜಾಯತೇ । ಅಸತ್ತ್ವಾದೇವ ಶಶವಿಷಾಣಾದಿವತ್ । ಅಥ ಸದಸತ್ ತಥಾಪಿ ನ ಜಾಯತೇ । ವಿರುದ್ಧಸ್ಯ ಏಕಸ್ಯ ಅಸಂಭವಾತ್ । ಅತೋ ನ ಕಿಂಚಿದ್ವಸ್ತು ಜಾಯತೇ ಇತಿ ಸಿದ್ಧಮ್॥ -ಮಾಂ.ಕಾ.ಭಾ. ೪-೨೨-೨೫೨.

(೨) ಪರಮಾರ್ಥತಸ್ತು ನ ಕಸ್ಯಚಿತ್ ಕೇನಚಿದಪಿ ಪ್ರಕಾರೇಣ ಕಾರ್ಯಕಾರಣಭಾವ ಉಪಪದ್ಯತೇ। ಕಥಮ್ ? ನಾಸ್ತ್ಯಸದ್ಧೇತುಕಮ್ । ಅಸತ್ ಶಶವಿಷಾಣಾದಿ ಹೇತುಃ ಕಾರಣಂ ಯಸ್ಯ ಅಸತಃ ಏವ ಖಕುಸುಮಾದೇಃ ತದಸದ್ಧೇತುಕಮ್ ಅಸತ್ ನ ವಿದ್ಯತೇ । ತಥಾ ಸದಪಿ ಘಟಾದಿವಸ್ತು

ಅಸದ್ಧೇತುಕಂ ಶಶವಿಷಾಣಾದಿ ಕಾರ್ಯಂ ನಾಸ್ತಿ । ತಥಾ ಸಚ್ಚ ವಿದ್ಯಮಾನಂ (ಸದ್ಧೇತುಕಂ) ಘಟಾದಿವಸ್ತ್ವನ್ತರಕಾರ್ಯಂ ನಾಸ್ತಿ । ಸತ್ಕಾರ್ಯಮ್ ಅಸತ್ ಕುತ ಏವ ಸಂಭವತಿ ? ನ ಚ ಅನ್ಯಃ ಕಾರ್ಯಕಾರಣಭಾವಃ ಸಂಭವತಿ ಶಕ್ಯೋ ವಾ ಕಲ್ಪಯಿತುಮ್। ಅತಃ ವಿವೇಕಿನಾಮ್ ಅಸಿದ್ಧ ಏವ ಕಾರ್ಯಕಾರಣಭಾವಃ ಕಸ್ಯಚಿತ್ ಇತ್ಯಭಿಪ್ರಾಯಃ॥ -ಮಾಂ. ಕಾ. ಭಾ. ೪-೪೦-೨೮೩-೨೮೪

೯೪. ವೇದಾಂತಿಗಳು **ಅಜಾತಿವಾದ**ವನ್ನು- ಎಂದರೆ ಬ್ರಹ್ಮವೊಂದೇ ಪರಮಾರ್ಥವಾಗಿರುತ್ತದೆ, ಅದು ಅವಿಕಾರಿ, ಅದರಲ್ಲಿ ನಿಜವಾದ ಕಾರ್ಯಕಾರಣ ಭಾವವಿಲ್ಲ ಎಂಬ ವಾದವನ್ನು-ಮಂದಮಧ್ಯಮಾಧಿಕಾರಿಗಳಿಗೆ ಕ್ರಮಕ್ರಮವಾಗಿ ತಿಳಿಯಿಸುವದಕ್ಕಾಗಿ ಒಪ್ಪಿರುವ ಕಾರ್ಯಕಾರಣವಾದಕ್ಕೂ **ಸತ್ಕಾರ್ಯವಾದ**ವೆಂದೇ ಹೆಸರು. ಸಾಂಖ್ಯರು ಒಪ್ಪಿರುವ ಸತ್ಕಾರ್ಯವಾದವನ್ನೂ ವೈಶೇಷಿಕರೂ ಬೌದ್ಧರೂ ಒಪ್ಪಿರುವ ಅಸತ್ಕಾರ್ಯವಾದವನ್ನೂ ತಳ್ಳಿಹಾಕುವದಕ್ಕಾಗಿ ಈ ಸತ್ಕಾರ್ಯವಾದವನ್ನು ವೇದಾಂತಿಗಳು ಅಂಗೀಕರಿಸಿರುತ್ತಾರೆ. ಸಾಂಖ್ಯರ ಮತದಲ್ಲಿ ಪ್ರಧಾನವೆಂಬ ಮೂಲಕಾರಣವು ಸದ್ರೂಪವಾಗಿರುತ್ತದೆ ; ಅದೇ ಪರಮಾರ್ಥವಾಗಿ ಮಹತ್ತು, ಅಹಂಕಾರ-ಮುಂತಾದ ಸದ್ರೂಪವಾದ ಕಾರ್ಯಗಳ ರೂಪವಾಗಿ ಪರಿಣಮಿಸುತ್ತದೆ. ಕಾರ್ಯವು ಹುಟ್ಟುವುದಕ್ಕಿಂತ ಮೊದಲು ಸತ್ತಾದ ಪ್ರಧಾನದ ರೂಪದಲ್ಲಿರುತ್ತದೆ ಎಂದು ಹೇಳುವಷ್ಟು ಮಟ್ಟಿಗೆ ಸಾಂಖ್ಯರು ಸತ್ಕಾರ್ಯವಾದಿಗಳಾಗಿರುತ್ತಾರೆ. ವೈದಿಕ ಸತ್ಕಾರ್ಯವಾದಕ್ಕೆ ಹತ್ತಿರವಾದ ಈ ವಾದವನ್ನು ಒಪ್ಪಿರುವುದು, ಅಸಂಗಾತ್ಮವಾದವನ್ನು ಒಪ್ಪಿರುವುದು - ಮುಂತಾದ ಕಾರಣಗಳಿಂದ ಅವರ ಮತವನ್ನು ಮನ್ವಾದಿಗಳೂ ಸ್ವಲ್ಪಮಟ್ಟಿಗೆ ಉಪಯೋಗಿಸಿಕೊಂಡಿರುತ್ತಾರೆ ಆದರೆ ಸರಿಯಾಗಿ ನೋಡಿದರೆ ಅವರೂ ವೈಶೇಷಿಕರಂತೆ ಅಸತ್ಕಾರ್ಯವಾದಿಗಳೇ ಆಗಿರುತ್ತಾರೆ. ಏಕೆಂದರೆ ಅವರು ಪ್ರಧಾನವು ಮೊದಲು ಇಲ್ಲದಿದ್ದ ಮಹದಾದಿಗಳ ರೂಪದಿಂದ ನಿಜವಾಗಿ ಹುಟ್ಟುವದೆಂದು ಅಂಗೀಕರಿಸುತ್ತಾರೆ ; ಮಹದಾದಿಗಳೂ ಮೊಧಲೇ ಇದ್ದು ಆಮೇಲೆ ಅಭಿವ್ಯಕ್ತವಾಗುವವೆಂದು ಒಂದುವೇಳೆ ಅವರು ಹೇಳಿದರೂ ಆಗಲೂ ಅಭಿವ್ಯಕ್ತಿ ತಿರೋಭಾವಗಳಾದರೂ ಮೊದಲು ಇಲ್ಲದಿದ್ದು ಆಮೇಲೆ ಉಂಟಾಗುವವೆಂದು ಅವರು ಒಪ್ಪಿಕೊಳ್ಳಬೇಕಾಗುವದರಿಂದ ಅಸತ್ಕಾರ್ಯವಾದವನ್ನು ಅವರು ಅಂಗೀಕರಿಸಿ ದಂತೆಯೇ ಆಗುತ್ತದೆ. ಅಸತ್ಕಾರ್ಯವಾದವೆಂದರೆ ಮೊದಲು ಇಲ್ಲದೆ ಇದ್ದದ್ದು ಆಮೇಲೆ ಉಂಟಾಗುವದೆಂಬ ವಾದವು. ವೈಶೇಷಿಕರು .ಹೇಗೆ ದ್ವ್ಯಣುಕಾದಿಗಳು ಮೊದಲು ಇಲ್ಲದಿದ್ದು ಹೊಸದಾಗಿ ಉಂಟಾಗುವವೆಂದು ಹೇಳುವರೋ ಅದರಂತೆಯೇ ಮೊದಲು ಇಲ್ಲದೆ ಇದ್ದ ಮಹದಾದಿಗಳ, ಅಥವಾ ಅವುಗಳ ಅಭಿವ್ಯಕ್ತಿತಿರೋಭಾವಗಳ, ಹುಟ್ಟನ್ನು ಅಂಗೀಕರಿಸುವದು ಅಸತ್ಕಾರ್ಯವಲ್ಲದೆ ಮತ್ತೇನಾದೀತು? ಆದ್ದರಿಂದ ಇವರಿಬ್ಬರ ಮತವನ್ನೂ ತಳ್ಳಿಹಾಕುವದಕ್ಕಾಗಿ

ವೇದಾಂತಿಗಳು ತಮ್ಮ ಸತ್ಕಾರ್ಯವಾದವನ್ನು ಹೂಡಿರುತ್ತಾರೆ. **ಸದ್ರೂಪವಾದ ಬ್ರಹ್ಮವೊಂದೇ ಮಾಯಿಕವಾಗಿ ಉತ್ಪತ್ತ್ಯಾದಿಗಳನ್ನು ಪಡೆಯುವಂತೆ ಕಾಣುತ್ತದೆ ಎಂಬ ವಾದವೇ ನಿಜವಾದ ಸತ್ಕಾರ್ಯವಾದವು.**

(೧) ಪ್ರಧಾನಕಾರಣವಾದೋ ವೇದವಿದ್ಭಿರಪಿ ಕೈಶ್ಚಿತ್ ಮನ್ವಾದಿಭಿಃ ಸತ್ಕಾರ್ಯತ್ವಾದ್ಯಂಶೋಪಜೀವನಾಭಿಪ್ರಾಯೇಣೋಪನಿಬದ್ಧಃ॥ -ಸೂ.ಭಾ. ೨-೨-೧೭-೩೪

(೨) ಸಾಂಖ್ಯಸ್ಯಾಪಿ ಯಃ ಪರಿಣಾಮಪಕ್ಷಃ ಸೋಽಪಿ ಅಪೂರ್ವಧರ್ಮೋತ್ಪತ್ತಿವಿನಾಶಾಙ್ಗೀಕರಣಾತ್ ವೈಶೇಷಿಕಪಕ್ಷಾತ್ ನ ವಿಶಿಷ್ಯತೇ। ಅಭಿವ್ಯಕ್ತಿತಿರೋಭಾವಾಙ್ಗೀಕರಣೇऽಪಿ ಅಭಿವ್ಯಕ್ತಿತಿರೋಭಾವಯೋಃ ವಿದ್ಯಮಾನತ್ವಾವಿದ್ಯಮಾನತ್ವನಿರೂಪಣೇ ಪೂರ್ವವದೇವ ಪ್ರಮಾಣವಿರೋಧಃ । ಏತೇನ ಕಾರಣಸ್ಯೈವ ಸಂಸ್ಥಾನಮ್ ಉತ್ಪತ್ತ್ಯಾದಿ ಇತ್ಯೇತದಪಿ ಪ್ರತ್ಯುಕ್ತಮ್॥ -ಗೀ.ಭಾ. ೧೮-೪೮-೧೦೮೯

(೩) ಪಾರಿಶೇಷ್ಯಾತ್ ಸದೇಕಮೇವ ವಸ್ತು ಅವಿದ್ಯಯಾ ಉತ್ಪತ್ತಿವಿನಾಶಾದಿಧರ್ಮೈಃ ನಟವತ್ ಅನೇಕಧಾ ವಿಕಲ್ಪ್ಯತೇ॥ -ಗೀ.ಭಾ. ೧೮-೪೮-೧೦೯೦

(೪) ಮೂಲಕಾರಣಮೇವ ಆ ಅನ್ತ್ಯಾತ್ ಕಾರ್ಯಾತ್ ತೇನ ತೇನ ಕಾರ್ಯಾಕಾರೇಣ ನಟವತ್ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ॥ - ಸೂ.ಭಾ ೨-೧-೧೮-೪೫೦

೯೫. ಸಾಂಖ್ಯರು ಸತ್ಕಾರ್ಯವಾದಿಗಳೇ ಆಗಲಿ, ಅಸತ್ಕಾರ್ಯವಾದಿಗಳೇ ಆಗಲಿ, ಅದರಲ್ಲಿ ಯಾವ ದೋಷವನ್ನು ಕಂಡು ಅವರ ಮತವನ್ನು ತಿರಸ್ಕರಿಸಬೇಕು? -ಎಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವದು ಅವಶ್ಯ. ಸಾಂಖ್ಯರು ತಾವು ಸತ್ಕಾರ್ಯವಾದಿಗಳೆಂದು ಹೇಳಿಕೊಳ್ಳುತ್ತಾರೆ ; ವೈಶೇಷಿಕಾದಿಗಳು ತಾವು ಅಸತ್ಕಾರ್ಯವಾದಿಗಳೆಂದು ಹೇಳಿಕೊಳ್ಳುತ್ತಾರೆ. 'ಇರುವ ವಸ್ತು ಹುಟ್ಟಲಾರದು; ಯಾವದು ಇದೆಯೋ ಅದು ಹುಟ್ಟುವದಿಲ್ಲ; ಉದಾಹರಣೆಗೆ ಪುರುಷನು ಹುಟ್ಟುವದಿಲ್ಲ. ಆದ್ದರಿಂದ ಕಾರಣವಾದ ಪ್ರಧಾನವಾಗಲಿ, ಕಾರ್ಯವಾದ ಪ್ರಧಾನವಾಗಲಿ ಮೊದಲೇ ಇದ್ದರೆ ಹುಟ್ಟುವದಿಲ್ಲವೆನ್ನುವದೇ ಯುಕ್ತ' ಎಂದು ಅಸತ್ಕಾರ್ಯವಾದಿಗಳು ಸತ್ಕಾರ್ಯವಾದದಲ್ಲಿ ದೋಷವನ್ನು ತೋರಿಸುತ್ತಾರೆ. ಇದರಂತೆ ಸಾಂಖ್ಯರೂ 'ಯಾವದು ಮೊದಲೇ ಇರುವದಿಲ್ಲವೋ ಅದು ಹುಟ್ಟಲಾರದು; ಉದಾಹರಣೆಗೆ ಮೊಲದ ಕೊಂಬು ಯಾವಾಗಲೂ ಇರುವದಿಲ್ಲ, ಹುಟ್ಟುವದೂ ಇಲ್ಲ' - ಎಂದು ಅಸತ್ಕಾರ್ಯವಾದದಲ್ಲಿ ದೋಷವನ್ನು ತೋರಿಸುತ್ತಾರೆ. ಈ ವಾದಿಗಳು ಪ್ರತಿವಾದಿಗಳ ಖಂಡನೆಯನ್ನು ಅನ್ಯೋನ್ಯರು ನಿವಾರಣೆಮಾಡಿಕೊಳ್ಳಲೇ ಆರರಾದ್ದರಿಂದ ಈ ಎರಡುವಾದಗಳೂ ದೋಷಗ್ರಸ್ತವೇ ಎಂದು ಅವರಿಬ್ಬರ ವಿವಾದದಿಂದ ಸಿದ್ಧವಾಗುತ್ತದೆ. ಆದ್ದರಿಂದ ಪರಮಾರ್ಥತತ್ತ್ವವು ಹುಟ್ಟುವದಲ್ಲ, ಅದು ಅದ್ವಿತೀಯವೇ- ಎಂಬ ವೇದಾಂತಿಗಳ ಮತವು ಅವರ ವಿವಾದದಿಂದಲೂ ಸಿದ್ಧವಾಗುತ್ತದೆ.

(೧) ಭೂತಂ ನ ಜಾಯತೇ ಕಿಂಚಿದಭೂತಂ ನೈವ ಜಾಯತೇ।
ವಿವದನ್ತೋ ದ್ವಯಾ ಹ್ಯೇವಮಜಾತಿಂ ಖ್ಯಾಪಯನ್ತಿ ತೇ॥ - ಮಾಂ.ಕಾ.೪-೪.

(೨) ಭೂತಂ ವಿದ್ಯಮಾನಂ ವಸ್ತು ನ ಜಾಯತೇ ಕಿಂಚಿತ್। ವಿದ್ಯಮಾನತ್ವಾದೇವ, ಆತ್ಮವತ್। ಇತ್ಯೇವಂ ವದನ್ ಅಸದ್ವಾದೀ ಸಾಙ್ಖ್ಯಪಕ್ಷಂ ಪ್ರತಿಷೇಧತಿ ಸಜ್ಜನ್ಮ। ತಥಾ ಅಭೂತಮ್ ಅವಿದ್ಯಮಾನಮ್ ಅವಿದ್ಯಮಾನತ್ವಾತ್ ನೈವ ಜಾಯತೇ ಶಶವಿಷಾಣವತ್। ಇತ್ಯೇವಂ ವದನ್ ಸಾಙ್ಖ್ಯೋಽಪಿ ಅಸದ್ವಾದಿಪಕ್ಷಮ್ ಅಸಜ್ಜನ್ಮ ಪ್ರತಿಷೇಧತಿ। ವಿವದನ್ತೋ ವಿರುದ್ಧಂ ವದನ್ತಃ ದ್ವಯಾಃ ದ್ವೈತಿನೋಽಪಿ ಏತೇ ಅನ್ಯೋನ್ಯಸ್ಯ ಪಕ್ಷೌ ಸದಸತೋರ್ಜನ್ಮನೀ ಪ್ರತಿಷೇಧನ್ತಃ ಅಜಾತಿಮ್ ಅನುತ್ಪತ್ತಿಮ್ ಅರ್ಥಾತ್ ಖ್ಯಾಪಯನ್ತಿ ಪ್ರಕಾಶಯನ್ತಿ ತೇ ॥

-ಮಾಂ.ಕಾ.ಭಾ. ೪-೪-೨೨೦.

೯೬. ಸಾಂಖ್ಯರೂ ವೈಶೇಷಿಕರೂ ಒಬ್ಬರೊಡನೊಬ್ಬರು ಮಾಡುತ್ತಿರುವ ವಿವಾದದಿಂದಲೇ ಅಜಾತಿವಾದವು ಸಿದ್ಧವಾಗುವದೆಂದು ಮೇಲೆ ಹೇಳಿರುತ್ತೇವಷ್ಟೆ. ಈ ವಾದಿಗಳ ಮತದಲ್ಲಿರುವ ವಿಶೇಷದೋಷಗಳನ್ನು ಈಗ ಪರಿಶೀಲಿಸಬಹುದಾಗಿದೆ. ಕಾರಣವಾದ ಪ್ರಧಾನವೇ ಕಾರ್ಯವಾದ ಮಹದಾದಿಗಳ ರೂಪದಲ್ಲಿ ಪರಿಣಮಿಸುವದೆನ್ನುವ ಸತ್ಕಾರ್ಯವಾದಿಗಳಾದ ಸಾಂಖ್ಯರ ಮತದಲ್ಲಿ ಪ್ರಧಾನವು ಹುಟ್ಟುವದಲ್ಲವೆಂದೂ ಮಹದಾದ್ಯಾಕಾರದಿಂದ ಹುಟ್ಟುವದೆಂದೂ ಹೇಳುವ ವ್ಯಾಘಾತವಿದೆ. ಪ್ರಧಾನವು ಒಂದಂಶದಿಂದ ಮಹದಾದ್ಯಾಕಾರವಾಗಿ ಒಡೆದುಕೊಳ್ಳುವದಾದರೆ ಅದು ನಿತ್ಯವೆಂಬ ಅಂಗೀಕಾರವನ್ನು ಬಿಡಬೇಕಾಗುತ್ತದೆ. ಏಕೆಂದರೆ ಒಡೆದುಕೊಳ್ಳುವ ಗಡಿಗೆ ಮುಂತಾದವು ನಿತ್ಯವಾಗಿರುವದಿಲ್ಲ. ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆಂದು ಸಾಂಖ್ಯರ ಮತ ; ಹಾಗಾದರೆ ಕಾರ್ಯವೂ ಪ್ರಧಾನದಂತೆ ಹುಟ್ಟುವದಲ್ಲವೆಂದಾಗುವದು. ಹುಟ್ಟುವ ಮಹದಾದಿಗಳೂ ಪ್ರಧಾನವೇ ಆದರೆ ಪ್ರಧಾನವು ನಿತ್ಯವೆಂದು ಹೇಗೆ ಆದೀತು? ಜನ್ಮರಹಿತವಾದ ಕಾರಣದಿಂದ ಕಾರ್ಯವು ಹುಟ್ಟಿದ್ದೂ ಲೋಕದಲ್ಲಿ ಕಂಡಿಲ್ಲ; ಹುಟ್ಟಿದ್ದರಿಂದ ಹುಟ್ಟುತ್ತದೆ ಎಂದರೆ ಆ ಕಾರಣವೂ ಹುಟ್ಟಬೇಕಾಗುವದರಿಂದ ಅದರ ಕಾರಣವೊಂದು, ಅದರ ಕಾರಣವೂ ಮತ್ತೊಂದು - ಎಂದು ಅನವಸ್ಥೆಯುಂಟಾಗುವದು. ಈ ರೀತಿಯಲ್ಲಿ ಸಾಂಖ್ಯರ ಸತ್ಕಾರ್ಯವಾದವು ಎಲ್ಲಾ ಬಗೆಯಿಂದಲೂ **ತರ್ಕ** ವಿರುದ್ಧವಾಗಿರುತ್ತದೆ.

(೧) ಕಾರಣಂ ಯಸ್ಯ ವೈ ಕಾರ್ಯಂ ಕಾರಣಂ ತಸ್ಯ ಜಾಯತೇ ।
ಜಾಯಮಾನಂ ಕಥಮಜಂ ಭಿನ್ನಂ ನಿತ್ಯಂ ಕಥಂ ಚ ತತ್॥ ಮಾಂ. ಕಾ. ೪-೧೧

(೨) ಕಾರಣಾದ್ಯದ್ಯನನ್ಯತ್ವಮತಃ ಕಾರ್ಯಮಜಂ ಯದಿ ।
ಜಾಯಮಾನಾದ್ಧಿ ವೈ ಕಾರ್ಯಾತ್ ಕಾರಣಂ ತೇ ಕಥಂ ಧ್ರುವಮ್॥ ೪-೧೨

(೩) ಅಜಾದ್ವೈ ಜಾಯತೇ ಯಸ್ಯ ದೃಷ್ಟಾನ್ತಸ್ತಸ್ಯ ನಾಸ್ತಿ ವೈ ।
ಜಾತಾಚ್ಚ ಜಾಯಮಾನಸ್ಯ ನ ವ್ಯವಸ್ಥಾ ಪ್ರಸಜ್ಯತೇ॥ ೪-೧೩

ಮೇಲಿನ ಕಾರಿಕೆಗಳ ಭಾಷ್ಯಗಳನ್ನು ನೋಡಿರಿ.

೯೭. ವೈಶೇಷಿಕಾದಿಗಳು ಕೇಳುವ ತರ್ಕಸಮತ ವಾಗಿಯೇ ಇದೆ - ಎಂದು ತಟ್ಟನೆ ತೋರಬಹುದು. ಏಕೆಂದರೆ ಕಾರಣವು ಮೊದಲು ಇತ್ತು ಆಮೇಲೆ ಕಾರ್ಯವುಂಟಾಯಿತು ಎಂದೇ ಪ್ರತೀತಿಯಾಗುತ್ತದೆ. ಶ್ರುತಿಯಲ್ಲಿಯೂ ಸದ್ಬ್ರಹ್ಮವು ತಾನೊಂದೇ ಮೊದಲು ಇದ್ದಿತೆಂದೂ ಅದರಿಂದ ಕಾರ್ಯವಾದ ಜಗತ್ತು ಉಂಟಾಯಿತೆಂದೂ ಹೇಳಿದೆ. ಈ ವಾದವನ್ನು ಏತಕ್ಕೆ ತಿರಸ್ಕರಿಸಬೇಕು? -ಎಂದು ಯಾರಾದರೂ ಕೇಳಬಹುದು.

ಆದರೆ ಈ ವಾದವು ತರ್ಕದ ಹೊಡೆತಕ್ಕೆ ನಿಲ್ಲುವಹಾಗಿಲ್ಲ. ಅದು ಹೇಗೆಂದರೆ, ದ್ವ್ಯಣುಕವೇ ಮುಂತಾದವು ಮೊದಲು ಅತ್ಯಂತವಾಗಿ ಅಸತ್ತಾಗಿರುವವೆಂದೂ ಹುಟ್ಟಿ ಕೆಲವು ಕಾಲದವರೆಗೆ ಇದ್ದುಕೊಂಡು ಬಳಿಕ ಅತ್ಯಂತವಾಗಿ ಇಲ್ಲವಾಗುವವೆಂದೂ ವೈಶೇಷಿಕರು ಅಭಿಪ್ರಾಯಪಡುತ್ತಾರೆ. ಆದರೆ ಅಭಾವವು ಭಾವವಾಗುವದೂ ಭಾವವು ಅಭಾವವಾಗುವದೂ ಪ್ರಮಾಣವಿರುದ್ಧವಾಗಿರುತ್ತದೆ. ಮೊದಲು ಅಭಾವವಾಗಿದ್ದ ದ್ವ್ಯಣುಕಾದಿಗಳು ಸಮವಾಯಿ, ಅಸಮವಾಯಿ, ನಿಮಿತ್ತ-ಎಂಬ ಕಾರಣತ್ರಯವನ್ನು ಬಯಸಿ ಹುಟ್ಟುತ್ತವೆ ಎಂಬ ವೈಶೇಷಿಕರ ಮತವು 'ಮೊಲದ ಕೊಂಬೂ ಭಾವರೂಪವಾಗಬಹುದಲ್ಲ!' ಎಂಬ ಆಕ್ಷೇಪಕ್ಕೆ ತಲೆತಗ್ಗಿಸಬೇಕಾಗುತ್ತದೆ. ಭಾವರೂಪವಾದ ಘಟಾದಿಗಳು ಮೊದಲೇ ಇದ್ದು ಅಭಿವ್ಯಕ್ತವಾಗುವದಕ್ಕೆ ಕಾರಣವನ್ನು ಬಯಸುವದು ಹೇಗೆ ? ಅಸತ್ತು ಸತ್ತಾಗುವದು, ಸತ್ತು ಅಸತ್ತಾಗುವದು- ಎನ್ನುವ ವಾದದಲ್ಲಿ ಪ್ರಮಾಣಪ್ರಮೇಯವ್ಯವಹಾರವನ್ನು ನಂಬುವದಾದರೂ ಹೇಗೆ ? ಯಾವದು ಏನು ಬೇಕಾದರೂ ಆಗಿಬಿಡಬಹುದಲ್ಲವೆ?

ಈ ವಾದವು ಶ್ರುತಿಸ್ಮೃತಿವಿರುದ್ಧವೂ ಆಗಿರುತ್ತದೆ. ಏಕೆಂದರೆ ಕಾರ್ಯವು ಕಾರಣಕ್ಕಿಂತ ಅಭಿನ್ನವೆಂಬ ಮತದಲ್ಲಿ ಇದೆಲ್ಲವೂ ಸತ್ತೇ ಆಗಿತ್ತೆಂಬ ಶ್ರುತಿಯೂ, ಒಂದನ್ನರಿತರೆ ಮತ್ತೆಲ್ಲವನ್ನೂ ಅರಿತಂತೆ ಆಗುವದೆಂಬ ಶ್ರುತಿಯೂ ಹೊಂದಿಕೊಳ್ಳುತ್ತವೆ. ಆದರೆ ಅಸತ್ತಾಗಿರುವ ಕಾರ್ಯವು ಹುಟ್ಟಿ ಕಾರಣದೊಡನೆಯೂ ಸಂಬದ್ಧವಾಗುತ್ತದೆ ಎಂಬ ಮತದಲ್ಲಿ ಈ ಶ್ರುತಿಯು ಹೇಗೂ ಹೊಂದುವದಿಲ್ಲ.

ಬೌದ್ಧರು ಮತ್ತೊಂದು ಬಗೆಯ ಅಸತ್ಕಾರ್ಯವನ್ನು ಒಪ್ಪಿರುತ್ತಾರೆ. ಕಾರಣವು ಇದ್ದಂತೆಯೇ ಇದ್ದರೆ ಅದರಿಂದ ಯಾವ ಕಾರ್ಯವೂ ಉಂಟಾಗಲಾರದು. ಬೀಜವು ಒಡೆದುಕೊಂಡು ತಾನು ಇಲ್ಲವಾದಮೇಲೆಯೇ ಅಲ್ಲವೆ, ಮೊಳಕೆಯಾಗುತ್ತದೆ? ಇದರಂತೆ ಪ್ರತಿಯೊಂದು ಕಾರಣವೂ ಇಲ್ಲವಾದ ಮೇಲೆಯೇ ಕಾರ್ಯವು ಉಂಟಾಗುವದರಿಂದ ಅಭಾವವೇ ಕಾರಣವು ಎನ್ನಬೇಕು - ಎಂಬುದು ಅವರ

ವಾದವು. ಈ ವಾದವು ಸರಿಯಲ್ಲ. ಏಕೆಂದರೆ ಅಭಾವದಿಂದ ಭಾವವು ಉಂಟಾಗುವದಾದರೆ ಇಂಥದ್ದೊಂದರ ಅಭಾವದಿಂದಲೇ ಇಂಥ ಕಾರ್ಯವುಂಟಾಗಬೇಕೆಂಬ ನಿಯಮವನ್ನು ಒಪ್ಪುವದು ವ್ಯರ್ಥವಾಗುವದು. ಆದ್ದರಿಂದ ಈ ಮತದಲ್ಲಿ ಬೀಜದಿಂದಲೇ ಮೊಳಕೆ, ಹಾಲಿನಿಂದಲೇ ಮೊಸರು - ಎಂಬ ನಿಯಮವಿರುವದಕ್ಕೆ ಅವಕಾಶವಿರುವದಿಲ್ಲ. ಅಭಾವದಲ್ಲಿ ಯಾವ ವಿಶೇಷವೂ ಇರುವದಿಲ್ಲವಾದ್ದರಿಂದ ಮೊಲದ ಕೊಂಬಿನಿಂದಲೂ ಯಾವದಾದರೊಂದು ಕಾರ್ಯವು ಆಗಬಹುದಾಗುವದು; ಏಕೆಂದರೆ ಆ ಕೊಂಬೂ ಅಭಾವವೇ ಆಗಿರುತ್ತದೆ. ಸುಮ್ಮನಿರುವವನಿಗೂ ಕೆಲಸ ಮಾಡಿದವನಂತೆ ಕಾರ್ಯವು ಸಿದ್ಧವಾಗಬೇಕಾಗುವದು. ಇದಲ್ಲದೆ ಅಭಾವದಿಂದ ಕಾರ್ಯವಾಗುವದಾಗಿದ್ದರೆ ಆ ಕಾರಣಕ್ಕೆ ಅನುಗುಣವಾಗಿ ಹುಟ್ಟಿದ ಕಾರ್ಯವೂ ಅಭಾವವಾಗಿಯೇ ತೋರಬೇಕಾಗಿತ್ತು; ಆದರೆ ಹಾಗಿಲ್ಲ. ಬೀಜವು ಅಭಾವವಾಗಿ ಮೊಳಕೆಯುಂಟಾಗುವದು ಎಂಬುದೂ ಸರಿಯಲ್ಲ; ಏಕೆಂದರೆ ಬೀಜವು ಒಡೆದುಕೊಂಡಬಳಿಕ ಅದರ ಅವಯವಗಳೇ ಕಾರ್ಯವಾದ ಮೊಳಕೆಯಲ್ಲಿ ಅನುಸರಿಸಿಕೊಂಡಿರುತ್ತವೆಯಾದ್ದರಿಂದ ಅವೇ ಮೊಳಕೆಗೆ ಕಾರಣವೇ ಹೊರತು ಬೀಜದ ಅಭಾವವಲ್ಲ. ಆದ್ದರಿಂದ ಅಸತ್ತಿನಿಂದ ಕಾರ್ಯವುಂಟಾಗುತ್ತದೆ ಎಂಬ ಈ ಬೌದ್ಧರ ಮತವೂ ಸರಿಯಲ್ಲ.

ಕಾರ್ಯಕಾರಣಗಳೆರಡೂ ಅಸತ್ತು ಎಂಬ ಬೌದ್ಧಪಕ್ಷವಂತೂ ಸರ್ವಪ್ರಮಾಣಗಳಿಗೂ ವಿರುದ್ಧ. ವ್ಯವಹಾರವೆಲ್ಲವೂ ಅಸತ್ಯವೇ ಎಂಬ ಆ ಶೂನ್ಯವಾದಿಗಳು ಯಾವ ಪರಮಾರ್ಥವನ್ನು ಅವಲಂಬಿಸಿ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿರುವ ವಸ್ತುಗಳು ಅಸತ್ಯವೆನ್ನುತ್ತಾರೆಂಬ ಪ್ರಶ್ನೆಗೆ ಅವರಲ್ಲಿ ಉತ್ತರವಿಲ್ಲ. ಅವರು ಏನನ್ನೂ ಅವಲಂಬಿಸದೆ ಎಲ್ಲವೂ ಶೂನ್ಯವೆನ್ನುವದಾದರೆ ನಿರಾಧಾರವಾದ ಅವರ ಮತವನ್ನು ಯಾರೂ ಒಪ್ಪಲಾರರು. ಅಸತ್ತಿನಿಂದ ಸದನ್ವಿತವಾದ ಪ್ರಪಂಚವು ಹೇಗೆ ಹುಟ್ಟೀತು ? -ಎಂದು ಶ್ರುತಿಯು ಈ ಅಸದ್ವಾದವನ್ನು ತಿರಸ್ಕರಿಸಿದೆ. ಅಸತ್ತಿಗೆ ಉತ್ಪತ್ತಿಯಿಲ್ಲ, ಸತ್ತಿಗೆ ನಾಶವಿಲ್ಲ. ಎಂಬ ಸ್ಮೃತಿಗೂ ಅಸತ್ಕಾರ್ಯವಾದವು ವಿರುದ್ಧವಾಗಿರುತ್ತದೆ. ಬೌದ್ಧರು ಹೇಳುವ ಅಸತ್ತು ಅಥವಾ ಅಭಾವವು ಸತ್ತಿನ ಪ್ರತಿದ್ವಂದ್ವಿಯಾದ ಅಸತ್ತೆಂದು ಹೇಳುವ ನೈಯಾಯಿಕರ ಅಸತ್ತಲ್ಲ. ಘಟಾಭಾವಕ್ಕೆ ಘಟವಿರಬೇಕು ; ಆದರೆ ಬರಿಯ ಅಸತ್ತೇ ಜಗತ್ಕಾರಣವೆಂಬುದು ಬೌದ್ಧರ ಮತವು ; ಎಂದರೆ ಜಗತ್ತಿಗೆ ಸ್ವಭಾವವಾದದ್ದು ಯಾವದೂ ಇರುವದೇ ಇಲ್ಲ ಎಂದು ಅವರ ಮತವು. ಬರಿಯ ಅಸತ್ತನ್ನು ಅಂಗೀಕರಿಸುವದು ಆಗುವದಿಲ್ಲ ; ಏಕೆಂದರೆ ಅಂಗೀಕರಿಸುವವನೊಬ್ಬನನ್ನಾದರೂ ಒಪ್ಪಬೇಕಾಗುತ್ತದೆ. ಉತ್ಪತ್ತಿಗೆ ಪೂರ್ವದಲ್ಲಿ ಅವನೂ ಇಲ್ಲ ಎಂದರೆ ಆಗ ಎಲ್ಲವೂ

ಅಸತ್ತೆಂಬುದು ನಿಷ್ಪ್ರಮಾಣವೆಂದೇ ಆಗುತ್ತದೆಯಾದ್ದರಿಂದ ಅಸನ್ಮಾತ್ರವನ್ನು ಕಲ್ಪಿಸುವದಕ್ಕೇ ಆಗುವದಿಲ್ಲ. ಆದ್ದರಿಂದ ಶ್ರುತಿಸ್ಮೃತಿನ್ಯಾಯವಿರುದ್ಧವಾದ ಈ ಮತವನ್ನು ತಳ್ಳಿಹಾಕುವದೇ ಸರಿಯಾದದ್ದು.

(೧) ಯದಿ ತಾವತ್ ದ್ವ್ಯಣುಕಾದಿದ್ರವ್ಯಂ ಪ್ರಾಗುತ್ಪತ್ತೇಃ ಅತ್ಯನ್ತಮೇವ ಅಸತ್, ಉತ್ಪನ್ನಂ ಚ ಸ್ಥಿತಂ ಕಂಚಿತ್ ಕಾಲಂ ಪುನರತ್ಯನ್ತಮೇವ ಅಸತ್ತ್ವಮಾಪದ್ಯತೇ, ತಥಾ ಚ ಸತಿ ಅಸದೇವ ಸಜ್ಜಾಯತೇ, ಸದೇವ ಅಸತ್ತ್ವಮ್ ಆಪದ್ಯತೇ। ಅಭಾವೋ ಭಾವೋ ಭವತಿ, ಭಾವಶ್ಚ ಅಭಾವೋ ಭವತಿ। ತತ್ರ ಅಭಾವೋ ಜಾಯಮಾನಃ ಪ್ರಾಗುತ್ಪತ್ತೇಃ ಶಶವಿಷಾಣಕಲ್ಪಃ ಸಮವಾಯ್ಯಸಮವಾಯಿನಿಮಿತ್ತಾಖ್ಯಂ ಕಾರಣಮ್ ಅಪೇಕ್ಷ್ಯ ಜಾಯತೇ ಇತಿ। ನ ಚೈವಮ್ ಅಭಾವಃ ಉತ್ಪದ್ಯತೇ ಕಾರಣಂ ಚ ಅಪೇಕ್ಷತೇ ಇತಿ ಶಕ್ಯಂ ವಕ್ತುಮ್। ಅಸತಾಂ ಶಶವಿಷಾಣಾದೀನಾಮ್ ಅದರ್ಶನಾತ್। ಭಾವಾತ್ಮಕಾಶ್ಚೇತ್ ಘಟಾದಯಃ ಉತ್ಪದ್ಯಮಾನಾಃ ಕಿಂಚಿತ್ ಅಭಿವ್ಯಕ್ತಿಮಾತ್ರೇ ಕಾರಣಮ್ ಅಪೇಕ್ಷ್ಯ ಉತ್ಪದ್ಯನ್ತೇ ಇತಿ ಶಕ್ಯಂ ಪ್ರತಿಪತ್ತುಮ್ । ಕಿಂಚ ಅಸತಶ್ಚ ಸದ್ಭಾವೇ ಸತಶ್ಚ ಅಸದ್ಭಾವೇ ನ ಕ್ವಚಿತ್ ಪ್ರಮಾಣಪ್ರಮೇಯವ್ಯವಹಾರೇಷು ವಿಶ್ವಾಸಃ ಕಸ್ಯಚಿತ್ ಸ್ಯಾತ್। ಸತ್ ಸದೇವ, ಅಸತ್ ಅಸದೇವ ಇತಿ ನಿಶ್ಚಯಾನುಪಪತ್ತೇಃ॥

-ಗೀ. ಭಾ. ೧೮-೪೮-೧೦೮೫.

(೨) ''ತದ್ಧೈಕ ಆಹುರಸದೇವೇದಮಗ್ರ ಆಸೀತ್'' ಇತಿ ಚ ಅಸತ್ಪಕ್ಷಮ್ ಉಪಕ್ಷಿಪ್ಯ ''ಕಥಮಸತಃ ಸಜ್ಜಾಯೇತ'' ಇತ್ಯಾಕ್ಷಿಪ್ಯ ''ಸತ್ತ್ವೇವ ಸೋಮ್ಯೇದಮಗ್ರ ಆಸೀತ್ (ಛಾಂ. ೬.೨.) ಇತಿ ಅವಧಾರಯತಿ। ತತ್ರ ಇದಂಶಬ್ದವಾಚ್ಯಸ್ಯ ಕಾರ್ಯಸ್ಯ ಪ್ರಾಗುತ್ಪತ್ತೇಃ ಸಚ್ಛಬ್ದವಾಚ್ಯೇನ ಕಾರಣೇನ ಸಾಮಾನಾಧಿಕರಣ್ಯಸ್ಯ ಶ್ರೂಯಮಾಣತ್ವಾತ್ ಸತ್ತ್ವಾನನ್ಯತ್ವೇ ಪ್ರಸಿಧ್ಯತಃ। ಯದಿಪುನಃ ಪ್ರಾಗುತ್ಪತ್ತೇಃ ಅಸತ್ ಕಾರ್ಯಂ ಸ್ಯಾತ್ । ಪಶ್ಚಾಚ್ಚ ಉತ್ಪದ್ಯಮಾನಂ ಕಾರಣೇ ಸಮವೇಯಾತ್ ತದಾ ಅನ್ಯತ್ ಕಾರಣಾತ್ ಸ್ಯಾತ್। ತತ್ರ ''ಯೇನಾಶ್ರುತಂ ಶ್ರುತಂ ಭವತಿ'' (ಛಾಂ. ೬-೧-೩) ಇತಿ ಇಯಂ ಪ್ರತಿಜ್ಞಾ ಪೀಡ್ಯೇತ। ಸತ್ತ್ವಾನನ್ಯತ್ವಾವಗತೇಸ್ತು ಇಯಂ ಪ್ರತಿಜ್ಞಾ ಸಮರ್ಥ್ಯತೇ॥

- ಸೂ. ಭಾ. ೨-೧-೧೮-೪೫೧

(೩) ಕೂಟಸ್ಥಾಚ್ಚೇತ್ ಕಾರಣಾತ್ ಕಾರ್ಯಮುತ್ಪದ್ಯೇತ, ಅವಿಶೇಷಾತ್ ಸರ್ವಂ ಸರ್ವತ ಉತ್ಪದ್ಯೇತ । ತಸ್ಮಾದಭಾವಗ್ರಸ್ತೇಭ್ಯೋ ಬೀಜಾದಿಭ್ಯೋಽಙ್ಕುರಾದೀನಾಮ್ ಉತ್ಪದ್ಯಮಾನತ್ವಾತ್, ಅಭಾವಾದ್ಭಾವೋತ್ಪತ್ತಿಃ ಇತಿ ಮನ್ಯನ್ತೇ ॥ ತತ್ರ ಇದಮುಚ್ಯತೇ 'ನಾಸತೋಽದೃಷ್ಟತ್ವಾತ್' ಇತಿ। ನಾಭಾವಾದ್ಭಾವ ಉತ್ಪದ್ಯತೇ । ಯದಿ ಅಭಾವಾದ್ಭಾವ ಉತ್ಪದ್ಯೇತ, ಅಭಾವತ್ವಾವಿಶೇಷಾತ್ ಕಾರಣವಿಶೇಷಾಭ್ಯುಪಗಮೋಽನರ್ಥಕಃ ಸ್ಯಾತ್। ನ ಹಿ ಬೀಜಾದೀನಾಮ್ ಉಪಮೃದಿತಾನಾಂ ಯೋಽಭಾವಃ, ತಸ್ಯಾಭಾವಸ್ಯ ಶಶವಿಷಾಣಾದೀನಾಂ ಚ ನಿಃಸ್ವಭಾವತ್ವಾವಿಶೇಷಾತ್, ಅಭಾವತ್ವೇ ಕಶ್ಚಿದ್ ವಿಶೇಷೋಽಸ್ತಿ ಯೇನ ಬೀಜಾದೇವಾಙ್ಕುರೋ ಜಾಯತೇ, ಕ್ಷೀರಾದೇವ ದಧಿ ಇತ್ಯೇವಂ ಜಾತೀಯಕಃ ಕಾರಣವಿಶೇಷಾಭ್ಯುಪಗಮೋಽರ್ಥವಾನ್ ಸ್ಯಾತ್। ನಿರ್ವಿಶೇಷಸ್ಯ ತು ಅಭಾವಸ್ಯ ಕಾರಣತ್ವಾಭ್ಯುಪಗಮೇ ಶಶವಿಷಾಣಾದಿಭ್ಯೋಽಪಿ ಅಙ್ಕುರಾದಯೋ ಜಾಯೇರನ್। ನ ಚೈವಂ ದೃಶ್ಯತೇ।.... ಅಭಾವಾಚ್ಚ ಭಾವೋತ್ಪತ್ತೌ ಅಭಾವಾನ್ವಿತಮೇವ ಸರ್ವಂ ಕಾರ್ಯಂ ಸ್ಯಾತ್। ನ ಚೈವಂ ದೃಶ್ಯತೇ.........ಯೇಷ್ವಪಿ ಬೀಜಾದಿಷು ಸ್ವರೂಪೋಪಮರ್ದೋ ಲಕ್ಷ್ಯತೇ ತೇಷ್ವಪಿ....

ಅನುಪಮೃದ್ಯಮಾನಾನಾಮೇವ ಅನುಯಾಯಿನಾಂ ಬೀಜಾದ್ಯವಯವಾನಾಮ್ ಅಙ್ಕುರಾದಿ-ಕಾರಣಭಾವಾಭ್ಯುಪಗಮಾತ್। ತಸ್ಮಾತ್ ...... ಅನುಪಪನ್ನೋಽಯಮ್ ಅಭಾವಾದ್ಭಾವೋತ್ಪತ್ತ್ಯಭ್ಯುಪಗಮಃ॥ - ಸೂ. ಭಾ. ೨-೨-೨೬-೫೩-೫೫

(೪) ಶೂನ್ಯವಾದಿಪಕ್ಷಸ್ತು ಸರ್ವಪ್ರಮಾಣಪ್ರತಿಷಿದ್ಧಃ ಇತಿ ತನ್ನಿರಾಕರಣಾಯ ನಾದರಃ ಕ್ರಿಯತೇ। ನ ಹಿ ಅಯಂ ಸರ್ವಪ್ರಮಾಣಪ್ರಸಿದ್ಧೋ ಲೋಕವ್ಯವಹಾರಃ ಅನ್ಯತ್ತತ್ತ್ವಮ್ ಅನಧಿಗಮ್ಯ ಶಕ್ಯತೇ ಅಪಹ್ನೋತುಮ್ ಅಪವಾದಾಭಾವೇ ಉತ್ಸರ್ಗಪ್ರಸಿದ್ಧೇಃ॥

-ಸೂ. ಭಾ. ೨-೨-೩೧-೬೪.

(೫) ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ॥ -ಗೀ. ೨-೧೬.

(೬) ಇದಂ ಭಾಗವತಂ ಮತಮುಕ್ತಂ 'ನಾಸತೋ ವಿದ್ಯತೇ ಭಾವಃ' ಇತ್ಯಸ್ಮಿನ್ ಶ್ಲೋಕೇ। ಸತ್ಕಾರ್ಯಸ್ಯ ಅವ್ಯಭಿಚಾರಾತ್, ವ್ಯಭಿಚಾರಾಚ್ಚ ಇತರೇಷಾಮ್ ಇತಿ॥

- ಗೀ. ಭಾ. ೧೮-೪೮-೧೦೯೦.

(೭) ಸದಭಾವಮಾತ್ರಂ ಹಿ ಪ್ರಾಗುತ್ಪತ್ತೇಸ್ತತ್ತ್ವಂ ಕಲ್ಪಯನ್ತಿ ಬೌದ್ಧಾಃ, ನ ತು ಸತ್ಪ್ರತಿದ್ವಂದ್ವಿ ವಸ್ತ್ವನ್ತರಮಿಚ್ಛನ್ತಿ। ಯಥಾ ಅಸಚ್ಚ ಅಸದಿತಿ ಗೃಹ್ಯಮಾಣಂ ಯಥಾಭೂತಂ ತದ್ವಿಪರೀತಂ ತತ್ತ್ವಂ ಭವತಿ ಇತಿ ನೈಯಾಯಿಕಾಃ। .... ಅಸತ್ತ್ವಮಾತ್ರಾಭ್ಯುಪಗಮೋಽಪಿ ಅಯುಕ್ತ ಏವ। ಅಭ್ಯುಪಗನ್ತುರನಭ್ಯುಪಗಮಾನುಪಪತ್ತೇಃ। ಇದಾನೀಮಭ್ಯುಪಗನ್ತಾ ಅಭ್ಯುಪಗಮ್ಯತೇ ನ ಪ್ರಾಗುತ್ಪತ್ತೇಃ ಇತಿ ಚೇತ್, ನ। ಪ್ರಾಗುತ್ಪತ್ತೇಃ ಸದಭಾವಸ್ಯ ಪ್ರಮಾಣಾಭಾವಾತ್ ಪ್ರಾಗುತ್ಪತ್ತೇರಸದೇವೇತಿ ಕಲ್ಪನಾನುಪಪತ್ತಿಃ॥ - ಛಾಂ. ಭಾ. ೬-೨-೧-೪೫೧

೯೮. ಬ್ರಹ್ಮವು ಆಕಾಶಾದಿರೂಪವಾದ ಜಗತ್ತಾಗುತ್ತದೆ ಎಂಬ ವೇದಾಂತಿಗಳ ವಾದವು ಪ್ರಧಾನವು ಮಹದಾದಿಗಳ ರೂಪವಾಗುತ್ತದೆ ಎಂಬ ಸಾಂಖ್ಯರ ಸತ್ಕಾರ್ಯವಾದಕ್ಕಿಂತ ಯಾವ ರೀತಿಯಲ್ಲಿ ಭಿನ್ನವಾಗಿದೆ? ಚೇತನವೂ ಶುದ್ಧವೂ ಶಬ್ದಾದಿರಹಿತವೂ ಆಗಿರುವ ಬ್ರಹ್ಮದಿಂದ ಅದಕ್ಕೆ ವಿರುದ್ಧಸ್ವಭಾವದ, ಎಂದರೆ ಅಚೇತನವೂ ಅಶುದ್ಧವೂ ಶಬ್ದಾದಿಸಹಿತವೂ ಆದ ಜಗತ್ತು ಉಂಟಾಗುವದೆಂಬ ವಾದವು ವೈಶೇಷಿಕರ ಅಸತ್ಕಾರ್ಯವಾದವೇ ಅಲ್ಲವೆ ? - ಎಂಬ ಶಂಕೆಗಳನ್ನು ವೇದಾಂತಿಗಳ ಮೇಲೆ ತರುವದಕ್ಕೆ ಆಗುವದಿಲ್ಲ.

ಏಕೆಂದರೆ ಬ್ರಹ್ಮವು ಪ್ರಧಾನದಂತೆ ನಿಜವಾಗಿ ಜಗದ್ರೂಪದಿಂದ ಪರಿಣಮಿಸುವದೆಂದು ವೇದಾಂತಿಗಳು ಹೇಳುವದಿಲ್ಲ. ಮಾಯೆಯಿಂದ ಅದು ಹುಟ್ಟಿದಂತೆ ಕಾಣುತ್ತದೆ ಎನ್ನುತ್ತಾರೆ. ಆದ್ದರಿಂದ ಪ್ರಧಾನವು ನಿಜವಾಗಿ ಹುಟ್ಟುತ್ತದೆ ಎಂಬ ಸಾಂಖ್ಯಪಕ್ಷಕ್ಕೂ ಇದಕ್ಕೂ ಹೋಲಿಕೆಯಿಲ್ಲ. ಇದರಂತೆ ಹುಟ್ಟುವದಕ್ಕೆ ಮೊದಲು ಇಲ್ಲದೆ ಇದ್ದ ಶಬ್ದಾದಿಸಹಿತಪ್ರಪಂಚವು ದ್ವ್ಯಣುಕಾದಿಗಳಂತೆ ಹೊಸದಾಗಿ ಹುಟ್ಟುವದೆಂದೂ ವೇದಾಂತಿಗಳು ಹೇಳುವದಿಲ್ಲ. ವಂಧ್ಯಾಪುತ್ರಶಶವಿಷಾಣಾದಿಗಳಂತೆ ಅಭಾವವು ಭಾವವಾಗುತ್ತದೆ ಎಂಬುದು ಅನುಭವವಿರುದ್ಧವೆಂಬುದನ್ನು ಅವರು ಬಲ್ಲರು. ಶಬ್ದಾದಿಯುತವಾದ

ಪ್ರಪಂಚವು ಹುಟ್ಟುವದಕ್ಕಿಂತ ಮೊದಲೂ ಹುಟ್ಟಿದಮೇಲೂ ಕಾರಣವಾದ ಬ್ರಹ್ಮ ರೂಪದಿಂದಲೇ ಇರುತ್ತದೆಯೆಂದೂ ಕಾರಣಕ್ಕಿಂತ ಬೇರೆಯಾದ ತನ್ನ ರೂಪದಿಂದ ಈಗಲೂ ಇಲ್ಲವೇ ಇಲ್ಲವೆಂದೂ ವೇದಾಂತಿಗಳು ಹೇಳುತ್ತಾರೆ. ಆದ್ದರಿಂದ ಮೊದಲು ಇಲ್ಲದಿದ್ದ ದ್ವ್ಯಣುಕಾದಿಗಳು ಹುಟ್ಟಿ ಸತ್ತಾಸಂಬಂಧವನ್ನು ಪಡೆಯುತ್ತವೆ ಎಂಬ ವೈಶೇಷಿಕರ ಅಸತ್ಕಾರ್ಯವಾದಕ್ಕೂ ಈ ವೇದಾಂತಿಗಳ ವಾದಕ್ಕೂ ಯಾವ ಹೋಲಿಕೆಯೂ ಇಲ್ಲ. ಅಭಾವವು ನಿರ್ವಿಶೇಷವಾಗಿರುವದರಿಂದ ಅದರಿಂದ ಸವಿಶೇಷ ವಸ್ತುಗಳು ಹುಟ್ಟುತ್ತವೆ ಎಂಬುದೂ ಸರಿಯಲ್ಲ. ಇನ್ನು ಹುಟ್ಟುವ ಮೊದಲೂ ಹುಟ್ಟಿದಮೇಲೂ ಅತ್ಯಂತವಾಗಿ ಅಸತ್ತಾಗಿರುವ ಜಗತ್ತೇ ಮಾಯೆಯಿಂದ ಹುಟ್ಟಿದಂತೆ ತೋರುತ್ತದೆ ಎಂಬ ಶೂನ್ಯವಾದಿಗಳ ಅಸತ್ಕಾರ್ಯವಾದಕ್ಕೂ ವೇದಾಂತಿಗಳ ಸತ್ಕಾರ್ಯವಾದಕ್ಕೂ ಯಾವ ಹೋಲಿಕೆಯೂ ಇಲ್ಲವೇ ಇಲ್ಲ. ಏಕೆಂದರೆ ಸತ್ತಾದ ಹಗ್ಗವೇ ಮುಂತಾದದ್ದು ಮಾಯೆಯಿಂದ ಹಾವೇ ಮುಂತಾಗಿ ಆಗಬಹುದು; ಅಸತ್ತಾದ ವಂಧ್ಯಾಪುತ್ರನೇ ಮೊದಲಾದದ್ದು ನಿಜವಾಗಿಯೂ ಹುಟ್ಟಲಾರದು, ಮಾಯೆ ಯಿಂದಲೂ ಹುಟ್ಟಲಾರದು. ಶೂನ್ಯವಾದಿಗಳಾದ ಮಾಧ್ಯಮಿಕರು ಅಸತ್ಕಾರ್ಯವಾದಿ ಗಳು ಎಂಬುದು ಅವರ ಮೇಲೆ ಇಲ್ಲದ ಆರೋಪವನ್ನು ಮಾಡಿದ್ದು ಎಂದು ತೋರಬಹುದು. ಏಕೆಂದರೆ ಯಾವ ಕಾರ್ಯವೂ ಯಾವ ಬಗೆಯಿಂದಲೂ ಹುಟ್ಟುವದಿಲ್ಲ, ಹುಟ್ಟುವಿಕೆಯೆಂಬುದೇ ಸಲ್ಲದು; ಪದಾರ್ಥಗಳಿಗೆ ಸ್ವಭಾವವೇ ಇಲ್ಲ-ಎಂಬುದು ಅವರ ಹೇಳಿಕೆ. ಆದರೂ ಎಲ್ಲರಿಗೂ ಕಾಣುತ್ತಿರುವ ಜಗತ್ತನ್ನು ಬರಿಯ ಯುಕ್ತಿಯಿಂದ ಶೂನ್ಯವೆಂದು ಹೇಳುವದು ಅವರ ದಿಟ್ಟತನವಾಗಿದೆ. ವೇದಾಂತಿಗಳು ಅವಲಂಬಿಸಿರುವ ಸಾಕ್ಷಿವಾದವನ್ನು ಅಲ್ಲಗಳೆಯುವದು ಯಾವ ಯುಕ್ತಿಯಿಂದಲೂ ಆಗಲಾರದು; ಆದ್ದರಿಂದ ಜಗತ್ತಿನ ಹುಸಿತೋರಿಕೆಗೆ ಆತ್ಮನೇ ಆಧಾರವೆಂಬ ವೇದದ ಸತ್ಕಾರ್ಯವಾದವನ್ನು ಅವರೂ ಯತ್ನವಿಲ್ಲದೆ ಒಪ್ಪಬೇಕಾಗಿರುತ್ತದೆ.

(೧) ಸತೋ ಹಿ ಮಾಯಯಾ ಜನ್ಮ ಯುಜ್ಯತೇ ನ ತು ತತ್ತ್ವತಃ।
ತತ್ತ್ವತೋ ಜಾಯತೇ ಯಸ್ಯ ಜಾತಂ ತಸ್ಯ ಹಿ ಜಾಯತೇ॥ -ಮಾಂ.ಕಾ. ૩-೨೭.

ಸತೋ ವಿದ್ಯಮಾನಸ್ಯ ವಸ್ತುನಃ ರಜ್ಜ್ವಾದೇಃ ಸರ್ಪಾದಿವತ್ ಮಾಯಯಾ ಜನ್ಮ ಯುಜ್ಯತೇ । ನ ತು ತತ್ತ್ವತೋ ಯಥಾ ತಥಾ ಅಗ್ರಾಹ್ಯಸ್ಯಾಪಿ ಸತ ಏವ ನಾತ್ಮನಃ ರಜ್ಜುಸರ್ಪವತ್ ಜಗದ್ರೂಪೇಣ ಮಾಯಯಾ ಜನ್ಮ ಯುಜ್ಯತೇ । ನ ತು ತತ್ತ್ವತ ಏವ ಅಜಸ್ಯ ಆತ್ಮನೋ ಜನ್ಮ । ಯಸ್ಯ ಪುನಃ ಪರಮಾರ್ಥಸತ್ ಅಜಮ್ ಆತ್ಮತತ್ತ್ವಂ ಜಗದ್ರೂಪೇಣ ಜಾಯತೇ ವಾದಿನಃ ನ ಹಿ ತಸ್ಯ ಅಜಂ ಜಾಯತೇ ಇತಿ ಶಕ್ಯಂ ವಕ್ತುಮ್ । ವಿರೋಧಾತ್ । ತತಃ ತಸ್ಯ ಅರ್ಥಾತ್ ಜಾತಂ ಜಾಯತೇ ॥ ಇತ್ಯಾಪನ್ನಮ್। ತತಶ್ಚ ಅನವಸ್ಥಾ ಜಾತಾತ್ ಜಾಯಮಾನತ್ವೇನ॥

-ಮಾಂ.ಕಾ.ಭಾ. ૩-೨೭-೧೭೮

(ವಿ.ಸೂ :-ಈ ವಾಕ್ಯದಲ್ಲಿ ಆತ್ಮಪರಿಣಾಮವಾದದಲ್ಲಿ ದೋಷವನ್ನು ಹೇಳಿದೆಯಾದರೂ ಸಾಂಖ್ಯರಿಗೂ ಇದು ಅನ್ವಯಿಸುತ್ತದೆ. ೯೬ನೆಯ ಪ್ರಘಟ್ಟದಲ್ಲಿ ಕೊಟ್ಟಿರುವ ಯುಕ್ತಿಗಳನ್ನು ನೋಡಿರಿ.)

(೨) ಯಥೈವ ಹಿ ಇದಾನೀಮಪಿ ಇದಂ ಕಾರ್ಯಂ ಕಾರಣಾತ್ಮನಾ ಸತ್, ಏವಂ ಪ್ರಾಗುತ್ಪತ್ತೇರಪಿ ಇತಿ ಗಮ್ಯತೇ । ನ ಹಿ ಇದಾನೀಮಪಿ ಇದಂ ಕಾರ್ಯಂ ಕಾರಣಾತ್ಮಾನಮನ್ತರೇಣ ಸ್ವತನ್ತ್ರಮೇವ ಅಸ್ತಿ। ''ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದ'' (ಬೃ. ೨-೪-೬) ಇತ್ಯಾದಿಶ್ರವಣಾತ್। ಕಾರಣಾತ್ಮನಾ ತು ಸತ್ತ್ವಂ ಕಾರ್ಯಸ್ಯ ಪ್ರಾಗುತ್ಪತ್ತೇರವಿಶಿಷ್ಟಮ್। ನನು ಶಬ್ದಾದಿಹೀನಂ ಬ್ರಹ್ಮ ಜಗತಃ ಕಾರಣಮ್ । ಬಾಢಮ್ । ನ ತು ಶಬ್ದಾದಿಮತ್ ಕಾರ್ಯಂ ಕಾರಣಾತ್ಮನಾ ಹೀನಂ ಪ್ರಾಗುತ್ಪತ್ತೇಃ ಇದಾನೀಂ ವಾ ಅಸ್ತಿ। ತೇನ ನ ಶಕ್ಯತೇ ವಕ್ತುಂ ಪ್ರಾಗುತ್ಪತ್ತೇಃ ಅಸತ್ ಕಾರ್ಯಮಿತಿ॥ - ಸೂ.ಭಾ.೨-೧-೭-೪೨೦

ಅಸತೋ ಮಾಯಯಾ ಜನ್ಮ ತತ್ತ್ವತೋ ನೈವ ಯುಜ್ಯತೇ ।

ವನ್ಧ್ಯಾಪುತ್ರೋ ನ ತತ್ತ್ವೇನ ಮಾಯಯಾ ವಾಪಿ ಜಾಯತೇ॥ - ಮಾಂ.ಕಾ.೩-೨೮

ಅಸದ್ವಾದಿನಾಮ್ ಅಸತೋ ಭಾವಸ್ಯ ಮಾಯಯಾ ತತ್ತ್ವತೋ ವಾ ನ ಕಥಂಚನ ಜನ್ಮ ಯುಜ್ಯತೇ। ಅದೃಷ್ಟತ್ವಾತ್। ನ ಹಿ ವನ್ಧ್ಯಾಪುತ್ರೋ ಮಾಯಯಾ ತತ್ತ್ವತೋ ವಾ ನ ಜಾಯತೇ। ತಸ್ಮಾತ್ ಅತ್ರ ಅಸದ್ವಾದೋ ದೂರತ ಏವ ಅನುಪಪನ್ನಃ ಇತ್ಯರ್ಥಃ॥

-ಮಾಂ.ಕಾ.ಭಾ. ೩-೨೮-೧೭೯.

(೩) ಯೋಽಸೌ ಉಪನಿಷತ್ಸ್ವೇವ ಅಧಿಗತಃ ಪುರುಷಃ ಅಸಂಸಾರೀ ಬ್ರಹ್ಮ......ನಾಸೌ ನಾಸ್ತಿ ನಾಧಿಗಮ್ಯತೇ ಇತಿ ವಾ ಶಕ್ಯಂ ವದಿತುಮ್। 'ಸ ಏಷ ನೇತಿನೇತ್ಯಾತ್ಮಾ'-ಇತ್ಯಾತ್ಮಶಬ್ದಾತ್। ಆತ್ಮನಶ್ಚ ಪ್ರತ್ಯಾಖ್ಯಾತುಮ್ ಅಶಕ್ಯತ್ವಾತ್। ಯ ಏವ ನಿರಾಕರ್ತಾ ತಸ್ಯೈವ ಆತ್ಮತ್ವಾತ್॥

-ಸೂ.ಭಾ. ೧-೧-೪-೫೪.

೯೯. ಅಭಾವವು ವಂಧ್ಯಾಪುತ್ರಾದಿಗಳಂತೆ ಎಂಬುದನ್ನು ತಾರ್ಕಿಕರು ಒಪ್ಪುವದಿಲ್ಲ. ಘಟ ಎಂಬ ಪ್ರತೀತಿಯು ಹೇಗೆ ಘಟವೆಂಬ ಭಾವವಸ್ತುವನ್ನು ಬಯಸುತ್ತದೆಯೋ ಅದರಂತೆ ಇಲ್ಲ, ಅಲ್ಲ-ಎಂಬ ಪ್ರತೀತಿಯೂ ಅಭಾವವನ್ನು ಬಯಸುತ್ತದೆಯಾದ್ದರಿಂದ ಅಭಾವವೂ ಪದಾರ್ಥವೇ. ಅಭಾವದಲ್ಲಿ ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅತ್ಯಂತಾಭಾವ- ಮುಂತಾದ ವಿಶೇಷಗಳೂ ಕಾಣಬರುವದರಿಂದ ಅಭಾವವು ನಿರ್ವಿಶೇಷ ಎಂಬುದೂ ಸರಿಯಲ್ಲ. ವೇದಾಂತಿಗಳ ಬ್ರಹ್ಮವು ನಿರ್ವಿಶೇಷವಾಗಿದ್ದರೂ ಅದರಿಂದ ಸವಿಶೇಷವಾಗಿರುವ ಜಗತ್ತು ಹುಟ್ಟುವಂತೆ ಅಭಾವವು ಒಂದು ವೇಳೆ ನಿರ್ವಿಶೇಷವಾದರೂ ಅದರಿಂದಲೂ ಸವಿಶೇಷವಾದ ಕಾರ್ಯವು ಹುಟ್ಟುವದು ಎಂದು ತಾರ್ಕಿಕರು ಹೇಳಿದರೆ ದೋಷವೂ ಇಲ್ಲ- ಎಂದು ತಾರ್ಕಿಕರ ಅನುಯಾಯಿಗಳು ಶಂಕಿಸಬಹುದು.

ಆದರೆ ಇದು ಯಾವದೂ ಒಪ್ಪತಕ್ಕದ್ದಲ್ಲ. ಏಕೆಂದರೆ ಪ್ರತೀತಿಯಿದ್ದಮಾತ್ರದಿಂದ ನಿಜವಾಗಿ ಪದಾರ್ಥವಿರಬೇಕೆಂಬ ನಿಯಮವಿಲ್ಲ. ಭಾವಿಯು ಆಳವೆಂದು ಮೇಲಿನವನಿಗೆ ಪ್ರತೀತವಾದದ್ದೇ ಕೆಳಗಿನವನಿಗೆ ಎತ್ತರವೆಂದು ಪ್ರತೀತವಾಗುತ್ತದೆ; ಆದರೆ ಅಲ್ಲಿ ಎರಡು ಪ್ರತೀತಿಗಳಿಂದ ಎರಡು ಪದಾರ್ಥಗಳೇನೂ ಸಿದ್ಧವಾಗುವದಿಲ್ಲ. ಯಾವದಾದರೊಂದು ಮಾತನ್ನುಪಯೋಗಿಸಿದರೆ ಒಂದರ್ಥವು ಪ್ರತೀತವಾಗಬಹುದು; ಆದರೆ ಶಬ್ದಾರ್ಥವ್ಯವಹಾರಮಾತ್ರದಿಂದ ಆ ವಸ್ತುವು ನಿಜವಾಗಿ ಇದ್ದೇ ಇದೆ ಎಂದು ಸಿದ್ಧವಾಗಲಾರದು. ಹಾಗೆ ಸಿದ್ಧವಾಗುವದಾದರೆ ಶಶವಿಷಾಣವೆಂಬ ವ್ಯವಹಾರದಿಂದ ಶಶವಿಷಾಣವೆಂಬ ಪದಾರ್ಥವೂ ಸಿದ್ಧವಾಗಬೇಕಾದೀತು. ಸರಿಯಾದ ವ್ಯವಹಾರವು ಪ್ರಮಾಣಾಂತರಸಿದ್ಧವಾದ ಶಬ್ದಾರ್ಥಗಳ ವಿಷಯದಲ್ಲಿಯೇ ಆಗುತ್ತದೆ; ಭ್ರಾಂತವ್ಯವಹಾರವು ಪದಾರ್ಥವಿಲ್ಲದಿದ್ದರೂ ಆಗಬಹುದು. ಪ್ರಾಗಭಾವ, ಪ್ರಧ್ವಂಸಾಭಾವ- ಎಂದು ಮುಂತಾಗಿ ಅಭಾವದಲ್ಲಿ ವಿಶೇಷಗಳಿರುವವೆಂಬುದೂ ಸರಿಯಲ್ಲ. ಏಕೆಂದರೆ ಪ್ರಾಗಭಾವಾದಿಗಳಿಗೆ ಸ್ವರೂಪದಿಂದ ಯಾವ ವಿಶೇಷವನ್ನೂ ತೋರಿಸುವದಕ್ಕೆ ಆಗುವದಿಲ್ಲ. ಅಭಾವದಲ್ಲಿ ವಿಶೇಷಗಳಿದ್ದರೆ ಸವಿಶೇಷಣವಾದ ಅಭಾವಕ್ಕೂ ಭಾವಕ್ಕೂ ಹೆಚ್ಚುಕಡಿಮೆಯಿರಲಾರದಾಗಿ ಅಭಾವವೂ ಭಾವವೇ ಆಗಿಬಿಡುವದು. ಅಭಾವಗಳಲ್ಲಿ ಯಾವ ಸ್ವರೂಪವೈಲಕ್ಷಣ್ಯವೂ ಇಲ್ಲದಿರುವದರಿಂದ ಪ್ರಾಗಭಾವವೇ ಕಾರ್ಯಕ್ಕೆ ಕಾರಣವೆಂದೂ ಪ್ರಧ್ವಂಸಾದಿಗಳು ಅಲ್ಲವೆಂದೂ ನಿಯಮಿಸುವದೂ ಸರಿಯಾಗುವದಿಲ್ಲ. ಭಾವವು ಹೇಗೆ ಒಂದೇ ಆದರೂ ಅದನ್ನು ಘಟಭಾವ, ಪಟಭಾವ- ಎಂದು ಮುಂತಾಗಿ ವಿಕಲ್ಪಿಸುತ್ತಾರೋ ಹಾಗೆಯೇ ಅಭಾವವನ್ನೂ ವಿಕಲ್ಪಿಸುತ್ತಾರೆಂಬುದೇ ಯುಕ್ತ. ಈ ಎಲ್ಲಾ ಕಾರಣಗಳಿಂದ ಅಭಾವವು ವಂಧ್ಯಾಪುತ್ರಾದಿಗಳಂತೆ ವಿಕಲ್ಪಮಾತ್ರವೇ ಎಂದು ಹೇಳಿದ್ದು ಸರಿಯೇ ಆಗುತ್ತದೆ.

(೧) ನ ಚ ಶಬ್ದಾರ್ಥವ್ಯವಹಾರಮಾತ್ರೇಣ ಕಸ್ಯಚಿತ್ ಅರ್ಥಸ್ಯ ಪ್ರಸಿದ್ಧಿರ್ಭವತಿ। ಪ್ರಮಾಣಾನ್ತರಸಿದ್ಧಯೋಃ ಶಬ್ದಾರ್ಥಯೋಃ ವ್ಯವಹಾರಾವತಾರಾತ್॥

-ಸೂ. ಭಾ. ೨-೨-೧೫-೩೨.

(೨) ಘಟಾದೇರೇವ ಪ್ರಾಗಭಾವಸ್ಯ ಸ್ವಕಾರಣಸಂಬನ್ಧೋ ಭವತಿ ನ ವನ್ಧ್ಯಾಪುತ್ರಾದೇಃ ಅಭಾವಸ್ಯ ತುಲ್ಯತ್ವೇಽಪಿ ಇತಿ ವಿಶೇಷೋಽಭಾವಸ್ಯ ವಕ್ತವ್ಯಃ। ಏಕಸ್ಯಾಭಾವಃ, ದ್ವಯೋರಭಾವಃ, ಸರ್ವಸ್ಯಾಭಾವಃ, ಪ್ರಾಗಭಾವಃ, ಪ್ರಧ್ವಂಸಾಭಾವಃ, ಇತರೇತರಾಭಾವಃ, ಅತ್ಯನ್ತಾಭಾವಃ- ಇತಿ ಲಕ್ಷಣತೋ ನ ಕೇನಚಿತ್ ವಿಶೇಷೋ ದರ್ಶಯಿತುಂ ಶಕ್ಯಃ । ಅಸತಿ ಚ ವಿಶೇಷೇ ಘಟಸ್ಯ ಪ್ರಾಗಭಾವ ಏವ ಕುಲಾಲಾದಿಭಿರ್ಘಟಭಾವಮ್ ಆಪದ್ಯತೇ, ಸಂಬಧ್ಯತೇ ಚ ಭಾವೇನ ಕಪಾಲಾಖ್ಯೇನ, ನಂಬದ್ಧಶ್ಚ ಸರ್ವವ್ಯವಹಾರಯೋಗ್ಯಶ್ಚ ಭವತಿ। ನ ತು ಘಟಸ್ಯೈವ ಪ್ರಧ್ವಂಸಾಭಾವಃ ಅಭಾವತ್ವೇ ಸತ್ಯಪಿ ಇತಿ- ಪ್ರಧ್ವಂಸಾದ್ಯಭಾವಾನಾಂ ನ

ಕ್ವಚಿದ್ವ್ಯವಹಾರಯೋಗ್ಯತ್ವಮ್, ಪ್ರಾಗಭಾವಸ್ಯೈವ ದ್ವ್ಯಣುಕಾದಿದ್ರವ್ಯಾಖ್ಯಸ್ಯ ಉತ್ಪತ್ತ್ಯಾದಿ ವ್ಯವಹಾರಾರ್ಹತ್ವಮ್ ಇತ್ಯೇತತ್ ಅನಮಞ್ಜಸಮ್। ಅಭಾವತ್ವಾವಿಶೇಷಾತ್ ಅತ್ಯನ್ತ ಪ್ರಧ್ವಂಸಾಭಾವಯೋರಿವ ॥ -ಗೀ. ಭಾ.೧೮-೪೮-೧೦೮೮.

(೩) ಯದಿ ಪುನಃ ಅಭಾವಸ್ಯಾಪಿ ವಿಶೇಷೋಽಭ್ಯುಪಗಮ್ಯೇತ, ಉತ್ಪಲಾದೀನಾಮಿವ ನೀಲತ್ವಾದಿಃ, ತತೋ ವಿಶೇಷವತ್ತ್ವಾದೇವ ಅಭಾವಸ್ಯ ಭಾವತ್ವಮ್ ಉತ್ಪಲಾದಿವತ್ ಪ್ರಸಜ್ಯೇತ ॥
-ಸೂ. ಭಾ. ೨-೨-೨೬-೫೩.

೧೦೦. ಅಭಾವವು ಭಾವಕ್ಕಿಂತ ವಿಲಕ್ಷಣವಾಗಿಯೇ ತೋರುತ್ತದೆಯಲ್ಲ! ಅದರಲ್ಲಿ ವಿಶೇಷಗಳೂ ತೋರುತ್ತವೆಯಲ್ಲ ! ಹೀಗಿದ್ದರೂ ಅದನ್ನು ಅವಸ್ತುವೆಂದೂ ಅದರಲ್ಲಿ ಯಾವ ವಿಶೇಷಗಳೂ ಇಲ್ಲವೆಂದೂ ಹಠಹಿಡಿಯುವದಾದರೆ ಹೀಗೆಯೇ ಯಾವದಾದರೊಂದು ಅನುಪಪತ್ತಿಯನ್ನು ತೋರಿಸಿ ಪ್ರತ್ಯಕ್ಷವಾಗಿ ಕಾಣುವ ವಸ್ತುಗಳು ಯಾವವೂ ಇಲ್ಲವೆಂದೇ ಸಾಧಿಸಬಹುದಲ್ಲವೆ ?- ಎಂಬ ಶಂಕೆಯು ಕೆಲವರನ್ನು ಬಾಧಿಸುತ್ತದೆ.

ಆದರೆ ಈ ಶಂಕೆಗೆ ಕಾರಣವಿಲ್ಲ. ವ್ಯವಹಾರದಲ್ಲಿ ಭಾವ, ಅಭಾವ ಎಂಬ ಪ್ರತೀತಿವೈಲಕ್ಷಣ್ಯವು ಇಲ್ಲವೆಂದೇನೂ ನಾವು ಹೇಳುವದಿಲ್ಲ. ಕಪ್ಪೆಯಚಿಪ್ಪು ಬೆಳ್ಳಿಯಂತೆ ತೋರುವದು ನಿಜ; ಆದರೂ ಅಲ್ಲಿ ಬೆಳ್ಳಿಯು ನಿಜವಾಗಿರುವದಿಲ್ಲವಾದ್ದರಿಂದ ಅದರ ಪ್ರತೀತಿಯು ಭ್ರಾಂತಿಮಾತ್ರವಾಗಿರುತ್ತದೆ. ಇದರಂತೆ ಅಭಾವವು ಭಾವಕ್ಕೆ ಪ್ರತಿದ್ವಂದ್ವಿಯಾದದ್ದರಿಂದ ಭಾವದಂತೆಯೇ ಬೇರೆಬೇರೆಯಾಗಿ ತೋರುವದು ಸಹಜವಾಗಿದೆ. ಘಟಭಾವ, ಪಟಭಾವ ಎಂದು ಮುಂತಾಗಿ ತೋರುವವು ಬೇರೆಬೇರೆಯ ಇರವುಗಳೆಂದು ಯಾರೂ ಹೇಳುವದಕ್ಕೆ ಬರುವದಿಲ್ಲ. ಇದರಂತೆ ಕ್ರಿಯಾಗುಣಗಳ ಸಂಬಂಧದಿಂದ ಅಭಾವವೂ ದ್ರವ್ಯಾದಿಗಳಂತೆ ಬೇರೆಬೇರೆಯಾಗಿ ಕಾಣುತ್ತದೆ. ಸರಿಯಾಗಿ ನೋಡಿದರೆ ಭಾವವು ಒಂದೇ, ಅಭಾವವೂ ಒಂದೇ. ಒಳಹೊಕ್ಕು ನೋಡಿದರೆ ಘಟಾದಿಗಳು ಭಾವವಿಶೇಷವೆಂಬುದು ಎಂದಿಗೂ ಹೊಂದುವದಿಲ್ಲ. ಭಾವವೆಂದರೆ ಸತ್ತು, ಇರವು. ದ್ರವ್ಯ, ಗುಣ, ಕರ್ಮ- ಇವುಗಳಲ್ಲಿ ಸತ್ತಾ (ಇರವು) ಎಂಬ ಒಂದಾನೊಂದು **ಪರಸಾಮಾನ್ಯವು** ಅಥವಾ ಎಲ್ಲಕ್ಕೂ ಹೆಚ್ಚಿನ ಜಾತಿಯು ಸಮವಾಯವೆಂಬ ಸಂಬಂಧವಿಶೇಷದಿಂದ ಸೇರಿಕೊಂಡಿರುವದೆಂದು ವೈಶೇಷಿಕರು ಹೇಳುತ್ತಾರೆ. ಗೋವುಗಳಲ್ಲೆಲ್ಲ ಗೋತ್ವವೆಂಬ ಜಾತಿಯಿರುವಂತೆ ಪದಾರ್ಥಗಳಲ್ಲೆಲ್ಲ ಸತ್ತೆ (ಇರವು) ಎಂಬ ಜಾತಿಯು ಹೊಂದಿಕೊಂಡು ಇರುತ್ತದೆ ಎಂದು ಅವರ ನಂಬಿಕೆ. ಪೃಥ್ವೀತ್ವ, ದ್ರವ್ಯತ್ವ, ಸತ್ತೆ- ಎಂಬ ಜಾತಿಗಳು ಒಂದಕ್ಕೊಂದು ವ್ಯಾಪಕವಾಗಿದ್ದು ಸತ್ತೆ ಎಂಬುದು ಎಲ್ಲಕ್ಕೂ ವ್ಯಾಪಕವಾಗಿದೆ ; ಆದ್ದರಿಂದ ಅದೇ ಪರಸಾಮಾನ್ಯವು ಎಂದರೆ ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಜಾತಿಯು ಎಂದು ಅವರ ಹೇಳಿಕೆ. ಆದರೆ

ಸದ್ರೂಪವಾದ ಬ್ರಹ್ಮಕ್ಕಿಂತ ಬೇರೆಯಾಗಿ ಯಾವ ಸತ್ತೆಯನ್ನೂ ವೇದಾಂತಿಗಳು ಒಪ್ಪುವದಿಲ್ಲ. ಇದನ್ನು ಮುಂದೆ (೧೦೧) ನಾವು ವಿಶದಗೊಳಿಸುವೆವು. ವೇದಾಂತದಲ್ಲಿ ಸದ್ವಸ್ತುವೆಂದರೆ ಬ್ರಹ್ಮವೊಂದೇ, ಮಿಕ್ಕದ್ದೆಲ್ಲವೂ ಅಸತ್ತೇ. ಒಂದೇ ಸದ್ವಸ್ತುವನ್ನು ಘಟಸತ್ತೆ, ಪಟಸತ್ತೆ -ಎಂದು ಜನರು ವ್ಯವಹರಿಸುತ್ತಿರುವರು. ಘಟಾದಿಗಳು ಕಾರ್ಯವಾಗಿರುವದರಿಂದ ತಮ್ಮ ತಮ್ಮ ಕಾರಣವಾದ ಮೃದಾದಿಗಳಿಗಿಂತ ಅನನ್ಯವಾಗಿರುವವು ; ಆದ್ದರಿಂದ ಅವು ಕಾರಣರೂಪದಿಂದ ಸತ್ತಾಗಿರುವವು. ತಮ್ಮ ತಮ್ಮ ರೂಪದಿಂದ ಅಸತ್ತೇ ಆಗಿರುವವು. ಸದ್ಬುದ್ಧಿಯು ಯಾವಾಗಲೂ ಮಾರ್ಪಡುವದಿಲ್ಲ ; ಆದರೆ ಘಟಾದಿಗಳ ಬುದ್ಧಿಯು ತಮ್ಮತಮ್ಮ ಕಾರಣವಾದ ಮೃದಾದಿಗಳ ಬುದ್ಧಿಯಲ್ಲಿ ಅಡಗುತ್ತಾ ಕೊನೆಗೆ ಪರಮಕಾರಣವಾದ ಬ್ರಹ್ಮವೆಂಬ ಸದ್ವಸ್ತುವಿನಲ್ಲಿ ವಿಶ್ರಾಂತಿಯನ್ನು ಹೊಂದುತ್ತದೆ. ಹೀಗೆ ಘಟಾದಿಗಳೇ ಅಸತ್ತಾಗಿರುವದ ರಿಂದ ಅವುಗಳ ಅಪೇಕ್ಷೆಯಿಂದ ಮಾತ್ರವೇ ಸಿದ್ಧವಾಗುವ ಘಟಾಭಾವಾದಿಗಳು ಅಸತ್ತೆಂಬುದನ್ನು ಹೇಳುವದೇನಿದೆ ? ಪ್ರತ್ಯಕ್ಷಾದಿಪ್ರಮಾಣಗಳಿಂದ ಘಟಾದಿಗಳು ಸಿದ್ಧವಾಗುವದಾದರೂ ಸದ್ವಸ್ತುವಾದ ಬ್ರಹ್ಮವೊಂದೇ ಸತ್ಯವೆನ್ನುವವರೆಗೇ ಅವುಗಳನ್ನು ಸತ್ತೆಂದು ವ್ಯವಹರಿಸುವದು ಸರಿಯಾದೀತೇ ಹೊರತು ಬ್ರಹ್ಮವೊಂದೇ ಸತ್ಯವೆಂಬ ಪರಮಾರ್ಥದೃಷ್ಟಿಯಿಂದ ಅವನ್ನು ಸತ್ಯವೆಂದು ಕರೆಯುವದು ಎಂದಿಗೂ ಸರಿಯಾಗ ಲಾರದು. ಇದನ್ನು ಆಗಲೆ (೨೮) ಪ್ರತಿಪಾದಿಸಿದ್ದಾಗಿದೆ. ಆದ್ದರಿಂದ ಪರಮಾರ್ಥ ದೃಷ್ಟಿಯಿಂದ ಭಾವಾಭಾವಗಳಲ್ಲಿ ವಿಶೇಷವಿಲ್ಲವೆಂದು ಹೇಳಿದ್ದೂ ಅಭಾವವನ್ನು ಅಸತ್ಯವೆಂದು ಅಲ್ಲಗಳೆದದ್ದೂ ಅಯುಕ್ತವಲ್ಲ.

(೧) ಭಾವಪ್ರತಿಯೋಗೀ ಹಿ ಅಭಾವಃ। ಯಥಾ ಹಿ ಅಭಿನ್ನೋऽಪಿ ಭಾವಃ ಘಟ ಪಟಾದಿಭಿರ್ವಿಶೇಷ್ಯತೇ (ಅಭಿನ್ನ ಏವ) 'ಘಟಭಾವಃ' 'ಪಟಭಾವಃ' ಇತಿ, ಏವಂ ನಿರ್ವಿಶೇಷೋऽಪಿ ಅಭಾವಃ ಕ್ರಿಯಾಗುಣಯೋಗಾತ್ ದ್ರವ್ಯಾದಿವತ್ ವಿಕಲ್ಪ್ಯತೇ। ನ ಹಿ ಅಭಾವಃ ಉತ್ಪಲಾದಿವತ್ ವಿಶೇಷಣಸಹಭಾವೀ । ವಿಶೇಷಣವತ್ತ್ವೇ ಭಾವ ಏವ ಸ್ಯಾತ್॥

-ತೈ. ಭಾ. ಅವ.-೯

(೨) ಯಥಾ ಘಟಾದಿಸಂಸ್ಥಾನಂ ಚಕ್ಷುಷಾ ನಿರೂಪ್ಯಮಾಣಂ ಮೃದ್ವ್ಯತಿರೇಕೇಣ ಅನುಪಲಬ್ಧೇಃ ಅಸತ್, ತಥಾ ಸರ್ವೋ ವಿಕಾರಃ ಕಾರಣವ್ಯತಿರೇಕೇಣ ಅನುಪಲಬ್ಧೇಃ ಅಸನ್, ಜನ್ಮಪ್ರಧ್ವಂಸಾಭ್ಯಾಂ ಪ್ರಾಕ್ ಊರ್ಧ್ವಂ ಚ ಅನುಪಲಬ್ಧೇಃ ಕಾರ್ಯಸ್ಯ ಘಟಾದೇಃ, ಮೃದಾದಿಕಾರಣಸ್ಯ ಚ ತತ್ಕಾರಣವ್ಯತಿರೇಕೇಣ ಅನುಪಲಬ್ಧೇಃ ಅಸತ್ತ್ವಮ್ । ತದಸತ್ತ್ವೇ ಸರ್ವಾಭಾವಪ್ರಸಙ್ಗಃ ಇತಿ ಚೇತ್ । ನ । ಸರ್ವತ್ರ ಬುದ್ಧಿದ್ವಯೋಪಲಬ್ಧೇಃ ಸದ್ಬುದ್ಧಿಃ ಅಸದ್ಬುದ್ಧಿಃ ಇತಿ । ಯದ್ವಿಷಯಾ ಬುದ್ಧಿಃ ನ ವ್ಯಭಿಚರತಿ ತತ್ ಸತ್, ಯದ್ವಿಷಯಾ ವ್ಯಭಿಚರತಿ ತತ್ ಅಸತ್, ಇತಿ ಸದಸದ್ವಿಭಾಗೇ ಬುದ್ಧಿತನ್ತ್ರೇ ಸ್ಥಿತೇ ಸರ್ವತ್ರ ದ್ವೇ ಬುದ್ಧೀ ಸರ್ವೈರುಪಲಭ್ಯೇತೇ ಸಾಮಾನಾಧಿಕರಣ್ಯೇನ ನೀಲೋತ್ಪಲವತ್ 'ಸನ್ ಘಟಃ' 'ಸನ್ ಪಟಃ' 'ಸನ್ ಹಸ್ತೀ' ಇತ್ಯೇವಂ

ಸರ್ವತ್ರ। ತಯೋರ್ಬುದ್ಧ್ಯೋಃ ಘಟಾದಿಬುದ್ಧಿರ್ವ್ಯಭಿಚರತಿ । ತಥಾ ಚ ದರ್ಶಿತಮ್ । ನ ತು ಸದ್ಬುದ್ಧಿಃ। ತಸ್ಮಾತ್ ಘಟಾದಿಬುದ್ಧಿವಿಷಯಃ ಅಸನ್, ವ್ಯಭಿಚಾರಾತ್। ನ ತು ಸದ್ಬುದ್ಧಿವಿಷಯಃ, ಅವ್ಯಭಿಚಾರಾತ್ ॥ - ಗೀ. ಭಾ. ೨-೧೬-೨೬.

೧೧೧. ಸತ್ಕಾರ್ಯವಾದದ ವಿಷಯಕ್ಕೆ ಇನ್ನೊಂದು ಶಂಕೆಯನ್ನು ಎಬ್ಬಿಸಿ ಪರಿಹಾರವನ್ನು ಹೇಳುವದು ಉಳಿದಿದೆ. ಘಟಾದಿಗಳು ಅಸತ್ತೆಂಬುದು ಅವುಗಳಲ್ಲಿರುವ ಸತ್ತೆಂಬ ಪ್ರತೀತಿಗೆ ವಿರುದ್ಧವಾಗಿರುತ್ತದೆ. ಘಟವೂ ಅಸತ್ತು, ಆದರೆ ಅಭಾವವೂ ಅಸತ್ತು ಎಂದರೆ ಘಟದ ಅಭಾವವು ಎಂಬ ಪ್ರತೀತಿಗೂ ಘಟವು ಭಾವವು ಎಂಬ ಪ್ರತೀತಿಗೂ ವಿರುದ್ಧವಾಗುತ್ತದೆ. ಸದ್ರೂಪವಾದ ಬ್ರಹ್ಮದಿಂದ ಅಸದ್ರೂಪವಾದ ಜಗತ್ತು ಹುಟ್ಟುತ್ತದೆ -ಎಂದರೆ ಸತ್ತಿನಿಂದ ಅಸತ್ತುಂಟಾಗುವದೆಂಬ ಯುಕ್ತಿ ವಿರುದ್ಧವಾದ ಮತಕ್ಕೆ ಅವಕಾಶವನ್ನು ಕೊಟ್ಟಂತೆ ಆಗುತ್ತದೆ. ''ಅಸತ್ತಿನಿಂದ ಸತ್ತು ಹೇಗೆ ಉಂಟಾದೀತು'' (ಛಾಂ.೬-೨-೨)ಎಂಬ ಶ್ರುತಿಯು ಜಗತ್ತು ಸತ್ಯವೆಂದೇ ಹೇಳುತ್ತಿದೆ. ಸದ್ರೂಪವಾದ ಬ್ರಹ್ಮವು - ನಿರವಯವವಾದ್ದರಿಂದ ಮೃದಾದಿಗಳಂತೆ ಅದು ಜಗತ್ತಿಗೆ ಕಾರಣವೆಂಬ ವಾದವು ಯುಕ್ತಿವಿರುದ್ಧವೂ ಆಗಿರುತ್ತದೆ. ಹೀಗೆ ಜಗತ್ತು ಅಸತ್ತೆಂಬ ವಾದವೂ ಸದ್ರೂಪವಾದ ಬ್ರಹ್ಮವು ಜಗತ್ಕಾರಣವೆಂಬ ವಾದವೂ ಶ್ರುತಿಯುಕ್ತಿಗಳಿಗೆ ವಿರುದ್ಧವೆಂದು ತೋರುತ್ತದೆ.

ಈ ಶಂಕೆಗೆ ಪರಿಹಾರವೇನೆಂದರೆ, ಘಟಾದಿಗಳೂ ಅವುಗಳ ಅಭಾವವೂ ಅಸತ್ತು ಎಂಬುದು ವೇದಾಂತಿಗಳಿಗೆ ಅನಿಷ್ಟವಲ್ಲ ; ಏಕೆಂದರೆ ಬ್ರಹ್ಮಭಿನ್ನವಾದದ್ದೆಲ್ಲವೂ ಅಸತ್ತೇ. ಅಸತ್ತು ಎಂದರೆ ಹುಸಿತೋರಿಕೆ. ಈ ದೃಷ್ಟಿಯಿಂದ ಘಟಾದಿಗಳಿಗೂ ಅವುಗಳ ಅಭಾವಗಳಿಗೂ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ. ಯಾವದು ಯಾವ ರೂಪದಿಂದ ಕಂಡದ್ದು ಆ ರೂಪವನ್ನು ಮಾರ್ಪಡಿಸಿಕೊಳ್ಳುವದಿಲ್ಲವೋ ಅದು **ಸತ್ಯವು.** ಪ್ರತೀತವಾದದ್ದು ಅಥವಾ ಅರ್ಥಕ್ರಿಯಾಕಾರಿಯಾದದ್ದು ಸತ್ಯವೆಂಬುದು ಸರಿಯಲ್ಲ. ಮುಂದೆ ಇದನ್ನು ಸ್ಪಷ್ಟಪಡಿಸಲಾಗುವದು. ಆದರೆ ಯಾವದು ಯಾವ ರೂಪದಿಂದ ಕಂಡದ್ದು ಆ ರೂಪವನ್ನು ಮಾರ್ಪಡಿಸಿಕೊಳ್ಳುತ್ತಿರುವರೋ ಅದು ಅಸತ್ತು, ಸತ್ಯವಲ್ಲ, ಅನೃತವು. ಹುಸಿತೋರಿಕೆಯೆಂದು ಎಲ್ಲರೂ ಒಪ್ಪಿರುವ ಕನಸಿನ ಪದಾರ್ಥಗಳಲ್ಲಿಯೂ ಸತ್ತು, ಅಸತ್ತು-ಎಂಬ ವಿಂಗಡವಿರುತ್ತದೆ; ಆದ್ದರಿಂದ ಭಾವ, ಅಭಾವ-ಎಂಬ ವಿಭಾಗಪ್ರತೀತಿಯು ಅವುಗಳು ಅಸತ್ತೆಂಬ ನಿಶ್ಚಯಕ್ಕೆ ಅಡ್ಡಿಯಾಗಲಾರದು. ಆದ್ದರಿಂದ **ಬಿಸಿಲುಕುದುರೆಯೇ ಮುಂತಾದದ್ದಕ್ಕೆ ಹೋಲಿಸಿದಾಗ ನೀರು ಸತ್ಯವೆಂದು ವ್ಯವಹರಿಸುವದು ಜಗತ್ತು ಅಸತ್ಯವೆಂಬ ಪರಮಾರ್ಥದೃಷ್ಟಿಯ ವಾದಕ್ಕೆ ಬಾಧಕವಲ್ಲ.**

ಸತ್ತಾಸಾಮಾನ್ಯಕ್ಕಿಂತ ಬೇರೆಯಾಗಿ ಘಟಾದಿಭಾವವಸ್ತುಗಳನ್ನೂ ಅವುಗಳ ಪ್ರಾಗಭಾವಾದಿಗಳನ್ನೂ ಪದಾರ್ಥಗಳೆಂದು ತಾರ್ಕಿಕರು ಒಪ್ಪಿರುವಂತೆ ವೇದಾಂತಿಗಳು

ಸದ್ರೂಪನಾಗಿರುವ ಆತ್ಮನಿಗಿಂತ ಬೇರೆಯಾಗಿ ಅಸತ್ತೆಂಬ ಸ್ವತಂತ್ರಪದಾರ್ಥವೊಂದನ್ನು ಒಪ್ಪಿರುವದಿಲ್ಲ. ಹಗ್ಗದ ಹಾವು ಹೇಗೆ ಹಗ್ಗಕ್ಕಿಂತ ಬೇರೆಯಾಗಿ ಇರುವದೇ ಇಲ್ಲವೋ ಹಾಗೆಯೇ ಸದ್ಬ್ರಹ್ಮಕ್ಕಿಂತ ಬೇರೆಯಾದ ಘಟಾದಿಗಳಾಗಲಿ ಅವುಗಳ ಅಭಾವಗಳಾಗಲಿ ಇರುವದೇ ಇಲ್ಲ. ಸತ್ತೊಂದೇ ದ್ವೈತಭೇದರೂಪವಾಗಿ ಕಾಣುತ್ತಿರುವದು. ಆದ್ದರಿಂದ ದ್ವೈತವೂ ಪರಮಾರ್ಥವಾಗಿ ಸತ್ತೇ, ಅಸತ್ತಲ್ಲ. **ಆತ್ಮಭಿನ್ನವಾದದ್ದೆಲ್ಲವೂ ತನ್ನ ರೂಪದಿಂದ ಅನೃತವು, ಆತ್ಮರೂಪದಿಂದ ಸತ್ತೇ ಎಂಬುದು ವೇದಾಂತಸಿದ್ಧಾಂತವು.**

"ಅಸತ್ತಿನಿಂದ ಸತ್ತು ಹೇಗೆ ಉಂಟಾದೀತು?" ಎಂಬ ಶ್ರುತಿಯ ಅಭಿಪ್ರಾಯವೇನೆಂದರೆ ಸತ್ತಿನಿಂದ ಉಂಟಾಗುವ ಜಗತ್ತೆಂಬ ಕಾರ್ಯವು ಸತ್ತಿಗಿಂತ ಭಿನ್ನವಲ್ಲ. ಕೆಲವರು ಅಸತ್ತಿನಿಂದಲೇ ಜಗತ್ತು ಉಂಟಾಯಿತೆನ್ನುವರು ; ಆದರೆ ಮೃದನ್ವಿತವಾದ ಘಟಾದಿಗಳು ಮೃತ್ಕಾರ್ಯವಾಗಿರುವಂತೆ ಸದನ್ವಿತವಾದ ಜಗತ್ತೂ ಸತ್ಕಾರ್ಯವಾಗಿದ್ದೀತೇ ಹೊರತು ಅಸತ್ಕಾರ್ಯವಾಗಲಾರದು. ಕಾರಣವು ಸತ್ತೆಂಬುದನ್ನೇ ಅವಧಾರಣಮಾಡುವದಕ್ಕೆ ಬಂದಿರುವದರಿಂದ ಕಾರ್ಯವಾದ ಜಗತ್ತು ಸತ್ಯವೆಂಬುದರಲ್ಲಿ ಅಥವಾ ಅಸತ್ತೆಂಬುದರಲ್ಲಿ ಈ ಶ್ರುತಿಗೆ ತಾತ್ಪರ್ಯವಿಲ್ಲ. ಆದ್ದರಿಂದ ಜಗತ್ತು ಸತ್ಯವೆಂಬುದಕ್ಕೆ ಈ ಶ್ರುತಿಯು ಸಾಧಕವಲ್ಲ; ವಾಚಾರಂಭಣಶ್ರುತಿಯು ಕಾರ್ಯವಾದ ಜಗತ್ತು ಅಸತ್ಯವೆಂದೇ ಹೇಳುತ್ತಿರುವದರಿಂದ ಜಗತ್ಸತ್ಯತ್ವವಾದಕ್ಕೆ ಅದು ಬಾಧಕವೂ ಆಗಿರುತ್ತದೆ.

ನಿರವಯವವಾದ ಸತ್ತಿನಿಂದ ಜಗತ್ತುಂಟಾಗುವದು ಹೇಗೆ ? ಎಂಬ ಆಕ್ಷೇಪವು ಏಳುವಹಾಗೇ ಇಲ್ಲ. **ಏಕೆಂದರೆ ಮಾಯಿಕವಾಗಿ ಉಂಟಾಗುವ ಜಗತ್ತಿಗೆ ಸತ್ತಿನಲ್ಲಿ ಭ್ರಾಂತಿಬುದ್ಧಿಕಲ್ಪಿತವಾದ ಅವಯವಗಳೇ ಸಾಕಾಗಿರುತ್ತವೆ.**

(೧) ಯದ್ರೂಪೇಣ ಯತ್ ನಿಶ್ಚಿತಂ ತದ್ರೂಪಂ ನ ವ್ಯಭಿಚರತಿ ತತ್ ಸತ್ಯಮ್ । ಯದ್ರೂಪೇಣ ಯತ್ ನಿಶ್ಚಿತಂ ತದ್ರೂಪಂ ವ್ಯಭಿಚರತ್ 'ಅನೃತಮ್' ಇತ್ಯುಚ್ಯತೇ। ಅತೋ ವಿಕಾರೋಽನೃತಮ್ "ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" ಏವಂ "ಸದೇವ ಸತ್ಯಮ್" ಇತ್ಯವಧಾರಣಾತ್॥ -ತೈ.ಭಾ.೨-೧-೯೮.

(೨) ಏಕಮೇವ ಹಿ ಪರಮಾರ್ಥಸತ್ಯಂ ಬ್ರಹ್ಮ । ಇಹ ಪುನಃ ವ್ಯವಹಾರವಿಷಯಮ್ ಆಪೇಕ್ಷಿಕಂ ಸತ್ಯಮ್, ಮೃಗತೃಷ್ಣಿಕಾದ್ಯನೃತಾಪೇಕ್ಷಯಾ ಉದಕಾದಿ ಸತ್ಯಮುಚ್ಯತೇ । ಅನೃತಂ ಚ ತದ್ವಿಪರೀತಮ್ । ಕಿಂ ಪುನರೇತತ್ ಸರ್ವಮ್ ಅಭವತ್ ? ಸತ್ಯಮ್ ಪರಮಾರ್ಥಸತ್ಯಮ್ । ಕಿಂ ಪುನಸ್ತತ್ ? ಬ್ರಹ್ಮ॥ -ತೈ. ಭಾ. ೨-೬-೧೮೦.

(೩) ಸ್ವಪ್ನವೃತ್ತಾವಪಿ ಸ್ವಪ್ನಸ್ಥಾನೇಽಪಿ ಅನ್ತಶ್ಚೇತಸಾ ಮನೋರಥಸಙ್ಕಲ್ಪಿತಮ್ ಅಸತ್। ಸಙ್ಕಲ್ಪಾನನ್ತರಸಮಕಾಲಮೇವ ಅದರ್ಶನಾತ್ । ತತ್ರೈವ ಸ್ವಪ್ನೇ ಬಹಿಶ್ಚೇತಸಾ ಗೃಹೀತಂ

ಚಕ್ಷುರಾದಿದ್ವಾರೇಣ ಉಪಲಬ್ಧಂ ಘಟಾದಿ ಸತ್ । ಇತ್ಯೇವಮ್ ಅಸತ್ಯಮಿತಿ ನಿಶ್ಚಿತೇಽಪಿ ಸದಸದ್ವಿಭಾಗೋ ದೃಷ್ಟಃ । ಉಭಯೋರಪಿ ಅನ್ತರ್ಬಹಿಶ್ಚೇತಃಕಲ್ಪಿತಯೋರ್ವೈತಥ್ಯಮೇವ ದೃಷ್ಟಮ್॥ -ಮಾಂ.ಕಾ.೨-೯-೧೦.

(೪) ಸತ ಏವ ದ್ವೈತಭೇದೇನ ಅನ್ಯಥಾಗೃಹ್ಯಮಾಣತ್ವಾತ್ ನ ಅಸತ್ತ್ವಂ ಕಸ್ಯಚಿತ್ ಕ್ವಚಿತ್ ಇತಿ ಬ್ರೂಮಃ । ಯಥಾ ಸತೋಽನ್ಯತ್ ವಸ್ತ್ವನ್ತರಂ ಪರಿಕಲ್ಪ್ಯ ಪುನಃ ತಸ್ಯೈವ ಪ್ರಾಗುತ್ಪತ್ತೇಃ ಪ್ರಧ್ವಂಸಾಚ್ಚ ಊರ್ಧ್ವಮ್ ಅಸತ್ತ್ವಂ ಬ್ರುವತೇ ತಾರ್ಕಿಕಾಃ, ನ ತಥಾ ಅಸ್ಮಾಭಿಃ ಕದಾಚಿತ್ ಕ್ವಚಿದಪಿ ಸತೋಽನ್ಯತ್ ಅಭಿಧಾನಮ್ ಅಭಿಧೇಯಂ ವಾ ವಸ್ತು ಪರಿಕಲ್ಪ್ಯತೇ । ಸದೇವ ತು ಸರ್ವಮ್ ಅಭಿಧಾನಮ್ । ಅಭಿಧೀಯತೇ ಚ ಯತ್ ಅನ್ಯಬುದ್ಧ್ಯಾ । ಯಥಾ ರಜ್ಜುರೇವ ಸರ್ಪಬುದ್ಧ್ಯಾ 'ಸರ್ಪಃ' ಇತಿ ಅಭಿಧೀಯತೇ, ಯಥಾ ವಾ ಪಿಣ್ಡಘಟಾದಿ ಮೃದೋಽನ್ಯಬುದ್ಧ್ಯಾ ಪಿಣ್ಡಘಟಾದಿಶಬ್ದೇನ ಅಭಿಧೀಯತೇ ಲೋಕೇ । ರಜ್ಜುವಿವೇಕದರ್ಶಿನಾಂ ತು ಸರ್ಪಾಭಿಧಾನಬುದ್ಧೀ ನಿವರ್ತೇತೇ, ಯಥಾ ಚ ಮೃದ್ವಿವೇಕದರ್ಶಿನಾಂ ಘಟಾದಿಶಬ್ದಬುದ್ಧೀ । ತದ್ವತ್ ಸದ್ವಿವೇಕದರ್ಶಿನಾಮ್ ಅನ್ಯವಿಕಾರಶಬ್ದಬುದ್ಧೀ ನಿವರ್ತೇತೇ॥

-ಛಾಂ. ೬-೨-೩-೪೫೬.

(೫) ವಿಶೇಷಾಕಾರಮಾತ್ರಂ ತು ಸರ್ವೇಷಾಂ ಮಿಥ್ಯಾಪ್ರತ್ಯಯನಿಮಿತ್ತಮ್ ಇತಿ ವಾಚಾರಮ್ಭಣಂ ವಿಕಾರೋ ನಾಮಧೇಯಮನೃತಂ, ತ್ರೀಣಿ ರೂಪಾಣಿ ಇತ್ಯೇವ ಸತ್ಯಮ್। ತಾನ್ಯಪಿ ಆಕಾರವಿಶೇಷತೋಽನೃತಮ್, ಸ್ವತಃ ಸನ್ಮಾತ್ರರೂಪತಯಾ ಸತ್ಯಮ್। ಪ್ರಾಕ್ ಸದಾತ್ಮಪ್ರತಿಬೋಧಾತ್ ಸ್ವವಿಷಯೇಽಪಿ ಸರ್ವಂ ಸತ್ಯಮೇವ ಸ್ವಪ್ನದೃಶ್ಯಾ ಇವ ಇತಿ ನ ಕಶ್ಚಿದ್ ವಿರೋಧ ॥ -ಛಾಂ. ೮-೫-೪-೬೩೬.

(೬) ಅಭಾವಾಚ್ಚ ಭಾವೋತ್ಪತ್ತೌ ಅಭಾವಾನ್ವಿತಮೇವ ಸರ್ವಂ ಕಾರ್ಯಂ ಸ್ಯಾತ್। ನ ಚೈವಂ ದೃಶ್ಯತೇ। ಸರ್ವಸ್ಯ ಚ ವಸ್ತುನಃ ಸ್ವೇನ ಸ್ವೇನ ರೂಪೇಣ ಭಾವಾತ್ಮನೈವ ಉಪಲಭ್ಯಮಾನತ್ವಾತ್। ನ ಚ ಮೃದನ್ವಿತಾಃ ಶರಾವಾದಯೋ ಭಾವಾಃ ತನ್ತ್ವಾದಿವಿಕಾರಾಃ ಕೇನಚಿತ್ ಅಭ್ಯುಪಗಮ್ಯನ್ತೇ। ಮೃದ್ವಿಕಾರಾನೇವ ತು ಮೃದನ್ವಿತಾನ್ ಭಾವಾನ್ ಲೋಕಃ ಪ್ರತ್ಯೇತಿ॥

-ಸೂ. ಭಾ.೨-೨-೨೬-೫೩.

(೭) ಅಸತಃ ಸದುತ್ಪತ್ತೌ ನ ಕಶ್ಚಿದಪಿ ದೃಷ್ಟಾನ್ತಪ್ರಕಾರೋಸ್ತಿ ಇತ್ಯಭಿಪ್ರಾಯಃ। ಏವಮ್ ಅಸದ್ವಾದಿಪಕ್ಷಮ್ ಉನ್ಮಥ್ಯ ಉಪಸಂಹರತಿ ಸತ್ತ್ವೇವ ಸೋಮ್ಯೇದಮಗ್ರ ಆಸೀತ್ ಇತಿ ಸ್ವಪಕ್ಷಸಿದ್ಧಮ್॥ -ಛಾಂ. ಭಾ. ೬-೨-೨-೪೫೪.

(೮) ನಿರವಯವಸ್ಯ ಸತಃ ಕಥಂ ವಿಕಾರಸಂಸ್ಥಾನಮ್ ಉಪಪದ್ಯತೇ? ನೈಷ ದೋಷ। ರಜ್ವಾದ್ಯವಯವೇಭ್ಯಃ ಸರ್ಪಾದಿಸಂಸ್ಥಾನವತ್ ಬುದ್ಧಿಪರಿಕಲ್ಪಿತೇಭ್ಯಃ ಸದವಯವೇಭ್ಯೋ ವಿಕಾರಸಂಸ್ಥಾನೋಪಪತ್ತೇಃ ॥ -ಛಾಂ. ಭಾ ೬-೨-೨-೪೫೫.

# ೧೪. ಮಾಯೆ

೧೦೨. ಬ್ರಹ್ಮವೊಂದೇ ಪರಮಾರ್ಥತತ್ತ್ವವೆಂಬುದನ್ನು ಮಂದಮಧ್ಯಮಾಧಿಕಾರಿಗಳಿಗೆ ತಿಳಿಸುವದಕ್ಕೋಸ್ಕರ ಜಗತ್ತು ಬ್ರಹ್ಮದಿಂದ ಮಾಯಿಕವಾಗಿ ಹುಟ್ಟುತ್ತದೆ ಎಂಬ ಸತ್ಕಾರ್ಯವಾದವನ್ನು (೯೮) ವೇದಾಂತದಲ್ಲಿ ಅಂಗೀಕರಿಸಿರುತ್ತದೆಯಷ್ಟೆ. ಈಗ ಮಾಯೆ ಎಂದರೇನೆಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವ ಕಾಲವು ಒದಗಿರುತ್ತದೆ. ಏಕೆಂದರೆ ಮಾಯೆಯು ಬ್ರಹ್ಮಕ್ಕಿಂತ ಬೇರೆಯೆ, ಅಲ್ಲವೆ? ಬೇರೆಯಾಗಿದ್ದರೆ ಅದ್ವೈತಹಾನಿ; ಬ್ರಹ್ಮವೇ ಆಗಿದ್ದರೆ ಕೂಟಸ್ಥವಾದ ಬ್ರಹ್ಮದಿಂದ ಜಗತ್ತು ಹುಟ್ಟುವದೆಂಬುದು ಹೊಂದುವದಿಲ್ಲ.

ಬ್ರಹ್ಮವನ್ನು ಜಗತ್ತಿನ ಅಪೇಕ್ಷೆಯಿಂದ ಈಶ್ವರನೆಂದು ಕರೆಯುತ್ತಾರೆ. ಶಾಂಕರ ವೇದಾಂತದಲ್ಲಿ ಮಾಯೆಯು ಬ್ರಹ್ಮಕ್ಕಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವದಕ್ಕೆ ಬರದ ಸ್ವಭಾವದ್ದೆಂದು ಅಂಗೀಕರಿಸಿರುತ್ತದೆ. ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಬೀಜವೇ **ಮಾಯೆಯು.** ಜಗತ್ತು ನಾಮರೂಪಗಳಿಂದ ಈಗ ಬಿಡಿಬಿಡಿಯಾಗಿ ತೋರುತ್ತಿರುವದಷ್ಟೆ? ಇದು ವ್ಯಾಕೃತಜಗತ್ತು. ಇದು ಪ್ರಲಯಕಾಲದಲ್ಲಿ ಸೃಷ್ಟಿಯಾಗುವದಕ್ಕೆ ಮುಂಚೆ **ಅವ್ಯಾಕೃತವಾಗಿ-** ಬಿಡಿಬಿಡಿಯಾಗಿ ವಿಂಗಡವಾಗದೆ ಇರುತ್ತದೆ. ಈ ಅವ್ಯಾಕೃತವೇ ಪರಮಾತ್ಮನು ಜಗತ್ತನ್ನು ಸೃಷ್ಟಿಸುವದಕ್ಕೆ ಕಾರಣವಾಗಿರುವದರಿಂದ ಇದನ್ನು ಈಶ್ವರನ ಶಕ್ತಿಯೆಂದೂ ಪ್ರಕೃತಿ ಎಂದೂ ಕರೆಯುವರು. ಇದು ಪರಮಾತ್ಮನೆಂದಾಗಲಿ ಅವನಿಗಿಂತ ಭಿನ್ನವೆಂದಾಗಲಿ ಗೊತ್ತು ಮಾಡಿ ಹೇಳಲಶಕ್ಯವಾಗಿರುವದರಿಂದ ಅವ್ಯಕ್ತವೆಂದೂ ವ್ಯಾಪಕವಾದದ್ದರಿಂದ ಆಕಾಶವೆಂದೂ ಜ್ಞಾನವುಂಟಾದಹೊರತು ನಾಶವಾಗುವದಲ್ಲವಾದ್ದರಿಂದ ಅಕ್ಷರವೆಂದೂ ಇದಕ್ಕೆ ಹೆಸರು ಬಂದಿದೆ. ಈಶ್ವರನು ಈ ನಾಮರೂಪಾತ್ಮಕವಾದ ಆವಿದ್ಯಕ ಮಾಯೆಗಿಂತ ವಿಲಕ್ಷಣಸ್ವಭಾವದವನಾದ್ದರಿಂದ ಅವನಿಗೆ ಮಾಯೆಯ ಯಾವ ದೋಷವೂ ಅಂಟುವದಿಲ್ಲವೆಂದು ವೇದಾಂತಿಗಳ ಮತವು.

(೧)'' ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ'' (ತೈ. ೨-೧) ಇತ್ಯಾದಿವಾಕ್ಯೇಭ್ಯೋ ನಿತ್ಯಶುದ್ಧಬುದ್ಧಮುಕ್ತಸ್ವರೂಪಾತ್ ಸರ್ವಜ್ಞಾತ್ ಸರ್ವಶಕ್ತೇಃ ಈಶ್ವರಾತ್ ಜಗಜ್ಜನಿಸ್ಥಿತಿಪ್ರಲಯಾಃ, ನಾಚೇತನಾತ್ ಪ್ರಧಾನಾತ್ ಅನ್ಯಸ್ಮಾದ್ವಾ ಇತ್ಯೇಷೋಽರ್ಥಃ ಪ್ರತಿಜ್ಞಾತಃ ''ಜನ್ಮಾದ್ಯಸ್ಯ ಯತಃ'' (೧-೧-೨) ಇತಿ। ಸಾ ಪ್ರತಿಜ್ಞಾ ತದವಸ್ಥೈವ। ನ ತದ್ವಿರುದ್ಧೋಽರ್ಥಃ ಪುನರಿಹೋಚ್ಯತೇ। ಕಥಂ ನೋಚ್ಯತೇ ಅತ್ಯನ್ತಮಾತ್ಮನ ಏಕತ್ವಮ್ ಅದ್ವಿತೀಯತ್ವಂ ಚ ಬ್ರುವತಾ? ಶೃಣು ಯಥಾ ನೋಚ್ಯತೇ। ಸರ್ವಜ್ಞಸ್ಯ ಈಶ್ವರಸ್ಯ ಆತ್ಮಭೂತೇ ಇವ ಅವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇ ಸಂಸಾರಪ್ರಪಞ್ಚಬೀಜಭೂತೇ ಸರ್ವಜ್ಞಸ್ಯ ಈಶ್ವರಸ್ಯ

ಮಾಯಾ, ಶಕ್ತಿಃ, ಪ್ರಕೃತಿಃ ಇತಿ ಚ ಶ್ರುತಿಸ್ಮೃತ್ಯೋರಭಿಲಪ್ಯೇತೇ। ತಾಭ್ಯಾಮ್ ಅನ್ಯಃ ಸರ್ವಜ್ಞ ಈಶ್ವರಃ ''ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ ಬ್ರಹ್ಮ'' (ಛಾಂ. ೮-೧೪-೧) ಇತಿ ಶ್ರುತೇಃ। ''ನಾಮರೂಪೇ ವ್ಯಾಕರವಾಣಿ'' (ಛಾಂ.೬-೩-೨), ''ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ ಯದಾಸ್ತೇ'' (ತೈ. ಆ. ೩-೧೨-೩೮), ''ಏಕಂ ಬೀಜಂ ಬಹುಧಾ ಯಃ ಕರೋತಿ'' (ಶ್ವೇ. ೬-೧೨)- ಇತ್ಯಾದಿಶ್ರುತಿಭ್ಯಶ್ಚ॥

-ಸೂ. ಭಾ. ೨-೧-೧೪-೪೪೦.

(೨) ಅವಿದ್ಯಾತ್ಮಿಕಾ ಹಿ ಬೀಜಶಕ್ತಿಃ ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಪ್ತಿಃ। ಯಸ್ಯಾಂ ಸ್ವರೂಪಪ್ರತಿಬೋಧರಹಿತಾಃ ಶೇರತೇ ಸಂಸಾರಿಣೋ ಜೀವಾಃ। ತದೇತದವ್ಯಕ್ತಂ ಕ್ವಚಿತ್ ಆಕಾಶಶಬ್ದನಿರ್ದಿಷ್ಟಮ್''ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ ''(ಬೃ. ೩-೮-೧೧) ಇತಿ ಶ್ರುತೇಃ । ಕ್ವಚಿತ್ ಅಕ್ಷರಶಬ್ದೋದಿತಮ್ ''ಅಕ್ಷರಾತ್ ಪರತಃ ಪರಃ'' (ಮುಂ.೨-೧-೨) ಇತಿ ಶ್ರುತೇಃ। ಕ್ವಚಿತ್ ಮಾಯಾ ಇತಿ ಸೂಚಿತಮ್ ''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್'' (ಶ್ವೇ. ೪-೧೦) ಇತಿ ಮನ್ತ್ರವರ್ಣಾತ್। ಅವ್ಯಕ್ತಾ ಹಿ ಸಾ ಮಾಯಾ । ತತ್ತ್ವಾನ್ಯತ್ವನಿರೂಪಣಸ್ಯ ಅಶಕ್ಯತ್ವಾತ್॥

-ಸೂ. ಭಾ. ೧-೪-೩-೩೩೯.

(೩) ಅತಃ ಅಕ್ಷರಾತ್ ನಾಮರೂಪಬೀಜೋಪಾಧಿಲಕ್ಷಿತಸ್ವರೂಪಾತ್ ಸರ್ವಕಾರ್ಯಕರಣಬೀಜತ್ವೇನ ಉಪಲಕ್ಷ್ಯಮಾಣತ್ವಾತ್ ಪರಂ ತತ್ತ್ವಂ ತತ್ ಉಪಾಧಿಲಕ್ಷಣಮ್ ಅವ್ಯಾಕೃತಾಖ್ಯಮ್ ಅಕ್ಷರಂ ಸರ್ವವಿಕಾರೇಭ್ಯಃ । ತಸ್ಮಾತ್ ಪರತಃ ಅಕ್ಷರಾತ್ ಪರಃ ನಿರುಪಾಧಿಕಃ ಪುರುಷಃ ಇತ್ಯರ್ಥಃ। ಯಸ್ಮಾತ್ ತದಾಕಾಶಾಖ್ಯಮ್ ಅಕ್ಷರಂ ಸವ್ಯವಹಾರವಿಷಯಮ್ ಓತಂ ಪ್ರೋತಂ ಚ॥ -ಮುಂ.೨-೧-೨-೫೫.

೧೦೩. ಪರಮಾತ್ಮನು ಜಗದ್ರೂಪವಾಗುವಾಗ ಪರಮಾತ್ಮಸ್ವರೂಪದಲ್ಲಿ ಯಾವ ಮಾರ್ಪಾಡೂ ಆಗಿರುವದಿಲ್ಲ. ಮೇಲೆ ಹೇಳಿದ ನಾಮರೂಪಗಳೇ ಅವ್ಯಾಕೃತವಾದ ಬೀಜರೂಪದಿಂದ ವ್ಯಾಕೃತವಾದ ಪ್ರಪಂಚರೂಪವನ್ನು ತೆಗೆದುಕೊಳ್ಳುತ್ತವೆ. ಈ ವ್ಯಾಕೃತಾವ್ಯಾಕೃತರೂಪಗಳೆರಡೂ ಅವಿದ್ಯಾಕಲ್ಪಿತವಾಗಿರುತ್ತವೆಯಾದ್ದರಿಂದ ಇವುಗಳ ಮೂಲಕ ಆತ್ಮನು ಜಗದ್ರೂಪವಾಗಿ ಪರಿಣಮಿಸುವನೆಂದು ಹೇಳಿದರೂ ಅವನು ಪರಮಾರ್ಥವಾಗಿ ಸರ್ವವ್ಯವಹಾರಾತೀತನಾಗಿ ಕೂಟಸ್ಥನೇ ಆಗಿರುತ್ತಾನೆ. ಮೊದಲು ನೀರೇ ಆಗಿದ್ದದ್ದು ಆಮೇಲೆ ನೀರು, ನೊರೆ ಎಂದು ಎರಡು ರೂಪವನ್ನು ಪಡೆದುಕೊಂಡರೆ ಆಗಲೂ ನೊರೆಯು ನೀರೇ ಆಗಿರುವಂತೆ ಮೊದಲು ಆತ್ಮನಾಗಿದ್ದು ಸೃಷ್ಟಿಯಾದ ಬಳಿಕ ಆತ್ಮ, ನಾನಾಶಬ್ದಪ್ರತ್ಯಯಗಳಿಗೆ ಗೋಚರವಾಗಿರುವ ಪ್ರಪಂಚ-ಎಂಬ ಎರಡು ರೂಪಗಳನ್ನು ತಳೆದಾಗಲೂ ಎಲ್ಲವೂ ಆತ್ಮನೇ ಆಗಿರುತ್ತದೆ. ನಾಮರೂಪಗಳು ಅವ್ಯಾಕೃತವಾಗಿದ್ದು ವ್ಯಾಕೃತವಾಗುವವೆಂದರೆ ಅವು ಬ್ರಹ್ಮಕ್ಕಿಂತ ಬೇರೆಯಾಗಿರುವವೆಂದೇನೂ ಅಭಿಪ್ರಾಯವಲ್ಲ. **ಅವ್ಯಾಕೃತನಾಮರೂಪಗಳು ತಮ್ಮ**

**ಆತ್ಮಸ್ವರೂಪವನ್ನು ಇಟ್ಟುಕೊಂಡೇ ವ್ಯಾಕೃತವಾಗುತ್ತವೆ; ನಾಮರೂಪಗಳಿಗೆ ಬ್ರಹ್ಮವೇ ಸ್ವರೂಪವು, ಬ್ರಹ್ಮಕ್ಕೆ ನಾಮರೂಪಗಳು ಸ್ವರೂಪವಲ್ಲ. ಈಗಲೂ ಎಲ್ಲಾ ಕಡೆಯಲ್ಲಿಯೂ ಆತ್ಮನೇ ಇರುತ್ತಾನೆಂದು ಶ್ರುತಿಯು ಹೇಳುವದಕ್ಕೆ ಇದೇ ಕಾರಣ. ಆತ್ಮನಿಗಿಂತ ಬೇರೆಯಾದ ಅನಾತ್ಮವೆಂಬುದು ಎಲ್ಲಿಯೂ ಎಂದಿಗೂ ಇರುವದೇ ಇಲ್ಲ.** ಪರಮಾತ್ಮನಲ್ಲಿ ಚೇತನಪ್ರಕೃತಿಯೊಂದು, ಅಚೇತನಪ್ರಕೃತಿಯೊಂದು- ಹೀಗೆ ಎರಡು ಪ್ರಕೃತಿಗಳಿರುವವೆಂದೂ ಈ ಪ್ರಕೃತಿದ್ವಯದ ಮೂಲಕವೇ ಪರಮಾತ್ಮನು ಜಗತ್ತಿಗೆ ಕಾರಣನೆಂದೂ ಗೀತೆಯಲ್ಲಿ ಹೇಳಿರುವದೂ ಈ ಕಾರಣದಿಂದಲೇ. ಆ ಎರಡು ಪ್ರಕೃತಿಗಳೂ ಪರಮಾತ್ಮಸ್ವರೂಪವೇ ಆಗಿರುತ್ತವೆ.

(೧) ಅವಿದ್ಯಾಕಲ್ಪಿತೇನ ಚ ನಾಮರೂಪಲಕ್ಷಣೇನ ರೂಪಭೇದೇನ ವ್ಯಾಕೃತಾವ್ಯಾಕೃತಾತ್ಮಕೇನ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇನ ಬ್ರಹ್ಮ ಪರಿಣಾಮಾದಿ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ। ಪಾರಮಾರ್ಥಿಕೇನ ಚ ರೂಪೇಣ ಸರ್ವವ್ಯವಹಾರಾತೀತಮ್ ಅಪರಿಣತಮ್ ಅವತಿಷ್ಠತೇ॥ -ಸೂ. ಭಾ. ೨-೧-೨೭-೪೬೪.

(೨) ಪ್ರಾಗುತ್ಪತ್ತೇಃ ಅವ್ಯಾಕೃತನಾಮರೂಪಭೇದಮ್ ಆತ್ಮಭೂತಮ್ ಆತ್ಮೈಕಶಬ್ದಪ್ರತ್ಯಯಗೋಚರಂ ಜಗತ್। ಇದಾನೀಂ ವ್ಯಾಕೃತನಾಮರೂಪಭೇದತ್ವಾತ್ ಅನೇಕಶಬ್ದ ಪ್ರತ್ಯಯಗೋಚರಮ್ । ಆತ್ಮೈಕಶಬ್ದಪ್ರತ್ಯಯಗೋಚರಂ ಚ ಇತಿ ವಿಶೇಷಃ। ಯಥಾ ಸಲಿಲಾತ್ ಪೃಥಕ್ ಫೇನನಾಮರೂಪವ್ಯಾಕರಣಾತ್ ಪ್ರಾಕ್ ಸಲಿಲೈಕಶಬ್ದಪ್ರತ್ಯಯ ಗೋಚರಮೇವ ಫೇನಮ್,ಯದಾ ಸಲಿಲಾತ್, ಪೃಥಕ್ ನಾಮರೂಪಭೇದೇನ ವ್ಯಾಕೃತಂ ಭವತಿ ತದಾ ಸಲಿಲಂ ಫೇನಂ ಚ ಇತ್ಯನೇಕಶಬ್ದಪ್ರತ್ಯಯಭಾಕ್, ಸಲಿಲಮೇವೇತಿ ಚ ಏಕ ಶಬ್ದಪ್ರತ್ಯಯಭಾಕ್ಚ ಫೇನಂ ಭವತಿ ತದ್ವತ್॥ -ಐ. ಭಾ. ೧-೧-೧-೨೮.

(೩) ಯದಾ ಆತ್ಮಸ್ಥೇ ಅನಭಿವ್ಯಕ್ತೇ ನಾಮರೂಪೇ ವ್ಯಾಕ್ರಿಯೇತೇ, ತದಾ ನಾಮರೂಪೇ ಆತ್ಮಸ್ವರೂಪಾಪರಿತ್ಯಾಗೇನೈವ ಬ್ರಹ್ಮಣಾ ಅಪ್ರವಿಭಕ್ತದೇಶಕಾಲೇ ಸರ್ವಾವಸ್ಥಾಸು ವ್ಯಾಕ್ರಿಯೇತೇ।.....ನ ಹ್ಯಾತ್ಮನೋಽನ್ಯದನಾತ್ಮಭೂತಂ ತತ್ಪ್ರವಿಭಕ್ತದೇಶಕಾಲಂ ಸೂಕ್ಷ್ಮಂ ವ್ಯವಹಿತಂ ವಿಪ್ರಕೃಷ್ಟಂ ಭೂತಂ ಭವದ್ಭವಿಷ್ಯದ್ವಾ ವಸ್ತು ವಿದ್ಯತೇ। ಅತೋ ನಾಮರೂಪೇ ಸರ್ವಾವಸ್ಥೇ ಬ್ರಹ್ಮಣೈವಾಽಽತ್ಮವತೀ ನ ಬ್ರಹ್ಮ ತದಾತ್ಮಕಮ್॥ -ತೈ. ಭಾ. ೨-೬-೧೬೩.

(೪). ಏತೇ ಪರಾಪರೇ ಕ್ಷೇತ್ರಕ್ಷೇತ್ರಜ್ಞಲಕ್ಷಣೇ ಪ್ರಕೃತೀ ಯೋನಿಃ ಯೇಷಾಂ ಭೂತಾನಾಂ ತಾನಿ ಏತದ್ಯೋನೀನಿ ಭೂತಾನಿ ಸರ್ವಾಣಿ ಇತಿ ಏವಮ್ ಉಪಧಾರಯ ಜಾನೀಹಿ। ಯಸ್ಮಾತ್ ಮಮ ಪ್ರಕೃತೀ ಯೋನಿಃ ಕಾರಣಂ ಸರ್ವಭೂತಾನಾಮ್ ಅತಃ ಅಹಂ ಕೃತ್ಸ್ನಸ್ಯ ಸಮಸ್ತಸ್ಯ ಜಗತಃ ಪ್ರಭವಃ, ಉತ್ಪತ್ತಿಃ, ಪ್ರಲಯಃ ವಿನಾಶಸ್ತಥಾ। ಪ್ರಕೃತಿದ್ವಯದ್ವಾರೇಣ ಅಹಂ ಸರ್ವಜ್ಞಃ ಈಶ್ವರೋ ಜಗತಃ ಕಾರಣಮ್ ಇತ್ಯರ್ಥಃ॥ -ಗೀ. ಭಾ. ೭-೬-೪೬೦.

೧೦೪. ಸಾಂಖ್ಯರು ಹೇಳುವ ಜಗತ್ತಿನ ಮೂಲಕಾರಣವಾದ ಪ್ರಧಾನಕ್ಕೂ ವೇದಾಂತಿಗಳು ಹೇಳುವ ಅವ್ಯಾಕೃತರೂಪವಾದ ಮಾಯೆಗೂ ತಾರತಮ್ಯವೇನೆಂಬುದು

ಓದುಗರ ಮನಸ್ಸಿಗೆ ಈಗ ಹೊಳೆದಿರಬೇಕು. ಪ್ರಧಾನವು ಅಚೇತನವಾಗಿದ್ದರೂ ತಾನೇ ಸ್ವತಂತ್ರವಾಗಿ ಜಗತ್ತಾಗಿ ಪರಿಣಮಿಸುವದೆಂದು ತರ್ಕವಿರುದ್ಧವಾಗಿ ಸಾಂಖ್ಯರು ಹೇಳುತ್ತಾರೆ. ಮಾಯೆಯು ಈಶ್ವರನ ಶಕ್ತಿಯಾಗಿರುವದರಿಂದಲೂ ಚೈತನ್ಯಸ್ವರೂಪನಾದ ಈಶ್ವರನಿಗಿಂತ ಬೇರೆಯಲ್ಲವಾದ್ದರಿಂದಲೂ ವೇದಾಂತಿಗಳು ಒಪ್ಪಿರುವ ಚೇತನಕಾರಣವಾದಕ್ಕೆ ಹಾನಿಯಿಲ್ಲ. ಕಾರ್ಯವಾದ ಜಗತ್ತು ಈಶ್ವರನ ಶಕ್ತಿಗಿಂತ ಬೇರೆಯಲ್ಲ; ಆ ಶಕ್ತಿಯು ಕಾರಣವಾದ ಬ್ರಹ್ಮಕ್ಕಿಂತ ಬೇರೆಯಿಲ್ಲ; ಆದ್ದರಿಂದ ಅದ್ವೈತವಾದಕ್ಕೂ ಹಾನಿಯಿಲ್ಲ. ನೀರಿಗಿಂತ ನೊರೆಯು ಬೇರೆಯಾಗಿ ತೋರಿದರೂ ಪರಮಾರ್ಥವಾಗಿ ನೀರೇ ಆಗಿರುವಂತೆ ನಾಮರೂಪಗಳು ಅವಿದ್ಯಾದೃಷ್ಟಿಯಿಂದ ಬೇರೆಯಾಗಿ ತೋರಿದರೂ ಪರಮಾರ್ಥವಾಗಿ ಪರಮಾತ್ಮತತ್ತ್ವಕ್ಕಿಂತ ಬೇರೆಯಾಗಿರುವದಿಲ್ಲ. ಆದ್ದರಿಂದ ಮಾಯೆಯು ಜಗತ್ಕಾರಣವೆಂದದ್ದರಿಂದ ಬ್ರಹ್ಮವು ಜಗತ್ಕಾರಣವೆಂಬವಾದಕ್ಕೂ ಅದ್ವೈತವಾದಕ್ಕೂ ಎಂದಿಗೂ ಯಾವ ಹಾನಿಯೂ ಇರುವದಿಲ್ಲ.

(೧) ಯದಿ ವಯಂ ಸ್ವತನ್ತ್ರಾಂ ಕಾಂಚಿತ್ ಪ್ರಾಗವಸ್ಥಾಂ ಜಗತಃ ಕಾರಣತ್ವೇನ ಅಭ್ಯುಪಗಚ್ಛೇಮ, ಪ್ರಸಞ್ಜಯೇಮ ತದಾ ಪ್ರಧಾನಕಾರಣವಾದಮ್। ಪರಮೇಶ್ವರಾಧೀನಾ ತು ಇಯಮ್ ಅಸ್ಮಾಭಿಃ ಪ್ರಾಗವಸ್ಥಾ ಜಗತೋಽಭ್ಯುಪಗಮ್ಯತೇ । ನ ಸ್ವತನ್ತ್ರಾ। ಸಾ ಚ ಅವಶ್ಯಾಭ್ಯುಪಗನ್ತವ್ಯಾ। ಅರ್ಥವತೀ ಹಿ ಸಾ। ನ ಹಿ ತಯಾ ವಿನಾ ಪರಮೇಶ್ವರಸ್ಯ ಸ್ರಷ್ಟೃತ್ವಂ ಸಿಧ್ಯತಿ। ಶಕ್ತಿರಹಿತಸ್ಯ ತಸ್ಯ ಪ್ರವೃತ್ತ್ಯನುಪಪತ್ತೇಃ॥ -ಸೂ. ಭಾ. ೧-೪-೩-೩೭೯.

(೨) ಅವಿದ್ಯಾತ್ಮಿಕಾ ಹಿ ಬೀಜಶಕ್ತಿಃ ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಪ್ತಿಃ॥ -ಸೂ. ಭಾ. ೧-೪-೩-೩೭೯.

(೩) ತಸ್ಮಾತ್ ಕಾರಣಸ್ಯ ಆತ್ಮಭೂತಾ ಶಕ್ತಿಃ, ಶಕ್ತೇಶ್ಚ ಆತ್ಮಭೂತಂ ಕಾರ್ಯಮ್॥
-ಸೂ. ಭಾ. ೨-೧-೧೮-೪೪೬.

(೪) ನಾಮರೂಪೋಪಾಧ್ಯಸ್ತಿತ್ವೇ ''ಏಕಮೇವಾದ್ವಿತೀಯಮ್'', ''ನೇಹ ನಾನಾಸ್ತಿ ಕಿಂಚನ'' ಇತಿ ಶ್ರುತಯೋ ವಿರುಧ್ಯೇರನ್ ಇತಿ ಚೇತ್। ನ। ಸಲಿಲಫೇನದೃಷ್ಟಾನ್ತೇನ ಪರಿಹೃತತ್ವಾತ್ ಮೃದಾದಿದೃಷ್ಟಾನ್ತೈಶ್ಚ। ಯದಾ ತು ಪರಮಾರ್ಥದೃಷ್ಟ್ಯಾ ಪರಮಾತ್ಮತತ್ತ್ವಾತ್ ಶ್ರುತ್ಯನುಸಾರಿಭಿಃ ಅನ್ಯತ್ವೇನ ನಿರೂಪ್ಯಮಾಣೇ ನಾಮರೂಪೇ ಮೃದಾದಿವಿಕಾರವತ್ ವಸ್ತ್ವನ್ತರೇ ತತ್ತ್ವತೋ ನ ಸ್ತಃ, ಸಲಿಲಫೇನಘಟಾದಿವಿಕಾರವದೇವ, ತದಾ ತದಪೇಕ್ಷ್ಯ ''ಏಕಮೇವಾದ್ವಿತೀಯಮ್'', ''ನೇಹ ನಾನಾಸ್ತಿ ಕಿಂಚನ'' ಇತ್ಯಾದಿ ಪರಮಾರ್ಥದರ್ಶನಗೋಚರತ್ವಂ ಪ್ರತಿಪದ್ಯತೇ। ಯದಾ ತು ಸ್ವಾಭಾವಿಕ್ಯಾ ಅವಿದ್ಯಯಾ ಬ್ರಹ್ಮಸ್ವರೂಪಂ ರಜ್ಜುಶುಕ್ತಿಕಾಗಗನಸ್ವರೂಪವದೇವ ಸ್ವೇನ ರೂಪೇಣ ವರ್ತಮಾನಂ ಕೇನಚಿತ್ ಅಸ್ಪೃಷ್ಟಸ್ವಭಾವಮಪಿ ಸತ್ ನಾಮರೂಪಕೃತಕಾರ್ಯಕರಣೋಪಾದಿಭ್ಯೋ ವಿವೇಕೇನ ನಾವಧಾರ್ಯತೇ, ನಾಮರೂಪೋಪಾಧಿದೃಷ್ಟಿರೇವ ಚ ಭವತಿ ಸ್ವಾಭಾವಿಕೀ, ತದಾ ಸರ್ವೋಽಯಂ ವಸ್ತ್ವನ್ತರಾಸ್ತಿತ್ವವ್ಯವಹಾರಃ॥

-ಬೃ. ಭಾ. ೩-೫-೧-೫೪.

೧೦೫. ಜಗತ್ತು ಮಾಯೆಗಿಂತ ಬೇರೆಯಿಲ್ಲ, ಮಾಯೆಯು ಈಶ್ವರನಿಗಿಂತ ಬೇರೆಯಿಲ್ಲ-ಎನ್ನುವ ಮತದಲ್ಲಿ ಜಗತ್ತು ಪ್ರಲಯವಾಗುವಾಗ ಮಾಯೆಯಲ್ಲಿ, ಎಂದರೆ ಮಾಯೆಯ ಮೂಲಕ ಬ್ರಹ್ಮದಲ್ಲಿಯೇ ಲಯವಾಗುತ್ತದೆ ಎಂದಂತಾಗುತ್ತದೆ. ಆದ್ದರಿಂದ ಪ್ರಲಯದಲ್ಲಿ ಜಗತ್ತಿನ ದೋಷಗಳು ಬ್ರಹ್ಮಕ್ಕೂ ಅಂಟಿಕೊಳ್ಳುವದಿಲ್ಲವೆ?-ಎಂದು ಕೆಲವರಿಗೆ ಶಂಕೆಯುಂಟಾಗಬಹುದು. ಆದರೆ. **ವ್ಯಾಕೃತವಾಗಿರುವ ಜಗತ್ತೆಂಬ ಕಾರ್ಯವೂ ಅದಕ್ಕೆ ಕಾರಣವಾಗಿರುವ ಅವ್ಯಾಕೃತವಾದ ಮಾಯೆಯೂ ಅವಿದ್ಯಾಕಲ್ಪಿತವಾಗಿವೆ** ಎಂಬುದನ್ನು ಮನದಂದರೆ ಆ ಶಂಕೆಯು ಹಾರಿಹೋಗುವದು. ವೇದಾಂತಸಿದ್ಧಾಂತದಲ್ಲಿ ತಾರ್ಕಿಕರ ಸಿದ್ಧಾಂತದಂತೆ ಕಾರಣವೆಂಬ ಶಬ್ದವನ್ನು ಕಾರ್ಯಕ್ಕೆ ನಿಯತವಾಗಿ ಹಿಂದಿನ ಕಾಲದಲ್ಲಿರುವದು ಎಂಬರ್ಥದಲ್ಲಿ ಉಪಯೋಗಿಸಿರುವದಿಲ್ಲ. ವೇದಾಂತಿಗಳ ಮತದಂತೆ ಆಕಾಶ, ದಿಕ್ಕು, ಕಾಲ, ಮನಸ್ಸು, ಪರಮಾಣು-ಮುಂತಾದವುಗಳು ಕೂಡ ಬ್ರಹ್ಮದ ಕಾರ್ಯವೇ ಆಗಿವೆ. ಕಾರ್ಯವೆಂದರೆ ಬ್ರಹ್ಮದಲ್ಲಿ ಅಧ್ಯಸ್ತವಾಗಿರತಕ್ಕದ್ದು, ಹುಸಿತೋರಿಕೆ. ಒಂದರಿಂದೊಂದು ವಿಂಗಡವಾಗಿ ತೋರುವದೆಲ್ಲ ಕಾರ್ಯವೇ ಎಂದು ಅವರು ಹೇಳುತ್ತಾರೆ; ಆದ್ದರಿಂದ ಕಾಲಾಕಾಶಗಳೂ ಕಾರ್ಯವೇ. ಲೋಕದಲ್ಲಿ ಹೇಗೆ ಮಾಯೆಯು ಮಾಯಾವಿಯನ್ನು ಮುಟ್ಟಿ ತನ್ನ ಹುಸಿತೋರಿಕೆಗಳ ಸೋಂಕನ್ನು ಅವನಿಗೆ ಅಂಟಿಸುವದಿಲ್ಲವೋ, ಹೇಗೆ ಕನಸಿನ ದೋಷವು ಕನಸುಕಾಣುವವನನ್ನು ನಿಜವಾಗಿ ಮುಟ್ಟುವದಿಲ್ಲವೋ, ಹಾಗೆ ಸಂಸಾರಮಾಯೆಯೂ ಪರಮಾತ್ಮನನ್ನು ಮುಟ್ಟುವದಿಲ್ಲ. ಜಗತ್ತೂ ಅದರ ಬೀಜವಾದ ಮಾಯೆಯೂ ಅವಿದ್ಯಾಕಲ್ಪಿತವಾಗಿರುತ್ತವೆ, ಎಂದರೆ ಅಧ್ಯಸ್ತವಾಗಿರುತ್ತವೆ. ಯಾವದರಲ್ಲಿ ಯಾವದು ಅಧ್ಯಾಸವಾಗಿರುತ್ತದೆಯೋ ಅದು ಆ ಅಧ್ಯಸ್ತವಾದದ್ದರ ಗುಣದೋಷಗಳಿಂದ ಒಂದಿಷ್ಟೂ ಸಂಬದ್ಧವಾಗುವದಿಲ್ಲ; ಆದ್ದರಿಂದ ಬ್ರಹ್ಮವು ಜಗತ್ತಿನ ಅಥವಾ ಅದರ ಬೀಜವಾದ ಮಾಯೆಯ ದೋಷದಿಂದ ಸಂಬದ್ಧವಾಗುವದಿಲ್ಲ ಎಂಬುದೇ ಯುಕ್ತಿಯುಕ್ತವಾಗಿರುತ್ತದೆ.

(೧) ಯಥಾ ಹಿ ಅವಿಭಾಗೇಽಪಿ ಪರಮಾತ್ಮನಿ ಮಿಥ್ಯಾಜ್ಞಾನಪ್ರತಿಬದ್ಧೋ ವಿಭಾಗವ್ಯವಹಾರಃ ಸ್ವಪ್ನವತ್ ಅವ್ಯಾಹತಃ ಸ್ಥಿತೌ ದೃಶ್ಯತೇ, ಏವಮ್ ಅಪೀತಾವಪಿ ಮಿಥ್ಯಾಜ್ಞಾನಪ್ರತಿಬದ್ಧೈವ ವಿಭಾಗಶಕ್ತಿಃ ಅನುಮಾಸ್ಯತೇ॥ -ಸೂ. ಭಾ. ೨-೧-೯-೪೨೫.

(೨) ವಿಭಾಗಶ್ಚ ಆಕಾಶಸ್ಯ ಪೃಥಿವ್ಯಾದಿಭ್ಯೋಽವಗಮ್ಯತೇ। ತಸ್ಮಾತ್ ಸೋಽಪಿ ವಿಕಾರೋ ಭವಿತುಮರ್ಹತಿ। ಏತೇನ ದಿಕ್ಕಾಲಮನಃಪರಮಾಣ್ವಾದೀನಾಂ ಕಾರ್ಯತ್ವಂ ವ್ಯಾಖ್ಯಾತಮ್॥ -ಸೂ. ಭಾ. ೨-೩-೭-೯೮.

(೩) ''ಸರ್ವಂ ಖಲ್ವಿದಂ ಬ್ರಹ್ಮ'' (ಛಾಂ. ೩-೧೪-೧) ಇತ್ಯೇವಮಾದ್ಯಾಭಿರ್ಹಿ ಶ್ರುತಿಭಿಃ ಅವಿಶೇಷೇಣ ತ್ರಿಷ್ವಪಿ ಕಾಲೇಷು ಕಾರ್ಯಸ್ಯ ಕಾರಣಾನನ್ಯತ್ವಂ ಶ್ರಾವ್ಯತೇ। ತತ್ರ ಯಃ ಪರಿಹಾರಃ

ಕಾರ್ಯಸ್ಯ ತದ್ಧರ್ಮಾಣಾಂ ಚ ಅವಿದ್ಯಾಧ್ಯಾರೋಪಿತತ್ವಾತ್ ನ ತೈಃ ಕಾರಣಂ ಸಂಸೃಜ್ಯತೇ ಇತಿ, ಅಪೀತಾವಪಿ ನ ಸಮಾನಃ। ಅಸ್ತಿ ಚಾಯಮ್ ಅಪರೋ ದೃಷ್ಟಾನ್ತಃ- ಯಥಾ ಸ್ವಯಂ ಪ್ರಸಾರಿತಯಾ ಮಾಯಯಾ ಮಾಯಾವೀ ತ್ರಿಷ್ವಪಿ ಕಾಲೇಷು ನ ಸಂಸ್ಪೃಶ್ಯತೇ ಅವಸ್ತುತ್ವಾತ್, ಏವಂ ಪರಮಾತ್ಮಾಪಿ ಸಂಸಾರಮಾಯಯಾ ನ ಸಂಸ್ಪೃಶ್ಯತೇ ಇತಿ॥

-ಸೂ. ಭಾ. ೨-೧-೯-೪೨೩.

(೪) ಯಥಾ ಚ ಸ್ವಪ್ನದೃಗೇಕಃ ಸ್ವಪ್ನದರ್ಶನಮಾಯಯಾ ನ ಸಂಸ್ಪೃಶ್ಯತೇ, ಪ್ರಬೋಧಸಂಪ್ರಸಾದಯೋರನನ್ವಾಗತತ್ವಾತ್। ಏವಂ ಅವಸ್ಥಾತ್ರಯಸಾಕ್ಷೀ ಏಕೋಽವ್ಯಭಿಚಾರೀ ಅವಸ್ಥಾತ್ರಯೇಣ ವ್ಯಭಿಚಾರಿಣಾ ನ ಸಂಸ್ಪೃಶ್ಯತೇ॥ -ಸೂ. ಭಾ. ೨-೧-೯-೪೨೪.

(೫) ತತ್ರ ಏವಂ ಸತಿ ಯತ್ರ ಯದಧ್ಯಾಸಃ ತತ್ಕೃತೇನ ಗುಣೇನ ದೋಷೇಣ ವಾ ಅಣುಮಾತ್ರೇಣಾಪಿ ಸ ನ ಸಂಬಧ್ಯತೇ॥ -ಅಧ್ಯಾ. ಭಾ-೪.

೧೦೬. ಈಗ ಇನ್ನೊಂದು ತರ್ಕನಿಮಿತ್ತವಾದ ಆಕ್ಷೇಪಕ್ಕೆ ಪರಿಹಾರವನ್ನು ಹೇಳಬೇಕಾದದ್ದು ಉಳಿದಿದೆಯೆಂದು ಕೆಲವರಿಗೆ ತೋರಬಹುದು. ಸೃಷ್ಟಿಯು ಮಾಯಾಕಾರ್ಯವಾದರೆ ಮಾಯೆಯು ಏತರ ಕಾರ್ಯ? ಮಾಯೆಯಿರುವ ವರೆಗಾದರೂ ದ್ವೈತಪ್ರಪಂಚವು ಇರಬೇಕಾದ್ದರಿಂದ ಅಷ್ಟರಮಟ್ಟಿಗಾದರೂ ಅದ್ವೈತಕ್ಕೆ ಹಾನಿಯಾಗುವದಿಲ್ಲವೆ? ಮಾಯೆಯು ಅವಿದ್ಯಾಕೃತವೆನ್ನುವದಾದರೆ ಅವಿದ್ಯೆಯಾದರೂ ಕೊನೆಗೆ ನಿಲ್ಲಬೇಕಾಗುವದರಿಂದ ಅದ್ವೈತವೇ ಪರಮಾರ್ಥವೆಂಬ ವಾದಕ್ಕೆ ಅಷ್ಟರ ಮಟ್ಟಿಗಾದರೂ ಹಾನಿಯಾಗುವದಿಲ್ಲವೆ?

ಈ ಆಕ್ಷೇಪವು ಮಾಯೆ, ಅವಿದ್ಯೆ- ಇವುಗಳೂ ಅಧ್ಯಾರೋಪಾಪವಾದ ನ್ಯಾಯದಿಂದ ಕಲ್ಪಿಸಿರುವ ಪದಾರ್ಥಗಳೇ ಹೊರತು ಪರಮಾರ್ಥವಲ್ಲ ಎಂಬುದನ್ನು ಮರೆತದ್ದರಿಂದ ಹೊರತೋರಿಕೊಳ್ಳುತ್ತದೆ. ವ್ಯವಹಾರದಲ್ಲಿ ತೋರುವ ಕಾರ್ಯಕಾರಣ ಬುದ್ಧಿಯನ್ನು ಸತ್ಯವೆಂದು ಪಟ್ಟುಹಿಡಿದಿರುವ ಮಂದಮತಿಗಳಿಗೆ ನಿಜವನ್ನು ತಿಳಿಸುವದಕ್ಕಾಗಿ ಮಾಯೆಯನ್ನು ವೇದಾಂತಿಗಳು ಹೇಳುತ್ತಾರೆ; ಮಾಯೆಯಿಂದ ನಿಜವಾಗಿ ಪ್ರಪಂಚವುಂಟಾಗುತ್ತದೆ ಎಂಬ ಭ್ರಾಂತಿ ಇರುವವರಿಗಾಗಿ ಅದು ಅವಿದ್ಯಾ ಕಲ್ಪಿತವೆಂದು ಹೇಳುತ್ತಾರೆ. ಆ ಅವಿದ್ಯೆಯಿಂದಾದ ದೋಷವು ಆತ್ಮನಿಗೆ ಹತ್ತುವದಿಲ್ಲವೆ? ಎಂದು ಶಂಕಿಸುವವರ ತಿಳಿವಳಿಕೆಗಾಗಿ ಅದು ಅಂತಃಕರಣಧರ್ಮವೆಂದು ತಿಳಿಸುತ್ತಾರೆ. ಈ ಮಾಯಾವಿದ್ಯೆಗಳು ಆತ್ಮನಲ್ಲಿ ವಿಶೇಷವನ್ನುಂಟುಮಾಡುವದಿಲ್ಲವೆ?- ಎಂದು ಶಂಕಿಸುವವರಿಗೆ ಅನಾತ್ಮಪಕ್ಷವಾಗಿರುವ ಇವುಗಳು ಆತ್ಮನಲ್ಲಿ ವಿಶೇಷವನ್ನುಂಟುಮಾಡುವವೆಂಬುದು ಹಾಗೆನ್ನುವವರ ಅವಿದ್ಯೆಯೇ ಎನ್ನುತ್ತಾರೆ. ಆ ಅವಿದ್ಯೆ ಅಥವಾ ತಪ್ಪು ತಿಳಿವಳಿಕೆಯಾದರೂ ಉಂಟಷ್ಟೆ?-ಎಂದರೆ ಅದೂ ಹಾಗೆ ತಿಳಿಯುವವರ ದೃಷ್ಟಿಯಿಂದ ಇರುವದೇ ಹೊರತು ಪರಮಾರ್ಥವಲ್ಲ ಎನ್ನುತ್ತಾರೆ. ಮಾಯೆ, ಅವಿದ್ಯೆ-

ಎಂಬುದೆಲ್ಲವೂ **ಸಂವೃತಿಯು,** ಎಂದರೆ ಅವಿದ್ಯಾವ್ಯವಹಾರವೇ. ಆದ್ದರಿಂದ ದ್ವೈತ ಪ್ರಪಂಚವು ನಿಜವಾಗಿದ್ದುಕೊಂಡು ಅದ್ವೈತಜ್ಞಾನವುಂಟಾದ ಬಳಿಕ ನಿವೃತ್ತವಾಗು ವದಿಲ್ಲ. ಹಗ್ಗದಲ್ಲಿ ಹಾವು ಎಂದಿಗೂ ಇರುವದೇ ಇಲ್ಲವಾದರೂ ಅದು ಜ್ಞಾನದಿಂದ ಹೋಗುವದೆಂಬುದು ಮಾಯಾವಿಯು ಹರಡಿದ್ದ ಮಾಯೆಯ ಕಣ್ಣು ಕಟ್ಟು ತೊಲಗಿದ ಬಳಿಕ ಹೋಯಿತೆಂಬ ವ್ಯವಹಾರದಂತೆಯೇ ಎಂದು ತಿಳಿಯಬೇಕು.

ಮಾಯೆಯು ಏತರ ಕಾರ್ಯ?-ಎಂದು ಕೇಳುವವರಿಗೆ ವ್ಯವಹಾರದೃಷ್ಟಿ ಯಿಂದ ಅದು ಅನಾದಿ ಎಂಬುದು ಮರೆತುಹೋಗಿರುತ್ತದೆ. ಅವ್ಯಕ್ತ, ಅವ್ಯಾಕೃತ- ಎಂಬ ಹೆಸರಿನ ಮಾಯೆಯು ಆತ್ಮನಿಂದ ಉಂಟಾಯಿತೆಂಬ ಶ್ರುತಿಸ್ಮೃತಿವಾದಗಳೂ ಉಂಟು; ಆದರೆ ಆ ವಾದಗಳಿಗೆ ಅವ್ಯಾಕೃತವು ವ್ಯಾಕೃತವಾಗುವ ಅವಸ್ಥೆಗೆ ತಿರುಗಿತು- ಎಂದು ಮಾತ್ರ ಅರ್ಥ. ಏಕೆಂದರೆ ಅವ್ಯಾಕೃತವೂ ಹೊಸದಾಗಿ ಹುಟ್ಟುವದೆಂದರೆ ಸಂಸಾರವು ಸಾದಿಯೆಂದೂ ಪ್ರತಿಯೊಂದು ಕಲ್ಪಕ್ಕೂ ಒಂದೊಂದು ಬೇರೆಯ ಪ್ರಪಂಚವು ಹುಟ್ಟುವದೆಂದೂ ಹೇಳಿದಂತಾಗಿ ಅಕೃತಾಭ್ಯಾಗಮ (ಮಾಡದೆ ಇದ್ದದ್ದರ ಫಲವನ್ನುಣ್ಣುವದು), ಕೃತವಿಪ್ರಣಾಶ (ಮಾಡಿದ ಕರ್ಮದ ಫಲವುಂಟಾಗದೆ ಹೋಗುವದು)- ಎಂಬ ದೋಷಗಳು ಗಂಟುಬೀಳುತ್ತವೆ. ಜ್ಞಾನವುಂಟಾದ ಹೊರತು ಮಾಯೆಯು ಹೋಯಿತೆಂಬ ವ್ಯವಹಾರವುಂಟಾಗುವದೇ ಇಲ್ಲ, ಅದು ಹುಸಿ ಯೆಂಬುದೂ ತಿಳಿಯುವದಿಲ್ಲ. ಆದ್ದರಿಂದ ಮಾಯಾವಿದ್ಯೆಗಳಿಂದ ಅದ್ವೈತವಾದಕ್ಕೆ ಯಾವ ಹಾನಿಯೂ ಇರುವದಿಲ್ಲ ಎಂದು ಸಿದ್ಧವಾಗುತ್ತದೆ.

(೧) ಯೇಽಪಿ ಆತ್ಮಾನೋ ಅನ್ಯೇ ಚ ಧರ್ಮಾ ಜಾಯನ್ತೇ ಇತಿ ಕಲ್ಪ್ಯನ್ತೇ ತೇ ಇತಿ ಏವಂ ಪ್ರಕಾರಾಃ। ಯಥೋಕ್ತಾ ಸಂವೃತಿಃ ನಿರ್ದಿಶ್ಯತೇ 'ಇತಿ' ಇತಿ। ಸಂವೃತ್ಯೈವ ಧರ್ಮಾ ಜಾಯನ್ತೇ। ನ ತೇ ತತ್ತ್ವತಃ ಪರಮಾರ್ಥತಃ ಜಾಯನ್ತೇ। ಯತ್ಪುನಃ ತತ್ ಸಂವೃತ್ಯಾ ಜನ್ಮ ತೇಷಾಂ ಧರ್ಮಾಣಾಂ ಯಥೋಕ್ತಾನಾಮ್, ಯಥಾ ಮಾಯಯಾ ಜನ್ಮ ತಥಾ ತತ್ ಮಾಯೋಪಮಮ್ ಪ್ರತ್ಯೇತವ್ಯಮ್। ಮಾಯಾ ನಾಮ ವಸ್ತು ತರ್ಹಿ। ನೈವಮ್। ಸಾ ಚ ಮಾಯಾ ನ ವಿದ್ಯತೇ । ಮಾಯಾ ಇತಿ ಅವಿದ್ಯಮಾನಸ್ಯ ಆಖ್ಯಾ ಇತ್ಯಭಿಪ್ರಾಯಃ॥ -ಮಾಂ. ಕಾ. ಭಾ. ೪-೫೮-೩೦೦.

(೨) ನ ಹಿ ರಜ್ಜ್ವಾಂ ಭ್ರಾನ್ತಿಬುದ್ಧ್ಯಾ ಕಲ್ಪಿತಃ ಸರ್ಪೋ ವಿದ್ಯಮಾನಃ ಸನ್ ವಿವೇಕತಃ ನಿವೃತ್ತಃ। ನೈವ ಮಾಯಾ ಮಾಯಾವಿನಾ ಪ್ರಯುಕ್ತಾ ತದ್ದರ್ಶಿನಾಂ ಚಕ್ಷುರ್ಬನ್ಧಾಪಗಮೇ ವಿದ್ಯಮಾನಾ ಸತೀ ನಿವೃತ್ತಾ। ತಥೇದಂ ಪ್ರಪಞ್ಚಾಖ್ಯಂ ಮಾಯಾಮಾತ್ರಂ ದ್ವೈತಮ್। ರಜ್ಜುವತ್, ಮಾಯಾವಿವಚ್ಚ ಅದ್ವೈತಂ ಪರಮಾರ್ಥತಃ। ತಸ್ಮಾತ್ ನ ಕಶ್ಚಿತ್ ಪ್ರಪಞ್ಚಃ ಪ್ರವೃತ್ತೋ ನಿವೃತ್ತೋ ವಾ ಅಸ್ತಿ ಇತ್ಯಭಿಪ್ರಾಯಃ॥ -ಮಾಂ. ಕಾ. ಭಾ. ೧-೧೭-೫೫.

(೩) ಅವಿದ್ಯಾವತಃ ಅವಿದ್ಯಾನಿವೃತ್ತ್ಯನಿವೃತ್ತಿಕೃತೋ ವಿಶೇಷಃ ಆತ್ಮನಃ ಸ್ಯಾತ್ ಇತಿ ಚೇತ್। ನ। ಅವಿದ್ಯಾಕಲ್ಪನಾವಿಷಯತ್ವಾಭ್ಯುಪಗಮಾತ್। ರಜ್ಜೂಷರಶುಕ್ತಿಕಾಗಗನಾನಾಂ ಸರ್ಪೋದಕರಜತ ಮಲಿನತ್ವಾದಿವತ್ ಅದೋಷಃ ಇತ್ಯವೋಚಾಮ॥ -ಬೃ. ಭಾ. ೪-೪-೬-೭೭೪.

(೪) ನ ಜಾನೇಽಹಂ ತ್ವದುಕ್ತಂ, ಮುಗ್ಧ ಏವ ಇತಿ ಚೇತ್। ಭವತ್ವಜ್ಞೋ ಮುಗ್ಧೋ ಯಸ್ತ್ವೇವಂದರ್ಶೀ, ತಂ ಜ್ಞಮ್ ಅಮುಗ್ಧಂ ಪ್ರತಿಜಾನೀಮಹೇ ವಯಮ್॥

-ಬೃ.ಭಾ. ೪-೪-೬-೨೭೪.

೧೦೭. ಮಾಯಾಶಬ್ದವು ಜ್ಞಾನಪರ್ಯಾಯವಾದ್ದರಿಂದ ಈ ಶಬ್ದಕ್ಕೆ ವೈದಿಕ ವಾಙ್ಮಯದಲ್ಲಿ ಇಲ್ಲದಿರುವ ವಸ್ತು, ಹುಸಿತೋರಿಕೆ ಎಂಬರ್ಥದಲ್ಲಿ ಪ್ರಯೋಗವೇ ಇಲ್ಲವೆಂದು ಕೆಲವರ ಅಭಿಪ್ರಾಯವಿದೆ. **ಯಾಸ್ಕರು** ತಮ್ಮ ನಿಘಂಟುವಿನಲ್ಲಿ ಮಾಯಾ ಶಬ್ದವನ್ನು ಜ್ಞಾನಪರ್ಯಾಯವಾಗಿಯೇ ಬರೆದಿರುತ್ತಾರೆ. ಆದರೂ ''ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ'' ಇಂದ್ರನು ಮಾಯೆಗಳಿಂದ ಬಹುರೂಪನಾಗಿ ಕಾಣುತ್ತಾನೆ- ಮುಂತಾದ ಪ್ರಯೋಗಗಳಲ್ಲಿ ಮಾಯೆ ಎಂದರೆ ಇಂದ್ರಿಯಗಳಿಂದಾದ ಅರಿವು ಎಂದೇ ಅರ್ಥ; ಇಂದ್ರಿಯಗಳ ಅರಿವು ಅವಿದ್ಯಾರೂಪವಾಗಿರುವದರಿಂದ ಮಾಯೆಗಳಿಂದ ಇಂದ್ರನು (ಪರಮೇಶ್ವರನು) ಅನೇಕವಾಗಿ ಕಾಣಿಸುತ್ತಾನೆ, ಸರಿಯಾದ ದೃಷ್ಟಿಯಿಂದ ನೋಡಿದರೆ ಒಬ್ಬನೇ ಆಗಿರುತ್ತಾನೆ- ಎಂಬರ್ಥವೇ ನಿಲ್ಲುತ್ತದೆ. ಆದ್ದರಿಂದ ಮಾಯೆ ಎಂಬ ಶಬ್ದಕ್ಕೆ ಜ್ಞಾನವೆಂಬ ಅರ್ಥವನ್ನು ಒಪ್ಪಿದಾಗಲೂ ಮಿಥ್ಯಾಜ್ಞಾನವೆಂದೇ ಅರ್ಥವಾಗುತ್ತದೆ. ಇನ್ನು ಅವ್ಯಾಕೃತವನ್ನು ಮಾಯೆಯೆಂದು ಕರೆಯುವ ''ಮಾಯಾಂ ತು ಪ್ರಕೃತಿಂ ವಿದ್ಯಾತ್'' ಎಂಬ ಶ್ರುತಿಯಲ್ಲಂತೂ ಮಾಯೆ ಎಂದರೆ ಜ್ಞಾನವೆಂಬರ್ಥವು ಆಗುವದೇ ಇಲ್ಲ; ಅಲ್ಲಿ ಮಿಥ್ಯಾಜ್ಞಾನದಿಂದ ತೋರುವ ಹುಸಿತೋರಿಕೆ ಎಂಬ ಲಕ್ಷಣಾರ್ಥವನ್ನೇ ಸ್ವೀಕರಿಸಬೇಕಾಗುತ್ತದೆ. ಆದ್ದರಿಂದ ಪ್ರಪಂಚವು ಮಾಯಿಕವಾಗಿದೆ; ಕನಸು, ಇಂದ್ರಜಾಲ, ಗಂಧರ್ವನಗರ- ಮುಂತಾದವುಗಳಂತೆ ಹುಸಿತೋರಿಕೆ ಎಂಬ ಅದ್ವೈತವೇ ವೇದಾಂತಸಿದ್ಧಾಂತವೆಂದು ಹೇಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

(೧) ತಸ್ಮಾತ್ ಆತ್ಮೈಕತ್ವಪ್ರತಿಪತ್ತ್ಯರ್ಥಾ ಕಲ್ಪಿತಾ ಸೃಷ್ಟಿಃ ಅಭೂತೈವ ಪ್ರಾಣಸಂವಾದವತ್। ''ಇನ್ದ್ರೋ ಮಾಯಾಭಿಃ'' ಇತ್ಯಭೂತಾರ್ಥಪ್ರತಿಪಾದಕೇನ ಮಾಯಾಶಬ್ದೇನ ವ್ಯಪದೇಶಾತ್ । ನನು ಪ್ರಜ್ಞಾವಚನೋ ಮಾಯಾಶಬ್ದಃ। ಸತ್ಯಮ್। ಇನ್ದ್ರಿಯಪ್ರಜ್ಞಾಯಾಃ ಅವಿದ್ಯಾಮಯತ್ವೇನ ಮಾಯಾತ್ವಾಭ್ಯುಪಗಮಾತ್ ಅದೋಷಃ। ಮಾಯಾಭಿಃ ಇನ್ದ್ರಿಯಪ್ರಜ್ಞಾಭಿಃ ಅವಿದ್ಯಾರೂಪಾಭಿಃ ಇತ್ಯರ್ಥಃ। ''ಅಜಾಯಮಾನೋ ಬಹುಧಾ ವಿಜಾಯತೇ'' ಇತಿ ಶ್ರುತೇಃ॥

-ಮಾಂ. ೩-೨೪-೧೭೨.

(೨) ಸ್ವಪ್ನಮಾಯೇ ಯಥಾ ದೃಷ್ಟೇ ಗನ್ಧರ್ವನಗರಂ ಯಥಾ।
ತಥಾ ವಿಶ್ವಮಿದಂ ದೃಷ್ಟಂ ವೇದಾನ್ತೇಷು ವಿಚಕ್ಷಣೈಃ॥ -ಮಾಂ.ಕಾ. ೨-೩೧

ಯದೇತತ್ ದ್ವೈತಸ್ಯಾಸತ್ತ್ವಮುಕ್ತಂ ಯುಕ್ತಿತಃ ತದೇತತ್ ವೇದಾನ್ತಪ್ರಮಾಣಾವಗತಮ್ ಇತ್ಯಾಹ। ಸ್ವಪ್ನಶ್ಚ ಮಾಯಾ ಚ ಸ್ವಪ್ನಮಾಯೇ ಅಸದ್ವಸ್ತ್ವಾತ್ಮಿಕೇ ಅಸತ್ಯೌ ಸತ್ಯೌ ಸದ್ವಸ್ತ್ವಾತ್ಮಿಕೇ

ಇವ ಲಕ್ಷ್ಯೇತೇ ಅವಿವೇಕಿಭಿಃ। ಯಥಾ ಚ ಪ್ರಸಾರಿತಪಣ್ಯಾಪಣಗೃಹಪ್ರಾಸಾದಸ್ತ್ರೀಪುಂಜನಪದ ವ್ಯವಹಾರಾಕೀರ್ಣಮಿವ ಗನ್ಧರ್ವನಗರಂ ದೃಶ್ಯಮಾನಮೇವ ಸತ್ ಅಕಸ್ಮಾತ್ ಅಭಾವತಾಂ ಗತಂ ದೃಷ್ಟಮ್। ಯಥಾ ಚ ಸ್ವಪ್ನಮಾಯೇ ದೃಷ್ಟೇ ಅಸದ್ರೂಪೇ, ತಥಾ ವಿಶ್ವಮಿದಂ ದ್ವೈತಂ ಸಮಸ್ತಮ್ ಅಸತ್ ದೃಷ್ಟಮ್। ಕ್ವ ಇತಿ? ಆಹ । ವೇದಾನ್ತೇಷು ''ನೇಹ ನಾನಾಸ್ತಿ ಕಿಂಚನ'', ''ಇನ್ದ್ರೋ ಮಾಯಾಭಿಃ'', ''ಆತ್ಮೈವೇದಮಗ್ರ ಆಸೀತ್'', ''ಬ್ರಹ್ಮೈವೇದಮಗ್ರ ಆಸೀತ್'', ''ದ್ವಿತೀಯಾದ್ ವೈ ಭಯಂ ಭವತಿ'', ''ನ ತು ತದ್ದ್ವಿತೀಯಮಸ್ತಿ'', ''ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್'' ಇತ್ಯಾದಿಷು॥ -ಮಾಂ.ಕಾ.ಭಾ. ೨-೩೧-೧೦೯,೧೧೦

## ೧೫. ಬ್ರಹ್ಮವು ಜಗತ್ತಿಗೆ ನಿಮಿತ್ತಕಾರಣವೂ ಆಗಿದೆ

೧೦೮. ಬ್ರಹ್ಮವು ಜಗತ್ಕಾರಣವು ಎಂದರೆ ಮಡಕೆಗೆ ಮಣ್ಣು ಉಪಾದಾನ ಕಾರಣವಾಗಿರುವಂತೆ, ಜಗತ್ತಿನ ಉಪಾದಾನಕಾರಣವು -ಎಂಬರ್ಥವನ್ನೇ ಈವರೆಗೆ ಇಟ್ಟುಕೊಂಡು ವಿಚಾರಮಾಡಲಾಗಿರುತ್ತದೆ. ಏಕೆಂದರೆ ಜಗತ್ತಿಗೆ ಉಪಾದಾನವು ಯಾವದು? -ಎಂಬ ವಿಷಯದಲ್ಲಿಯೇ ವಾದಿಗಳಲ್ಲಿ ಬಹಳ ಮತಭೇದವು ಉಂಟಾಗಿರುತ್ತದೆ. ಪ್ರಧಾನವೇ ಜಗತ್ಕಾರಣವೆಂದು ಸಾಂಖ್ಯರೂ ಪರಮಾಣುಗಳೇ ಜಗತ್ಕಾರಣವೆಂದು ವೈಶೇಷಿಕರೂ ಹಿಂದಿನ ಕಾಲದಲ್ಲಿ ವಾದಿಸುತ್ತಿದ್ದರು. ಬ್ರಹ್ಮವೇ ಜಗತ್ತಿಗೆ ಉಪಾದಾನಕಾರಣವು ಎಂದು ಶಂಕರಾಚಾರ್ಯರ ಸಂಪ್ರದಾಯಕ್ಕಿಂತ ಭಿನ್ನವಾದ ಸಂಪ್ರದಾಯವನ್ನು ಅನುಸರಿಸುವ ವೇದಾಂತಿಗಳು ಹೇಳುತ್ತಿದ್ದರು. ಅವರ ಮತಗಳಲ್ಲಿ ದೋಷವಿದೆ; ಏಕೆಂದರೆ ಅಚೇತನವಾದ ಪ್ರಧಾನವಾಗಲಿ, ಅಣುವಾಗಲಿ, ತಮಗೆತಾವೇ ಜಗತ್ತಿನ ರೂಪದಲ್ಲಿ ಪರಿಣಾಮವಾಗಲಾರವು; ಪರಿಣಮಿಸುವದಾದರೆ ಅವು ಯಾವಾಗಲೂ ಪರಿಣಮಿಸುತ್ತಲೇ ಇರಬೇಕಾಗುತ್ತದೆ. ಅವನ್ನು ಪ್ರವರ್ತಿಸುವಂತೆ ಅಥವಾ ನಿವರ್ತಿಸುವಂತೆ ಮಾಡುವ ಹೊರಗಿನ ಯಾವ ನಿಮಿತ್ತವೂ ಇಲ್ಲ -ಎಂದು ಪರವಾದಿಗಳ ಮತವನ್ನು ಬ್ರಹ್ಮಸೂತ್ರಕಾರರೂ ಭಾಷ್ಯಕಾರರೂ ಖಂಡಿಸಿರುತ್ತಾರೆ. ಇದರಂತೆ ಬ್ರಹ್ಮವು ಜಗದ್ರೂಪವಾಗಿ ನಿಜವಾಗಿ ಪರಿಣಮಿಸಿದೆ ಎಂಬ ವಾದವೂ ಸರಿಯಲ್ಲ; ಏಕೆಂದರೆ ಬ್ರಹ್ಮವು ಮಾರ್ಪಡುವದಾದರೆ ಬ್ರಹ್ಮವು ಸಾವಯವವೆಂದೂ ಅನಿತ್ಯವೆಂದೂ ಆಗುತ್ತದೆ- ಎಂದು ಮಿಕ್ಕ ಪರಿಣಾಮವಾದಿಗಳಾದ ವೇದಾಂತಿಗಳ ಮತವನ್ನು ತಳ್ಳಿಹಾಕಿ ಬ್ರಹ್ಮವು ಪರಿಣಾಮವಾಗುವದೆಂದು ಶ್ರುತಿಯಲ್ಲಿ ಹೇಳಿರುವದು ಅವಿದ್ಯಾಕಲ್ಪಿತವಾದ ನಾಮರೂಪಗಳ ಉಪಾಧಿಯ ಅಪೇಕ್ಷೆಯಿಂದ; ನಿಜವಾಗಿ ಬ್ರಹ್ಮವು ಯಾವ ಪರಿಣಾಮವನ್ನೂ ಪಡೆಯದೆ ಯಾವಾಗಲೂ ಇದ್ದಂತೆಯೇ ಇರುತ್ತದೆ ಎಂದು ಭಾಷ್ಯಕಾರರು ತಮ್ಮ ಅಭಿಪ್ರಾಯವನ್ನು ಸ್ಥಾಪಿಸಿರುತ್ತಾರೆ.

(೧) ನಾಚೇತನಂ ಲೋಕೇ ಚೇತನಾನಧಿಷ್ಠಿತಂ ಸ್ವತನ್ತ್ರಂ ಕಿಂಚಿತ್ ವಿಶಿಷ್ಟ ಪುರುಷಾರ್ಥನಿರ್ವರ್ತನಸಮರ್ಥಾನ್ ವಿಕಾರಾನ್ ವಿರಚಯದ್ ದೃಷ್ಟಮ್॥

-ಸೂ. ಭಾ. ೨-೨-೧-೫.

(೨) ಆಸ್ತಾಂ ತಾವದಿಯಂ ರಚನಾ। ತತ್ಸಿದ್ಧ್ಯರ್ಥಂ ಯಾ ಪ್ರವೃತ್ತಿಃ ಸಾಮ್ಯಾವಸ್ಥಾನಾತ್ ಪ್ರಚ್ಯುತಿಃ, ಸತ್ತ್ವರಜಸ್ತಮಸಾಮ್ ಅಙ್ಗಾಙ್ಗಿಭಾವರೂಪಾಪತ್ತಿಃ, ವಿಶಿಷ್ಟಕಾರ್ಯಾಭಿಮುಖ-ಪ್ರವೃತ್ತಿತಾ ಸಾಪಿ ನಾಚೇತನಸ್ಯ ಪ್ರಧಾನಸ್ಯ ಸ್ವತನ್ತ್ರಸ್ಯೋಪಪದ್ಯತೇ, ಮೃದಾದಿಷ್ವದರ್ಶನಾತ್, ರಥಾದಿಷು ಚ॥ -ಸೂ. ಭಾ. ೨-೨-೨-೭.

(೩) ತ್ರಯೋ ಗುಣಾಃ ಸಾಮ್ಯೇನಾವತಿಷ್ಠಮಾನಾಃ ಪ್ರಧಾನಮ್। ನ ತು ತದ್ವ್ಯತಿರೇಕೇಣ ಪ್ರಧಾನಸ್ಯ ಪ್ರವರ್ತಕಂ ನಿವರ್ತಕಂ ವಾ ಕಿಂಚಿದ್ ಬಾಹ್ಯಮಪೇಕ್ಷ್ಯಮ್ ಅವಸ್ಥಿತಮಸ್ತಿ। ಪುರುಷಸ್ತೂದಾಸೀನೋ ನ ಪ್ರವರ್ತಕೋ ನ ನಿವರ್ತಕಃ ಇತ್ಯತೋಽನಪೇಕ್ಷಂ ಪ್ರಧಾನಮ್। ಅನಪೇಕ್ಷತ್ವಾಚ್ಚ ಕದಾಚಿತ್ ಪ್ರಧಾನಂ ಮಹದಾದ್ಯಾಕಾರೇಣ ಪರಿಣಮತೇ ಕದಾಚಿನ್ನ ಪರಿಣಮತೇ ಇತ್ಯೇತದಯುಕ್ತಮ್॥ -ಸೂ. ಭಾ. ೨-೨-೪-೧೨.

(೪) ನ ಹಿ ಅಚೇತನಂ ಚೇತನೇನಾನಧಿಷ್ಠಿತಂ ಸ್ವತನ್ತ್ರಂ ಪ್ರವರ್ತತೇ ಪ್ರವರ್ತಯತಿ ವೇತಿ ಸಾಂಖ್ಯಪ್ರಕ್ರಿಯಾಯಾಮ್ ಅಭಿಹಿತಮ್ ಆತ್ಮನಶ್ಚ । ಅನುತ್ಪನ್ನಚೈತನ್ಯಸ್ಯ ತಸ್ಯಾಮ್ ಅವಸ್ಥಾಯಾಮ್ ಅಚೇತನತ್ವಾತ್। ಆತ್ಮಸಮವಾಯಿತ್ವಾಭ್ಯುಪಗಮಾಚ್ಚ ನಾದೃಷ್ಟಮಣುಷು ಕರ್ಮಣೋ ನಿಮಿತ್ತಂ ಸ್ಯಾತ್। ಅಸಂಬನ್ಧಾತ್॥ -ಸೂ. ಭಾ. ೨-೨-೧೨-೨೭.

(೫) ಅಪಿ ಚಾಣವಃ ಪ್ರವೃತ್ತಿಸ್ವಭಾವಾ ವಾ, ನಿವೃತ್ತಿಸ್ವಭಾವಾ ವಾ, ಉಭಯಸ್ವಭಾವಾ ವಾ, ಅನುಭಯಸ್ವಭಾವಾ ವಾ ಅಭ್ಯುಪಗಮ್ಯನ್ತೇ। ಗತ್ಯನ್ತರಾಭಾವಾತ್। ಚತುರ್ಧಾಪಿ ನೋಪಪದ್ಯತೇ। ಪ್ರವೃತ್ತಿಸ್ವಭಾವತ್ವೇ ನಿತ್ಯಮೇವ ಪ್ರವೃತ್ತೇರ್ಭಾವಾತ್ ಪ್ರಲಯಾಭಾವಪ್ರಸಙ್ಗಃ। ನಿವೃತ್ತಿಸ್ವಭಾವತ್ವೇಽಪಿ ನಿತ್ಯಮೇವ ನಿವೃತ್ತೇರ್ಭಾವಾತ್ ಸರ್ಗಾಭಾವಪ್ರಸಙ್ಗಃ। ಉಭಯಸ್ವಭಾವತ್ವಂ ಚ ವಿರೋಧಾತ್ ಅಸಮಞ್ಜಸಮ್। ಅನುಭಯಸ್ವಭಾವತ್ವೇ ತು ನಿಮಿತ್ತವಶಾತ್ ಪ್ರವೃತ್ತಿನಿವೃತ್ತ್ಯೋರಭ್ಯುಪಗಮ್ಯಮಾನಯೋಃ, ಅದೃಷ್ಟಾದೇರ್ನಿಮಿತ್ತಸ್ಯ ನಿತ್ಯಸಂನಿಧಾನಾತ್ ನಿತ್ಯಪ್ರವೃತ್ತಿಪ್ರಸಙ್ಗಾತ್। ಅತನ್ತ್ರತ್ವೇಽಪ್ಯದೃಷ್ಟಾದೇಃ ನಿತ್ಯಾಪ್ರವೃತ್ತಿಪ್ರಸಙ್ಗಾತ್॥

-ಸೂ. ಭಾ. ೨-೨-೧೪-೩೦.

(೬) ನನು ಶಬ್ದೇನಾಪಿ ನ ಶಕ್ಯತೇ ವಿರುದ್ಧೋಽರ್ಥಃ ಪ್ರತ್ಯಾಯಯಿತುಂ 'ನಿರವಯವಂ ಚ ಬ್ರಹ್ಮ ಪರಿಣಮತೇ' 'ನ ಚ ಕೃತ್ಸ್ನಮಿತಿ' । ಯದಿ ನಿರವಯವಂ ಬ್ರಹ್ಮ ಸ್ಯಾತ್ ನೈವ ಪರಿಣಮೇತ। ಕೃತ್ಸ್ನಮೇವ ವಾ ಪರಿಣಮೇತ। ಅಥ ಕೇನಚಿದ್ರೂಪೇಣ ಪರಿಣಮೇತ ಕೇನಚಿಚ್ಚಾವತಿಷ್ಠೇತೇತಿ, ರೂಪಭೇದಕಲ್ಪನಾತ್ ಸಾವಯವಮೇವ ಪ್ರಸಜ್ಯೇತ॥

-ಸೂ. ಭಾ. ೨-೧-೨೭-೧೫-೪೬೪

(೭) ಪರಮಾತ್ಮನಸ್ತು ಸ್ವರೂಪವ್ಯಪಾಶ್ರಯಮ್ ಔದಾಸೀನ್ಯಮ್, ಮಾಯಾವ್ಯಪಾಶ್ರಯಂ ಚ ಪ್ರವರ್ತಕತ್ವಮ್ ಇತ್ಯಸ್ತ್ಯತಿಶಯಃ॥ -ಸೂ. ಭಾ. ೨-೨-೭-೧೫

(೮) ಅವಿದ್ಯಾಕಲ್ಪಿತೇನ ಚ ನಾಮರೂಪಲಕ್ಷಣೇನ ರೂಪಭೇದೇನ ವ್ಯಾಕೃತಾವ್ಯಾಕೃತಾತ್ಮಕೇನ ತತ್ತ್ವಾನ್ಯತ್ವಾಭ್ಯಾಮ್ ಅನಿರ್ವಚನೀಯೇನ ಬ್ರಹ್ಮ ಪರಿಣಾಮಾದಿ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ। ಪಾರಮಾರ್ಥಿಕೇನ ಚ ರೂಪೇಣ ಸರ್ವವ್ಯವಹಾರಾತೀತಮ್ ಅಪರಿಣತಮ್ ಅವತಿಷ್ಠತೇ॥ -ಸೂ.ಭಾ. ೨-೧-೨೭-೪೬೪

೧೦೯. ಜಗತ್ಕಾರಣವು ಉಪಾದಾನಮಾತ್ರವೇ ಎಂಬಿಷ್ಟನ್ನೇ ಇಟ್ಟುಕೊಂಡು ವೇದಾಂತಿಗಳು ಸಾಂಖ್ಯಾದಿಗಳನ್ನು ಖಂಡಿಸಿಲ್ಲ. ಏಕೆಂದರೆ **ಬ್ರಹ್ಮವು ಜಗತ್ತಿಗೆ ಉಪಾದಾನವೂ ಆಗಿದೆ, ಕರ್ತೃವೂ ಆಗಿದೆ- ಎಂಬುದು ವೇದಾಂತಿಗಳ ಸಿದ್ಧಾಂತವು.** ಜಗತ್ತನ್ನು ಸೃಷ್ಟಿಸುವದಕ್ಕೆ ಈಶ್ವರನು ಕರ್ತೃಮಾತ್ರವಾಗಿರುತ್ತಾನೆ ಎಂಬವರ ಮತವನ್ನೂ ಅವರು ಖಂಡಿಸುತ್ತಾರೆ. ಬ್ರಹ್ಮವು ಜಗತ್ಕಾರಣವೆಂಬುದನ್ನು ಪ್ರತಿಪಾದಿಸುವಾಗ ಪ್ರಧಾನಾದಿಗಳು ವೇದಾಂತೋಕ್ತವಾದ ಜಗತ್ಕಾರಣವಲ್ಲ, ಏಕೆಂದರೆ ಜಗತ್ಕಾರಣವಾದ ಬ್ರಹ್ಮವು ಮೊದಲು 'ಆಲೋಚನೆಮಾಡಿನೋಡಿತು' ಎಂದು ಶ್ರುತಿಯಲ್ಲಿದೆ- ಎಂದು ಅವರ ಮತವನ್ನು ತಿರಸ್ಕರಿಸಿರುತ್ತದೆ. ಈ ಕಾರಣದಿಂದಲೇ ಬ್ರಹ್ಮವು ಎಂದರೆ ಪರಮಾತ್ಮನು ಜಗತ್ತಿಗೆ ನಿಮಿತ್ತಕಾರಣಮಾತ್ರವೇ ಎಂದಾಗುತ್ತದೆ. ಏಕೆಂದರೆ ಮೊದಲು ಆಲೋಚಿಸಿ ಕಾರ್ಯವನ್ನು ಮಾಡುವದು ನಿಮಿತ್ತಕಾರಣವಾದ ಕುಂಬಾರನೇ ಮುಂತಾದವರಲ್ಲಿ ಕಂಡಿದೆ; ಕುಂಬಾರನಿಗೆ ಕೋಲು, ಚಕ್ರ, ಮಣ್ಣು-ಮುಂತಾದ ಅನೇಕ ಕಾರಕಗಳು ಬೇಕಾಗಿರುವಂತೆ ಪರಮಾತ್ಮನಿಗೆ ಉಪಾದಾನಕಾರಣವು ಬೇರೆಯಾಗಿ ಬೇಕು ಎಂಬುದು ಯುಕ್ತವಾಗಿದೆ. ಪ್ರಭುಗಳಾಗಿರುವ ವೈವಸ್ವತನೇ ಮುಂತಾದವರು ಆಯಾ ಕಾರ್ಯಗಳಿಗೆ ನಿಮಿತ್ತಕಾರಣಮಾತ್ರರಾಗಿರುವದು ಕಂಡುಬಂದಿದೆ. ಆದ್ದರಿಂದ ಪರಮೇಶ್ವರನೂ ಬರಿಯ ನಿಮಿತ್ತಕಾರಣನೇ ಎಂಬುದು ಯುಕ್ತ-ಎಂದು ನಿಮಿತ್ತಕಾರಣವಾದಿಗಳು ವಾದಿಸುತ್ತಾರೆ. ಅವರಿಗೆ ಉತ್ತರವಾಗಿ ಬ್ರಹ್ಮವು ಉಪಾದಾನವೂ ಆಗಿದೆ. ಏಕೆಂದರೆ ಕಾರಣವೊಂದನ್ನು ತಿಳಿದರೆ ಮಿಕ್ಕದ್ದೆಲ್ಲವನ್ನೂ ತಿಳಿದಂತೆ ಆಗುತ್ತದೆ ಎಂದು ವೇದಾಂತದಲ್ಲಿ ಪ್ರತಿಜ್ಞೆ ಮಾಡಿದೆ; ನಿಮಿತ್ತಕಾರಣವನ್ನು ಅರಿತುಕೊಂಡರೆ ಕಾರ್ಯವನ್ನೆಲ್ಲ ಅರಿತುಕೊಂಡಂತೆ ಆಗಲಾರದು. ಇದಲ್ಲದೆ 'ಒಂದು ಮುದ್ದೆ ಮಣ್ಣನ್ನು ಅರಿತುಕೊಂಡರೆ ಮಣ್ಣಿನ ಕಾರ್ಯವೆಲ್ಲವನ್ನೂ ಅರಿತುಕೊಂಡಂತೆ ಹೇಗೆ ಆಗುವದೋ' ಎಂದು ಉಪಾದಾನಕಾರಣವನ್ನೇ ದೃಷ್ಟಾಂತವಾಗಿ ಶ್ರುತಿಯಲ್ಲಿ ಉದಾಹರಿಸಿರುತ್ತದೆ. ಆದ್ದರಿಂದಲೂ ಬ್ರಹ್ಮವು ಜಗತ್ತಿಗೆ ಉಪಾದಾನವೂ ಆಗಿದೆ ಎಂಬಿದು ಅದ್ವೈತಿವೇದಾಂತಿಗಳ ಅಭಿಪ್ರಾಯ. ಆದ್ದರಿಂದ ಈಶ್ವರನು ಜಗತ್ತಿಗೆ ಕೇವಲ ನಿಮಿತ್ತಕಾರಣನು ಎಂಬುದು ವೇದವಿರುದ್ಧ ಎಂದೂ ಅವರು ಹೇಳುತ್ತಾರೆ. ಈಚಿನ ದ್ವೈತಿವೇದಾಂತಿಗಳಾದ ಮಾಧ್ವವೇದಾಂತಿಗಳು ಕೇವಲ ನಿಮಿತ್ತಕಾರಣವಾದಿಗಳು.

(೧) ಈಕ್ಷತೇರ್ನಾಶಬ್ದಮ್। -ಬ್ರ.ಸೂ. ೧-೧-೫.

(೨) ನ ಸಾಂಖ್ಯಪರಿಕಲ್ಪಿತಮ್ ಅಚೇತನಂ ಪ್ರಧಾನಂ ಜಗತಃ ಕಾರಣಂ ಶಕ್ಯಂ ವೇದಾನ್ತೇಷು ಆಶ್ರಯಿತುಮ್, ಅಶಬ್ದಂ ಹಿ ತತ್। ಕಥಮಶಬ್ದತ್ವಮ್ ಈಕ್ಷತೇಃ। ಈಕ್ಷಿತೃತ್ವಶ್ರವಣಾತ್ ಕಾರಣಸ್ಯ॥ -ಸೂ.ಭಾ. ೧-೧-೫-೬೭.

(೩). ಇದಾನೀಂ ಕೇವಲಾಧಿಷ್ಠಾತ್ರೀಶ್ವರಕಾರಣವಾದಃ ಪ್ರತಿಷಿಧ್ಯತೇ । ತತ್ ಕಥಮವಗಮ್ಯತೇ? 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್', 'ಅಭಿಧ್ಯೋಪದೇಶಾಚ್ಚ' (ಬ್ರ. ಸೂ. ೧-೪-೨೩, ೨೪) ಇತ್ಯತ್ರ ಪ್ರಕೃತಿಭಾವೇನ, ಅಧಿಷ್ಠಾತೃಭಾವೇನ ಚ ಉಭಯಸ್ವಭಾವಸ್ಯ ಈಶ್ವರಸ್ಯ ಸ್ವಯಮೇವ ಆಚಾರ್ಯೇಣ ಪ್ರತಿಷ್ಠಾಪಿತತ್ವಾತ್। ...ನಾ ಚೇಯಂ ವೇದಬಾಹ್ಯೇಶ್ವರಕಲ್ಪನಾ ಅನೇಕಪ್ರಕಾರಾ॥ -ಸೂ.ಭಾ. ೨-೨-೩೭-೭೩.

(೪) ಪ್ರಕೃತಿಶ್ಚ ಉಪಾದಾನಕಾರಣಂ ಚ ಬ್ರಹ್ಮ ಅಭ್ಯುಪಗನ್ತವ್ಯಮ್, ನಿಮಿತ್ತಕಾರಣಂ ಚ। ನ ಕೇವಲಂ ನಿಮಿತ್ತಕಾರಣಮೇವ। ಕಸ್ಮಾತ್? ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್। ಪ್ರತಿಜ್ಞಾ ತಾವತ್ ''ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್'' (ಛಾಂ. ೬-೧-೩) ಇತಿ। .....ತಚ್ಚ ಉಪಾದಾನಕಾರಣ ವಿಜ್ಞಾನೇ ಸರ್ವವಿಜ್ಞಾನಂ ಸಂಭವತಿ, ಉಪಾದಾನಕಾರಣಾವ್ಯತಿರೇಕಾತ್ ಕಾರ್ಯಸ್ಯ। ನಿಮಿತ್ತಕಾರಣಾವ್ಯತಿರೇಕಸ್ತು ಕಾರ್ಯಸ್ಯ ನಾಸ್ತಿ । ಲೋಕೇ ತಕ್ಷ್ಣಃ ಪ್ರಾಸಾದವ್ಯತಿರೇಕದರ್ಶನಾತ್। ದೃಷ್ಟಾನ್ತೋಽಪಿ ''ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್'' (ಛಾಂ. ೬-೧-೪) ಇತ್ಯುಪಾದಾನಕಾರಣಗೋಚರ ಏವಾಮ್ನಾಯತೇ॥ -ಸೂ.ಭಾ. ೧-೪-೨೩-೫೯೧.

೧೧೦. ಇದುವರೆಗೆ ಬ್ರಹ್ಮವು ಜಗತ್ತಿಗೆ ಉಪಾದಾನಕಾರಣ ಎಂಬ ಪಕ್ಷದಲ್ಲಿ ಎದ್ದುಕೊಳ್ಳಬಹುದಾದ ಆಕ್ಷೇಪಗಳಿಗೆ ಪರಿಹಾರವನ್ನು ಹೇಳಿದ್ದಾಗಿದೆ. ಈಗ ಬ್ರಹ್ಮವು ಕೇವಲ ನಿಮಿತ್ತಕಾರಣವು ಎಂದಿಟ್ಟುಕೊಳ್ಳುವಲ್ಲಿ ಉಂಟಾಗುವ ತೊಡಕುಗಳಿಗೆ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ. ಈಶ್ವರನು ಜಗತ್ತಿಗೆ ಕೇವಲ ನಿಮಿತ್ತಕಾರಣನು ಎಂದರೆ ಅವನಿಗೂ ಜಗತ್ತಿನ ಪ್ರಕೃತಿ ಮತ್ತು ಜೀವರುಗಳು- ಇವರಿಗೂ ಸಂಬಂಧ ವಿಲ್ಲದೆ ಹೋಗುವದು. ಏಕೆಂದರೆ ಇವರೆಲ್ಲರೂ ಸರ್ವಗತರು, ನಿರವಯವರು; ಬ್ರಹ್ಮವು ನಿಮಿತ್ತಕಾರಣವೋ ಅಲ್ಲವೋ ಎಂಬುದೇ ವಾದಗ್ರಸ್ತವಾಗಿರುವದರಿಂದ ಈಶ್ವರನನ್ನು ಆಶ್ರಯಿಸಿಕೊಂಡು ಜಗತ್ತು ಇರುತ್ತದೆ- ಎನ್ನುವದಕ್ಕೂ ಇಲ್ಲ. ಈಶ್ವರನಿಗೆ ಸೃಷ್ಟಿಯ ಪೂರ್ವದಲ್ಲಿ ಶರೀರವಿಲ್ಲದ್ದರಿಂದ ಸೃಷ್ಟಿವ್ಯಾಪಾರವು ಆಗುವಂತಿಲ್ಲ. ಈಶ್ವರನು ತನ್ನ ಪ್ರಕೃತಿಯನ್ನು ಮತ್ತು ಜೀವರನ್ನು ಇಷ್ಟೆಂದು ಬಲ್ಲವನಾದರೆ ಪ್ರಕೃತಿಯೂ ಜೀವರೂ ಪರಸ್ಪರಪರಿಚ್ಛಿನ್ನವಾದ್ದರಿಂದ ಅವು ಅನಂತ (ನಾಶರಹಿತ)ವೆಂಬ ಕಲ್ಪನೆ ತಪ್ಪಾಗುವದು; ಪ್ರಧಾನಪುರುಷರೂ ಅನಂತವೇ- ಈಶ್ವರನಿಗೆ ಅವುಗಳ ಅಂತವು ಗೊತ್ತಿಲ್ಲವೆಂದರೆ, ಅವನು ಸರ್ವಜ್ಞನಲ್ಲದೆ ಹೋಗುವನು. ವೇದಾಂತಿಗಳಿಗೂ ಈ

ದೋಷವಿಲ್ಲವೆ? -ಎಂದು ಕೇಳಬಹುದು. ಆದರೆ ಅವರ ಪಕ್ಷದಲ್ಲಿ ಪರಮಾತ್ಮನಿಗೂ ಜಗತ್ತಿಗೂ ತಾದಾತ್ಮ್ಯ ಸಂಬಂಧವಿರುತ್ತದೆ; ಎಂದರೆ ಜಗತ್ತು ನಿಜವಾಗಿ ಪರಮಾತ್ಮನೇ ಎಂದು ಅವರು ಒಪ್ಪುತ್ತಾರೆ. ಅಪೌರುಷೇಯವಾದ ವೇದಾಂತದ ಆಧಾರದಿಂದ ಅವರು ಜಗತ್ಕಾರಣವನ್ನು ಕಲ್ಪಿಸುತ್ತಾರಾದ್ದರಿಂದ ಅವರಿಗೆ ತರ್ಕದ ದೋಷವಿಲ್ಲ. ಮಿಕ್ಕವರೂ 'ಆಗಮ' ವನ್ನು ಪ್ರಮಾಣವಾಗಿ ಹೇಳಬಹುದಲ್ಲ! ಎಂದರೆ ಹಾಗಲ್ಲ; ಏಕೆಂದರೆ ಸರ್ವಜ್ಞನಾದ ಈಶ್ವರನು ಹೇಳಿದ್ದರಿಂದ ಆಗಮವು ಪ್ರಮಾಣವು ಎಂಬುದು ಅವರ ಮತ. ಆದ್ದರಿಂದ ಆಗಮಪ್ರಮಾಣವು ಸಿದ್ಧವಾದರೆ ಈಶ್ವರನು ಸರ್ವಜ್ಞನೆಂದು ಸಿದ್ಧವಾಗುತ್ತದೆ; ಈಶ್ವರನು ಸರ್ವಜ್ಞನೆಂದಾದರೆ ಆಗಮವು ಪ್ರಮಾಣವೆಂದು ಸಿದ್ಧವಾಗುತ್ತದೆ- ಎಂಬ ಅನ್ಯೋನ್ಯಾಶ್ರಯದೋಷವು ಅವರ ಮತದಲ್ಲಿ ಎದ್ದು ಕೊಳ್ಳುತ್ತದೆ.

(೧) ನ ಹಿ ಪ್ರಧಾನಪುರುಷವ್ಯತಿರಿಕ್ತ ಈಶ್ವರಃ, ಅನ್ತರೇಣ ಸಂಬನ್ಧಂ ಪ್ರಧಾನ ಪುರುಷಯೋರೀಶಿತಾ। ನ ತಾವತ್ಸಂಯೋಗಲಕ್ಷಣಃ ನಂಬನ್ಧಃ ಸಂಭವತಿ । ಪ್ರಧಾನಪುರುಷೇಶ್ವರಾಣಾಂ ಸರ್ವಗತತ್ವಾತ್, ನಿರವಯವತ್ವಾಚ್ಚ। ನಾಪಿ ಸಮವಾಯಲಕ್ಷಣಃ ನಂಬನ್ಧಃ। ಆಶ್ರಯಾಶ್ರಯಿಭಾವಾನಿರೂಪಣಾತ್। ನಾಪ್ಯನ್ಯಃ ಕಶ್ಚಿತ್ಕಾರ್ಯಗಮ್ಯಃ ಸಂಬನ್ಧಃ ಶಕ್ಯತೇ ಕಲ್ಪಯಿತುಮ್। ಕಾರ್ಯಕಾರಣಭಾವಸ್ಯೈವ ಅದ್ಯಾಪ್ಯಸಿದ್ಧತ್ವಾತ್। ಬ್ರಹ್ಮವಾದಿನಃ ಕಥಮಿತಿ ಚೇತ್। ನ। ತಸ್ಯ ತಾದಾತ್ಮ್ಯಲಕ್ಷಣಸಂಬನ್ಧೋಪಪತ್ತೇಃ॥ -ಸೂ. ಭಾ. ೨-೨-೩೮-೭೬.

(೨) ಸಾಧಿಷ್ಠಾನೋ ಹಿ ಲೋಕೇ ಸಶರೀರೋ ರಾಜಾ ರಾಷ್ಟ್ರಸ್ಯೇಶ್ವರೋ ದೃಶ್ಯತೇ ನ ನಿರಧಿಷ್ಠಾನಃ । ಅತಶ್ಚ ತದ್ದೃಷ್ಟಾನ್ತವಶೇನ ಅದೃಷ್ಟಮೀಶ್ವರಂ ಕಲ್ಪಯಿತುಮಿಚ್ಛತಃ ಈಶ್ವರಸ್ಯಾಪಿ ಕಿಂಚಿತ್ ಶರೀರಂ ಕರಣಾಯತನಂ ವರ್ಣಯಿತವ್ಯಂ ಸ್ಯಾತ್। ನ ಚ ತದ್ವರ್ಣಯಿತುಂ ಶಕ್ಯತೇ। ಸೃಷ್ಟ್ಯುತ್ತರಕಾಲಭಾವಿತ್ವಾತ್ ಶರೀರಸ್ಯ, ಪ್ರಾಕ್ಸೃಷ್ಟೇಸ್ತದನುಪಪತ್ತೇಃ। ನಿರಧಿಷ್ಠಾನತ್ವೇ ಚ ಈಶ್ವರಸ್ಯ ಪ್ರವರ್ತಕತ್ವಾನುಪಪತ್ತಿಃ। ಏವಂ ಲೋಕೇ ದೃಷ್ಟತ್ವಾತ್॥ -ಸೂ. ಭಾ. ೨-೨-೪೦-೭೯.

(೩)ಇಯತ್ತಾಪರಿಚ್ಛಿನ್ನತ್ವಾತ್ ಪ್ರಧಾನಪುರುಷೇಶ್ವರಾಣಾಮ್ ಅನ್ತವತ್ತ್ವಮ್ ಅವಶ್ಯಂಭಾವಿ। ಏವಂ ಲೋಕೇ ದೃಷ್ಟತ್ವಾತ್ ।........ಅಥ ಮಾ ಭೂದೇಷ ದೋಷಃ ಇತ್ಯುತ್ತರೋ ವಿಕಲ್ಪೋಽಭ್ಯುಪಗಮ್ಯೇತ ನ ಪ್ರಧಾನಸ್ಯ ಪುರುಷಾಣಾಮ್, ಆತ್ಮನಶ್ಚ ಇಯತ್ತಾ ಈಶ್ವರೇಣ ಪರಿಚ್ಛಿದ್ಯತೇ ಇತಿ । ತತ ಈಶ್ವರಸ್ಯ ಸರ್ವಜ್ಞತ್ವಾಭ್ಯುಪಗಮಹಾನಿಃ॥

-ಸೂ. ಭಾ. ೨-೨-೪೧-೮೧.

(೪) ಅಪಿ ಚ ಆಗಮಬಲೇನ ಬ್ರಹ್ಮವಾದೀ ಕಾರಣಾದಿಸ್ವರೂಪಂ ನಿರೂಪಯತೀತಿ ನಾವಶ್ಯಂ ತಸ್ಯ ಯಥಾದೃಷ್ಟಮೇವ ಸರ್ವಮಭ್ಯುಪಗನ್ತವ್ಯಮಿತಿ ನಿಯಮೋಽಸ್ತಿ। ಪರಸ್ಯ ತು ದೃಷ್ಟಾನ್ತಬಲೇನ ಕಾರಣಾದಿಸ್ವರೂಪಂ ನಿರೂಪಯತೋ ಯಥಾದೃಷ್ಟಮೇವ ಸರ್ವಮಭ್ಯುಪಗನ್ತವ್ಯಮಿತ್ಯಯಮಸ್ತ್ಯತಿಶಯಃ। ಪರಸ್ಯಾಪಿ ಸರ್ವಜ್ಞಪ್ರಣೀತಾಗಮಸದ್ಭಾವಾತ್। ಸಮಾನಮಾಗಮಬಲಮ್ ಇತಿ ಚೇತ್ । ನ। ಇತರೇತರಾಶ್ರಯತ್ವಪ್ರಸಙ್ಗಾತ್ ಆಗಮಪ್ರತ್ಯಯಾತ್ ಸರ್ವಜ್ಞತ್ವಸಿದ್ಧಿಃ। ಸರ್ವಜ್ಞಪ್ರತ್ಯಯಾಚ್ಚಾಗಮಸಿದ್ಧಿರಿತಿ॥ -ಸೂ. ಭಾ. ೨-೨-೩೮-೭೬.

೧೧೧. ಬ್ರಹ್ಮವು ಜಗತ್ಕರ್ತೃವಾದರೆ ಅದಕ್ಕೆ ಕುಂಬಾರನೇ ಮುಂತಾದ ಕರ್ತೃಗಳಂತೆ ಅನೇಕ ಕಾರಕಗಳು ಸೃಷ್ಟಿಗೆ ಬೇಕಾಗುತ್ತವೆ. ಕುಂಬಾರ, ನೇಯ್ಗೆಯವ-ಮುಂತಾದವರು ಗಡಿಗೆ ಬಟ್ಟೆ- ಮುಂತಾದ ಕಾರ್ಯಗಳನ್ನು ಮಾಡುವದಕ್ಕೆ ಮಣ್ಣು, ಕೋಲು, ತಿಗರಿ, ನೂಲು, ಮಗ್ಗ-ಮುಂತಾದವುಗಳನ್ನು ಬಯಸುವದು ಕಂಡಿದೆ. ಅದ್ವಿತೀಯವಾದ ಬ್ರಹ್ಮಕ್ಕೆ ಯಾವ ಕಾರಕವೂ ಇಲ್ಲದ್ದರಿಂದ ಅದು ಹೇಗೆ ಜಗತ್ಕಾರಣವಾದೀತು? -ಎಂದು ಆಕ್ಷೇಪಿಸಬಹುದು.

ಆದರೆ ಮತ್ತೆ ಯಾವ ಕಾರಣವೂ ಇಲ್ಲದೆ ಹಾಲು ತಾನೇ ಮೊಸರಾಗುವದು ಕಂಡಿದೆ. ಹಾಲಿಗೆ ಮೊಸರಾಗುವ ಶಕ್ತಿಯಿರುವದರಿಂದಲೇ ಅದು ನೆಕೆ ಮುಂತಾದ ಕಾರಣದಿಂದ ಬೇಗನೆ ಮೊಸರಾಗುವದು. ಇದರಂತೆ ಬ್ರಹ್ಮವು ಜಗತ್ತನ್ನು ತಾನೊಂದೇ ಇದ್ದು ಸೃಷ್ಟಿಮಾಡಬಹುದು; ಅದಕ್ಕೆ ಪರಿಪೂರ್ಣಶಕ್ತಿಯು ಇರುವದರಿಂದ ಮತ್ತೊಂದನ್ನು ಬಯಸುವದೂ ಇಲ್ಲ. ಅದಕ್ಕೆ ಬಗೆಬಗೆಯ ಶಕ್ತಿಗಳಿರುವದರಿಂದ ತಾನೊಂದೇ ಮತ್ತೊಂದರ ಸಹಾಯವನ್ನು ಬಯಸದೆ ತಾನೇ ಬಗೆಬಗೆಯ ರೂಪವಾಗಬಹುದು.

(೧) ಬ್ರಹ್ಮ ಚ ಅಸಹಾಯಂ ತವಾಭಿಪ್ರೇತಮ್। ತಸ್ಯ ಸಾಧನಾನ್ತರಾನುಪಸಂಗ್ರಹೇ ಸತಿ ಕಥಂ ಸ್ರಷ್ಟೃತ್ವಮುಪಪದ್ಯೇತ ? ತಸ್ಮಾನ್ನ ಬ್ರಹ್ಮ ಜಗತ್ಕಾರಣಮ್ ಇತಿ ಚೇತ್। ನೈಷ ದೋಷಃ। ಯತಃ ಕ್ಷೀರವದ್ ದ್ರವ್ಯಸ್ವಭಾವವಿಶೇಷಾತ್ ಉಪಪದ್ಯತೇ।....ಸ್ವಯಮಪಿ ಹಿ ಕ್ಷೀರಂ ಯಾಂ ಚ ಯಾವತೀಂ ಚ ಪರಿಣಾಮಮಾತ್ರಾಮ್ ಅನುಭವತಿ ತಾವತ್ಯೇವ ತ್ವಾರ್ಯತೇ ತು ಔಷ್ಣ್ಯಾದಿನಾ ದಧಿಭಾವಾಯ।.......ಸಾಧನಸಾಮಗ್ರ್ಯಾ ತು ತಸ್ಯ ಪೂರ್ಣತಾ ಸಂಪಾದ್ಯತೇ। ಪರಿಪೂರ್ಣಶಕ್ತಿಕಂ ತು ಬ್ರಹ್ಮ ॥ ನ ತಸ್ಯಾನ್ಯೇನ ಕೇನಚಿತ್ ಪೂರ್ಣತಾಸಂಪಾದಯಿತವ್ಯಾ।......ತಸ್ಮಾದೇಕಸ್ಯಾಪಿ ಬ್ರಹ್ಮಣೋ ವಿಚಿತ್ರಶಕ್ತಿಯೋಗಾತ್ ಕ್ಷೀರಾದಿವದ್ವಿಚಿತ್ರಪರಿಣಾಮಃ ಉಪಪದ್ಯತೇ॥

-ಸೂ.ಭಾ. ೨-೧-೨೪-೪೫.

೧೧೨. ಹಾಲು ಮುಂತಾದ ಅಚೇತನವಸ್ತುಗಳು ತಾವೇ ಮೊಸರು ಮುಂತಾದ ರೂಪವನ್ನು ತಳೆಯುವದು ಕಂಡಿದೆ. ಆದರೆ ಕುಂಬಾರನೇ ಮುಂತಾದ ಚೇತನರು ಸಾಮಗ್ರಿಯಿಲ್ಲದೆ ಕಾರ್ಯವನ್ನು ಮಾಡುವದು ಹೇಗೆ? ಎಂದರೆ ದೇವತೆಗಳು, ಪಿತೃಗಳು, ಋಷಿಗಳು-ಮುಂತಾದ ಚೇತನರು ಸೃಷ್ಟಿಮಾಡುವರೆಂದು ಮಂತ್ರ, ಅರ್ಥವಾದ, ಇತಿಹಾಸ, ಪುರಾಣಗಳಿಂದ ತಿಳಿಯಬರುತ್ತದೆ. ಜೇಡರ ಹುಳು ತಾನೊಂದೇ ದಾರವನ್ನು ಮಾಡಿಕೊಳ್ಳುತ್ತದೆ; ದೇವತೆಗಳಿಗೆ ಅವರ ಶರೀರಾದಿಸಾಮಗ್ರಿಯಿದೆಯಲ್ಲ!- ಎಂದು ಪೂರ್ವಪಕ್ಷಿ ಕೇಳಬಹುದು. ಆದರೆ ಕುಂಬಾರನೇ ಮುಂತಾದವರಿಗಿಂತ ಈ ದೃಷ್ಟಾಂತಗಳಲ್ಲಿ ವೈಲಕ್ಷಣ್ಯವಿದೆ ಎಂಬುದನ್ನು ಯಾರಾದರೂ ಒಪ್ಪಲೇಬೇಕು. ಕುಂಬಾರನು ಬರಿಯ ತನ್ನ ಶರೀರದಿಂದಲೇ ಮಡಕೆಗಳನ್ನು ಮಾಡುವದಿಲ್ಲ;

ಅವನಿಗೆ ಕೋಲು, ತಿಗುರಿ, ಮಣ್ಣು ಮುಂತಾದ ಸಾಧನಗಳೂ ಬೇಕು. ಆದರೆ ದೇವತೆಗಳೇ ಮುಂತಾದವರಿಗೆ ಮತ್ತೆ ಯಾವ ಸಾಧನವೂ ಬೇಡ. ಇದರಿಂದ ಒಬ್ಬರಿಗೆ ಇರುವ ಸಾಮರ್ಥ್ಯದಂತೆಯೇ ಎಲ್ಲರಿಗೂ ಇರಬೇಕೆಂಬ ನಿಯಮವೇನೂ ಇಲ್ಲವೆಂದಾಯಿತು. ಆದ್ದರಿಂದ ಪರಮಾತ್ಮನಿಗೆ ಕುಂಬಾರನೇ ಮೊದಲಾದವರಂತೆ ಬೇರೆಯ ಸಾಮಗ್ರಿಗಳೂ ಇರಬೇಕೆಂದು ನಿರ್ಬಂಧವನ್ನು ಮಾಡುವದು ಸರಿಯಲ್ಲ.

(೧) ಯಥಾ ಲೋಕೇ ದೇವಾಃ ಪಿತರ ಋಷಯಃ ಇತ್ಯೇವಮಾದಯೋ ಮಹಾಪ್ರಭಾವಾಶ್ಚೇತನಾ ಅಪಿ ಸನ್ತಃ, ಅನಪೇಕ್ಷ್ಯೈವ ಕಿಂಚಿದ್ ಬಾಹ್ಯಂ ಸಾಧನಮೈಶ್ವರ್ಯವಿಶೇಷಯೋಗಾತ್ ಅಭಿಧ್ಯಾನಮಾತ್ರೇಣ ಸ್ವತ ಏವ ಬಹೂನಿ ನಾನಾಸಂಸ್ಥಾನಾನಿ ಶರೀರಾಣಿ ಪ್ರಾಸಾದಾದೀನಿ ಚ ರಥಾದೀನಿ ಚ ನಿರ್ಮಿಮಾಣಾ ಉಪಲಭ್ಯನ್ತೇ । ಮನ್ತ್ರಾರ್ಥವಾದೇತಿಹಾಸಪುರಾಣಪ್ರಾಮಾಣ್ಯಾತ್। ತನ್ತುನಾಭಶ್ಚ ಸ್ವತ ಏವ ತನ್ತೂನ್ ಸೃಜತಿ...... ಏವಂ ಚೇತನಮಪಿ ಬ್ರಹ್ಮ ಅನಪೇಕ್ಷ್ಯ ಬಾಹ್ಯಂ ಸಾಧನಂ ಸ್ವತ ಏವ ಜಗತ್ ಸ್ರಕ್ಷ್ಯತಿ॥

-ಸೂ. ಬಾ. ೨-೧-೫-೪೬೧.

(೨) ಯಥಾ ಹಿ ಕುಲಾಲಾದೀನಾಂ ದೇವಾದೀನಾಂ ಚ ಸಮಾನತ್ವೇ ಚೇತನತ್ವೇ ಕುಲಾಲಾದಯಃ ಕಾರ್ಯಾರಮ್ಭೇ ಬಾಹ್ಯಂ ಸಾಧನಮ್ ಅಪೇಕ್ಷನ್ತೇ ನ ದೇವಾದಯಃ, ತಥಾ ಬ್ರಹ್ಮ ಚೇತನಮಪಿ ನ ಬಾಹ್ಯಂ ಸಾಧನಮ್ ಅಪೇಕ್ಷಿಷ್ಯತೇ।.....ತಸ್ಮಾದ್ಯಥಾ ಏಕಸ್ಯ ಸಾಮರ್ಥ್ಯಂ ದೃಷ್ಟಂ, ತಥಾ ಸರ್ವೇಷಾಮೇವ ಭವಿತುಮರ್ಹತೀತಿ ನಾಸ್ತ್ಯೇಕಾನ್ತಃ॥

-ಸೂ. ಭಾ. ೨-೧-೨೫-೪೬೧.

(೩) ಸರ್ವಶಕ್ತಿಯುಕ್ತಾ ಚ ಪರಾ ದೇವತಾ ಇತ್ಯಭ್ಯುಪಗನ್ತವ್ಯಮ್। ಕುತಃ? ತದ್ದರ್ಶನಾತ್। ತಥಾ ಹಿ ದರ್ಶಯತಿ ಶ್ರುತಿಃ ಸರ್ವಶಕ್ತಿಯೋಗಂ ಪರಸ್ಯಾ ದೇವತಾಯಾಃ '' ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ'' (ಛಾಂ.೩-೧೪-೪) .....ಇತ್ಯೇವಂಜಾತೀಯಕಾ। -ಸೂ. ಭಾ. ೨-೧-೩೦-೪೬೮.

(೪) ಪರಿಪೂರ್ಣಶಕ್ತಿಕಂ ತು ಬ್ರಹ್ಮ। ನ ತಸ್ಯಾನ್ಯೇನ ಕೇನಚಿತ್ ಪೂರ್ಣತಾ ಸಂಪಾದಯಿತವ್ಯಾ। ಶ್ರುತಿಶ್ಚ ಭವತಿ '' ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ। ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ॥' (ಶ್ವೇ. ೬-೮) ಇತಿ ॥ -ಸೂ. ಭಾ. ೨-೧-೨೪-೪೬೯.

೧೧೩. ದೇವತೆಗಳೇ ಮುಂತಾದವರಿಗೆ ಸೃಷ್ಟಿಮಾಡುವ ಶಕ್ತಿಯೂ ಇದ್ದರೂ ಶರೀರೇಂದ್ರಿಯಗಳುಳ್ಳವರಾಗಿರುವದರಿಂದ ಆಯಾ ಕಾರ್ಯಗಳನ್ನು ಮಾಡುತ್ತಾರೆ. ಆದರೆ ಪರಮಾತ್ಮನಿಗೆ ಶರೀರವಿಲ್ಲ, ಚಕ್ಷುರಾದೀಂದ್ರಿಯಗಳೂ ಇಲ್ಲ. ಇದೂ ಅಲ್ಲದೆ ಶ್ರುತಿಯಲ್ಲಿ 'ನೇತಿ, ನೇತಿ' (ಹೀಗಿಲ್ಲ, ಹೀಗೂ ಇಲ್ಲ) ಎಂದು ಪರಮಾತ್ಮನಲ್ಲಿ ಯಾವ ವಿಶೇಷಗಳೂ ಇಲ್ಲವೇ ಇಲ್ಲವೆಂದು ತಿಳಿಸಿರುವದರಿಂದ ಅಂಥವನಿಂದ ಸೃಷ್ಟಿಯಾಗುವದಾದರೂ ಹೇಗೆ?- ಎಂದು ಯಾರಾದರೂ ಆಕ್ಷೇಪಿಸಬಹುದು. ಒಬ್ಬರಿಗೆ ಇರುವಷ್ಟು

ಸಾಮರ್ಥ್ಯವೇ ಇನ್ನೊಬ್ಬರಿಗೂ ಇರಬೇಕೆಂಬುದು ಸರಿಯಲ್ಲ-ಎಂದು ಇದಕ್ಕೆ ಪರಿಹಾರವನ್ನು ಆಗಲೆ ಹೇಳಿದ್ದಾಗಿದೆ. ಯಾವ ವಿಶೇಷವೂ ಇಲ್ಲದಿದ್ದರೂ ಅವಿದ್ಯಾ ಕಲ್ಪಿತರೂಪವಿಶೇಷದಿಂದ ಬ್ರಹ್ಮಕ್ಕೆ ಸರ್ವಶಕ್ತಿಗಳೂ ಇರಬಹುದಾಗಿದೆ. ಆದ್ದರಿಂದಲೇ ಶ್ರುತಿಯು ಯಾವ ಕರಣಾದಿಗಳೂ ಇಲ್ಲದಿದ್ದರೂ ಪರಮಾತ್ಮನಿಗೆ ಎಲ್ಲಾ ಕರಣ ಸಾಮರ್ಥ್ಯಗಳೂ ಇರುತ್ತವೆಂದು ಹೇಳುತ್ತಿದೆ. ಇದು ಶ್ರುತಿಯಿಂದ ತಿಳಿದುಕೊಳ್ಳತಕ್ಕ ವಿಷಯವೇ ಹೊರತು ತರ್ಕದಿಂದ ಊಹಿಸತಕ್ಕದ್ದಲ್ಲವೆಂದೂ ಆಗಲೆ ಹೇಳಿರುತ್ತೇವೆ.

(೧) ಯದತ್ರ ವಕ್ತವ್ಯಂ, ತತ್ ಪುರಸ್ತಾದೇವ ಉಕ್ತಮ್। ಶ್ರುತ್ಯವಗಾಹ್ಯಮೇವೇದಮ್ ಅತಿಗಮ್ಭೀರಂ ಬ್ರಹ್ಮ ನ ತರ್ಕಾವಗಮ್ಯಮ್। ನ ಚ ಯಥೈಕಸ್ಯ ಸಾಮರ್ಥ್ಯಂ ದೃಷ್ಟಂ ತಥಾ ಅನ್ಯಸ್ಯಾಪಿ ಸಾಮರ್ಥ್ಯೇನ ಭವಿತವ್ಯಮಿತಿ ನಿಯಮೋಽಸ್ತೀತಿ। ಪ್ರತಿಷಿದ್ಧಸರ್ವವಿಶೇಷಸ್ಯಾಪಿ ಬ್ರಹ್ಮಣಃ ಸರ್ವಶಕ್ತಿಯೋಗಃ ಸಂಭವತಿ ಇತ್ಯೇತದಪಿ ಅವಿದ್ಯಾಕಲ್ಪಿತರೂಪಭೇದೋಪನ್ಯಾಸೇನ ಉಕ್ತಮೇವ। ತಥಾ ಚ ಶಾಸ್ತ್ರಮ್- ''ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ'' (ಶ್ವೇ. ೩-೧೯) ಇತಿ ಅಕರಣಸ್ಯಾಪಿ ಬ್ರಹ್ಮಣಃ ಸರ್ವಸಾಮರ್ಥ್ಯಯೋಗಂ ದರ್ಶಯತಿ॥ -ಸೂ. ಭಾ. ೨-೧-೩೧-೪೬೭.

೧೧೪. ಪರಮಾತ್ಮನು ಜಗತ್ತನ್ನು ಸೃಷ್ಟಿಮಾಡಿ ಅದರಲ್ಲಿ ತಾನೇ ಜೀವ ರೂಪದಿಂದ ಹೊಕ್ಕನು ಎಂದು ಶ್ರುತಿಯಲ್ಲಿದೆ. ಆ ಜೀವನು ಪರಮಾತ್ಮನೇ ಎಂದು ಉಪದೇಶಿಸಿದೆ. ಸ್ವತಂತ್ರನಾಗಿರುವ ಆ ಪರಮೇಶ್ವರನು ತನಗೆತಾನೇ ಜನ್ಮ ಮರಣರೋಗಾದಿರೂಪವಾದ ಅನರ್ಥಕರವಾದ ತನಗೆ ಅಹಿತವಾದ ಸಂಸಾರವನ್ನು ಏತಕ್ಕೆ ಮಾಡಿಕೊಂಡನು? ಒಂದುವೇಳೆ ಮಾಡಿದ್ದರೆ ನಾನು ಹೀಗೆ ಮಾಡಿಕೊಂಡೆನು ಎಂದು ಅವನಿಗೆ ನೆನಪಿನಲ್ಲಿರಬೇಕಾಗಿತ್ತು; ಹಾಗಿಲ್ಲ. ಮಾಯಾವಿಯಾದವನು ಮಾಯೆಯನ್ನು ಸೃಷ್ಟಿಮಾಡಿದ ಮೇಲೂ ತನ್ನ ಮನಸ್ಸು ಬಂದಾಗ ಅದನ್ನು ಕಳಚಿಬಿಡಬಲ್ಲವನಾಗಿರುತ್ತಾನೆ; ಜೀವನು ತನ್ನ ಶರೀರವನ್ನು ಕೂಡ ಸುಲಭವಾಗಿ ಕಳಚಿಹಾಕಿ ತಪ್ಪಿಸಿಕೊಳ್ಳಲಾರನು. ಆದ್ದರಿಂದ ಪರಮೇಶ್ವರನು ಜಗತ್ತನ್ನು ಸೃಷ್ಟಿ ಮಾಡಿರಲಾರನೆಂದು ಕಾಣುತ್ತದೆಯಲ್ಲ!- ಎಂದು ಯಾರಾದರೂ ಶಂಕಿಸಬಹುದು.

ಆದರೆ ವೇದಾಂತದಲ್ಲಿ ಪರಮಾತ್ಮನನ್ನು ಜಗತ್ಕರ್ತೃವೆಂದು ಹೇಳಿದೆಯೇ ಹೊರತು ಜೀವನನ್ನು ಜಗತ್ಕರ್ತೃವೆಂದು ಹೇಳಿಲ್ಲ. ಜೀವನಿಗಿಂತಲೂ ಪರಮಾತ್ಮನು ಹೆಚ್ಚಿನ ಸ್ಥಿತಿಯವನು; ಅವನು ಸರ್ವಜ್ಞನು, ಸರ್ವಶಕ್ತಿಗಳುಳ್ಳವನು, ನಿತ್ಯಶುದ್ಧಬುದ್ಧ ಮುಕ್ತಸ್ವಭಾವನು; ಅವನಿಗೆ ಹಿತಾಹಿತಗಳಿಲ್ಲ. ಜೀವನೇ ಪರಮಾತ್ಮನೆಂದು ಶ್ರುತಿಯಲ್ಲಿ ಹೇಳಿರುವದು ನಿಜವಾದರೂ ಅದು ತಿಳಿಯುವವರೆಗೆ ಜೀವನು ಶ್ರವಣಾದಿಗಳಿಂದ ಪರಮಾತ್ಮನನ್ನು ತಿಳಿದುಕೊಳ್ಳಬೇಕಾಗಿರುವ ಅಲ್ಪಜ್ಞನಾಗಿರುತ್ತಾನೆ; ಆಕಾಶಕ್ಕೂ ಘಟಾಕಾಶಕ್ಕೂ ಇರುವ ಭೇದವೇ ಪರಮಾತ್ಮನಿಗೂ ಜೀವನಿಗೂ ಇರುತ್ತದೆ. ಆದ್ದರಿಂದ

ಜೀವಪರಮಾತ್ಮರಿಗೆ ಭೇದಾಭೇದವಿದೆ ಎಂಬುದು ಹೇಗೆ? ಎಂಬ ಆಕ್ಷೇಪಣೆಗೆ ಇಲ್ಲಿ ಎಡೆಯಿಲ್ಲ. ಜೀವನು ತಾನು ಪರಮಾತ್ಮನೇ ಎಂದು ಶಾಸ್ತ್ರೋಪದೇಶದಿಂದ ತಿಳಿದುಕೊಂಡಾಗಲೊ, ಎಂದರೆ ಆಗ ಜೀವನು ಸಂಸಾರಿಯೂ ಆಗಿರುವದಿಲ್ಲ, ಬ್ರಹ್ಮವು ಸ್ರಷ್ಟೃವೂ ಆಗಿರುವದಿಲ್ಲ; ತಪ್ಪು ತಿಳಿವಳಿಕೆಯಿಂದಾಗಿರುವ ಭೇದ ವ್ಯವಹಾರವೆಲ್ಲ ಆಗ ಹೋಗಿಬಿಟ್ಟಿರುತ್ತದೆ. ಅವಿದ್ಯೆಯಿಂದ ಕಲ್ಪಿತವಾದ ನಾಮರೂಪ ಗಳಿಂದಾಗಿರುವ ಶರೀರೇಂದ್ರಿಯಗಳನ್ನೂ ತನ್ನನ್ನೂ ವಿಂಗಡಿಸಿಕೊಳ್ಳದೆ ಇರುವದೇ ಅಲ್ಲವೆ, ಸಂಸಾರವು? ಆದ್ದರಿಂದ ಪರಮಾತ್ಮನು ಜಗತ್ಕರ್ತೃವಾದರೆ ಹಿತಾಕರಣಾದಿ ದೋಷಗಳುಂಟಾಗುವವೆಂಬುದು ಸಲ್ಲದು.

(೧) ಯತ್ಸರ್ವಜ್ಞಂ ಸರ್ವಶಕ್ತಿ ಬ್ರಹ್ಮ ನಿತ್ಯಶುದ್ಧಬುದ್ಧಮುಕ್ತಸ್ವಭಾವಂ ಶಾರೀರಾತ್ ಅಧಿಕಮನ್ಯತ್, ತದ್ ವಯಂ ಜಗತಃ ಸ್ರಷ್ಟೃ ಬ್ರೂಮಃ। ನ ತಸ್ಮಿನ್ ಹಿತಾಕರಣಾದಯೋ ದೋಷಾಃ ಪ್ರಸಜ್ಯನ್ತೇ। ನ ಹಿ ತಸ್ಯ ಹಿತಂ ಕಿಂಚಿತ್ ಕರ್ತವ್ಯಮ್ ಅಸ್ತಿ, ಅಹಿತಂ ವಾ ಪರಿಹರ್ತವ್ಯಮ್। ನಿತ್ಯಮುಕ್ತಸ್ವರೂಪತ್ವಾತ್। ನ ಚ ತಸ್ಯ ಜ್ಞಾನಪ್ರತಿಬನ್ಧಃ ಶಕ್ತಿಪ್ರತಿಬನ್ಧೋ ವಾ ಕ್ವಚಿದಪ್ಯಸ್ತಿ। ಸರ್ವಜ್ಞತ್ವಾತ್ ಸರ್ವಶಕ್ತಿತ್ವಾಚ್ಚ। ಶಾರೀರಸ್ತ್ವನೇವಂವಿಧಃ। ತಸ್ಮಿನ್ ಪ್ರಸಜ್ಯನ್ತೇ ಹಿತಾಕರಣಾದಯೋ ದೋಷಾಃ। ನ ತು ತಂ ವಯಂ ಜಗತಃ ಸ್ರಷ್ಟಾರಂ ಬ್ರೂಮಃ॥

-ಸೂ. ಭಾ. ೨-೧-೨೨-೪೫೫.

(೨)ನನ್ವಭೇದನಿರ್ದೇಶೋಽಪಿ ದರ್ಶಿತಃ । 'ತತ್ತ್ವಮಸಿ' ಇತ್ಯೇವಂಜಾತೀಯಕಃ । ಕಥಂ ಭೇದಾಭೇದೌ ವಿರುದ್ಧೌ ಸಂಭವೇಯಾತಾಮ್ ? ನೈಷದೋಷಃ । ಆಕಾಶಘಟಾಕಾಶನ್ಯಾಯೇನ ಉಭಯಸಂಭವಸ್ಯ ತತ್ರ ತತ್ರ ಪ್ರತಿಷ್ಠಾಪಿತತ್ವಾತ್ ॥ - ಸೂ. ಭಾ.೨-೧-೨೨-೪೫೬.

(೩)ಅಪಿ ಚ ಯದಾ ತತ್ತ್ವಮಸೀತ್ಯೇವಂಜಾತೀಯಕೇನ ಅಭೇದನಿರ್ದೇಶೇನ ಅಭೇದಃ ಪ್ರತಿಬೋಧಿತೋ ಭವತಿ, ಅಪಗತಂ ಭವತಿ ತದಾ ಜೀವಸ್ಯ ಸಂಸಾರಿತ್ವಂ ಬ್ರಹ್ಮಣಶ್ಚ ಸ್ರಷ್ಟೃತ್ವಮ್। ಸಮಸ್ತಸ್ಯ ಮಿಥ್ಯಾಜ್ಞಾನವಿಜೃಮ್ಭಿತಸ್ಯ ಭೇದ ವ್ಯವಹಾರಸ್ಯ ಸಮ್ಯಗ್ಜ್ಞಾನೇನ ಬಾಧಿತತ್ವಾತ್। ತತ್ರ ಕುತ ಏವ ಸೃಷ್ಟಿಃ, ಕುತೋ ವಾ ಹಿತಾಕರಣಾದಯೋ ದೋಷಾಃ ? ಅವಿದ್ಯಾಪ್ರತ್ಯುಪಸ್ಥಾಪಿತ ನಾಮರೂಪಕೃತಕಾರ್ಯಕರಣಸಂಘಾತೋಪಾಧ್ಯವಿವೇಕತಾ ಹಿ ಭ್ರಾನ್ತಿರ್ಹಿತಾಕರಣಾದಿಲಕ್ಷಣಃ ಸಂಸಾರಃ॥ -ಸೂ. ಭಾ.೨.೧-೨೨-೪೫೬.

(೪) ಅಬಾಧಿತೇ ತು ಭೇದವ್ಯವಹಾರೇ 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' (ಛಾಂ.೮-೭-೧) ಇತ್ಯೇವಂಜಾತೀಯಕೇನ ಭೇದನಿರ್ದೇಶೇನ ಅವಗಮ್ಯಮಾನಂ ಬ್ರಹ್ಮಣೋಽಧಿಕತ್ವಂ ಹಿತಾಕರಣಾದಿದೋಷಪ್ರಸಕ್ತಿಂ ನಿರುಣದ್ಧಿ॥ -ಸೂ. ಭಾ. ೨-೧-೨೨-೪೫೬.

೧೧೫. ಪರಮಾತ್ಮನು ಜಗತ್ಕರ್ತೃವೆಂದರೆ ಅವನಿಗೆ ಪಕ್ಷಪಾತವೂ ದಯಾರಾಹಿತ್ಯವೂ ಇದೆ ಎಂದಾಗುವದು. ಏಕೆಂದರೆ ಜೀವರಲ್ಲಿ ದೇವತೆಗಳೇ ಮೊದಲಾದ ಕೆಲವರನ್ನು ಅತ್ಯಂತಸುಖಿಗಳನ್ನಾಗಿ ಮಾಡಿರುತ್ತಾನೆ. ಪಶುಗಳೇ ಮುಂತಾದ ಮತ್ತೆ ಕೆಲವರನ್ನು ಅತ್ಯಂತದುಃಖಿಗಳನ್ನಾಗಿ ಮಾಡಿರುತ್ತಾನೆ; ಮನುಷ್ಯರೇ ಮೊದಲಾದ ಇನ್ನು ಕೆಲವರನ್ನು ನಡುತರದ ಸುಖದುಃಖವುಳ್ಳವರನ್ನಾಗಿ ಮಾಡಿರು

ತ್ತಾನೆ. ಇಂಥ ಪಕ್ಷಪಾತವು ರಾಗದ್ವೇಷಗಳಿಲ್ಲದ ಈಶ್ವರನಿಗೆ ಸಲ್ಲದು. ಜೀವರಿಗೆ ದುಃಖವನ್ನು ಕೊಡುವ, ಮತ್ತು ಪ್ರಲಯದಲ್ಲಿ ಎಲ್ಲರನ್ನೂ ಕೊಲ್ಲುವ ಕ್ರೌರ್ಯವೂ ಅವನ ಸ್ವಭಾವಕ್ಕೆ ಒಪ್ಪುವದಿಲ್ಲ. ಆದ್ದರಿಂದ ಈಶ್ವರನು ಜಗತ್ಕಾರಣನೆಂಬುದು ಸರಿಯಲ್ಲ ಎಂಬುದೊಂದು ಆಕ್ಷೇಪಣೆಯೂ ಉಂಟು.

ಇದು ಸರಿಯಾದ ಆಕ್ಷೇಪವಲ್ಲ. ಏಕೆಂದರೆ ಜೀವರುಗಳ ಧರ್ಮಾಧರ್ಮಗಳ ಅಪೇಕ್ಷೆಯಿಂದಲೇ ಈಶ್ವರನು ಜಗತ್ತನ್ನು ಸೃಷ್ಟಿಸಿರುತ್ತಾನೆ. ಬತ್ತ, ಜವೆ-ಮುಂತಾದ ಧಾನ್ಯಗಳು ಉಂಟಾಗುವದಕ್ಕೆ ಮಳೆ ಸಾಧಾರಣಕಾರಣವಾಗಿದ್ದರೂ ಆಯಾ ಬೀಜಗಳೇ ಅವುಗಳ ತಾರತಮ್ಯಕ್ಕೆ ಕಾರಣವಾಗಿರುವಂತೆ ಈಶ್ವರನೂ ಸೃಷ್ಟಿಗೆ ಸಾಧಾರಣಕಾರಣನು; ಜೀವರ ಸುಖದುಃಖಾದಿವೈಷಮ್ಯಕ್ಕೆ ಅವರವರ ಕರ್ಮವೇ ಕಾರಣ. ಸಂಸಾರವು ಅನಾದಿಯಾಗಿರುವದರಿಂದ ಹಿಂದುಹಿಂದಿನ ಕರ್ಮವು ಮುಂದುಮುಂದಿನ ಸೃಷ್ಟಿ ವೈಷಮ್ಯಕ್ಕೆ ಕಾರಣವಾಗಿರಬಹುದಾಗಿದೆ.

(೧) ಸಾಪೇಕ್ಷೋ ಹೀಶ್ವರೋ ವಿಷಮಾಂ ಸೃಷ್ಟಿಂ ನಿರ್ಮಿಮೀತೇ। ಕಿಮಪೇಕ್ಷತೇ ಇತಿ ಚೇತ್। ಧರ್ಮಾಧರ್ಮಾವಪೇಕ್ಷತೇ ಇತಿ ವದಾಮಃ...ಈಶ್ವರಸ್ತು ಪರ್ಜನ್ಯವದ್ದ್ರಷ್ಟವ್ಯಃ। ಯಥಾ ಹಿ ಪರ್ಜನ್ಯೋವ್ರೀಹಿಯವಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ । ವ್ರೀಹಿಯವಾದಿವೈಷಮ್ಯೇ ತು ತತ್ತದ್ಬೀಜಗತಾನ್ಯೇವ ಅಸಾಧಾರಣಾನಿ ಸಾಮರ್ಥ್ಯಾನಿ ಕಾರಣಾನಿ ಭವನ್ತಿ। ಏವಮೀಶ್ವರೋ ದೇವಮನುಷ್ಯಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ । ದೇವಮನುಷ್ಯಾದಿ ವೈಷಮ್ಯೇ ತು ತತ್ತಜ್ಜೀವಗತಾನ್ಯೇವ ಅಸಾಧಾರಣಾನಿ ಕರ್ಮಾಣಿ ಕಾರಣಾನಿ ಭವಂತಿ ॥

-ಸೂ.ಭಾ.೨-೧-೩೪-೪೭೩.

(೨) ಅನಾದೌ ತು ಸಂಸಾರೇ ಬೀಜಾಙ್ಕುರವದ್ಧೇತುಹೇತುಮದ್ಭಾವೇನ ಕರ್ಮಣಃ ಸರ್ಗವೈಷಮ್ಯಸ್ಯ ಚ ಪ್ರವೃತ್ತಿರ್ನ ವಿರುಧ್ಯತೇ॥ - ಸೂ.ಭಾ.೨.-೧-೩೫-೪೭೪.

೧೧೬. ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸುವದರಿಂದ ಅವನಿಗೆ ಆಗಬೇಕಾದ ಪ್ರಯೋಜನವೇನು? ಅವನು ನಿತ್ಯತೃಪ್ತನಲ್ಲವೆ ? ಪ್ರಯೋಜನವೇ ಇಲ್ಲವೆಂದರೆ ಅವನು ಸರ್ವಜ್ಞನಲ್ಲವೆಂದಾಗುವದಲ್ಲವೆ.! ಇಂಥ ಭಾರಿಯ ಜಗತ್ತನ್ನು ಯಾವ ಪ್ರಯೋಜನವೂ ಇಲ್ಲದೆ ಯಾವನು ತಾನೆ ಸೃಷ್ಟಿಸಿಯಾನು?-ಎಂಬುದೊಂದು ಶಂಕೆ.

ಇದು ಸರಿಯಲ್ಲ. ಏಕೆಂದರೆ ಎಲ್ಲಾ ಕಾರ್ಯಗಳಿಗೂ ಪ್ರಯೋಜನವಿರಬೇಕೆಂಬ ನಿಯಮವಿಲ್ಲ. ರಾಜ, ಮಂತ್ರಿ-ಮುಂತಾದವರೂ ಕೂಡ ತಮಗೆ ಯಾವ ಪ್ರಯೋಜನವೂ ಆಗಬೇಕಾದದ್ದಿಲ್ಲವಾದರೂ ಆಟ, ಓಡಾಟ- ಮುಂತಾದವುಗಳಲ್ಲಿ ಕೇವಲ **ಲೀಲೆಗೆಂದೇ** ಪ್ರವೃತ್ತರಾಗುತ್ತಾರೆ. ಜೀವರುಗಳು ಅನವರತವಾಗಿ ಮಾಡುತ್ತಿರುವ ಉಚ್ಛ್ವಾಸನಿಃಶ್ವಾಸಗಳಿಗೆ ಯಾವ ಪ್ರಯೋಜನವೂ ಇರುವದಿಲ್ಲ. ಮಹಾಶಕ್ತನಾದ ಪರಮೇಶ್ವರನಿಗೆ ಈ ಜಗತ್ತನ್ನು ಸೃಷ್ಟಿಸುವದೇನೂ ಮಹಾಕಾರ್ಯ

ವಲ್ಲ; ಆತನಿಗೆ ಇದೊಂದು ಲೀಲೆಯೇ ಸರಿ. ಎಲ್ಲರಿಗೂ ಕ್ರಿಯೆಯಲ್ಲಿ ಪ್ರಯೋಜನವಿದ್ದರೂ ಪರಮೇಶ್ವರನಿಗೆ ಆದಿರಬೇಕಾದದ್ದಿಲ್ಲ; ಏಕೆಂದರೆ ಅವನು ಆಪ್ತಕಾಮನೆಂದು ಶ್ರುತಿ ಹೇಳುತ್ತಿದೆ. ಇದೂ ಅಲ್ಲದೆ, ಬ್ರಹ್ಮವು ಜಗತ್ತಿಗೆ ನಿಮಿತ್ತಕಾರಣವೆಂಬುದರ ಪರಮಾರ್ಥವೇನು? ಬ್ರಹ್ಮವು ಚೈತನ್ಯಮಾತ್ರವಾಗಿದ್ದು ಸರ್ವಕ್ಕೂ ಸಾಕ್ಷಿಯಾಗಿದೆ. ಆ ಚೈತನ್ಯಕ್ಕೆ ವಿಷಯವಾಗಿದ್ದುಕೊಂಡೇ ಜಗತ್ತಿನ ಎಲ್ಲಾ ಪ್ರವೃತ್ತಿಗಳೂ ಆಗುತ್ತಿರುತ್ತವೆ. ಹೀಗೆ ಪರಮಾತ್ಮನು ಚೈತನ್ಯಮಾತ್ರನಾಗಿರುತ್ತಾನೆ; ಅವನಿಗಿಂತ ಮತ್ತೊಬ್ಬ ಭೋಕ್ತೃವಾದ ಚೈತನ್ಯರೂಪವನು ಇಲ್ಲವೇ ಇಲ್ಲ. ಆದ್ದರಿಂದ ಸೃಷ್ಟಿಯು ಏಕೆ ಆಗುತ್ತದೆ ಎಂಬ ಪ್ರಶ್ನೆಯು ಏಳುವದಕ್ಕೇ ಕಾರಣವಿಲ್ಲ; ಅದಕ್ಕೆ ಉತ್ತರವೂ ಬೇಕಿರುವದಿಲ್ಲ.

(೧) ಯಥಾ ಲೋಕೇ ಕಸ್ಯಚಿತ್ ಆಪ್ತೈಷಣಸ್ಯ ರಾಜ್ಞೋ ವಾ ರಾಜಾಮಾತ್ಯಸ್ಯ ವಾ ವ್ಯತಿರಿಕ್ತಂ ಕಿಂಚಿತ್ ಪ್ರಯೋಜನಮ್ ಅನಭಿಸಂಧಾಯ ಕೇವಲಂ ಲೀಲಾರೂಪಾಃ ಪ್ರವೃತ್ತಯಃ ಕ್ರೀಡಾವಿಹಾರೇಷು ಭವನ್ತಿ, ಯಥಾ ಚ ಉಚ್ಛ್ವಾಸಪ್ರಶ್ವಾಸಾದಯೋಽನಭಿಸಂಧಾಯ ಬಾಹ್ಯಂ ಕಿಂಚಿತ್ ಪ್ರಯೋಜನಂ ಸ್ವಭಾವಾದೇವ ಸಂಭವನ್ತಿ, ಏವಮೀಶ್ವರಸ್ಯಾಪಿ ಅನಪೇಕ್ಷ್ಯ ಕಿಂಚಿತ್ ಪ್ರಯೋಜನಾನ್ತರಂ ಸ್ವಭಾವಾದೇವ ಕೇವಲಂ ಲೀಲಾರೂಪಾ ಪ್ರವತ್ತಿರ್ಭವಿಷ್ಯತಿ॥

-ಸೂ. ಭಾ. ೨-೧-೩೩-೪೭೧.

(೨) ಯದ್ಯಪಿ ಅಸ್ಮಾಕಮಿಯಂ ಜಗದ್ಬಿಮ್ಬರಚನಾ ಗುರುತರಸಂರಮ್ಭೇವ ಆಭಾತಿ, ತಥಾಪಿ ಪರಮೇಶ್ವರಸ್ಯ ಲೀಲೈವ ಕೇವಲೇಯಮ್। ಅಪರಿಮಿತಶಕ್ತಿತ್ವಾತ್॥

-ಸೂ. ಭಾ. ೨-೧-೩೩-೪೭೧.

(೩) ಏಕಸ್ಯ ದೇವಸ್ಯ ಸರ್ವಾಧ್ಯಕ್ಷಭೂತಚೈತನ್ಯಮಾತ್ರಸ್ಯ ಪರಮಾರ್ಥತಃ ಸರ್ವಭೋಗಾನಭಿಸಂಬನ್ಧಿನೋಽನ್ಯಸ್ಯ ಚೇತನಾನ್ತರಸ್ಯ ಅಭಾವೇ ಭೋಕ್ತುರನ್ಯಸ್ಯ ಅಭಾವಾತ್ ಕಿಂನಿಮಿತ್ತೇಯಂ ಸೃಷ್ಟಿಃ?- ಇತ್ಯತ್ರ ಪ್ರಶ್ನಪ್ರತಿವಚನೇ ಅನುಪಪನ್ನೇ॥ -ಗೀ. ಭಾ. ೯-೧೦-೫೪೯.

(೪) ಯದಿ ನಾಮ ಲೋಕೇ ಲೀಲಾಸ್ವಪಿ ಕಿಂಚಿತ್ ಸೂಕ್ಷ್ಮಂ ಪ್ರಯೋಜನಮ್ ಉತ್ಪ್ರೇಕ್ಷ್ಯೇತ। ತಥಾಪಿ ನೈವಾತ್ರ ಕಿಂಚಿತ್ ಪ್ರಯೋಜನಮ್ ಉತ್ಪ್ರೇಕ್ಷಿತುಂ ಶಕ್ಯತೇ। ಆಪ್ತಕಾಮಶ್ರುತೇಃ। ನಾಪ್ಯಪ್ರವೃತ್ತಿಃ, ಉನ್ಮತ್ತಪ್ರವೃತ್ತಿರ್ವಾ । ಸೃಷ್ಟಿಶ್ರುತೇಃ। ಸರ್ವಜ್ಞಶ್ರುತೇಶ್ಚ॥

-ಸೂ. ಭಾ. ೨-೧-೩೩-೪೭೧.

೧೧೭. ಹೀಗೆ ಬ್ರಹ್ಮವು ಜಗತ್ತಿಗೆ ಉಪಾದಾನಕಾರಣವೆಂದು ಇಟ್ಟುಕೊಂಡಾಗಲೂ ನಿಮಿತ್ತಕಾರಣವೆಂದು ಇಟ್ಟುಕೊಂಡಾಗಲೂ ಯಾವ ಆಕ್ಷೇಪಕ್ಕೂ ಕಾರಣವಿರುವದಿಲ್ಲ. ಕಾರಣಧರ್ಮಗಳೆಲ್ಲವೂ ಬ್ರಹ್ಮಕ್ಕೆ ಒಪ್ಪಾಗುತ್ತವೆ. ಏಕೆಂದರೆ ಬ್ರಹ್ಮವು ಸರ್ವಜ್ಞವೂ ಸರ್ವಶಕ್ತಿಗಳುಳ್ಳದ್ದೂ ಮಹಾಮಾಯವೂ ಆಗಿರುತ್ತದೆ. ಈ ಸೃಷ್ಟಿಯು ಪರಮಾರ್ಥವಾಗಿಯೇ ಆಗಿದೆಯೆಂದೇನೂ ವೇದಾಂತಿಗಳು ಹೇಳುವದಿಲ್ಲ; ಅವಿದ್ಯಾಕಲ್ಪಿತವಾದ ನಾಮರೂಪಗಳ ವ್ಯವಹಾರದ ವಿಷಯವೇ ಈ ಸೃಷ್ಟಿಯೆಂಬುದು ಅವರ ಅಭಿಪ್ರಾಯ. ಈ ಸೃಷ್ಟಿಯನ್ನು ಬ್ರಹ್ಮಾತ್ಮೈಕತ್ವವನ್ನು ತಿಳಿಸುವದಕ್ಕೆ ಉಪಾಯ

ಮಾತ್ರವಾಗಿ ಶ್ರುತಿಯಲ್ಲಿ ಹೇಳಿದೆಯೆಂಬುದೇ ಅವರ ಸಿದ್ಧಾಂತ. ಆದ್ದರಿಂದ ಇಲ್ಲಿ ಯಾವ ದೋಷವೂ ಇಲ್ಲ.

(೧) ಯಸ್ಮಾತ್ ಅಸ್ಮಿನ್ ಬ್ರಹ್ಮಣಿ ಕಾರಣೇ ಪರಿಗೃಹ್ಯಮಾಣೇ ಪ್ರದರ್ಶಿತೇನ ಪ್ರಕಾರೇಣ ಸರ್ವೇ ಕಾರಣಧರ್ಮಾಃ ಉಪಪದ್ಯನ್ತೇ ಸರ್ವಜ್ಞಂ ಸರ್ವಶಕ್ತಿ ಮಹಾಮಾಯಂ ಚ ಬ್ರಹ್ಮ- ಇತಿ, ತಸ್ಮಾತ್ ಅನತಿಶಙ್ಕನೀಯಮಿದಮ್ ಔಪನಿಷದಂ ದರ್ಶನಮ್॥ -ಸೂ. ಭಾ. ೨-೧-೩೭-೪೭೭.

(೨) ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ। ಅವಿದ್ಯಾಕಲ್ಪಿತನಾಮ ರೂಪವ್ಯವಹಾರಗೋಚರತ್ವಾತ್। ಬ್ರಹ್ಮಾತ್ಮಭಾವಪ್ರತಿಪಾದನಪರತ್ವಾಚ್ಚ ಇತ್ಯೇತದಪಿ ನೈವ ವಿಸ್ಮರ್ತವ್ಯಮ್ ॥ -ಸೂ. ಭಾ. ೨-೧-೩೩-೪೭೧.

# ೧೬. ಸೃಷ್ಟಿಶ್ರುತಿಗಳು

೧೧೮. ಕಾರ್ಯಕಾರಣವಾದ, ಸತ್ಕಾರ್ಯವಾದ, ಮಾಯಾವಾದ ಇವೆಲ್ಲವೂ ಅಧ್ಯಾರೋಪಾಪವಾದನ್ಯಾಯದಿಂದ ಆತ್ಮೈಕತ್ವವನ್ನು ತಿಳಿಸುವದಕ್ಕೆ ಉಪಾಯ ವಾಗಿಯೇ ಶ್ರುತಿಯಲ್ಲಿ ಅಂಗೀಕೃತವಾಗಿವೆ- ಎಂದು ತಿಳಿಸಿದ್ದಾಯಿತು. ಆದರೆ ಸೃಷ್ಟಿವಾಕ್ಯಗಳಲ್ಲೆಲ್ಲ ಮಾಯಾವಾದವಿಲ್ಲ; ಶ್ರುತಿಗಳಿಗೆ ಈ ವಾದವೇ ಸಮ್ಮತವೆಂದು ನಿರ್ಣಯಿಸುವದು ಹೇಗೆ? ಶ್ರುತಿಯಲ್ಲಿ ಕೆಲವು ವಾಕ್ಯಗಳಿಂದ ಆಕಾಶಾದಿಗಳ ಸೃಷ್ಟಿಯನ್ನೂ ಜೀವರ ಸೃಷ್ಟಿಯನ್ನೂ ಹೇಳಿದೆ. ಆ ಶ್ರುತಿಗಳಿಗೆ ಹೇಗೆ ಅರ್ಥವನ್ನು ಮಾಡಿಕೊಳ್ಳಬೇಕು?-ಎಂಬುದನ್ನು ಈಗ ವಿಚಾರಮಾಡಬೇಕು.

ಬ್ರಹ್ಮದಲ್ಲಿ ದ್ವೈತವು ಪರಮಾರ್ಥವಾಗಿ ಇಲ್ಲವೇ ಇಲ್ಲ, ಮಾಯಿಕವೇ-ಎಂದು ಶ್ರುತಿಯುಕ್ತಿಗಳ ಬಲದಿಂದ ಸಾಧಿಸಿದ್ದಾಗಿರುತ್ತದೆ. ಆದ್ದರಿಂದ ಶ್ರುತಿಯು ವ್ಯಾಹತ ವಾಗಿಯೂ, ಎಂದರೆ ತನ್ನ ಮಾತಿಗೆ ತಾನೇ ವಿರುದ್ಧವಾಗಿಯೂ, ಯುಕ್ತಿವಿರುದ್ಧ ವಾಗಿಯೂ, ಸೃಷ್ಟಿಯನ್ನು ಹೇಳುತ್ತದೆ ಎಂದು ಕಲ್ಪಿಸುವದು ಶಕ್ಯವಲ್ಲ. ಇದಲ್ಲದೆ ಅವಿದ್ಯೆಯಿಂದಲೇ ದ್ವೈತವಿದ್ದಂತೆ ಕಾಣುತ್ತಿರುವದೆಂದೂ ಆತ್ಮನೇ ಸರ್ವವೆಂಬ ಪರಮಾರ್ಥದೃಷ್ಟಿಯಿಂದ ನೋಡಿದಾಗ ಒಬ್ಬನು ಇನ್ನೊಬ್ಬನ ಅಥವಾ ಇನ್ನೊಂದನ್ನು ಕಾಣುವದೇ ಇಲ್ಲವೆಂದೂ ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ. ಜೀವರು ಜನ್ಮರಹಿತರು, ಕಾರಣರಹಿತರು, ನಿತ್ಯರು-ಯಾವ ಮಾರ್ಪಾಡೂ ಇಲ್ಲದವರು; ಮಾರ್ಪಾಡಿಲ್ಲದ ಬ್ರಹ್ಮವೇ ಜೀವರೂಪವಾಗಿರುತ್ತದೆ. ಆ ಜೀವರು ನಿಜವಾಗಿ ಬ್ರಹ್ಮಸ್ವರೂಪರೇ ಆಗಿದ್ದಾರೆ- ಎಂದೂ ಹೇಳುತ್ತದೆ. ಆದ್ದರಿಂದ ಚೇತನಾಚೇತನರೂಪವಾದ ಜಗತ್ತು ನಿಜವಾಗಿ ಹುಟ್ಟುವದೆಂಬ ವಿಷಯದಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲವೆಂದೇ ಆಯಿತು.

(೧) ಯತ್ರ ಯಸ್ಮಿನ್ ಅವಿದ್ಯಾಕಲ್ಪಿತೇ ಕಾರ್ಯಕಾರಣಸಙ್ಘಾತೋಪಾಧಿಜನಿತೇ ವಿಶೇಷಾತ್ಮನಿ ಖಿಲ್ಯಭಾವೇ ಹಿ ಯಸ್ಮಾತ್ ದ್ವೈತಮಿವ ಪರಮಾರ್ಥತಃ ಅದ್ವೈತೇ ಬ್ರಹ್ಮಣಿ ದ್ವೈತಮಿವ ಭಿನ್ನಮಿವ ವಸ್ತ್ವನ್ತರಮ್ ಆತ್ಮನಃ ಉಪಲಕ್ಷ್ಯತೇ।......ತತ್ ತತ್ರ ಯಸ್ಮಾತ್ ದ್ವೈತಮಿವ ತಸ್ಮಾದೇವ ಇತರೋಽಸೌ ಪರಮಾತ್ಮನಃ ಖಿಲ್ಯಭೂತಃ ಆತ್ಮಾ ಅಪರಮಾರ್ಥಃ ಚನ್ದ್ರಾದೇರಿವ ಉದಕಚನ್ದ್ರಾದಿಪ್ರತಿಬಿಮ್ಬಃ, ಇತರಃ ಘ್ರಾತಾ ಇತರೇಣ ಘ್ರಾಣೇನ ಇತರಂ ಘ್ರಾತವ್ಯಂ ಜಿಘ್ರತಿ।......ಇಯಮ್ ಅವಿದ್ಯಾವದವಸ್ಥಾ॥ -ಬೃ. ಭಾ. ೨-೪-೧೪-೩೭೬.

(೨) ಯತ್ರ ತು ಬ್ರಹ್ಮವಿದ್ಯಯಾ ಅವಿದ್ಯಾ ನಾಶಮುಪಗಮಿತಾ ತತ್ರ ಆತ್ಮವ್ಯತಿರೇಕೇಣ ಅನ್ಯಸ್ಯ ಅಭಾವಃ। ಯತ್ರ ವಾ ಅಸ್ಯ ಬ್ರಹ್ಮವಿದಃ ಸರ್ವಂ ನಾಮರೂಪಾದಿ ಆತ್ಮನ್ಯೇವ ಪ್ರವಿಲಾಪಿತಮ್ ಆತ್ಮೈವ ಸಂವೃತ್ತಮ್। ಯತ್ರ ಏವಮ್ ಆತ್ಮೈವ ಅಭೂತ್ ತತ್ ತತ್ರ ಕೇನ ಕರಣೇನ ಕಂ ಘ್ರಾತವ್ಯಂ ಕೋ ಜಿಘ್ರೇತ್ ? ತಥಾ ಪಶ್ಯೇತ್, ವಿಜಾನೀಯಾತ್॥

-ಬೃ. ಭಾ. ೨-೪-೧೪-೩೭೭.

(೩) ಏವಂ ಪ್ರಾಪ್ತೇ ಬ್ರೂಮಃ। ನಾತ್ಮಾ ಜೀವಃ ಉತ್ಪದ್ಯತೇ ಇತಿ। ಕಸ್ಮಾತ್? ಅಶ್ರುತೇಃ। ನ ಹಿ ಅಸ್ಯ ಉತ್ಪತ್ತಿಪ್ರಕರಣೇ ಶ್ರವಣಮಸ್ತಿ ಭೂಯಃಸು ಪ್ರದೇಶೇಷು। ನನು ಕ್ವಚಿತ್ ಅಶ್ರವಣಮ್ ಅನ್ಯತ್ರ ಶ್ರುತಂ ನ ವಾರಯತಿ ಇತ್ಯುಕ್ತಮ್। ಸತ್ಯಮುಕ್ತಮ್। ಉತ್ಪತ್ತಿರೇವ ತು ಅಸ್ಯ ನ ಸಂಭವತಿ ಇತಿ ವದಾಮಃ। ಕಸ್ಮಾತ್? ನಿತ್ಯತ್ವಾಚ್ಚ ತಾಭ್ಯಃ। ಚಶಬ್ದಾದಜತ್ವಾದಿಭ್ಯಶ್ಚ। ನಿತ್ಯತ್ವಂ ಹಿ ಅಸ್ಯ ಶ್ರುತಿಭ್ಯೋಽವಗಮ್ಯತೇ, ತಥಾ ಅಜತ್ವಮ್, ಅವಿಕಾರಿತ್ವಮ್, ಅವಿಕೃತಸ್ಯೈವ ಬ್ರಹ್ಮಣಃ ಜೀವಾತ್ಮನಾ ಅವಸ್ಥಾನಮ್, ಬ್ರಹ್ಮಾತ್ಮನಾ ಚ ಇತಿ। ನ ಚೈವಂರೂಪಸ್ಯ ಉತ್ಪತ್ತಿಃ ಉಪಪದ್ಯತೇ। ತಾಃ ಕಾಃ ಶ್ರುತಯಃ? ''ನ ಜೀವೋ ಮ್ರಿಯತೇ'' (ಛಾಂ. ೬-೧೧-೩), ''ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ'' (ಬೃ. ೪-೪-೨೫), ''ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್'' (ಕ. ೧-೨-೧೮), ''ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ'' (ಕ.೧-೨-೧೮), ''ತತ್ಸೃಷ್ಟ್ವಾ । ತದೇವಾನುಪ್ರಾವಿಶತ್'' (ತೈ. ೨-೬), ''ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'' (ಛಾಂ. ೬-೩-೨), ''ಸ ಏಷ ಇಹ ಪ್ರವಿಷ್ಟ ಆ ನಖಾಗ್ರೇಭ್ಯಃ'' (ಬೃ.೧-೪-೭), ''ತತ್ತ್ವಮಸಿ'' (ಛಾಂ. ೬-೮-೭), ''ಅಹಂ ಬ್ರಹ್ಮಾಸ್ಮಿ'' (ಬೃ. ೧-೪-೧), ''ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ'' (ಬೃ. ೨-೫-೧೯)-ಇತ್ಯೇವಮಾದ್ಯಾ ನಿತ್ಯತ್ವವಾದಿನ್ಯಃ, ಸತ್ಯಃ, ಜೀವಸ್ಯೋತ್ಪತ್ತಿಂ ಪ್ರತಿಬಧ್ನನ್ತಿ॥

-ಸೂ. ಭಾ. ೨-೩-೧೭-೧೨೧.

೧೧೯. ದ್ವೈತವು ಅಸತ್ಯವೆಂದೇ ಆಗಲಿ, ಜೀವರು ಹುಟ್ಟುವ ಸಂಭವವಿಲ್ಲ ವೆಂದೂ ಆಗಲಿ; ಇದೆಲ್ಲ ಶ್ರುತಿಪ್ರಮಾಣದಿಂದ ಸಿದ್ಧವಾಗುವಂತೆ ಆಕಾಶಾದಿ ಪ್ರಪಂಚವೂ ಜೀವರೂ ಹುಟ್ಟುತ್ತಾರೆಂಬುದೂ ಶ್ರುತಿಸಿದ್ಧವಾಗಿರುವದಲ್ಲ! ಆ ಶ್ರುತಿ ಗಳಿಗೆ ಏನು ಗತಿ?-ಎಂದು ಯಾರಾದರೂ ಕೇಳಬಹುದು. ಶ್ರುತಿಯು ಸೃಷ್ಟಿಯನ್ನು ಹೇಳಿರುವದು ಸೃಷ್ಟಿಗೋಸ್ಕರವಲ್ಲ. ಕಾರ್ಯವು ಕಾರಣಕ್ಕಿಂತ ಅನನ್ಯವೆಂಬ ನ್ಯಾಯ ವನ್ನು ಉಪಯೋಗಿಸಿಕೊಂಡು ಆತ್ಮೈಕ್ಯವನ್ನು ತಿಳಿಸುವದಕ್ಕೇ ಮಣ್ಣು, ಕಬ್ಬಿಣ, ಕಿಡಿ-

ಮುಂತಾದ ದೃಷ್ಟಾಂತಗಳಿಂದ ಶ್ರುತಿಯು ಸೃಷ್ಟಿಯನ್ನು ತಿಳಿಸುತ್ತದೆ. ಆಕಾಶವು ವಾಯು, ಅಗ್ನಿ, ಅಪ್ಪು, ಪೃಥ್ವಿ-ಮುಂತಾದ ಕ್ರಮದಿಂದ ಘಟಾದಿಗಳ ರೂಪಗಳನ್ನು ತಳೆದಿರುವಂತೆಯೇ ಆತ್ಮನು ಶರೀರೇಂದ್ರಿಯಾದಿಗಳ ರೂಪದ ಕಾರ್ಯಕರಣಸಂಘಾತವಾಗಿ ತೋರಿಕೊಳ್ಳುತ್ತಾನೆ; ಆಕಾಶವು ಘಟಾದಿಗಳ ಸಂಬಂಧದಿಂದ ಘಟಾದ್ಯಾಕಾಶಗಳಾಗಿ ಕಾಣಿಸುವಂತೆಯೇ ಜೀವರುಗಳಾಗಿಯೂ ಕಾಣಿಸುತ್ತಿದಾನೆ- ಎಂಬುದು ಉತ್ಪತ್ತಿವಾಕ್ಯಗಳಿಗೆ ಅಭಿಪ್ರಾಯವು. ಪರಮಾರ್ಥದೃಷ್ಟಿಯಿಂದ ಘಟಾದಿಗಳಾಗಲಿ ಘಟಾಕಾಶಾದಿಗಳಾಗಲಿ ಆಕಾಶಕ್ಕಿಂತ ಬೇರೆಯಲ್ಲವೆಂದು ನಿರ್ಣಯವಾಗುವಂತೆಯೇ ಆಕಾಶಾದಿ ಜಗತ್ತಾಗಲಿ ಜೀವರುಗಳಾಗಲಿ ಆತ್ಮನಿಗಿಂತ ಬೇರೆಯಿಲ್ಲ- ಎಂಬುದರಲ್ಲಿಯೇ ಈ ಶ್ರುತಿಗಳಿಗೆ ಪರಮತಾತ್ಪರ್ಯ.

(೧) ಮೃಲ್ಲೋಹವಿಸ್ಫುಲಿಙ್ಗಾದ್ಯೈಃ ಸೃಷ್ಟಿರ್ಯಾ ಚೋದಿತಾನ್ಯಥಾ।
ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಂಚನ॥ -ಮಾಂ.ಕಾ. ೩-೧೫.

ನನು ಯದ್ಯುತ್ಪತ್ತೇಃ ಪ್ರಾಕ್ ಅಜಂ ಸರ್ವಮ್ ಏಕಮೇವಾದ್ವಿತೀಯಮ್, ತಥಾಪಿ ಉತ್ಪತ್ತೇರೂರ್ಧ್ವಂ ಜಾತಮಿದಂ ಸರ್ವಂ ಜೀವಾಶ್ಚ ಭಿನ್ನಾಃ ಇತಿ। ಮೈವಮ್। ಅನ್ಯಾರ್ಥತ್ವಾತ್ ಉತ್ಪತ್ತಿಶ್ರುತೀನಾಮ್।...ಮೃಲ್ಲೋಹವಿಸ್ಫುಲಿಙ್ಗಾದಿದೃಷ್ಟಾನ್ತೋಪನ್ಯಾಸೈಃ ಸೃಷ್ಟಿಃ ಯಾ ಚ ಉದಿತಾ ಪ್ರಕಾಶಿತಾ ಕಲ್ಪಿತಾ, ಅನ್ಯಥಾನ್ಯಥಾ ಚ। ಸ ಸರ್ವಃ ಸೃಷ್ಟಿಪ್ರಕಾರಃ ಜೀವಪರಮಾತ್ಮೈಕತ್ವಬುದ್ಧ್ಯವತಾರಾಯ ಉಪಾಯಃ ಅಸ್ಮಾಕಮ್॥ -ಮಾಂ.ಕಾ. ಭಾ. ೩-೧೫-೧೫೫.

(೨) ಆತ್ಮಾ ಹ್ಯಾಕಾಶವಜ್ಜೀವೈರ್ಘಟಾಕಾಶೈರಿವೋದಿತಃ।
ಘಟಾದಿವಚ್ಚ ಸಙ್ಘಾತೈರ್ಜಾತಾವೇತನ್ನಿದರ್ಶನಮ್॥ -ಮಾಂ.ಕಾ.೩-೩

ಜೀವಾತ್ಮನಾಂ ಪರಸ್ಮಾತ್ ಆತ್ಮನಃ ಉತ್ಪತ್ತಿರ್ಯಾ ಶ್ರೂಯತೇ ವೇದಾನ್ತೇಷು ಸಾ ಮಹಾಕಾಶಾತ್ ಘಟಾಕಾಶೋತ್ಪತ್ತಿಸಮಾ ನ ಪರಮಾರ್ಥತಃ ಇತ್ಯಭಿಪ್ರಾಯಃ। ತಸ್ಮಾದೇವ ಆಕಾಶಾತ್ ಘಟಾದಯಃ ಸಙ್ಘಾತಾಃ ಯಥಾ ಉತ್ಪದ್ಯನ್ತೇ ಏವಮ್ ಆಕಾಶಸ್ಥಾನೀಯಾತ್ ಪರಮಾತ್ಮನಃ ಪೃಥಿವ್ಯಾದಿಭೂತಸಙ್ಘಾತಾಃ ಆಧ್ಯಾತ್ಮಿಕಾಶ್ಚ ಕಾರ್ಯಕರಣಲಕ್ಷಣಾಃ ರಜ್ಜುಸರ್ಪವತ್ ವಿಕಲ್ಪಿತಾಃ ಜಾಯನ್ತೇ। ಅತಃ ಉಚ್ಯತೇ ಘಟಾದಿವಚ್ಚ ಸಙ್ಘಾತೈಃ ಉದಿತಃ ಇತಿ। ಯದಾ ಮನ್ದಬುದ್ಧಿಪ್ರತಿಪಿಪಾದಯಿಷಯಾ ಶ್ರುತ್ಯಾ ಆತ್ಮನಃ ಜಾತಿರುಚ್ಯತೇ ಜೀವಾದೀನಾಂ ತದಾ ಜಾತೌ ಉಪಗಮ್ಯಮಾನಾಯಾಮ್ ಏತನ್ನಿದರ್ಶನಂ ದೃಷ್ಟಾನ್ತಃ ಯಥೋದಿತಾಕಾಶವತ್ ಇತ್ಯಾದಿಃ।
-ಮಾಂ. ಕಾ. ಭಾ. ೩-೩-೧೩೨.

೧೨೦. ಆಕಾಶಾದಿಗಳೂ ಜೀವರೂ ಮಾಯೆಯಿಂದ ಹುಟ್ಟಿದರು ಎಂದು ಎಲ್ಲಾ ಸೃಷ್ಟಿವಾಕ್ಯಗಳಲ್ಲಿಯೂ ಇರುವದಿಲ್ಲ. ಮುಖ್ಯಾರ್ಥವನ್ನು ಬಿಟ್ಟು ಮಾಯೆಯಿಂದ ಸೃಷ್ಟಿಯಾಯಿತೆಂಬ ಗೌಣಾರ್ಥವನ್ನು ತೆಗೆದುಕೊಳ್ಳುವದಕ್ಕೆ ಆಧಾರವೇನು? -ಎಂದು ಯಾರಾದರೂ ಕೇಳಬಹುದು.

ಆದರೆ ಸೃಷ್ಟಿಯು ಪರಮಾರ್ಥವೆಂದೂ ಶ್ರುತಿಯಲ್ಲಿ ಹೇಳಿಲ್ಲ. ಆದ್ದರಿಂದ ಸೃಷ್ಟಿ ವಾಕ್ಯವು ಪರಮಾರ್ಥಸೃಷ್ಟಿಗೂ ಮಾಯಿಕಸೃಷ್ಟಿಗೂ ಸಮಾನವಾಗಿರುತ್ತದೆ. ಮಾಯಿಕಸೃಷ್ಟಿಯು ಗೌಣವೆನ್ನುವದು ಸರಿಯಲ್ಲ ಏಕೆಂದರೆ ಬೇರೆಯ ರೀತಿಯಲ್ಲಿ ಸೃಷ್ಟಿಯಾಗುವದೇ ಇಲ್ಲವೆಂದು ನಾವು (೧೩ನೆಯ ಪಾಠದಲ್ಲಿ) ತೋರಿಸಿ ಕೊಟ್ಟಿರುತ್ತೇವೆ. ಆದ್ದರಿಂದ ಮುಖ್ಯಸೃಷ್ಟಿ, ಗೌಣಸೃಷ್ಟಿ, ಎಲ್ಲವೂ ಅವಿದ್ಯಕವೇ. ಸೃಷ್ಟಿಯನ್ನು ತಿಳಿದುಕೊಂಡರೆ ಯಾವ ಪ್ರಯೋಜನವೂ ಆಗುವಂತಿಲ್ಲ. ಶ್ರುತಿಯಲ್ಲಿರುವ ಪ್ರಾಣಗಳ ಸಂವಾದವು ಹೇಗೆ ಪ್ರಾಣವೈಶಿಷ್ಟ್ಯವನ್ನು ಮಾತ್ರ ತಿಳಿಸುವದೋ ಸಂವಾದವೂ ನಿಜವಾಗಿ ಆಯಿತೆಂದು ಶ್ರುತಿ ತಿಳಿಸುವದೆಂದು ಬಗೆಯವದಕ್ಕೆ ಹೇಗೆ ಕಾರಣವಿಲ್ಲವೋ ಹಾಗೆಯೇ ಸೃಷ್ಟಿಶ್ರುತಿಯೂ ಆತ್ಮೈಕತ್ವವನ್ನು ತಿಳಿಸುವದಕ್ಕೇ ಬಂದಿರುತ್ತದೆ; ಶ್ರುತಿಗೆ ಸೃಷ್ಟಿಯು ನಿಜವೆಂದು ತಿಳಿಸುವದರಲ್ಲಿಯೂ ಅದಕ್ಕೆ ತಾತ್ಪರ್ಯವಿಲ್ಲ- ಎಂದು ತಿಳಿಯಬೇಕು. ಪ್ರಾಣಸಂವಾದರೂಪವಾದ ಕಲಹವನ್ನು ಧ್ಯಾನಮಾಡುವದು ಹೇಗೆ ಸರಿಯಲ್ಲವೋ ಹಾಗೆ ಸೃಷ್ಟಿಯನ್ನು ಧ್ಯಾನ ಮಾಡುವದೂ ಸರಿಯಲ್ಲ; ಏಕೆಂದರೆ ಅದರಿಂದ ಅನಿಷ್ಟಫಲವೇ ಆದೀತು. ಆದ್ದರಿಂದ ಸೃಷ್ಟಿಯನ್ನು ಧ್ಯಾನಕ್ಕಾಗಿ ಹೇಳಿರುವದಿಲ್ಲ. ಆದ್ದರಿಂದ ಸೃಷ್ಟಿಯು ಗೌಣವೇ, ಮಾಯಿಕವೇ- ಎಂದು ಹೇಳಿದ್ದು ಸಾಧಕವೇ ಆಗಿರುತ್ತದೆ.

(೧) ಭೂತತಃ ಪರಮಾರ್ಥತಃ ಸೃಜ್ಯಮಾನೇ ವಸ್ತುನಿ, ಅಭೂತತೋ ಮಾಯಯಾ ವಾ ಮಾಯಾವಿನಾ ಇವ ಸೃಜ್ಯಮಾನೇ ವಸ್ತುನಿ ಸಮಾ ತುಲ್ಯಾ ಸೃಷ್ಟಿಶ್ರುತಿಃ। ನನು ಗೌಣಮುಖ್ಯಯೋಃ ಮುಖ್ಯೇ ಶಬ್ದಾರ್ಥಪ್ರತಿಪತ್ತಿರ್ಯುಕ್ತಾ। ನ। ಅನ್ಯಥಾ ಸೃಷ್ಟೇರಪ್ರಸಿದ್ಧತ್ವಾತ್, ನಿಷ್ಪ್ರಯೋಜನತ್ವಾಚ್ಚ ಇತ್ಯವೋಚಾಮ। ಅವಿದ್ಯಾಸೃಷ್ಟಿವಿಷಯೈವ ಸರ್ವಾ ಗೌಣೀ ಮುಖ್ಯಾ ಚ ಸೃಷ್ಟಿಃ ನ ಪರಮಾರ್ಥತಃ। "ಸ ಬಾಹ್ಯಾಭ್ಯನ್ತರೋ ಹ್ಯಜಃ" ಇತಿ ಶ್ರುತೇಃ। ತಸ್ಮಾತ್ ಶ್ರುತ್ಯಾ ನಿಶ್ಚಿತಂ ಯತ್ ಏಕಮೇವ ಅದ್ವಿತೀಯಮಜಮಮೃತಮ್ ಇತಿ ಯುಕ್ತಿಯುಕ್ತಂ ಚ- ಯುಕ್ತ್ಯಾ ಚ ಸಂಪನ್ನಂ ತದೇವ ಇತ್ಯವೋಚಾಮ ಪೂರ್ವೈರ್ಗ್ರನ್ಥೈಃ- ತದೇವ ಶ್ರುತ್ಯರ್ಥೋ ಭವತಿ, ನೇತರತ್ ಕದಾಚಿದಪಿ॥

-ಮಾಂ.ಕಾ.ಭಾ. ೩-೨೩-೧೭೦.

(೨) ಸರ್ವಃ ಸೃಷ್ಟಿಪ್ರಕಾರಃ ಜೀವಪರಮಾತ್ಮೈಕತ್ವಬುದ್ಧ್ಯವತಾರಾಯ ಉಪಾಯಃ ಅಸ್ಮಾಕಮ್। ಯಥಾ ಪ್ರಾಣಸಂವಾದಃ ವಾಗಾದ್ಯಾಸುರಪಾಪ್ಮವೇಧಾದ್ಯಾಖ್ಯಾಯಿಕಾ ಕಲ್ಪಿತಾ ಪ್ರಾಣವೈಶಿಷ್ಟ್ಯ ಬೋಧಾವತಾರಾಯ।....ನ ಹಿ ಅನ್ಯಪ್ರಯೋಜನವತ್ತ್ವಂ ಸಂವಾದೋತ್ಪತ್ತಿ-ಶ್ರುತೀನಾಂ ಶಕ್ಯಂ ಕಲ್ಪಯಿತುಮ್। ತಥಾತ್ವಪ್ರತಿಪತ್ತಯೇ ಧ್ಯಾನಾರ್ಥಮ್ ಇತಿ ಚೇತ್। ನ। ಕಲಹೋತ್ಪತ್ತಿಪ್ರಲಯಾನಾಂ ಪ್ರತಿಪತ್ತೇರನಿಷ್ಟತ್ವಾತ್। ತಸ್ಮಾತ್ ಉತ್ಪತ್ತ್ಯಾದಿಶ್ರುತಯಃ ಆತ್ಮೈಕತ್ವಬುದ್ಧ್ಯವತಾರಾಯೈವ ನಾನ್ಯಾರ್ಥಾಃ ಕಲ್ಪಯಿತುಂ ಶಕ್ಯಾಃ ॥

-ಮಾಂ.ಕಾ.ಭಾ. ೩-೧೫-೧೫೬/೧೫೭.

೧೨೧. ಸೃಷ್ಟಿವಾಕ್ಯವೂ ಬ್ರಹ್ಮಸ್ವರೂಪಪ್ರತಿಪಾದಕವಾಕ್ಯಗಳಂತೆ ಶ್ರುತಿವಾಕ್ಯವೇ ಆಗಿರುತ್ತದೆ. ಹೀಗಿರುವಲ್ಲಿ ಅದನ್ನು ಯುಕ್ತಿಯಿಂದ ತಳ್ಳಿಹಾಕುವದಕ್ಕೇನು ಕಾರಣ? ಎಂದು ಯಾರಾದರೂ ಶಂಕಿಸಬಹುದು. ಆದರೆ ಈ ಶಂಕೆ ಸರಿಯಲ್ಲ. ಏಕೆಂದರೆ, ಬ್ರಹ್ಮ ಪ್ರಕರಣದಲ್ಲಿಯೇ ಸೃಷ್ಟಿವಾಕ್ಯಗಳು ಬಂದಿರುತ್ತವೆ. ಅವುಗಳಿಗೆ ಯಾವ ವಿಶೇಷ ಫಲವನ್ನೂ ಶ್ರುತಿಯಲ್ಲಿ ಹೇಳಿಲ್ಲ. ಸೃಷ್ಟಿವಾಕ್ಯಗಳಿಗೂ ಬ್ರಹ್ಮವಾಕ್ಯಗಳೊಡನೆ ಒಟ್ಟು ಸೇರಿಕೊಂಡೇ ಏಕವಾಕ್ಯತೆಯಾಗುವದು ಕಂಡುಬರುತ್ತದೆ, ಬ್ರಹ್ಮಜ್ಞಾನಕ್ಕೆ ಪರಮ ಪುರಷಾರ್ಥವೆಂಬ ಫಲವನ್ನು ಶ್ರುತಿಯಲ್ಲಿ ಹೇಳಿರುತ್ತದೆ; ಆದ್ದರಿಂದ ಫಲವತ್ತಾದ್ದರ ಸನ್ನಿಧಿಯಲ್ಲಿ ಅಫಲವಾದದ್ದನ್ನು ಹೇಳಿದ್ದರೆ ಅದು ಅದರ ಅಂಗವೆಂದು ಭಾವಿಸಬೇಕು- ಎಂಬ ನ್ಯಾಯವನ್ನನುಸರಿಸಿ ಸೃಷ್ಟಿವಾಕ್ಯಗಳು ಬ್ರಹ್ಮವಾಕ್ಯಗಳಿಗೆ ಅಂಗವೆಂದು ಒಪ್ಪ ಬೇಕಾಗುತ್ತದೆ. ಇಷ್ಟೇ ಅಲ್ಲ. ಶ್ರುತಿಯಲ್ಲಿ ಸೃಷ್ಟ್ಯಾದಿನಿರ್ದೇಶವು ಬ್ರಹ್ಮಜ್ಞಾನಕ್ಕಾಗಿ ಎಂದು ಸ್ಪಷ್ಟೋಕ್ತಿಯಿಂದ ಹೇಳಿಯೂ ಇದೆ. ಈ ಎಲ್ಲಾ ಕಾರಣದಿಂದ ಸೃಷ್ಟಿವಾಕ್ಯವು ಸೃಷ್ಟಿಪರವಲ್ಲವೆಂದು ನಿರ್ಣಯವಾಗುತ್ತದೆ.

(೧) ನ ಹ್ಯಯಂ ಸೃಷ್ಟ್ಯಾದಿಪ್ರಪಞ್ಚಃ ಪ್ರತಿಪಿಪಾದಯಿಷಿತಃ। ನ ಹಿ ತತ್ಪ್ರತಿಬದ್ಧಃ ಕಶ್ಚಿತ್ ಪುರುಷಾರ್ಥೋ ದೃಶ್ಯತೇ ಶ್ರೂಯತೇ ವಾ। ನ ಚ ಕಲ್ಪಯಿತುಂ ಶಕ್ಯತೇ। ಉಪಕ್ರಮೋಪಸಂಹಾರಾಭ್ಯಾಂ ತತ್ರ ತತ್ರ ಬ್ರಹ್ಮವಿಷಯೈರ್ವಾಕ್ಯೈಃ ಸಾಕಮ್ ಏಕವಾಕ್ಯತಾಯಾ ಗಮ್ಯಮಾನತ್ವಾತ್॥ -ಸೂ. ಭಾ. ೧-೪-೧೪-೩೬೭.

(೨) ನ ಚ ಯಥಾ ಬ್ರಹ್ಮಣಃ ಆತ್ಮೈಕತ್ವದರ್ಶನಂ ಮೋಕ್ಷಸಾಧನಮ್ ಏವಂ ಜಗದಾಕಾರಪರಿಣಾಮಿತ್ವದರ್ಶನಮಪಿ ಸ್ವತನ್ತ್ರಮೇವ ಕಸ್ಮೈಚಿದ್ ಫಲಾಯ ಅಭಿಪ್ರೇಯತೇ। ಪ್ರಮಾಣಾಭಾವಾತ್ । ಕೂಟಸ್ಥಬ್ರಹ್ಮಾತ್ಮತ್ವವಿಜ್ಞಾನಾದೇವ ಹಿ ಫಲಂ ದರ್ಶಯತಿ ಶಾಸ್ತ್ರಮ್ ''ಸ ಏಷ ನೇತಿನೇತ್ಯಾತ್ಮಾ'' ಇತ್ಯುಪಕ್ರಮ್ಯ ''ಅಭಯಂ ವೈ ಜನಕ ಪ್ರಾಪ್ತೋಽಸಿ'' (ಬೃ. ೪-೨-೪) ಇತ್ಯೇವಂಜಾತೀಯಕಮ್। ತತ್ರ ಏತತ್ ಸಿದ್ಧಂ ಭವತಿ- ಬ್ರಹ್ಮಪ್ರಕರಣೇ ಸರ್ವಧರ್ಮವಿಶೇಷ ರಹಿತಬ್ರಹ್ಮದರ್ಶನಾದೇವ ಫಲಸಿದ್ಧೌ ಸತ್ಯಾಂ ಯತ್ ತತ್ರ ಅಫಲಂ ಶ್ರೂಯತೇ ಬ್ರಹ್ಮಣಃ ಜಗದಾಕಾರಪರಿಣಾಮಿತ್ವಾದಿ ತತ್ ಬ್ರಹ್ಮದರ್ಶನೋಪಾಯತ್ವೇನೈವ ವಿನಿಯುಜ್ಯತೇ, ಫಲವತ್ಸಂನಿಧೌ ಅಫಲಂ ತದಙ್ಗಮ್ ಇತಿವತ್। ನ ತು ಸ್ವತನ್ತ್ರಂ ಫಲಾಯ ಕಲ್ಪತೇ ಇತಿ॥

-ಸೂ. ಭಾ. ೨-೧-೧೪-೪೫೯

(೩) ದರ್ಶಯತಿ ಚ ಸೃಷ್ಟ್ಯಾದಿಪ್ರಪಞ್ಚಸ್ಯ ಬ್ರಹ್ಮಪ್ರತಿಪತ್ತ್ಯರ್ಥತಾಮ್ ''ಅನ್ನೇನ ಸೋಮ್ಯ ಶುಙ್ಗೇನಾಪೋ ಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಙ್ಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಙ್ಗೇನ ಸನ್ಮೂಲಮನ್ವಿಚ್ಛ'' (ಛಾಂ. ೬-೮-೪) ಇತಿ ॥

- ಸೂ. ಭಾ. ೧-೪-೧೪-೩೬೭.

೧೨೨. ಜಗದ್ರೂಪವಾಗಿ ಆತ್ಮನು ಉತ್ಪತ್ತಿಯಾಗುವನೆಂದೂ ಶ್ರುತಿಯಲ್ಲಿ ಹೇಳಿದೆ; ಅವನಲ್ಲಿ ಯಾವ ವಿಶೇಷಗಳೂ ಇಲ್ಲವೆಂದೂ ಅವನು ಅದ್ವಿತೀಯನಾದ

ಏಕನೇ ಎಂದೂ ಶ್ರುತಿಯಲ್ಲಿ ಹೇಳಿದೆ. ಹೀಗಿರುವಲ್ಲಿ ಉತ್ಪತ್ತ್ಯಾದಿಶ್ರುತಿಗಳನ್ನೇ ಏತಕ್ಕೆ ಬ್ರಹ್ಮವನ್ನು ಹೇಳುವ ವಾಕ್ಯಗಳಿಗೆ ಅಂಗವೆಂದು ತಿಳಿಯಬೇಕು? ಇದಕ್ಕೆ ವಿರುದ್ಧವಾಗಿ ಬ್ರಹ್ಮವಾಕ್ಯಗಳೇ ಉತ್ಪತ್ತ್ಯಾದಿವಾಕ್ಯಗಳಿಗೆ ಅಂಗವೆಂದು ಏತಕ್ಕೆ ತಿಳಿಯಬಾರದು? ಅಥವಾ ಎರಡು ಬಗೆಯ ವಾಕ್ಯಗಳೂ ಸ್ವತಂತ್ರವಾಗಿಯೇ ಪ್ರಮಾಣವೆಂದೂ ಬ್ರಹ್ಮವು- ಮರವು ತನ್ನ ಒಟ್ಟುರೂಪದಿಂದ ಒಂದಾಗಿದ್ದು ಕೊಂಬೆರೆಂಬೆಗಳ ರೂಪದಲ್ಲಿ ಅನೇಕವೂ ಆಗಿರುವಂತೆ, ಅಥವಾ ಸಮುದ್ರವು ತನ್ನ ರೂಪದಲ್ಲಿ ಒಂದಾಗಿದ್ದು ಅಲೆ, ಗುಳ್ಳೆ-ಮುಂತಾದವುಗಳ ರೂಪದಿಂದ ಅನೇಕವೂ ಆಗಿರುವಂತೆ- ಏಕವೂ ಅನೇಕವೂ ಆಗಿರಬಲ್ಲ ಶಕ್ತಿಯುಳ್ಳದ್ದೆಂದೇ ಏಕೆ ಭಾವಿಸಬಾರದು? ಆಗ ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಸಮವಾಗಿಯೇ ಪ್ರಾಮಾಣ್ಯವು ಬರುವದಲ್ಲವೆ?- ಎಂಬುದು **ಬ್ರಹ್ಮಪರಿಣಾಮವಾದಿಗಳ ಶಂಕೆ.**

ಇದು ನಿರ್ಯುಕ್ತಿಕವೆಂದೂ ಶ್ರುತಿವಿರುದ್ಧವೆಂದೂ ಹೇಳಬೇಕಾದದ್ದೇ ಇಲ್ಲ. ಏಕೆಂದರೆ ನಿರ್ವಿಶೇಷಶ್ರುತಿಗಳು ಪ್ರಮಾಣವೆಂದು ಹಿಡಿದರೆ ಪುರುಷಾರ್ಥವು ಇಲ್ಲಿಗೆ ಮುಗಿಯಿತು ಎಂಬ ಬುದ್ಧಿಯುಂಟಾಗುವದರಿಂದ ಮತ್ತೆ ಏತರ ಆಕಾಂಕ್ಷೆಯೂ ಉಂಟಾಗುವದಿಲ್ಲ. ಅದನ್ನರಿತ ಜ್ಞಾನಿಗಳು ಮತ್ತೇನನ್ನೂ ಬಯಸದೆ ತುಷ್ಟರಾಗಿ ರುವದೂ ಕಂಡುಬರುತ್ತಿದೆ. ಕಾರ್ಯವು ಅನೃತವಾದ್ದರಿಂದ ಅದನ್ನು ಬಯಸಬಾರ ದೆಂದು ಶ್ರುತಿಯಲ್ಲಿ ಹೇಳಿರುತ್ತದೆ. ಜಗದುತ್ಪತ್ತ್ಯಾದಿಶ್ರುತಿಗಳ ಅರ್ಥವನ್ನು ತಿಳಿದರೆ ಹೀಗೆ ಅನಾಕಾಂಕ್ಷೆಯಾಗುವದೂ ಇಲ್ಲ; ಮೇಲೆ ಹೇಳಿರುವಂತೆ ಅವು ಬ್ರಹ್ಮಜ್ಞಾನಕ್ಕೇ ಸಾಧನವೆಂದು ಪ್ರತ್ಯಕ್ಷವಾಗಿ ಶ್ರುತಿಯು ಹೇಳಿಯೂ ಇರುತ್ತದೆ. ಏಕತ್ವವೂ ನಾನಾತ್ವವೂ ಎರಡೂ ಪರಮಾರ್ಥವಾಗಿರಲಿ-ಎಂಬ ಮತಕ್ಕೆ ಇದರಿಂದಲೇ ದೂಷಣೆಯನ್ನು ಹೇಳಿದಂತೆ ಆಯಿತು. ಏಕೆಂದರೆ ಶ್ರುತಿಯಲ್ಲಿ ಕಾರಣವೇ ಸತ್ಯವೆಂದೂ ಕಾರ್ಯವು ಅಸತ್ಯವೆಂದೂ ಮೃದಾದಿದೃಷ್ಟಾಂತದಿಂದ ತಿಳಿಸಿ ಅದು ಸದ್ರೂಪವಾದ ಬ್ರಹ್ಮವೆಂದೇ ತಿಳಿಸಿ ಅದೇ ನೀನು ಎಂದು ಹೇಳಿರುತ್ತದೆ; ಕಳ್ಳನ ದೃಷ್ಟಾಂತದಿಂದ ಅನೃತಾಭಿಸಂಧಿ ಯುಳ್ಳವನಿಗೆ ಬಂಧ, ಸತ್ಯಾಭಿಸಂಧನಿಗೆ ಮೋಕ್ಷ - ಎಂದು ವಿಂಗಡವನ್ನೂ ಹೇಳಿರುತ್ತದೆ. ಏಕತ್ವಜ್ಞಾನದಿಂದ ಮೋಕ್ಷವೆಂದು ಹೇಳಿರುತ್ತದೆ. ಏಕತ್ವವೂ ನಾನಾತ್ವವೂ ಎರಡೂ ಸತ್ಯವಾಗಿದ್ದರೆ ಇದು ಯಾವದೂ ಹೊಂದುವದೇ ಇಲ್ಲ. ಆದ್ದರಿಂದ ಬ್ರಹ್ಮವು ಏಕಾನೇಕಾತ್ಮಕವಾಗಿರುವದೆಂಬ ಭೇದಾಭೇದವಾದವು ಶ್ರುತಿಗೆ ಸರ್ವಥಾ ವಿರುದ್ಧ ವಾಗಿರುತ್ತದೆ.

(೧) ಕಸ್ಮಾತ್ ಪುನರುತ್ಪತ್ತ್ಯಾದಿಶ್ರುತೀನಾಂ ವಿಶೇಷನಿರಾಕರಣಶ್ರುತಿಶೇಷತ್ವಮ್, ನ ಪುನರಿತರಶೇಷತ್ವಮ್ ಇತರಾಸಾಮ್ ಇತಿ? ಉಚ್ಯತೇ। ವಿಶೇಷನಿರಾಕರಣಶ್ರುತೀನಾಂ ನಿರಾಕಾಙ್ಕ್ಷಾರ್ಥತ್ವಾತ್। ನ ಹಿ ಆತ್ಮನಃ ಏಕತ್ವನಿತ್ಯತ್ವಶುದ್ಧತ್ವಾದ್ಯವಗತೌ ಸತ್ಯಾಂ ಭೂಯಃ ಕಾಚಿತ್

ಆಕಾಙ್ಕ್ಷಾ ಉಪಜಾಯತೇ। ಪುರುಷಾರ್ಥಸಮಾಪ್ತಿಬುದ್ಧ್ಯುಪಪತ್ತೇಃ। ತತ್ರ ''ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ'' (ಈ.೭), ''ಅಭಯಂ ವೈ ಜನಕ ಪ್ರಾಪ್ತೋಽಸಿ'' (ಬೃ. ೪-೨-೪), ''ವಿದ್ವಾನ್ ನ ಬಿಭೇತಿ ಕುತಶ್ಚನ'', ''ಏತಂ ಹ ವಾವ ನ ತಪತಿ । ಕಿಮಹಂ ಸಾಧು ನಾಕರವಂ ಕಿಮಹಂ ಪಾಪಮಕರವಮಿತಿ'' (ತೈ. ೨-೯) ಇತ್ಯಾದಿಶ್ರುತಿಭ್ಯಃ। ತಥೈವ ಚ ವಿದುಷಾಂ ತುಷ್ಟ್ಯನುಭವಾದಿದರ್ಶನಾತ್। ವಿಕಾರಾನೃತಾಭಿಸನ್ಧ್ಯಪವಾದಾಚ್ಚ ''ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'' (ಬೃ. ೪-೪-೧೯) ಇತಿ। ಅತಃ ನ ವಿಶೇಷನಿರಾಕರಣಶ್ರುತೀನಾಮ್ ಅನ್ಯಶೇಷತ್ವಮ್ ಅವಗನ್ತುಂ ಶಕ್ಯತೇ। ನೈವಮ್ ಉತ್ಪತ್ತ್ಯಾದಿಶ್ರುತೀನಾಂ ನಿರಾಕಾಙ್ಕ್ಷಾರ್ಥಪ್ರತಿಪಾದನಸಾಮರ್ಥ್ಯಮ್ ಅಸ್ತಿ। ಪ್ರತ್ಯಕ್ಷಂ ತು ತಾಸಾಮ್ ಅನ್ಯಾರ್ಥತ್ವಂ ಸಮನುಗಮ್ಯತೇ॥ -ಸೂ. ಭಾ. ೪-೩-೧೪-೫೮೩.

(೨) ನನ್ವನೇಕಾತ್ಮಕಂ ಬ್ರಹ್ಮ। ಯಥಾ ವೃಕ್ಷೋಽನೇಕಶಾಖಃ ಏವಮ್ ಅನೇಕಶಕ್ತಿಪ್ರವೃತ್ತಿಯುಕ್ತಂ ಬ್ರಹ್ಮ। ಅತಃ ಏಕತ್ವಂ ನಾನಾತ್ವಂ ಚ ಉಭಯಮಪಿ ಸತ್ಯಮೇವ।.....ನೈವಂ ಸ್ಯಾತ್। ''ಮೃತ್ತಿಕೇತ್ಯೇವ ಸತ್ಯಮ್''(ಛಾಂ. ೬-೧-೪) ಇತಿ ಪ್ರಕೃತಿಮಾತ್ರಸ್ಯ ದೃಷ್ಟಾನ್ತೇ ಸತ್ಯತ್ವಾವಧಾರಣಾತ್। ವಾಚಾರಮ್ಭಣಶಬ್ದೇನ ಚ ವಿಕಾರಜಾತಸ್ಯ ಅನೃತತ್ವಾಭಿಧಾನಾತ್। ದಾರ್ಷ್ಟಾನ್ತಿಕೇಽಪಿ ''ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಮ್'' ಇತಿ ಚ ಪರಮಕಾರಣಸ್ಯೈವ ಏಕಸ್ಯ ಸತ್ಯತ್ವಾವಧಾರಣಾತ್। ''ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'' ಇತಿ ಚ ಶಾರೀರಸ್ಯ ಬ್ರಹ್ಮಭಾವೋಪದೇಶಾತ್॥ -ಸೂ. ಭಾ. ೨-೧-೧೪-೪೩೫.

(೩) ತಸ್ಕರದೃಷ್ಟಾನ್ತೇನ ಚ ಅನೃತಾಭಿಸನ್ಧಸ್ಯ ಬನ್ಧನಂ ಸತ್ಯಾಭಿಸನ್ಧಸ್ಯ ಚ ಮೋಕ್ಷಂ ದರ್ಶಯನ್ ಏಕತ್ವಮೇವ ಏಕಂ ಪಾರಮಾರ್ಥಿಕಂ ದರ್ಶಯತಿ । ಮಿಥ್ಯಾಜ್ಞಾನವಿಜೃಮ್ಭಿತಂ ಚ ನಾನಾತ್ವಮ್। ಉಭಯಸತ್ಯತಾಯಾಂ ಹಿ ಕಥಂ ವ್ಯವಹಾರಗೋಚರೋಽಪಿ ಜನ್ತುರನೃತಾಭಿಸನ್ಧಃ ಇತ್ಯುಚ್ಯೇತ ? ''ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'' (ಬೃ. ೪-೪-೧೯) ಇತಿ ಚ ಭೇದದೃಷ್ಟಿಮ್ ಅಪವದನ್ನೇವ ಏತದ್ದರ್ಶಯತಿ। ನ ಚ ಅಸ್ಮಿನ್ ದರ್ಶನೇ ಜ್ಞಾನಾತ್ ಮೋಕ್ಷಃ ಇತಿ ಉಪಪದ್ಯತೇ। ಏತದ್ದರ್ಶಯತಿ। ಸಮ್ಯಗ್ಜ್ಞಾನಾಪನೋದ್ಯಸ್ಯ ಕಸ್ಯಚಿತ್ ಮಿಥ್ಯಾಜ್ಞಾನಸ್ಯ ಸಂಸಾರಕಾರಣತ್ವೇನ ಅನಭ್ಯುಪಗಮಾತ್। ಉಭಯಸತ್ಯತಾಯಾಂ ಹಿ ಕಥಮ್ ಏಕತ್ವಜ್ಞಾನೇನ ನಾನಾತ್ವ ಜ್ಞಾನಮ್ ಅಪನುದ್ಯತೇ ಇತ್ಯುಚ್ಯತೇ?॥ -ಸೂ. ಭಾ. ೨-೧-೧೪-೪೩೫.

೧೨೩. ಸೃಷ್ಟಿಯು ಸರ್ವಥಾ ಇಲ್ಲವಾದರೆ ಶ್ರುತಿಯಲ್ಲಿ ಅಷ್ಟು ವಿಸ್ತಾರವಾಗಿ ಸೃಷ್ಟಿಯನ್ನೇಕೆ ಹೇಳಿದೆ? ಸೂತ್ರಕಾರರೂ ಸೃಷ್ಟಿಕ್ರಮವನ್ನೇಕೆ ವ್ಯವಸ್ಥೆಗೊಳಿಸುವದಕ್ಕೆ ಅಷ್ಟೊಂದು ಪ್ರಯತ್ನಪಟ್ಟಿರುತ್ತಾರೆ? ಸಮುದ್ರಾದಿದೃಷ್ಟಾಂತಗಳಿಂದ ಭೋಕ್ತೃಭೋಗ್ಯ ಪ್ರಪಂಚವನ್ನೇಕೆ ಒಪ್ಪಿರುತ್ತಾರೆ? -ಎಂದು ಕೆಲವರು ಕೇಳಬಹುದು.

ಆದರೆ ಶ್ರುತಿಯು ಏಕತ್ವಜ್ಞಾನಕ್ಕಾಗಿಯೇ ಸೃಷ್ಟಿಯನ್ನು ಹೇಳಿದೆ ಎಂದು ಮೇಲೆ ಸ್ಪಷ್ಟಪಡಿಸಿರುತ್ತೇವಾದ್ದರಿಂದ ಶ್ರುತಿವಿರೋಧವನ್ನು ಶಂಕಿಸುವದಕ್ಕೆ ಬರುವದಿಲ್ಲ. ಸೂತ್ರಕಾರರು ಎರಡನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಇತರ ಮತಗಳನ್ನು ಖಂಡಿಸಿ ಅವರ ಮತದಲ್ಲಿ ಪೂರ್ವಾಪರವಿರೋಧವಿದೆ ಎಂದು ತಿಳಿಸಿರುತ್ತಾರೆ.

ಆದ್ದರಿಂದ ಉತ್ಪತ್ತಿಶ್ರುತಿಗಳೂ ಒಂದಕ್ಕೊಂದು ವಿರುದ್ಧವಾಗಿವೆ ಎಂಬ ಕಾರಣದಿಂದ ವೇದಾಂತವನ್ನೂ ಮುಮುಕ್ಷುಗಳು ಅನಾದರಮಾಡಬಾರದೆಂಬ ಉದ್ದೇಶದಿಂದ ಕಾರ್ಯವಿಷಯದಲ್ಲಿ ಯಾವ ವಿಗಾನವೂ ಇಲ್ಲವೆಂದು ತೋರಿಸುವದಕ್ಕೆ ಮೂರನೆಯ ಪಾದವನ್ನು ಆರಂಭಿಸಿರುತ್ತಾರೆ. ಇದೆಲ್ಲವೂ ವ್ಯಾವಹಾರಿಕದೃಷ್ಟಿಯಿಂದಲೇ ಹೊರತು ಸೃಷ್ಟಿಯು ಪರಮಾರ್ಥವೆಂಬ ಅಭಿಪ್ರಾಯದಿಂದಲ್ಲ. ಏಕೆಂದರೆ ಜಗತ್ಕಾರಣವಾದ ಬ್ರಹ್ಮದಲ್ಲಿ ಶ್ರುತಿಸಮನ್ವಯವನ್ನು ತೋರಿಸಿದರೆ ಅಷ್ಟರಿಂದಲೇ ವೇದಾಂತಸಿದ್ಧಾಂತವು ನಿಲ್ಲುತ್ತದೆ. ಇದನ್ನು ''ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ'' (೧-೪-೧೪) ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. ಕಾರ್ಯವು ಕಾರಣಕ್ಕಿಂತ ಅಭಿನ್ನವೆಂಬುದನ್ನು ''ತದನನ್ಯತ್ವಮಾರಮ್ಭಣ ಶಬ್ದಾದಿಭ್ಯಃ'' (೨-೧-೧೪) ಎಂಬ ಸೂತ್ರದಲ್ಲಿ ತೋರಿಸಿಕೊಟ್ಟಿರುತ್ತಾರೆ. ಕಾರ್ಯಕಾರಣವಾದದಲ್ಲಿ ಶ್ರುತಿಗೆ ನಿರ್ಭರವಿಲ್ಲವೆಂಬುದನ್ನು ನಾವು ಹಿಂದಿನ ಮೂರು ಪಾಠಗಳಲ್ಲಿ ವಿವರವಾಗಿ ತಿಳಿಸಿರುತ್ತೇವೆ. ಆದ್ದರಿಂದ ನಾವು ಹಿಂದೆ (೯೨) ಹೇಳಿರುವಂತೆ ಜಗತ್ತೆಂಬ ಕಾರ್ಯವನ್ನು ಒಪ್ಪಿ ಕಾರ್ಯವಿಚಾರವನ್ನು ಮಾಡಿರುವದು ಉಪಾಸನೆಗಳನ್ನು ಹೇಳುವದಕ್ಕೆ ಅನುಕೂಲಿಸಲೆಂದೇ. ಉಪಾಸನಾವಿಚಾರವನ್ನು ಮಾಡುವಾಗ ಈ ವಿಷಯವನ್ನು ಮತ್ತೆ ಪ್ರಸ್ತಾಪಿಸುವೆವು.

(೧) ವಿಪ್ರತಿಷೇಧಾಚ್ಚ ಪರಪಕ್ಷಾಣಾಮ್ ಅನಪೇಕ್ಷಿತತ್ವಂ ಸ್ಥಾಪಿತಮ್। ತದ್ವತ್ ಸ್ವಪಕ್ಷಸ್ಯಾಪಿ ವಿಪ್ರತಿಷೇಧಾದೇವ ಅನಪೇಕ್ಷಿತತ್ವಮ್ ಆಶಙ್ಕ್ಯೇತ ಇತ್ಯತಃ ಸರ್ವವೇದಾನ್ತಗತಸೃಷ್ಟಿಶ್ರುತ್ಯರ್ಥನಿರ್ಮಲತ್ವಾಯ ಪರಃ ಪ್ರಪಞ್ಚಃ ಆರಭ್ಯತೇ। ತದರ್ಥನಿರ್ಮಲತ್ವೇ ಚ ಫಲಂ ಯಥೋಕ್ತಾಶಙ್ಕಾನಿವೃತ್ತಿರೇವ॥ -ಸೂ. ಭಾ. ೨-೩-೧-೮೮.

(೨) ಏವಂಜಾತೀಯಕಸ್ಯ ಕಾರಣಸ್ವರೂಪನಿರೂಪಣಪರಸ್ಯ ವಾಕ್ಯಜಾತಸ್ಯ ಪ್ರತಿ ವೇದಾನ್ತಮ್ ಅವಿಗೀತಾರ್ಥತ್ವಾತ್। ಕಾರ್ಯವಿಷಯಂ ತು ವಿಗಾನಂ ದೃಶ್ಯತೇ...ನ ಚ ಕಾರ್ಯವಿಷಯೇಣ ವಿಗಾನೇನ ಕಾರಣಮಪಿ ಬ್ರಹ್ಮ ಸರ್ವವೇದಾನ್ತೇಷು ಅವಿಗೀತಮ್ ಅಧಿಗಮ್ಯಮಾನಮ್ ಅವಿವಕ್ಷಿತಂ ಭವಿತುಮರ್ಹತಿ ಇತಿ ಶಕ್ಯತೇ ವಕ್ತುಮ್। ಅತಿಪ್ರಸಙ್ಗಾತ್। ಸಮಾಧಾಸ್ಯತಿ ಚ ಆಚಾರ್ಯಃ ಕಾರ್ಯವಿಷಯಮಪಿ ವಿಗಾನಂ ''ನ ವಿಯದಶ್ರುತೇಃ'' (೨-೩-೧) ಇತ್ಯಾರಭ್ಯ। ಭವೇದಪಿ ಕಾರ್ಯಸ್ಯ ವಿಗೀತತ್ವಮ್ ಅಪ್ರತಿಪಾದ್ಯಮಾನತ್ವಾತ್॥

- ಸೂ. ಭಾ. ೧-೪-೧೪-೩೬೬, ೩೬೭.

(೩) ಸೂತ್ರಕಾರೋಽಪಿ ಪರಮಾರ್ಥಾಭಿಪ್ರಾಯೇಣ 'ತದನನ್ಯತ್ವಮ್' ಇತ್ಯಾಹ। ವ್ಯವಹಾರಾಭಿಪ್ರಾಯೇಣ ತು 'ಸ್ಯಾಲ್ಲೋಕವತ್,' (೨-೧-೧೩) ಇತಿ ಮಹಾಸಮುದ್ರಸ್ಥಾನೀಯತಾಂ ಬ್ರಹ್ಮಣಃ ಕಥಯತಿ। ಅಪ್ರತ್ಯಾಖ್ಯಾಯೈವ ಕಾರ್ಯಪ್ರಪಞ್ಚಂ ಪರಿಣಾಮಪ್ರಕ್ರಿಯಾಂ ಚ ಆಶ್ರಯತಿ ಸಗುಣೇಷು ಉಪಾಸನೇಷು ಉಪಯೋಕ್ಷ್ಯತ ಇತಿ ॥

-ಸೂ. ಭಾ. ೨-೧-೧೪-೪೪೧.

# ೧೭. ಸಾಮಾನ್ಯವಿಶೇಷಭಾವ

೧೨೪. ಬ್ರಹ್ಮಕ್ಕೂ ಜಗತ್ತಿಗೂ ಕಾರ್ಯಕಾರಣಭಾವವನ್ನು ಒಪ್ಪಿ ಬ್ರಹ್ಮದಿಂದ ಜಗತ್ತಿನ ಸೃಷ್ಟಿಸ್ಥಿತಿಪ್ರಲಯಗಳಾಗುವವೆಂದು ಹೇಳಿರುವದು ಬ್ರಹ್ಮಕ್ಕಿಂತ ಬೇರೆಯಾಗಿ ಜಗತ್ತು ಇಲ್ಲವೆಂದು ತಿಳಿಯಹೇಳುವದಕ್ಕೇ ಹೊರತು ಕಾರ್ಯಕಾರಣಭಾವವು ಸತ್ಯವೆಂದು ಪ್ರತಿಪಾದಿಸುವದಕ್ಕಲ್ಲ-ಎಂದು ಹಿಂದೆ ತಿಳಿಸಿದ್ದಾಗಿದೆ ಬ್ರಹ್ಮವು ಅಥವಾ ನಮ್ಮಗಳೆಲ್ಲರ ಆತ್ಮನು ಜಗತ್ತಿಗೆ ಮಾಯಿಕಕಾರಣನಾಗಿರುತ್ತಾನೆ; ಆತ್ಮನಿಂದಲೇ ಹುಟ್ಟಿ ಆತ್ಮನಲ್ಲಿಯೇ ಇದ್ದು ಆತ್ಮನಲ್ಲಿಯೇ ಲಯವಾಗುವದರಿಂದ ಸರ್ವವೂ ಆತ್ಮನೇ ಎಂಬುದೇ ವೇದಾಂತಸಿದ್ಧಾಂತವು ಜಗತ್ತಿನ ಸ್ಥಿತಿಕಾಲದಲ್ಲಿಯೂ ನಿರ್ವಿಶೇಷನಾದ ಆತ್ಮನೇ ಇರುವನೆಂಬುದನ್ನು ಮನಗಾಣಿಸುವದಕ್ಕಾಗಿ ಆತ್ಮದಲ್ಲಿ ಸಾಮಾನ್ಯತ್ವವನ್ನು ಅಧ್ಯಾರೋಪ ಮಾಡುವದು ವೇದಾಂತದ ಒಂದು ಉಪದೇಶಕ್ರಮವು.

ತಾರ್ಕಿಕರು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ - ಎಂಬ ಆರು ಪದಾರ್ಥಗಳನ್ನು ಒಪ್ಪುತ್ತಾರೆ. ದ್ರವ್ಯಗಳು ಪೃಥಿವಿಯೇ ಮುಂತಾದ ಒಳಭೇದಗಳಿಂದ ಕೂಡಿರುತ್ತವೆ; ಅವುಗಳಲ್ಲಿ ದ್ರವ್ಯತ್ವ ಎಂಬ ಸಾಮಾನ್ಯವಿದೆ. ಹೀಗೆಯೇ ಗುಣಗಳಲ್ಲೆಲ್ಲ ಗುಣತ್ವವೆಂಬ ಸಾಮಾನ್ಯವೂ ಕರ್ಮಗಳಲ್ಲೆಲ್ಲ ಕರ್ಮತ್ವವೆಂಬ ಸಾಮಾನ್ಯವೂ ಇದೆ- ಎಂದು ಅವರ ಹೇಳಿಕೆ. ದ್ರವ್ಯತ್ವಕ್ಕಿಂತ ಕೆಳಗಿನ ಅಂತಸ್ತಿಗೆ ಸೇರಿದ ಪೃಥಿವೀತ್ವ, ಅಪ್ತ್ವ ಮುಂತಾದ ಅಪರಸಾಮಾನ್ಯಗಳಿರುತ್ತವೆ; ಪೃಥಿವೀತ್ವಕ್ಕಿಂತ ಘಟತ್ವವೇ ಮುಂತಾದ ಅಪರಸಾಮಾನ್ಯಗಳೂ ಇರುತ್ತವೆ. ಇದರಂತೆ ಗುಣತ್ವಕ್ಕಿಂತಲೂ ಕರ್ಮತ್ವಕ್ಕಿಂತಲೂ ಬೇರೆಬೇರೆಯ ಅಪರಸಾಮಾನ್ಯಗಳಿರುವವು. ಆದರೆ ದ್ರವ್ಯತ್ವ, ಗುಣತ್ವ, ಕರ್ಮತ್ವ- ಇವೆಲ್ಲಕ್ಕೂ ವ್ಯಾಪಕವಾಗಿರುವ ಸತ್ತಾ (ಇರವು) ಎಂಬ ಮಹಾಸಾಮಾನ್ಯವಿರುತ್ತದೆ. ಅದಕ್ಕೆ ಮೇಲಿನಂತಸ್ತಿನ ಪರಸಾಮಾನ್ಯವು ಯಾವದೂ ಇರುವ ದಿಲ್ಲ- ಎಂಬದು ತಾರ್ಕಿಕರ ಸಿದ್ಧಾಂತವು. ವೇದಾಂತದಲ್ಲಿ ತಾರ್ಕಿಕರ ಈ ಪ್ರಕ್ರಿಯೆಯನ್ನು ಒಪ್ಪಿರುವದಿಲ್ಲ. ದ್ವ್ಯಣುಕಾದಿಕಾರ್ಯಗಳು ಮೊದಲು ಇಲ್ಲದೆ ಇದ್ದು ಹೊಸದಾಗಿ ಹುಟ್ಟಿ ತಮ್ಮತಮ್ಮ ಕಾರಣಗಳೊಡನೆಯೂ ಸತ್ತೆ ಎಂಬ ಸಾಮಾನ್ಯದೊಡನೆಯೂ ಸಮವಾಯವೆಂಬ ಸಂಬಂಧವಿಶೇಷದಿಂದ ಸಂಬದ್ಧವಾಗುತ್ತವೆ ಎಂಬ ತಾರ್ಕಿಕರ ಪ್ರಕ್ರಿಯೆಯನ್ನು ಆಗಲೆ (೯೭) ಖಂಡಿಸಿದ್ದಾಗಿದೆ. ದ್ರವ್ಯ, ಗುಣ, ಕರ್ಮ-ಮುಂತಾದ ಪದಾರ್ಥಗಳು ಮನುಷ್ಯ, ಕುದುರೆ, ಮೊಲ- ಮುಂತಾದವುಗಳಂತೆ ಅತ್ಯಂತಭಿನ್ನವಾಗಿ ಭಿನ್ನಲಕ್ಷಣವುಳ್ಳವಾಗಿವೆ ಎಂದೂ ಹೇಳಿ, ಗುಣಾದಿಗಳೆಲ್ಲವೂ ದ್ರವ್ಯಕ್ಕೆ ಅಧೀನವಾಗಿ ಸಮವಾಯಸಂಬಂಧದಿಂದ

ಕೂಡಿಕೊಂಡಿವೆ ಎಂದೂ ಅದಕ್ಕೆ ವಿರುದ್ಧವಾಗಿ ಒಪ್ಪುತ್ತಾರೆ. ಅವರ ಅಂಗೀಕಾರದಂತೆ ನೋಡಿದರೆ **ದ್ರವ್ಯಕ್ಕಿಂತ ಬೇರೆಯಾಗಿ ಗುಣಾದಿಗಳಾಗಲಿ ಸದ್ರೂಪನಾಗಿರುವ ಆತ್ಮನಿಗಿಂತ ಬೇರೆಯಾಗಿ ಸತ್ತಾದಿಸಾಮಾನ್ಯಗಳಾಗಲಿ ಇರುವವೆಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ** ಎಂದು ಆಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ.

(೧) ಯಸ್ಮಾತ್ ಆತ್ಮನೋ ಜಾಯತೇ, ಆತ್ಮನ್ಯೇವ ಲೀಯತೇ, ಆತ್ಮಮಯಂ ಚ ಸ್ಥಿತಿಕಾಲೇ ಆತ್ಮವ್ಯತಿರೇಕೇಣ ಅಗ್ರಹಣಾತ್ ಆತ್ಮೈವ ಸರ್ವಮ್॥ -ಬೃ.ಭಾ. ೨-೪-೬-೩೬೦.

(೨) ಅಪಿ ಚ ವೈಶೇಷಿಕಾಃ ತನ್ತ್ರಾರ್ಥಭೂತಾನ್ ಷಟ್ಪದಾರ್ಥಾನ್ ದ್ರವ್ಯಗುಣಕರ್ಮಸಾಮಾನ್ಯವಿಶೇಷಸಮವಾಯಾಖ್ಯಾನ್ ಅತ್ಯನ್ತಭಿನ್ನಾನ್ ಭಿನ್ನಲಕ್ಷಣಾನ್ ಅಭ್ಯುಪಗಚ್ಛನ್ತಿ। ಯಥಾ ಮನುಷ್ಯಃ, ಅಶ್ವಃ, ಶಶಃ ಇತಿ। ತಥಾತ್ವಂ ಚ ಅಭ್ಯುಪಗಮ್ಯ ತದ್ವಿರುದ್ಧಂ ದ್ರವ್ಯಾಧೀನತ್ವಂ ಶೇಷಾಣಾಮ್ ಅಭ್ಯುಪಗಚ್ಛನ್ತಿ। ತನ್ನೋಪಪದ್ಯತೇ। ಕಥಮ್? ಯಥಾ ಹಿ ಲೋಕೇ ಶಶಕುಶಪಲಾಶಪ್ರಭೃತೀನಾಮ್ ಅತ್ಯನ್ತಭಿನ್ನಾನಾಂ ಸತಾಂ ನೇತರೇತರಾಧೀನತ್ವಂ ಭವತಿ, ಏವಂ ದ್ರವ್ಯಾದೀನಾಮ್ ಅತ್ಯನ್ತಭಿನ್ನತ್ವಾತ್ ನೈವ ದ್ರವ್ಯಾಧೀನತ್ವಂ ಗುಣಾದೀನಾಂ ಭವಿತುಮರ್ಹತಿ। ಅಥ ಭವತಿ ದ್ರವ್ಯಾಧೀನತ್ವಂ ಗುಣಾದೀನಾಮ್, ತತೋ ದ್ರವ್ಯಭಾವೇ ಭಾವಾತ್ ದ್ರವ್ಯಾಭಾವೇ ಅಭಾವಾತ್ ದ್ರವ್ಯಮೇವ ಸಂಸ್ಥಾನಾದಿಭೇದಾತ್ ಅನೇಕಶಬ್ದಪ್ರತ್ಯಯಭಾಗ್ ಭವತಿ ಯಥಾ ದೇವದತ್ತಃ ಏಕ ಏವ ಸನ್ ಅವಸ್ಥಾನ್ತರಯೋಗಾತ್ ಅನೇಕಶಬ್ದಪ್ರತ್ಯಯಭಾಗ್ ಭವತಿ ತದ್ವತ್। ತಥಾ ಸತಿ ಸಾಂಖ್ಯಸಿದ್ಧಾನ್ತಪ್ರಸಙ್ಗಃ। ಸ್ವಸಿದ್ಧಾನ್ತವಿರೋಧಶ್ಚ ಆಪದ್ಯೇಯಾತಾಮ್।.... ತಸ್ಮಾತ್ ದ್ರವ್ಯಾತ್ಮಕತಾ ಗುಣಸ್ಯ। ಏತೇನ ಕರ್ಮಸಾಮಾನ್ಯವಿಶೇಷಸಮವಾಯಾನಾಂ ದ್ರವ್ಯಾತ್ಮಕತಾ ವ್ಯಾಖ್ಯಾತಾ॥ -ಸೂ.ಭಾ. ೨-೨-೧೭-೩೫.

೧೨೫. ಯಾವದಕ್ಕಿಂತ ವ್ಯತಿರಿಕ್ತವಾಗಿ ಯಾವದನ್ನು ಗ್ರಹಿಸುವದಕ್ಕೆ ಆಗುವದಿಲ್ಲವೋ ಅದು ಅದರ ರೂಪವಾಗಿಯೇ ಇರುವದೆಂಬುದು ಒಂದು ನ್ಯಾಯ. ಉದಾಹರಣೆಗೆ ನಗಾರಿಯೇ ಮುಂತಾದದ್ದನ್ನು ಹೊಡೆಯುತ್ತಿರುವಾಗ ಆಗುವ ಶಬ್ದಗಳನ್ನು ನಗಾರಿಯ ಶಬ್ದಗಳೆಂದೇ ಅರಿಯಬೇಕಾಗಿರುವದೇ ಹೊರತು, ಆ ಶಬ್ದಗಳನ್ನು ನಗಾರಿಯ ಸಂಬಂಧವಿಲ್ಲದೆ ಅರಿಯುವದಕ್ಕೆ ಆಗುವದಿಲ್ಲ. ಹೀಗೆಯೇ ಶಂಖದ ಶಬ್ದಗಳು, ವೀಣೆಯ ಶಬ್ದಗಳು- ಎಂಬ ವಿಶೇಷಶಬ್ದಗಳನ್ನು ಆಯಾ ಸಾಮಾನ್ಯಬುದ್ಧಿಯಿಂದಲೇ ಶಂಖದ ಧ್ವನಿ, ವೀಣೆಯ ಧ್ವನಿ- ಎಂದೇ ಅರಿಯಬೇಕಾಗಿರುತ್ತದೆ. ಈ ಯಾವ ಶಬ್ದಗಳನ್ನೂ ಶಬ್ದವೆಂಬ ಸಾಮಾನ್ಯಬುದ್ಧಿಯನ್ನು ಬಿಟ್ಟು ಬೇರೆಯಾಗಿ ಅರಿಯುವದಕ್ಕೆ ಆಗುವದಿಲ್ಲ. ಆದ್ದರಿಂದ ಈ ಶಬ್ದಸಾಮಾನ್ಯಕ್ಕಿಂತ ಈ ವಿಶೇಷಗಳು ಇಲ್ಲ. ಇದರಂತೆ ಲೋಕದಲ್ಲಿ ಕಾಣುವ ಯಾವ ಸಾಮಾನ್ಯವಿಶೇಷಗಳೂ ಸದ್ರೂಪವಾಗಿರುವ ಅಥವಾ ಚಿದ್ರೂಪವಾಗಿರುವ ಸಾಮಾನ್ಯಕ್ಕಿಂತ ಬೇರೆಯಾಗಿರುವದಿಲ್ಲ ಎಂದು ನಿಶ್ಚಯಿಸಬಹುದು. ಇದರಿಂದ ಸಚ್ಚಿದ್ರೂಪಸಾಮಾನ್ಯವೇ, ಆತ್ಮನೇ, ಪರಮಾರ್ಥವು ಎಂದು ನಿಶ್ಚಯವಾಗುತ್ತದೆ. **ವೈಶೇಷಿಕರು ಹೇಳುವ ಸತ್ತಾಸಾಮಾನ್ಯಕ್ಕೂ**

**ವೇದಾಂತಿಗಳು ಹೇಳುವ ಸತ್ತಿಗೂ ಇರುವ ತಾರತಮ್ಯವೇನೆಂದರೆ ಸತ್ತೆಂಬುದು ಸುಷುಪ್ತಿಯಲ್ಲಿಯೂ ಪ್ರಲಯದಲ್ಲಿಯೂ ತಾನೊಂದೇ ಇರಬಹುದೆಂದು ವೇದಾಂತಿಗಳು ಹೇಳುತ್ತಾರೆ. ಆದರೆ ವೈಶೇಷಿಕರು ಬರಿಯ ಸತ್ತನ್ನು ಯಾವಾಗಲೂ ಒಪ್ಪುವದಿಲ್ಲ;** ಪ್ರಲಯದಲ್ಲಿಕೂಡ ಕಾರ್ಯದ ಅಭಾವವೂ ಪರಮಾಣ್ವಾದಿಗಳೂ ಇರುತ್ತವೆ ಎಂದು ಅವರು ಹೇಳುತ್ತಾರೆ.

(೧) ಯತ್ಸ್ವರೂಪವ್ಯತಿರೇಕೇಣ ಅಗ್ರಹಣಂ ಯಸ್ಯ ತಸ್ಯ ತದಾತ್ಮತ್ವಮೇವ ಲೋಕೇ ದೃಷ್ಟಮ್॥ ಬೃ. ಭಾ. ೨-೪-೭-೩೬೧.

(೨) ಸರ್ವತ್ರ ದ್ವೇ ಬುದ್ಧೀ ಸರ್ವೈರುಪಲಭ್ಯೇತೇ ಸಾಮಾನಾಧಿಕರಣ್ಯೇನ ನೀಲೋತ್ಪಲವತ್ ಸನ್ ಘಟಃ, ಸನ್ ಪಟಃ, ಸನ್ ಹಸ್ತೀ 'ಇತಿ'। ಏವಂ ಸರ್ವತ್ರ। ತಯೋರ್ಬುದ್ಧ್ಯೋಃ ಘಟಾದಿಬುದ್ಧಿಃ ವ್ಯಭಿಚರತಿ। ತಥಾ ಚ ದರ್ಶಿತಮ್। ನ ತು ಸದ್ಬುದ್ಧಿಃ॥ -ಗೀ. ಭಾ. ೨-೧೬-೨೭.

(೩) ಬ್ರಹ್ಮಣೋಽಪಿ ತರ್ಹಿ ಸತ್ತಾಲಕ್ಷಣಃ ಸ್ವಭಾವಃ ಆಕಾಶಾದಿಷು ಅನುವರ್ತಮಾನೋ ದೃಶ್ಯತೇ॥ -ಸೂ. ಭಾ. ೨-೧-೬-೪೧೬.

(೪) ನನು ವೈಶೇಷಿಕಪಕ್ಷೇಽಪಿ ಸತ್ಸಾಮಾನಾಧಿಕರಣ್ಯಂ ಸರ್ವಸ್ಯೋಪಪದ್ಯತೇ। ದ್ರವ್ಯಗುಣಾದಿಷು ಸಚ್ಛಬ್ದಬುದ್ಧ್ಯನುವೃತ್ತೇಃ। 'ಸದ್ದ್ರವ್ಯಮ್' 'ಸನ್ ಗುಣಃ', 'ಸತ್ ಕರ್ಮ' ಇತ್ಯಾದಿದರ್ಶನಾತ್। ಸತ್ಯಮೇವಂ ಸ್ಯಾತ್ ಇದಾನೀಮ್। ಪ್ರಾಗುತ್ಪತ್ತೇಸ್ತು ನೈವೇದಂ ಕಾರ್ಯಂ ಸದೇವ ಆಸೀತ್ ಇತಿ ಅಭ್ಯುಪಗಮ್ಯತೇ ವೈಶೇಷಿಕೈಃ। ಪ್ರಾಗುತ್ಪತ್ತೇಃ ಕಾರ್ಯಸ್ಯ ಅಸತ್ತ್ವಾಭ್ಯುಪಗಮಾತ್। ನ ಚೈಕಮೇವ ಸತ್ ಅದ್ವಿತೀಯಂ ಪ್ರಾಗುತ್ಪತ್ತೇರಿಚ್ಛನ್ತಿ। ತಸ್ಮಾತ್ ವೈಶೇಷಿಕಪರಿಕಲ್ಪಿತಾತ್ ಸತಃ ಅನ್ಯತ್ ಕಾರಣಮಿದಂ ಸದುಚ್ಯತೇ, ಮೃದಾದಿದೃಷ್ಟಾನ್ತೇಭ್ಯಃ॥ -ಛಾಂ. ಭಾ. ೬-೨-೧-೪೫೦.

(೫) ಯಥಾ ಸುಷುಪ್ತಾದುತ್ಥಿತಃ ಸತ್ತ್ವಮಾತ್ರಮವಗಚ್ಛತಿ 'ಸುಷುಪ್ತೇ ಸನ್ಮಾತ್ರಮೇವ ಕೇವಲಂ ವಸ್ತು ಇತಿ', ತಥಾ ಪ್ರಾಗುತ್ಪತ್ತೇರಿತಿ ಭಾವಃ॥ -ಛಾಂ. ಭಾ. ೬-೨-೧-೪೪೯.

(೬) ಕಥಂ ಪುನರಿದಾನೀಮ್ ಇದಂ ಸರ್ವಮ್ ಆತ್ಮೈವೇತಿ ಗ್ರಹೀತುಂ ಶಕ್ಯತೇ? ಚಿನ್ಮಾತ್ರಾನುಗಮಾತ್ ಸರ್ವತ್ರ ಚಿತ್ಸ್ವರೂಪತೈವ ಇತಿ ಗಮ್ಯತೇ। ತತ್ರ ದೃಷ್ಟಾನ್ತ ಉಚ್ಯತೇ।.......ಸ ಯಥಾ। ಸ ಇತಿ ದೃಷ್ಟಾನ್ತಃ ಲೋಕೇ ಯಥಾ ದುನ್ದುಭೇಃ ಭೇರ್ಯಾದೇರ್ಹನ್ಯಮಾನಸ್ಯ ತಾಡ್ಯಮಾನಸ್ಯ ದಣ್ಡಾದಿನಾ ನ ಬಾಹ್ಯಾನ್ ಶಬ್ದಾನ್ ಬಹಿರ್ಭೂತಾನ್ ಶಬ್ದವಿಶೇಷಾನ್ ದುನ್ದುಭಿಶಬ್ದಸಾಮಾನ್ಯಾತ್ ನಿಷ್ಕೃಷ್ಟಾನ್ ದುನ್ದುಭಿಶಬ್ದವಿಶೇಷಾನ್ ನ ಶಕ್ನುಯಾತ್ ಗ್ರಹಣಾಯ ಗ್ರಹೀತುಮ್। ದುನ್ದುಭೇಸ್ತು ಗ್ರಹಣೇನ ದುನ್ದುಭಿಶಬ್ದಸಾಮಾನ್ಯವಿಶೇಷತ್ವೇನ ದುನ್ದುಭಿಶಬ್ದಾ ಏತೇ ಇತಿ ಶಬ್ದವಿಶೇಷಾ ಗೃಹೀತಾ ಭವನ್ತಿ। ದುನ್ದುಭಿಶಬ್ದಸಾಮಾನ್ಯವ್ಯತಿರೇಕೇಣ ಅಭಾವಾತ್ ತೇಷಾಮ್। ದುನ್ದುಭ್ಯಾಘಾತಸ್ಯ ವಾ। ದುನ್ದುಭೇಃ ಆಹನನಮ್ ಆಘಾತಃ ದುನ್ದುಭ್ಯಾಘಾತವಿಶಿಷ್ಟಸ್ಯ ಶಬ್ದಸಾಮಾನ್ಯಸ್ಯ ಗ್ರಹಣೇನ ತದ್ಗತಾ ವಿಶೇಷಾಃ ಗೃಹೀತಾ ಭವನ್ತಿ। ನ ತು ತ ಏವ ನಿರ್ಭಿದ್ಯ ಗ್ರಹೀತುಂ ಶಕ್ಯನ್ತೇ। ವಿಶೇಷರೂಪೇಣಾಭಾವಾತ್ ತೇಷಾಮ್। ತಥಾ ಪ್ರಜ್ಞಾನವ್ಯತಿರೇಕೇಣ

ಸ್ವಪ್ನಜಾಗರಿತಯೋರ್ನ ಕಶ್ಚಿತ್ ವಸ್ತುವಿಶೇಷೋ ಗೃಹ್ಯತೇ। ತಸ್ಮಾತ್ ಪ್ರಜ್ಞಾನವ್ಯತಿರೇಕೇಣ ಅಭಾವೋ ಯುಕ್ತಸ್ತೇಷಾಮ್॥ -ಬೃ. ಭಾ. ೨-೪-೭-೩೬೧.

(೭) ಅನೇಕದೃಷ್ಟಾನ್ತೋಪಾದಾನಮ್ ಇಹ ಸಾಮಾನ್ಯಬಹುತ್ವಖ್ಯಾಪನಾರ್ಥಮ್। ಅನೇಕೇ ಹಿ ವಿಲಕ್ಷಣಾಃ ಚೇತನಾಚೇತನರೂಪಾಃ ಸಾಮಾನ್ಯವಿಶೇಷಾಃ। ತೇಷಾಂ ಪಾರಂಪರ್ಯಗತ್ಯಾ ಯಥಾ ಏಕಸ್ಮಿನ್ ಮಹಾಸಾಮಾನ್ಯೇ ಅನ್ತರ್ಭಾವಃ ಪ್ರಜ್ಞಾನಘನೇ ಕಥಂ ನಾಮ ಪ್ರದರ್ಶಯಿತವ್ಯಃ ಇತಿ। ದುನ್ದುಭಿಶಙ್ಖವೀಣಾಶಬ್ದಸಾಮಾನ್ಯವಿಶೇಷಾಣಾಂ ಯಥಾ ಶಬ್ದತ್ವೇ ಅನ್ತರ್ಭಾವಃ । ಏವಂ ಸ್ಥಿತಿಕಾಲೇ ತಾವತ್ ಸಾಮಾನ್ಯವಿಶೇಷಾವ್ಯತಿರೇಕಾತ್ ಬ್ರಹ್ಮೈಕತ್ವಂ ಶಕ್ಯಮ್ ಅವಗನ್ತುಮ್॥ -ಬೃ-೨-೪-೯-೩೬೩.

೧೨೬. ಕಾರ್ಯವಾದ ಆಕಾಶಾದಿಗಳಲ್ಲಿ ಅನುಗತವಾಗಿರುವ ಸದ್ರೂಪವೂ ಚಿದ್ರೂಪವೂ ಒಂದೇ ತತ್ತ್ವವಾಗಿರುತ್ತವೆ. ಸದ್ರೂಪಸಾಮಾನ್ಯವೊಂದು, ಚಿದ್ರೂಪಸಾಮಾನ್ಯವೊಂದು-ಹೀಗೆ ಎರಡು ಸಾಮಾನ್ಯಗಳು ಆತ್ಮನಲ್ಲಿರುವವೆಂದು ತಿಳಿದರೆ ಅಷ್ಟರಿಂದಲೇ ಸವಿಶೇಷತ್ವವು ಉಂಟಾಗುತ್ತದೆ. ಬ್ರಹ್ಮವು ಸದ್ರೂಪವೋ, ಚಿದ್ರೂಪವೋ? -ಎಂದು ವಿಕಲ್ಪಿಸುವದೇ ಸರಿಯಲ್ಲ. ಏಕೆಂದರೆ ಚೇತನನಾದ ಜೀವನ ಆತ್ಮನೆಂದು ಬೋಧಿಸಿರುವ ಸತ್ತು ಚೇತನಾತ್ಮಕವಾಗಿಯೇ ಇರಬೇಕು; ಇರವಿಲ್ಲದ ಚೈತನ್ಯವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವದು ಯಾರಿಂದಲೂ ಆಗಲಾರದು. ಬ್ರಹ್ಮವು ಸದ್ರೂಪವೂ ಚಿದ್ರೂಪವೂ ಆಗಿದೆ -ಎಂದರೆ ಒಂದೇ ಅನೇಕಾತ್ಮಕವಾಗಿದೆ ಎಂದಂತೆ ಆಗುತ್ತದೆ. ಬ್ರಹ್ಮವು ಅನೇಕಾತ್ಮಕವಾಗಿದೆ ಎಂಬ ವಾದವು ಶ್ರುತಿಯುಕ್ತಿವಿರುದ್ಧವೆಂದು ಆಗಲೆ (೧೨೨) ತಿಳಿಸಿಕೊಟ್ಟದ್ದೂ ಆಗಿರುತ್ತದೆ. ಆದ್ದರಿಂದ ಸತ್ತೇ ಚಿತ್ತು, ಚಿತ್ತೇ ಸತ್ತು- ಎಂದು ತಿಳಿಯಬೇಕು.

(೧) ನ ಚ ಸಲ್ಲಕ್ಷಣಮೇವ ಬ್ರಹ್ಮ ನ ಬೋಧಲಕ್ಷಣಮ್ ಇತಿ ಶಕ್ಯಂ ವಕ್ತುಮ್। ''ವಿಜ್ಞಾನಘನ ಏವ'' (ಬೃ.೨-೪-೧೨) ಇತ್ಯಾದಿಶ್ರುತಿವೈಯರ್ಥ್ಯಪ್ರಸಙ್ಗಾತ್। ಕಥಂ ವಾ ನಿರಸ್ತ ಚೈತನ್ಯಂ ಬ್ರಹ್ಮ ಚೇತನಸ್ಯ ಆತ್ಮತ್ವೇನ ಉಪದಿಶ್ಯೇತ ? ನಾಪಿ ಬೋಧಲಕ್ಷಣಮೇವ ಬ್ರಹ್ಮ ನ ಸಲ್ಲಕ್ಷಣಮ್ ಇತಿ ಶಕ್ಯಂ ವಕ್ತುಮ್। ''ಅಸ್ತೀತ್ಯೇವೋಪಲಬ್ಧವ್ಯಃ'' (ಕ. ೨-೩-೧೩) ಇತ್ಯಾದಿ ಶ್ರುತಿವೈಯರ್ಥ್ಯಪ್ರಸಙ್ಗಾತ್। ಕಥಂ ವಾ ನಿರಸ್ತಸತ್ತಾಕೋ ಬೋಧಃ ಅಭ್ಯುಪಗಮ್ಯೇತ? ನಾಪಿ ಉಭಯಲಕ್ಷಣಮೇವ ಬ್ರಹ್ಮ ಇತಿ ಶಕ್ಯಂ ವಕ್ತುಮ್। ಪೂರ್ವಾಭ್ಯುಪಗಮವಿರೋಧಪ್ರಸಙ್ಗಾತ್। ಸತ್ತಾವ್ಯಾವೃತ್ತೇನ ಚ ಬೋಧೇನ, ಬೋಧವ್ಯಾವೃತ್ತಯಾ ಚ ಸತ್ತಯಾ ಉಪೇತಂ ಬ್ರಹ್ಮ ಪ್ರತಿಜಾನಾನಸ್ಯ ತದೇವ ಪೂರ್ವಾಧಿಕರಣಪ್ರತಿಷಿದ್ಧಂ ಸಪ್ರಪಞ್ಚತ್ವಂ ಬ್ರಹ್ಮಣಃ ಪ್ರಸಜ್ಯೇತ। ಶ್ರುತತ್ವಾತ್ ಅದೋಷಃ ಇತಿ ಚೇತ್। ನ। ಏಕಸ್ಯ ಅನೇಕಸ್ವಭಾವತ್ವಾನುಪಪತ್ತೇಃ। ಅಥ ಸತ್ತೈವ ಬೋಧಃ, ಬೋಧ ಏವ ಚ ಸತ್ತಾ, ನಾನಯೋಃ ಪರಸ್ಪರವ್ಯಾವೃತ್ತಿರಸ್ತಿ ಇತಿ ಯದ್ಯುಚ್ಯೇತ, ತಥಾಪಿ ಕಿಂ ಸಲ್ಲಕ್ಷಣಂ ಬ್ರಹ್ಮ, ಉತ ಬೋಧಲಕ್ಷಣಮ್, ಉತ ಉಭಯಲಕ್ಷಣಮ್ ಇತ್ಯೇವಂ ವಿಕಲ್ಪೋ ನಿರಾಲಮ್ಬನ ಏವ ಸ್ಯಾತ್॥ -ಸೂ. ಭಾ. ೩-೨-೨೧-೨೪೯.

(೨) ಸದಿತಿ ಅಸ್ತಿತಾಮಾತ್ರಂ ವಸ್ತು ಸೂಕ್ಷ್ಮಂ ನಿರ್ವಿಶೇಷಂ ಸರ್ವಗತಮ್ ಏಕಂ ನಿರಞ್ಜನಂ ನಿರವಯವಂ ವಿಜ್ಞಾನಂ ಯದವಗಮ್ಯತೇ ಸರ್ವವೇದಾನ್ತೇಭ್ಯಃ॥ - ಛಾಂ. ಭಾ. ೬-೨-೧-೪೪೯.

೧೨೭. ಆತ್ಮಸ್ವರೂಪವನ್ನು ಸದ್ರೂಪಸಾಮಾನ್ಯವೆಂದೂ ಚಿದ್ರೂಪ ಸಾಮಾನ್ಯವೆಂದೂ ಎಣಿಸುವಂತೆ ಆನಂದರೂಪಸಾಮಾನ್ಯವೆಂದೂ ಎಣಿಸಬಹುದು. ಪುಣ್ಯಕರ್ಮದಿಂದ ಆಗುವ ಇಷ್ಟದರ್ಶನನಿಮಿತ್ತವಾದ ಹರ್ಷಕ್ಕೆ **ಪ್ರಿಯ** ಎಂದು ಹೆಸರು, ಅದು ಸಿಕ್ಕಿದರೆ ಆಗುವ ಹರ್ಷವು **ಮೋದ**ವೆನಿಸುವದು; ಮೋದವು ಹೆಚ್ಚಾದಾಗ **ಪ್ರಮೋದ**ವೆನಿಸುವದು. ಹೀಗೆ ಆನಂದದಲ್ಲಿ ಪ್ರಿಯಾದಿರೂಪವಾದ ವಿಶೇಷಗಳು ತೋರುತ್ತಿರುವದರಿಂದ ಆನಂದವು ಆತ್ಮನ ಸ್ವರೂಪವಾಗಿರಲಾರದೆಂದು ಶಂಕಿಸಬಾರದು. ಏಕೆಂದರೆ ಈ ವಿಶೇಷಗಳು ಸಾಮಾನ್ಯವಾದ ಆನಂದಕ್ಕಿಂತ ಭಿನ್ನವಾಗಿರುವದಿಲ್ಲ, ಆ ಸಾಮಾನ್ಯವು ಇವುಗಳಲ್ಲೆಲ್ಲ ಅನುಗತವಾಗಿರುತ್ತದೆ. ಪ್ರಿಯವೇ ಮುಂತಾದ ಲೌಕಿಕಸುಖವು ನಿಜವಾಗಿ ವಸ್ತುವಿನಿಂದ ಉಂಟಾಗುವದಿಲ್ಲ; ತನಗೆ ಬೇಕಾದ ವಸ್ತುವು ಪುಣ್ಯವಶದಿಂದ ಎದುರಿಗೆ ಕಂಡರೆ ಅಥವಾ ಸಿಕ್ಕಿದರೆ ಆಗ ಅಂತಃಕರಣದಲ್ಲಿ ತಮಸ್ಸಿನ ಮುಸುಕು ಹೋಗಿ ಒಂದಾನೊಂದು ವೃತ್ತಿಯು ತೋರುವದು; ಅದರಲ್ಲಿ ಆತ್ಮಸ್ವರೂಪವಾದ ಆನಂದವು ಹೊರತೋರಿಕೊಳ್ಳುವದು. **ಜ್ಞಾನಾಭಾಸವಾದ ವೃತ್ತಿಯನ್ನು ಜ್ಞಾನಶಬ್ದದಿಂದ ಕರೆಯುವಂತೆಯೇ (೬೭, ೭೫), ಸುಖಾಭಾಸವಾದ ವೃತ್ತಿಯನ್ನು ಸುಖವೆಂದು ಜನರು ಕರೆಯುತ್ತಾರೆ.** ಪುಣ್ಯಕರ್ಮವು ಅಲ್ಪವಾಗಿರುವದರಿಂದ ಈ ವೃತ್ತಿಯೂ ಕ್ಷಣಿಕವಾಗಿರುತ್ತದೆ. ಆದರೆ ಆತ್ಮಸ್ವರೂಪಾನಂದವು ಕ್ಷಣಿಕವಲ್ಲ. ತಪಸ್ಸು, ಉಪಾಸನೆ, ಬ್ರಹ್ಮಚರ್ಯೆ, ಶ್ರದ್ಧೆ- ಇವುಗಳಿಂದ ಅಂತಃಕರಣವು ಶುದ್ಧವಾದಷ್ಟೂ ಹೆಚ್ಚು ಹೆಚ್ಚಿನ ಆನಂದವು ಅದರಲ್ಲಿ ಹೊರತೋರಿಕೊಳ್ಳುತ್ತದೆ ಹಲವು ಹನಿಗಳು ಸೇರಿ ಕಡಲಾಗುವಂತೆ ವಿಷಯಸುಖಗಳೆಲ್ಲವೂ ಆತ್ಮಾನಂದದಲ್ಲಿ ಒಂದಾಗಿರುವವು; ಆ **ಆನಂದದಲ್ಲಿ ಆನಂದ, ಆನಂದಿ- ಎಂಬ ಭೇದವಿರುವದೇ ಇಲ್ಲ. ಆತ್ಮನೇ ಆನಂದವು, ಆನಂದಿಯು.** ಆದ್ದರಿಂದ ಆನಂದಸ್ವರೂಪದಲ್ಲಿ ನಿಜವಾಗಿ ಯಾವ ವಿಶೇಷಗಳೂ ಇರುವದಿಲ್ಲ.

(೧) 'ಆನನ್ದಃ' ಇತಿ ಸುಖಸಾಮಾನ್ಯಮ್ ಆತ್ಮಾ ಪ್ರಿಯಾದೀನಾಂ ಸುಖಾವಯವಾನಾಮ್। ತೇಷು ಅನುಸ್ಯೂತತ್ವಾತ್। ಆನನ್ದಃ ಇತಿ ಪರಂ ಬ್ರಹ್ಮ। ತದ್ ಹಿ ಶುಭಕರ್ಮಣಾ ಪ್ರತ್ಯುಪಸ್ಥಾಪ್ಯಮಾನೇ ಪುತ್ರಮಿತ್ರಾದಿವಿಷಯವಿಶೇಷೋಪಾಧೌ ಅನ್ತಃಕರಣವೃತ್ತಿವಿಶೇಷೇ ತಮಸಾ ಅಪ್ರಚ್ಛಾದ್ಯಮಾನೇ ಪ್ರಸನ್ನೇ ಅಭಿವ್ಯಜ್ಯತೇ। ತತ್ 'ವಿಷಯಸುಖಮ್' ಇತಿ ಪ್ರಸಿದ್ಧಂ ಲೋಕೇ । ತದ್ವೃತ್ತಿವಿಶೇಷಪ್ರತ್ಯುಪಸ್ಥಾಪಕಸ್ಯ ಕರ್ಮಣಃ ಅನವಸ್ಥಿತತ್ವಾತ್ ಸುಖಸ್ಯ ಕ್ಷಣಿಕತ್ವಮ್। ತತ್ ಯದಾ ಅನ್ತಃಕರಣಂ ತಪಸಾ ತಮೋಘ್ನೇನ ವಿದ್ಯಯಾ ಬ್ರಹ್ಮಚರ್ಯೇಣ ಶ್ರದ್ಧಯಾ ಚ ನಿರ್ಮಲತ್ವಮ್ ಆಪದ್ಯತೇ ಯಾವತ್ ಯಾವತ್ ತಾವತ್ತಾವತ್ ವಿವಿಕ್ತೇ ಪ್ರಸನ್ನೇ ಅನ್ತಃಕರಣೇ ಆನನ್ದವಿಶೇಷಃ ಉತ್ಕೃಷ್ಯತೇ ವಿಪುಲೀಭವತಿ॥ -ತೈ. ಭಾ ೨-೮-೫-೧೪೭.

(೨) ಸ ಏಷ ಆನನ್ದೋ ಯಸ್ಯ ಮಾತ್ರಾಃ ಸಮುದ್ರಾಮ್ಭಸ ಇವ ವಿಪ್ರುಷಃ ಪ್ರವಿಭಕ್ತಾಃ ಯತ್ರ ಏಕತಾಂ ಗತಾಃ, ಸ ಏಷ ಪರಮಾನನ್ದಃ ಸ್ವಾಭಾವಿಕಃ। ಅದ್ವೈತತ್ವಾತ್। ಆನನ್ದಾದನನ್ದಿನೋಶ್ಚ ಅವಿಭಾಗೋಽತ್ರ॥

-ತೈ. ಭಾ. ೨-೮-೨೦೩.

೧೨೮. ಬ್ರಹ್ಮವು ಸದ್ರೂಪವೂ ಚಿದ್ರೂಪವೂ ಆಗಿದ್ದರೂ ಸತ್, ಚಿತ್- ಎಂದು ಹೇಗೆ ಎರಡು ಬೇರೆಬೇರೆಯ ವಿಶೇಷಗಳಲ್ಲವೋ ಹಾಗೆಯೇ ಬ್ರಹ್ಮವು ಆನಂದವೆಂದರೆ ಸಚ್ಚಿದ್ರೂಪಕ್ಕಿಂತ ಬೇರೆಯಾದ ವಿಶೇಷರೂಪವುಳ್ಳದ್ದಲ್ಲ. ಬ್ರಹ್ಮವು ವಿಜ್ಞಾನವೂ ಆನಂದವೂ ಆಗಿದೆ- ಎಂದು ಶ್ರುತಿಯಲ್ಲಿದೆಯಾದರೂ ಬ್ರಹ್ಮದ ಆನಂದವು ವಿಜ್ಞಾನಕ್ಕೆ ವಿಷಯವಲ್ಲ, ಮೋಕ್ಷದಲ್ಲಿ ಆನಂದವು ಅನುಭವಕ್ಕೆ ಬರುತ್ತದೆ ಎಂದು ಕೆಲವರು ವಾದಿಗಳು ಹೇಳುತ್ತಿದ್ದರು. ಆದರೆ ಪರಮಮುಕ್ತಿಯಲ್ಲಿ ಯಾವ ಶರೀರವಾಗಲಿ ಕರಣವಾಗಲಿ ಇರುವದಿಲ್ಲವೆಂದು ಎಲ್ಲಾ ವಾದಿಗಳೂ ಒಪ್ಪಿರುತ್ತಾರಾದ್ದರಿಂದ ಆಗ ಆನಂದವನ್ನು ಅನುಭವಿಸುತ್ತಾನೆಂಬ ಮಾತಿಗೆ ಅರ್ಥವಿಲ್ಲ. ಆತ್ಮನು ಯಾವಾಗಲೂ ಆನಂದರೂಪನೇ ಆಗಿರುವದರಿಂದ ತನ್ನನ್ನು ತಾನು ಅನುಭವಿಸುವದಕ್ಕೆ ಬೇರೆಯಾಗಿ ನಿಲ್ಲುವಂತಿಲ್ಲ. 'ಎಲ್ಲಿ ದ್ವಿತೀಯವಸ್ತು ಕಾಣುವದಿಲ್ಲವೋ ಅದು ಭೂಮವು' (ಛಾಂ.೭-೨೪-೧)-ಎಂದು ಬ್ರಹ್ಮವನ್ನು ತಿಳಿಸುವ ಶ್ರುತಿವಾಕ್ಯವು ಬ್ರಹ್ಮದಲ್ಲಿ ವಿಜ್ಞಾನ, ಆನಂದ-ಎಂಬ ಎರಡು ವಿಶೇಷಗಳನ್ನು ಒಪ್ಪುವವರಿಗೆ ವಿರುದ್ಧವಾಗಿರುತ್ತದೆ. ವಿಜ್ಞಾನಾನಂದಗಳು ಪರಸ್ಪರಪರಿಚ್ಛಿನ್ನವೆಂದರೆ ಆನಂದವು ವಿಜ್ಞಾನರೂಪವಾದ ಬ್ರಹ್ಮಕ್ಕಿಂತ ಬೇರೆಯೆಂದೂ ಅದು ನಿಜವಾದ ಸ್ವರೂಪಾನಂದವಲ್ಲವೆಂದೂ ಹೇಳಿದಂತಾಗುವದು. ಆದ್ದರಿಂದ 'ವಿಜ್ಞಾನಮಾನನ್ದಂ ಬ್ರಹ್ಮ' ಎಂಬ ಶ್ರುತಿಯು ತಾನು ಅನುಭವಿಸುವ ತನಗಿಂತ ಬೇರೆಯಾದ ಆನಂದವನ್ನು ಹೇಳುವದಿಲ್ಲ- ಎಂದು ಆಚಾರ್ಯರು ಸಂವೇದ್ಯಾನಂದವಾದವನ್ನು ಖಂಡಿಸಿರುತ್ತಾರೆ. **ಆತ್ಮನು ಅಹಂಪ್ರತ್ಯಯ ವಿಷಯನೆಂದು ತಿಳಿಯುವ ಮಿಥ್ಯಾಜ್ಞಾನವೇ ಬ್ರಹ್ಮಾನಂದವು ಅನುಭವಗೋಚರವೆಂಬ ವಾದಕ್ಕೆ ಹೊಣೆ** ಎಂದು ಅರಿಯಬೇಕು.

ಇಲ್ಲಿ ಬೃಹದಾರಣ್ಯಕ ೩-೯-೨೮ರ ಉಪಸಂಹಾರಭಾಷ್ಯವನ್ನೂ ಛಾಂದೋಗ್ಯ ೭-೨೪-೧ರ ಭಾಷ್ಯವನ್ನೂ ಪೂರ್ಣವಾಗಿ ನೋಡಬೇಕು.

(೧) ತಸ್ಮಾತ್ 'ವಿಜ್ಞಾನಮಾನನ್ದಮ್' ಇತಿ ಸ್ವರೂಪಾನ್ವಾಖ್ಯಾಪನಪರೈವ ಶ್ರುತಿಃ, ನಾತ್ಮಾನನ್ದಸಂವೇದ್ಯತ್ವಾರ್ಥಾ॥

-ಬೃ. ಭಾ. ೩-೯-೨೮ನೆಯ ಮಂತ್ರವಾದ ಬಳಿಕ ೭ನೆಯ ಶ್ಲೋಕ-೧೩೮

(೨) ಯೋ ವೈ ಭೂಮಾ, ಮಹತ್, ನಿರತಿಶಯಮ್ ಇತಿ ಪರ್ಯಾಯಾಃ। ತತ್ ಸುಖಮ್। ತತೋಽರ್ವಾಕ್ ಸಾತಿಶಯತ್ವಾತ್ ಅಲ್ಪಮ್। ಅತಃ ತಸ್ಮಿನ್ ಅಲ್ಪೇ ಸುಖಂ ನಾಸ್ತಿ॥

-ಛಾಂ ೭-೨೩-೧-೫೯೩.

(೩) ಅಥ ಅನ್ಯದರ್ಶನವಿಶೇಷಪ್ರತಿಷೇಧೇನ ಆತ್ಮಾನಂ ಪಶ್ಯತಿ ಇತ್ಯುಚ್ಯತೇ, ತದಾ ಏಕಸ್ಮಿನ್ನೇವ ಕ್ರಿಯಾಕಾರಕಫಲಭೇದಃ ಅಭ್ಯುಪಗತೋ ಭವೇತ್। ಯದ್ಯೇವಂ ಕೋ ದೋಷಃ ಸ್ಯಾತ್? ನನು ಅಯಮೇವ ದೋಷಃ ಸಂಸಾರಾನಿವೃತ್ತಿಃ।ಕ್ರಿಯಾಕಾರಕಫಲಭೇದೋ ಹಿ ಸಂಸಾರಃ ಇತಿ॥ -ಛಾಂ ಭಾ. ೭-೨೪-೧-೫೫೫

೧೨೯. ಆನಂದವು ಅನುಭವಿಸುವದಲ್ಲವಾದರೆ ಅದನ್ನು ಸುಖ, ಆನಂದ- ಎಂದು ಕರೆಯುವದು ಸರಿಯಲ್ಲ ಎಂದು ಕೆಲವರಿಗೆ ತೋರಬಹುದು. ಆದರೆ ಸುಖವು ಅನುಭವಕ್ಕೆ ವಿಷಯವಾಗಿರಬೇಕೆಂಬ ನಿಯಮವೇನೂ ಇಲ್ಲ. ಹಾಗೆ ನಿಯಮವಿದ್ದರೆ ಭೋಗಸಾಮಗ್ರಿಗಳಿಲ್ಲದವರಿಗೆ ಸುಖವೇ ಆಗಬಾರದಾಗುತ್ತದೆ. ಲೋಕದಲ್ಲಿ ಹಾಗೆ ಕಂಡಿಲ್ಲ; ಸರ್ವಭೋಗಸಾಮಗ್ರಿಗಳನ್ನೂ ತಿರಸ್ಕರಿಸಿರುವ ಸಂನ್ಯಾಸಿಗಳಾದ ಜ್ಞಾನಿಗಳು ಸಕ್ಕರೆ, ಜೇನುತುಪ್ಪ- ಮುಂತಾದವುಗಳನ್ನು ಸವಿದವರಂತೆ ಆನಂದದಿಂದಿರುವದು ಕಂಡುಬರುತ್ತದೆ. ಸುಷುಪ್ತಿಯಲ್ಲಿ ಯಾವ ವಿಷಯವಿಷಯಿಭಾವವೂ ಇಲ್ಲದಿದ್ದರೂ ಆನಂದವಿರುವದು ಎಲ್ಲರ ಅನುಭವದಲ್ಲಿಯೂ ಇದೆ. ಆ ಸುಖವು ಜೀವರಿಗೆ ಸಿಕ್ಕುವ ಪರಮಾನಂದವೆಂದೂ ಶ್ರುತಿಯು ಸಾರುತ್ತಿದೆ. ಆದ್ದರಿಂದ ಮನಸ್ಸು ವಿಷಯವಿಷಯಿ ಗಳಾಗಿ ಪರಿಣಮಿಸುವ ಆಯಾಸವಿಲ್ಲದೆ ತೋರುತ್ತಿರುವ ಆತ್ಮಸ್ವರೂಪವನ್ನು ಆನಂದ ವೆಂದು ಕರೆಯುವದು ತಪ್ಪಲ್ಲ. ಸುಷುಪ್ತಿಯಲ್ಲಿ ತೋರುವ ಸುಖವು ಆತ್ಮನದೇ ಎಂದು ಶ್ರುತಿಯಲ್ಲಿ ಹೇಳಿಯೂ ಇದೆ. ಅನುಭವಿಸುವ ಸುಖವೆಂಬುದು ವಿಷಯೇಂದ್ರಿಯ ಸಂಪರ್ಕದಿಂದಾಗಿ ತನಗಿಂತ ಬೇರೆಯಾಗಿ ಕಾಣುವ ಸುಖಾಭಾಸವೃತ್ತಿ ಎಂದು (೧೨೭) ಆಗಲೆ ಹೇಳಿರುತ್ತೇವೆ.

(೧) ಬಾಹ್ಯಾನನ್ದಸಾಧನರಹಿತಾ ಅಪಿ ಅನೀಹಾಃ ನಿರೇಷಣಾ ಬ್ರಾಹ್ಮಣಾಃ ಬಾಹ್ಯರಸಲಾಭಾದಿವ ಸಾನನ್ದಾ ದೃಶ್ಯನ್ತೇ ವಿದ್ವಾಂಸಃ। ನೂನಂ ಬ್ರಹ್ಮೈವ ರಸನ್ತೇಷಾಮ್। ತಸ್ಮಾತ್ ಅಸ್ತಿ ತೇಷಾಮ್ ಆನನ್ದಕಾರಣಂ ರಸವದ್ ಬ್ರಹ್ಮ॥ -ತೈ.ಭಾ. ೨-೭-೧೮೬.

(೨) ಮನಸೋ ವಿಷಯವಿಷಯ್ಯಾಕಾರಸ್ಪನ್ದನಾಯಾಸದುಃಖಾಭಾವಾತ್ ಆನನ್ದಮಯಃ ಆನನ್ದಪ್ರಾಯಃ ನಾನನ್ದ ಏವ। ಅನಾತ್ಯನ್ತಿಕತ್ವಾತ್। ಯಥಾ ಲೋಕೇ ನಿರಾಯಾಸಸ್ಥಿತಃ ಸುಖೀ ಆನನ್ದಭುಕ್ ಉಚ್ಯತೇ। ಅತ್ಯನ್ತಾನಾಯಾಸರೂಪಾ ಹಿ ಇಯಂ ಸ್ಥಿತಿಃ ಅನೇನ ಅನುಭೂಯತೇ ಇತಿ ಆನನ್ದಭುಕ್। ''ಏಷೋಽಸ್ಯ ಪರಮ ಆನನ್ದಃ'' (ಬೃ.೪-೩-೩೨) ಇತಿ ಶ್ರುತೇಃ॥

-ಮಾಂ - ಭಾ. ೫-೧೬

(೩) ಯಾನಿ ಅನ್ಯಾನಿ ವಿಷಯೇನ್ದ್ರಿಯಸಂಬನ್ಧ ಜನಿತಾನಿ ಆನನ್ದಜಾತಾನಿ ತಾನಿ ಅಪೇಕ್ಷ್ಯ ಏಷೋಽಸ್ಯ ಪರಮ ಆನನ್ದಃ। ನಿತ್ಯತ್ವಾತ್। ''ಯೋ ವೈ ಭೂಮಾ ತತ್ಸುಖಮ್'' ಇತಿ ಶ್ರುತ್ಯನ್ತರಾತ್। ಯತ್ರ ಅನ್ಯತ್ ಪಶ್ಯತ್ಯನ್ಯದ್ ವಿಜಾನಾತಿ ತದಲ್ಪಂ ಮರ್ತ್ಯಮ್ ಅಮುಖ್ಯಂ ಸುಖಮ್। ಇದಂ ತು ತದ್ವಿಪರೀತಮ್। ಅತ ಏವ ಏಷೋಽಸ್ಯ ಪರಮ ಆನನ್ದಃ । ಏತಸ್ಯೈವ ಆನನ್ದಸ್ಯ ಮಾತ್ರಾಂ ಕಲಾಮ್। ಅವಿದ್ಯಾಪ್ರತ್ಯುಪಸ್ಥಾಪಿತಾಂ ವಿಷಯೇನ್ದ್ರಿಯಸಂಬನ್ಧ- ಕಾಲವಿಭಾವ್ಯಾಮ್, ಅನ್ಯಾನಿ

ಭೂತಾನಿ ಉಪಜೀವನ್ತಿ। ಕಾನಿ ತಾನಿ? ತತ ಏವ ಆನನ್ದಾತ್ ಅವಿದ್ಯಯಾ ಪ್ರವಿಭಜ್ಯಮಾನಸ್ವರೂಪಾಣಿ ಅನ್ಯತ್ವೇನ। ತಾನಿ ಬ್ರಹ್ಮಣಃ ಪರಿಕಲ್ಪ್ಯಮಾನಾನಿ ಅನ್ಯಾನಿ ಸನ್ತಿ ಉಪಜೀವನ್ತಿ ಭೂತಾನಿ ವಿಷಯೇನ್ದ್ರಿಯಸಂಪರ್ಕದ್ವಾರೇಣ ವಿಭಾವ್ಯಮಾನಾಮ್॥

-ಬೃ.ಭಾ. ೪-೩-೩೨-೨೩೩.

(೪) ಯದಪಿ ತಸ್ಯಾಮ್ ಅವಸ್ಥಾಯಾಂ ಸುಖಮುಕ್ತಮ್, ತದಪಿ ಆತ್ಮನ ಏವ ಸುಖಸ್ವರೂಪತ್ವವಿವಕ್ಷಯಾ ಉಕ್ತಮ್॥ -ಸೂ.ಭಾ. ೧-೩-೯-೨೪೧.

೧೩೦. ಈ ಪ್ರಕರಣದಲ್ಲಿ ಹೇಳಿರುವದರ ಸಾರವೆಲ್ಲ ಇಷ್ಟು: **ಸತ್ತಾ ಸಾಮಾನ್ಯ, ಚಿತ್ಸಾಮಾನ್ಯ, ಸುಖಸಾಮಾನ್ಯ- ಎಂದು ಲೋಕದಲ್ಲಿ ನಮಗೆ ಕಾಣುವದೆಲ್ಲ ಆತ್ಮನ ಸ್ವರೂಪವೇ. ಸದ್ವಿಶೇಷಗಳು ಚಿದ್ವಿಶೇಷಗಳು, ಸುಖವಿಶೇಷಗಳು-ಎಂದು ಕಾಣುವದು ಆಯಾ ಬುದ್ಧಿವೃತ್ತಿಯ ಸಂಬಂಧದಿಂದ.** ನಿಜವಾಗಿ ನೋಡಿದರೆ ವಿಶೇಷಗಳೆಂಬವು ಇಲ್ಲವೇ ಇಲ್ಲ. ಆದ್ದರಿಂದ ಆತ್ಮನು ಸಚ್ಚಿದಾನಂದಸ್ವರೂಪನೇ, ಅವನು ನಿರ್ವಿಶೇಷನೇ ಹೊರತು ಪರಮಾರ್ಥವಾಗಿ ಸಾಮಾನ್ಯರೂಪನಲ್ಲ.

# ೧೮. ಜೀವೇಶ್ವರವಿಭಾಗ

೧೩೧. ಆತ್ಮೈಕತ್ವವನ್ನು ತಿಳಿಸುವದಕ್ಕೇ ಬಂದಿರುವ ಶ್ರುತಿಗಳಲ್ಲಿ ಜೀವ ಸ್ವರೂಪವನ್ನು ಹೇಳಿರುವದೇತಕ್ಕೆ? ವೇದಾಂತವಾಕ್ಯಗಳ ತಾತ್ಪರ್ಯವನ್ನು ನಿರ್ಣಯಿಸು ವದಕ್ಕಾಗಿ ಬರೆದಿರುವ ಶಾರೀರಕಮೀಮಾಂಸಾಸೂತ್ರದಲ್ಲಿ ಬಾದರಾಯಣರು ಆಗಿಂದಾಗ್ಗೆ 'ಈ ವಾಕ್ಯದಲ್ಲಿ ಈಶ್ವರನು ವಿವಕ್ಷಿತನಾಗಿರುತ್ತಾನೆ, ಅವನಿಗಿಂತ ಬೇರೆಯವ ನಾದ ಜೀವನು ವಿವಕ್ಷಿತನಲ್ಲ' -ಎಂದು ತಿಳಿಸುತ್ತಾರೆ. ಇಬ್ಬರು ಆತ್ಮರೇ ಇಲ್ಲದಿರುವಾಗ ಈ ವಿಭಾಗವನ್ನೇಕೆ ಅವರು ಮಾಡಿಕೊಂಡಿದ್ದಾರೆ? -ಎಂಬ ಶಂಕೆಯು ಜನರನ್ನು ಆಗಾಗ್ಗೆ ಪೀಡಿಸುತ್ತಿರುವದುಂಟು.

ಆತ್ಮನು ಏಕನೂ ಅದ್ವಿತೀಯನೂ ಆಗಿದ್ದರೂ ಅವನಲ್ಲಿ ಜೀವೇಶ್ವರ ವಿಭಾಗವನ್ನು ಕಲ್ಪಿಸಿರುವದು ಏಕೆಂದರೆ ಲೋಕಸಿದ್ಧನಾದ ಜೀವನನ್ನು ಅನುವಾದ ಮಾಡಿಕೊಂಡು ಜೀವನ ಪರಮಾರ್ಥಸ್ವರೂಪವಾದ ಈಶ್ವರನನ್ನು ತಿಳಿಸುವದಕ್ಕೆ. ಜೀವನು ಲೋಕಪ್ರಸಿದ್ಧನಾಗಿರುವದರಿಂದ ಅವನನ್ನು ಶ್ರುತಿಯು ತಾತ್ಪರ್ಯದಿಂದ ತಿಳಿಸುವದಿಲ್ಲ; ಈಶ್ವರನನ್ನು ಪ್ರತಿಪಾದಿಸುವದಕ್ಕಾಗಿ ಜೀವಸ್ವರೂಪವನ್ನು ಅನುವಾದ ಮಾಡಿಕೊಂಡಿರುತ್ತದೆ. ಸೂತ್ರಕಾರರು ಜೀವನನ್ನು ಪರಮಾತ್ಮನಿಗಿಂತ ವಿಲಕ್ಷಣ ಸ್ವಭಾವದವನೆಂದು ತಿಳಿಸುವದಕ್ಕಾಗಿ ಅವನನ್ನು 'ಇತರ' (ಮತ್ತೊಬ್ಬನು) ಎಂಬ ಹೆಸರಿ ನಿಂದ ಕರೆದಿರುತ್ತಾರೆ. ಆದರೆ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಪರಮಾತ್ಮನಲ್ಲಿ

ಅವನ ಸ್ವರೂಪಕ್ಕಿಂತ ವಿಪರೀತವಾದ ಜೀವಸ್ವರೂಪವು ಆಕಾಶದಲ್ಲಿ ತಲಮಲಿನತ್ವವೇ ಮುಂತಾದದ್ದರಂತೆ ಕಲ್ಪಿತವಾಗಿರುತ್ತದೆ. ಈ ಸ್ವರೂಪಕ್ಕಿಂತ ಪರಮಾತ್ಮನು ಬೇರೆ ಎಂದು ತಿಳಿಸುವದಕ್ಕಾಗಿ ಜೀವನಲ್ಲ ಎಂದು ಅಲ್ಲಗಳೆದಿರುತ್ತಾರೆ; ಪರಮಾತ್ಮನು ಜೀವನಿಗಿಂತ 'ಅಧಿಕ' (ಹೆಚ್ಚಿನ ಸ್ವರೂಪದವನು) ಎಂದೂ ಹೇಳಿರುತ್ತಾರೆ. ಜೀವನು ಪರಮಾತ್ಮನಿಗಿಂತ ಬೇರೆಯಾಗಿ ಇರುತ್ತಾನೆಂದು ಶ್ರುತಿಯಲ್ಲಾಗಲಿ ಸೂತ್ರಗಳಲ್ಲಾಗಲಿ ಎಲ್ಲಿಯೂ ಹೇಳಿರುವದಿಲ್ಲ. ಶಾರೀರ, ಪ್ರಾಣಭೃತ್, ಪ್ರಾಣೀ, ಜನ್ತುಃ, ವಿಜ್ಞಾನಾತ್ಮಾ, ಕರ್ತಾ, ಭೋಕ್ತಾ, ಕ್ಷೇತ್ರಜ್ಞಃ, ಜ್ಞಃ- ಇವೆಲ್ಲ ಜೀವನ ಪರ್ಯಾಯವಾಚಕಗಳು.

(೧) ಕ್ಷೇತ್ರಜ್ಞೋ ಹಿ ಕರ್ತೃತ್ವೇನ ಭೋಕ್ತೃತ್ವೇನ ಚ ಪ್ರತಿಶರೀರಂ ಬುದ್ಧ್ಯಾದ್ಯುಪಾಧಿಸಂಬದ್ಧೋ ಲೋಕತ ಏವ ಪ್ರಸಿದ್ಧಃ, ನಾಸೌ ಶ್ರುತ್ಯಾ ತಾತ್ಪರ್ಯೇಣ ವಿವಕ್ಷ್ಯತೇ। ಈಶ್ವರಸ್ತು ಲೋಕತೋಽಪ್ರಸಿದ್ಧತ್ವಾತ್ ಶ್ರುತ್ಯಾ ತಾತ್ಪರ್ಯೇಣ ವಿವಕ್ಷ್ಯತೇ॥

-ಸೂ. ಭಾ. ೧-೩-೭-೨೩೧.

(೨) ನಿತ್ಯಶುದ್ಧಬುದ್ಧಮುಕ್ತಸ್ವಭಾವೇ ಕೂಟಸ್ಥನಿತ್ಯೇ ಏಕಸ್ಮಿನ್ ಅಸಙ್ಗೇ ಪರಮಾತ್ಮನಿ ತದ್ವಿಪರೀತಂ ಜೈವಂ ರೂಪಂ ವ್ಯೋಮ್ನೀವ ತಲಮಲಾದಿ ಪರಿಕಲ್ಪಿತಮ್। ತತ್ ಆತ್ಮೈಕತ್ವಪ್ರತಿಪಾದನಪರೈರ್ವಾಕ್ಯೈಃ ನ್ಯಾಯೋಪೇತೈಃ ದ್ವೈತವಾದಪ್ರತಿಷೇಧೈಶ್ಚ ಅಪನೇಷ್ಯಾಮಿ ಇತಿ ಪರಮಾತ್ಮನಃ ಜೀವಾತ್ ಅನ್ಯತ್ವಂ ದ್ರಢಯತಿ। ಜೀವಸ್ಯ ತು ನ ಪರಸ್ಮಾತ್ ಅನ್ಯತ್ವಂ ಪ್ರತಿಪಿಪಾದಯಿಷತಿ, ಕಿಂ ತು ಅನುವದತ್ಯೇವ ಅವಿದ್ಯಾಕಲ್ಪಿತಂ ಲೋಕಪ್ರಸಿದ್ಧಂ ಜೀವಭೇದಮ್ ।

ಸೂ. ಭಾ. ೧-೩-೧೯-೨೬೯.

೧೩೨. ಶ್ರುತಿಗೆ ಆತ್ಮೈಕತ್ವದಲ್ಲಿ ತಾತ್ಪರ್ಯವಿದೆ ಎಂಬುದಕ್ಕೆ ಗಮಕವೇನು? ಜೀವರು ಪರಮಾತ್ಮನಿಂದ ಹುಟ್ಟುತ್ತಾರೆಂದೇ ಶ್ರುತಿಯಲ್ಲಿ ಹೇಳಿದೆಯಲ್ಲ! ಸೂತ್ರಕಾರರಿಗಾದರೂ ಜೀವರು ಪರಮಾತ್ಮನಿಗಿಂತ ಬೇರೆಯಿಲ್ಲ ಎಂಬುದರಲ್ಲಿ ತಾತ್ಪರ್ಯವಿದೆ ಎಂಬುದಕ್ಕೆ ಗಮಕವೇನು? -ಎಂದು ಯಾರಾದರೂ ಕೇಳಬಹುದು. ಶ್ರುತಿಯಲ್ಲಿ ಜೀವರ ಉತ್ಪತ್ತಿಯನ್ನು ಹೇಳಿರುವದು ಗೌಣವೆಂದು ಹಿಂದೆ (೧೧೯) ತಿಳಿಸಿದ್ದಾಗಿದೆ. ಶ್ರುತಿಯಲ್ಲಿ ಜೀವಪರಮೇಶ್ವರರ ಭೇದವನ್ನು ನಂಬುವದು ಸರಿಯಲ್ಲವೆಂದು ನಿಂದಿಸಿರುತ್ತದೆ, ಆತ್ಮೈಕತ್ವವನ್ನು ಹೊಗಳಿರುತ್ತದೆ; ಭೇದಜ್ಞಾನದಿಂದ ಸಂಸಾರವೂ ಅಭೇದಜ್ಞಾನದಿಂದ ಮೋಕ್ಷವೂ ಆಗುವವೆಂದು ಹೇಳಿರುತ್ತದೆ. ಸೂತ್ರಕಾರರು ''ವಾಮದೇವನಂತೆ ಶಾಸ್ತ್ರದೃಷ್ಟಿಯಿಂದ ಇಂದ್ರನು ತನ್ನನ್ನು ಪರಮಾತ್ಮನೆಂದು ಕೊಂಡಿರುತ್ತಾನೆ'' ಎಂದು (೧-೧-೩೦ರಲ್ಲಿ) ಜೀವೇಶ್ವರೈಕ್ಯವನ್ನು ಒಪ್ಪಿರುತ್ತಾರೆ; ''ಪರಮಾತ್ಮನನ್ನು ನನ್ನ ಆತ್ಮನೇ ಎಂದು ತಿಳಿಯಬೇಕು'' ಎಂದು (೪-೧-೩) ಸ್ಪಷ್ಟವಾಗಿ ಹೇಳಿರುತ್ತಾರೆ. ಆದ್ದರಿಂದ ಶ್ರುತಿಸೂತ್ರಗಳಿಗೆ ಭೇದವು ಸಮ್ಮತವಲ್ಲ. ಐಕ್ಯದಲ್ಲಿಯೇ ತಾತ್ಪರ್ಯವಿದೆ ಎಂದು ನಿಶ್ಚಯವಾಗುತ್ತದೆ.

(೧) ಜೀವಾತ್ಮನೋರನನ್ಯತ್ವಮಭೇದೇನ ಪ್ರಶಸ್ಯತೇ।
ನಾನಾತ್ವಂ ನಿನ್ದ್ಯತೇ ಯಚ್ಚ ತದೇವಂ ಹಿ ಸಮಞ್ಜಸಮ್॥ - ಮಾಂ.ಕಾ.೩-೧೩

ಯದ್ಯುಕ್ತಿತಃ ಶ್ರುತಿತಶ್ಚ ನಿರ್ಧಾರಿತಂ ಜೀವಸ್ಯ ಪರಸ್ಯ ಚ ಆತ್ಮನಃ ಜೀವಾತ್ಮನೋಃ ಅನನ್ಯತ್ವಮ್ ಅಭೇದೇನ ಪ್ರಶಸ್ಯತೇ ಸ್ತೂಯತೇ ಶಾಸ್ತ್ರೇಣ ವ್ಯಾಸಾದಿಭಿಶ್ಚ। ಯಚ್ಚ ಸರ್ವಪ್ರಾಣಿಸಾಧಾರಣಂ ಸ್ವಾಭಾವಿಕಂ ಶಾಸ್ತ್ರಬಹಿಷ್ಕೃತೈಃ ಕುತಾರ್ಕಿಕೈರ್ವಿರಚಿತಂ ನಾನಾತ್ವದರ್ಶನಂ ನಿನ್ದ್ಯತೇ "ನ ತು ತದ್ ದ್ವಿತೀಯಮಸ್ತಿ," ದ್ವಿತೀಯಾದ್ವೈ ಭಯಂ ಭವತಿ , "ಉದರಮನ್ತರಂ ಕುರುತೇ, ಅಥ ತಸ್ಯ ಭಯಂ ಭವತಿ", "ಇದಂ ಸರ್ವಂ ಯದಯಮಾತ್ಮಾ" "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ", ಇತ್ಯಾದಿವಾಕ್ಯೈಃ ಅನ್ಯೈಶ್ಚ ಬ್ರಹ್ಮವಿದ್ಭಿಃ, ಯಚ್ಚೈತತ್ ತದೇವಂ ಹಿ ಸಮಞ್ಜಸಮ್ ಋಜ್ವವಬೋಧಂ ನ್ಯಾಯ್ಯಮ್ ಇತ್ಯರ್ಥಃ॥ -ಮಾಂ.ಕಾ.ಭಾ. ೩-೧೩-೧೫೧

(೨) ಆಚಾರ್ಯೋ ಬ್ರೂಯಾತ್-ನೈವಂ ಸೋಮ್ಯ, ಪ್ರತಿಪತ್ತುಮರ್ಹಸಿ। ಪ್ರತಿಷಿದ್ಧತ್ವಾತ್ ಭೇದಪ್ರತಿಪತ್ತೇಃ। ಕಥಂ ಪ್ರತಿಷಿದ್ಧಾ ಭೇದಪ್ರತಿಪತ್ತಿರಿತಿ ?ಅತ ಆಹ "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ", "ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮ ವೇದ", "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ಇತ್ಯೇವಮಾದ್ಯಾಃ। ಏತಾ ಏವ ಶ್ರುತಯೋ ಭೇದಪ್ರತಿಪತ್ತೇಃ ಸಂಸಾರಗಮನಂ ದರ್ಶಯನ್ತಿ। ಅಭೇದಪ್ರತಿಪತ್ತೇಶ್ಚ ಮೋಕ್ಷಂ ದರ್ಶಯನ್ತಿ ಸಹಸ್ರಶಃ। " ಸ ಆತ್ಮಾ ತತ್ತ್ವಮಸಿ" ಇತಿ ಪರಮಾತ್ಮಭಾವಂ ವಿಧಾಯ "ಆಚಾರ್ಯವಾನ್ ಪುರುಷೋ ವೇದ" ಇತ್ಯುಕ್ತ್ವಾ "ತಸ್ಯ ತಾವದೇವ ಚಿರಮ್" ಇತಿ ಮೋಕ್ಷಂ ದರ್ಶಯನ್ತಿ ಅಭೇದವಿಜ್ಞಾನಾದೇವ॥ -ಉಪ. ಗದ್ಯ.೧೯,೨೦

(೩) ಪ್ರತಿಪಾದ್ಯಂ ತು ಶಾಸ್ತ್ರಾರ್ಥಮ್ ಆತ್ಮೈಕತ್ವಮೇವ ದರ್ಶಯತಿ- "ಶಾಸ್ತ್ರದೃಷ್ಟ್ಯಾ-ತೂಪದೇಶೋ ವಾಮದೇವವತ್" (೧-೧-೩೦) ಇತ್ಯಾದಿನಾ॥ -ಸೂ.ಭಾ. ೧-೩-೧೯-೨೬

(೪) ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ। ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ॥ -ಬೃ.೧-೪-೧೦

(೫) ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್॥ -ಸೂ.೧-೧-೩೦

ಇನ್ದ್ರೋ ನಾಮ ದೇವತಾತ್ಮಾ ಸ್ವಮಾತ್ಮಾನಂ ಪರಮಾತ್ಮತ್ವೇನ ಅಹಮೇವ ಪರಂ ಬ್ರಹ್ಮ ಇತಿ ಆರ್ಷೇಣ ದರ್ಶನೇನ ಯಥಾಶಾಸ್ತ್ರಂ ಪಶ್ಯನ್ ಉಪದಿಶತಿ ಸ್ಮ "ಮಾಮೇವ ವಿಜಾನೀಹಿ" ಇತಿ। ಯಥಾ "ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚ" (ಬೃ.೧-೪-೧೦) ಇತಿ, ತದ್ವತ್॥ -ಸೂ.ಭಾ. ೧-೧-೩೦-೧೪೦

(೬) ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ॥ -ಸೂ.೪-೧-೩

ಆತ್ಮೇತ್ಯೇವ ಪರಮೇಶ್ವರಃ ಪ್ರತಿಪತ್ತವ್ಯಃ। ತಥಾ ಹಿ ಪರಮೇಶ್ವರಪ್ರಕ್ರಿಯಾಯಾಂ ಜಾಬಾಲಾ ಆತ್ಮತ್ವೇನೈವ ಏತಮ್ ಉಪಗಚ್ಛನ್ತಿ "ತ್ವಂ ವಾ ಅಹಮಸ್ಮಿ ಭಗವೋ ದೇವತೇಽಹಂ ವೈ ತ್ವಮಸಿ ಭಗವೋ ದೇವತೇ" ಇತಿ। ತಥಾ ಅನ್ಯೇಽಪಿ "ಅಹಂ ಬ್ರಹ್ಮಾಸ್ಮಿ" ಇತ್ಯೇವಮಾದಯಃ

ಆತ್ಮತ್ವೋಪಗಮಾಃ ದ್ರಷ್ಟವ್ಯಾಃ। ಗ್ರಾಹಯನ್ತಿ ಚ ಆತ್ಮತ್ವೇನೈವ ಈಶ್ವರಂ ವೇದಾನ್ತವಾಕ್ಯಾನಿ ''ಏಷ ತ ಆತ್ಮಾ ಸರ್ವಾನ್ತರಃ'' (ಬೃ. ೩-೪-೧), ''ಏಷ ತ ಆತ್ಮಾನ್ತರ್ಯಾಮ್ಯಮೃತಃ'' (ಬೃ. ೩-೭-೩), ''ತತ್ಸತ್ಯಂ ಸ ಆತ್ಮಾ ತತ್ತ್ವಮಸಿ'' (ಛಾಂ. ೬-೮-೭) ಇತ್ಯೇವಮಾದೀನಿ॥

-ಸೂ. ಭಾ. ೪-೧-೩-೫೧೦.

೧೩೩. ಜೀವಾತ್ಮರು ಬೆಂಕಿಯಿಂದ ಕಿಡಿಗಳು ಸಿಡಿದುಬರುವಂತೆ ಪರಮಾತ್ಮನಿಂದ ಬಂದಿರುತ್ತಾರೆಂದು ಶ್ರುತಿಯಲ್ಲಿದೆ. ಅವರು ಪರಮಾತ್ಮನ ಅಂಶವೆಂದು ಭಗವದ್ಗೀತೆಯಲ್ಲಿದೆ. ಶ್ರುತಿಯಲ್ಲಿಯೂ ಇದೆ. ಜೀವರು ಅನೇಕರಾಗಿ ತಾರತಮ್ಯಯುಕ್ತರಾಗಿರುವದರಿಂದ ಚೇತನರಾದ ಜೀವರು ಪರಮಾತ್ಮನ ಅಂಶರೆಂಬುದು ಯುಕ್ತಿಗೂ ಹೊಂದುತ್ತದೆ. ಹೀಗಿರುವಲ್ಲಿ ಜೀವನು ಪರಮಾತ್ಮನೇ ಎಂದು ನಂಬುವದು ಹೇಗೆ?

ಶಾಸ್ತ್ರವು ಜ್ಞಾಪಕವೇ ಹೊರತು ಕಾರಕವಲ್ಲ; ಅದು ಇದ್ದದ್ದನ್ನು ತಿಳಿಸುತ್ತದೆ. ಇಲ್ಲದ್ದನ್ನುಂಟುಮಾಡುವದಿಲ್ಲ. ಕಿಡಿಗಳಂತೆ ಜೀವರು ಪರಮಾತ್ಮನಿಂದ ಕಿತ್ತುಕೊಂಡು ಬರುತ್ತಾರೆಂದು ಹೇಳಿದರೆ ಪರಮಾತ್ಮನಲ್ಲಿ ವಿಕಾರವುಂಟೆಂದು ಒಪ್ಪಿದಂತೆ ಆಗುತ್ತದೆ. ಅಂಶರಾದ ಜೀವರಿಗೆ ಸಂಸಾರವುಂಟಾದ್ದರಿಂದ ಸರ್ವಗತನಾದ ಪರಮಾತ್ಮನಿಗೂ ಜೀವರ ಸಂಸಾರದುಃಖವು ಆಗುವದೆಂದು ಹೇಳಬೇಕಾಗುವದು. ಆದ್ದರಿಂದ ಅಂಶವೆಂದರೆ ಪರಮಾತ್ಮನ ಅವಯವಭಾಗವೆಂದರ್ಥವಲ್ಲ. ಬೆಂಕಿಯಿಂದ ಬಂದ ಕಿಡಿಗಳು ಬೆಂಕಿಯ ಸ್ವಭಾವದವೇ ಆಗಿರುವಂತೆ ಅದೇ ಸ್ವರೂಪದವರು ಎಂದು ದೃಷ್ಟಾಂತದ ಅಭಿಪ್ರಾಯ. ಆದ್ದರಿಂದಲೇ ಜಲಸೂರ್ಯಕವೇ ಮುಂತಾದ ಪ್ರತಿಬಿಂಬ ದೃಷ್ಟಾಂತಗಳನ್ನು ಶಾಸ್ತ್ರದಲ್ಲಿ ಕೊಟ್ಟಿರುತ್ತದೆ; ಸಂಪ್ರದಾಯವನ್ನು ಬಲ್ಲವರು ಜೀವನಿಗೆ ಘಟಾಕಾಶವೇ ಮುಂತಾದ ದೃಷ್ಟಾಂತಗಳನ್ನೂ ಕೊಟ್ಟಿರುತ್ತಾರೆ. ಸೂತ್ರಕಾರರು ಏಕತ್ವವನ್ನು ಹೇಳಿರುವದರಿಂದ ಅವರಿಗೂ ಜೀವನು ಪರಮಾತ್ಮನ ಅಂಶವೇ ಎಂಬುದರಲ್ಲಿ ತಾತ್ಪರ್ಯವಿರುವದಿಲ್ಲ. ಆದ್ದರಿಂದ ಜೀವನು ಪರಮಾತ್ಮನ ಅವಯವ, ವಿಕಾರ- ಎಂಬುದು ಎಂದಿಗೂ ಸರಿಯಲ್ಲ.

(೧) ಅಥ ನಿತ್ಯಾಯುತಸಿದ್ಧಾವಯವಾನುಗತೋಽವಯವೀ ಪರ ಆತ್ಮಾ। ತಸ್ಯ ತದವಸ್ಥಸ್ಯ, ಏಕದೇಶೋ ವಿಜ್ಞಾನಾತ್ಮಾ ಸಂಸಾರೀ। ತದಾಪಿ ಸರ್ವಾವಯವಾನುಗತತ್ವಾತ್ ಅವಯವಿನ ಏವ ಅವಯವಗತೋ ದೋಷೋ ಗುಣೋ ವಾ ಇತಿ ವಿಜ್ಞಾನಾತ್ಮನಃ ಸಂಸಾರಿತ್ವದೋಷೇಣ ಪರ ಏವ ಆತ್ಮಾ ಸಂಬಧ್ಯತೇ ಇತಿ ಇಯಮಪಿ ಅನಿಷ್ಟಾ ಕಲ್ಪನಾ। ಕ್ಷೀರವತ್ ಸರ್ವಪರಿಣಾಮಪಕ್ಷೇ ಸರ್ವಶ್ರುತಿಸ್ಮೃತಿಕೋಪಃ ಸ ಚಾನಿಷ್ಟಃ॥ -ಬೃ. ಭಾ. ೨-೧-೨೦-೩೧೪.

(೨) ಪರಸ್ಯ ಏಕದೇಶಃ ಅಗ್ನಿವಿಸ್ಫುಲಿಂಗವತ್ ಸ್ಫುಟಿತೋ ವಿಜ್ಞಾನಾತ್ಮಾ ಸಂಸರತಿ ಇತಿ ಚೇತ್। ತಥಾಪಿ ಪರಸ್ಯ ಅವಯವಸ್ಫುಟನೇನ ಕ್ಷತಪ್ರಾಪ್ತಿಃ। ತತ್ಸಂಸರಣೇ ಚ ಪರಮಾತ್ಮನಃ

ಪ್ರದೇಶಾನ್ತರಾವಯವವ್ಯೂಹೇ ಛಿದ್ರತಾಪ್ರಾಪ್ತಿಃ, ಅವ್ರಣತ್ವವಾಕ್ಯವಿರೋಧಶ್ಚ। ಆತ್ಮಾವಯವ ಭೂತಸ್ಯ ವಿಜ್ಞಾನಾತ್ಮನಃ ಸಂಸರಣೇ ಪರಮಾತ್ಮಶೂನ್ಯಪ್ರದೇಶಾಭಾವಾತ್ ಅವಯವಾನ್ತರ-ನೋದನ ವ್ಯೂಹನಾಭ್ಯಾಂ ಹೃದಯಶೂಲೇನೇವ ಪರಮಾತ್ಮನೋ ದುಃಖಿತ್ವಪ್ರಾಪ್ತಿಃ॥

-ಬೃ. ಭಾ. ೨-೧-೨೦-೩೧೫.

(೩) ಅಗ್ನಿವಿಸ್ಫುಲಿಙ್ಗಾದಿದೃಷ್ಟಾನ್ತಶ್ರುತೇರ್ನ ದೋಷಃ ಇತಿ ಚೇತ್। ನ । ಶ್ರುತೇರ್ಜ್ಞಾಪಕತ್ವಾತ್। ನ ಶಾಸ್ತ್ರಂ ಪದಾರ್ಥಾನ್ ಅನ್ಯಥಾ ಕರ್ತುಂ ಪ್ರವೃತ್ತಮ್। ಕಿಂ ತರ್ಹಿ ಯಥಾ ಭೂತಾನಾಮ್ ಅಜ್ಞಾತಾನಾಂ ಜ್ಞಾಪನೇ॥

-ಬೃ. ಭಾ. ೨-೧-೨೦-೩೧೫.

(೪) 'ಕ್ಷುದ್ರಾ ವಿಸ್ಫುಲಿಙ್ಗಾಃ', 'ಮಮೈವಾಂಶಃ' ಇತಿ ಚ ಶ್ರೂಯತೇ ಸ್ಮರ್ಯತೇ ಚ ಇತಿ ಚೇತ್। ನ । ಏಕತ್ವಪ್ರತ್ಯಯಾರ್ಥಪರತ್ವಾತ್। ಅಗ್ನೇರ್ಹಿ ವಿಸ್ಫುಲಿಙ್ಗಃ ಅಗ್ನಿರೇವ ಇತ್ಯೇಕತ್ವಪ್ರತ್ಯಯಾರ್ಹೋ ದೃಷ್ಟೋ ಲೋಕೇ। ತಥಾ ಚಾಂಶೋಽಂಶಿನಾ ಏಕತ್ವಪ್ರತ್ಯಯಾರ್ಹಃ। ತತ್ರ ಏವಂ ಸತಿ ವಿಜ್ಞಾನಾತ್ಮನಃ ಪರಮಾತ್ಮವಿಕಾರಾಂಶತ್ವವಾಚಕಾಃ ಶಬ್ದಾಃ ಪರಮಾತ್ಮೈಕತ್ವ ಪ್ರತ್ಯಯಾಧಿತ್ಸವಃ ॥

-ಬೃ. ಭಾ. ೨-೧-೨೦-೩೧೬.

(೫) ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ॥

-ಸೂ. ೨-೩-೪೩.

ಜೀವೋ ಈಶ್ವರಸ್ಯ ಅಂಶೋ ಭವಿತುಮರ್ಹತಿ। ಯಥಾ ಅಗ್ನೇರ್ವಿಸ್ಫುಲಿಙ್ಗಃ। ಅಂಶ ಇವಾಂಶಃ। ನ ಹಿ ನಿರವಯವಸ್ಯ ಮುಖ್ಯೋಽಂಶಃ ಸಂಭವತಿ॥ -ಸೂ. ಭಾ. ೨-೩-೪೩-೧೫೮.

(೬) ಆಭಾಸ ಏವ ಚೈಷ ಜೀವಃ ಪರಮಾತ್ಮನೋ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ॥

-ಸೂ. ಭಾ. ೨-೩-೫೦-೧೬೮.

೧೩೪. ಪರಮಾತ್ಮನು ಅದ್ವಿತೀಯನೇ ಆಗಿರುತ್ತಿದ್ದರೂ ಅವನಲ್ಲಿ ಜೀವೇಶ್ವರ ಭೇದವನ್ನು ಕಲ್ಪಿಸಿರುವದಕ್ಕೆ ಅವಿದ್ಯಾಕಲ್ಪಿತನಾಮರೂಪಗಳಿಂದಾಗಿರುವ ಕಾರ್ಯ ಕರಣಸಂಘಾತಗಳೆಂಬ ಉಪಾಧಿಗಳ ಸಂಬಂಧವೇ ಕಾರಣ. ಈಶ್ವರನು ಆಳುವವನು, ಜೀವನು ಆಳು-ಎಂಬ ಭೇದವ್ಯವಹಾರವೂ ಜೀವನು ಈಶ್ವರನನ್ನು ಉಪಾಸನೆಮಾಡಿ ಅಥವಾ ಅರಿತುಕೊಂಡು ಮುಕ್ತನಾಗುವನೆಂಬ ವ್ಯವಹಾರವೂ ಈ ಉಪಾಧಿಯಿಂದಲೇ. ಪರಮಾತ್ಮನಲ್ಲಿ ಈಶ್ವರತ್ವಕಲ್ಪನೆಯೂ ಈ ನಾಮರೂಪಗಳೆಂಬ ಉಪಾಧಿಯ ಸಂಬಂಧದಿಂದಲೇ. ಆಕಾಶವು ಒಂದೇ ಆದರೂ ಗಡಿಗೆ, ಕುಡಿಕೆ- ಮುಂತಾದ ಉಪಾಧಿಗಳ ಸಂಬಂಧದಿಂದ ಆಗುವ ಭೇದವನ್ನು ಈ ಜೀವೇಶ್ವರಭೇದಕ್ಕೆ ಹೋಲಿಸಬಹುದು. ಆತ್ಮೈಕತ್ವವನ್ನು ತಿಳಿದಾಗ ನಿರುಪಾಧಿಕವಾದ ಆತ್ಮಸ್ವರೂಪದಲ್ಲಿ ಯಾವ ಜೀವೇಶ್ವರವಿಭಾಗವೂ ಇರುವದಿಲ್ಲ. ಶ್ರುತಿಸ್ಮೃತಿಗಳಲ್ಲಿ ಜೀವೇಶ್ವರ ವಿಭಾಗವನ್ನು ಒಂದು ಕಡೆ ಒಪ್ಪಿರುವದು, ಇನ್ನೊಂದು ಕಡೆ ಅಲ್ಲಗಳೆದಿರುವದು- ಇವೆರಡಕ್ಕೂ ಅವಿರೋಧವನ್ನು ಈ ಉಪಾಧಿಯ ಸಂಬಂಧ, ಅಸಂಬಂಧ- ಇವುಗಳಿಂದಲೇ ಸಾಧಿಸಬಹುದಾಗಿದೆ. ಉಪಾಧಿಕಲ್ಪಿತಜೀವನಿಗಿಂತ ನಿರುಪಾಧಿಕನಾದ

ಈಶ್ವರನು ಕಲ್ಪಿತಮಾಯಾವಿಗಿಂತ ಪರಮಾರ್ಥಮಾಯಾವಿಯು ಬೇರೆಯಾಗಿರುವಂತೆ ಬೇರೆಯೆಂದೂ ತಿಳಿಯಬಹುದು.

(೧) ಏವಮ್ ಅವಿದ್ಯಾಕೃತನಾಮರೂಪೋಪಾಧ್ಯನುರೋಧೀ ಈಶ್ವರೋ ಭವತಿ, ವ್ಯೋಮೇವ ಘಟಕರಕಾದ್ಯುಪಾಧ್ಯನುರೋಧಿ। ನ ಚ ಸ್ವಾತ್ಮಭೂತಾನೇವ ಘಟಾಕಾಶಸ್ಥಾನೀಯಾನ್ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಕೃತಕಾರ್ಯಕರಣಸಙ್ಘಾತಾನುರೋಧಿನಃ ಜೀವಾಖ್ಯಾನ್ ವಿಜ್ಞಾನಾತ್ಮನಃ ಪ್ರತಿ ಈಷ್ಟೇ ವ್ಯವಹಾರವಿಷಯೇ। ತದೇವಮ್ ಅವಿದ್ಯಾತ್ಮಕೋಪಾಧಿಪರಿಚ್ಛೇದಾಪೇಕ್ಷಮೇವ ಈಶ್ವರಸ್ಯ ಈಶ್ವರತ್ವಂ, ಸರ್ವಜ್ಞತ್ವಂ, ಸರ್ವಶಕ್ತಿತ್ವಂ ಚ । ನ ಪರಮಾರ್ಥತಃ ವಿದ್ಯಯಾ ಅಪಾಸ್ತಸರ್ವೋಪಾಧಿಸ್ವರೂಪೇ ಆತ್ಮನಿ ಈಶಿತ್ರೀಶಿತವ್ಯಸರ್ವಜ್ಞತ್ವಾದಿವ್ಯವಹಾರಃ ಉಪಪದ್ಯತೇ॥

-ಸೂ. ಭಾ. ೨-೧-೧೪-೪೪೦.

(೨) ಆತ್ಮನಃ ಅಪ್ರಚ್ಯುತಾತ್ಮಭಾವಸ್ಯೈವ ಸತಃ, ತತ್ತ್ವಾನವಬೋಧನಿಮಿತ್ತಃ ದೇಹಾದಿಷು ಅನಾತ್ಮಸು ಆತ್ಮತ್ವನಿಶ್ಚಯಃ ಲೌಕಿಕೋ ದೃಷ್ಟಃ। ತೇನ ದೇಹಾದಿಭೂತಸ್ಯ ಆತ್ಮನೋಽಪಿ ಆತ್ಮಾ ಅನನ್ವಿಷ್ಟೋಽನ್ವೇಷ್ಟವ್ಯಃ' ಅಲಬ್ಧೋ ಲಬ್ಧವ್ಯಃ, ಆಶ್ರುತಃ ಶ್ರೋತವ್ಯಃ, ಅಮತೋ ಮನ್ತವ್ಯಃ, ಅವಿಜ್ಞಾತೋ ವಿಜ್ಞಾತವ್ಯಃ ಇತ್ಯಾದಿಭೇದವ್ಯಪದೇಶಃ ಉಪಪದ್ಯತೇ। ಪ್ರತಿಷಿಧ್ಯತೇ ಏವ ತು ಪರಮಾರ್ಥತಃ ಸರ್ವಜ್ಞಾತ್ ಪರಮೇಶ್ವರಾತ್ ಅನ್ಯೋ ದ್ರಷ್ಟಾ ಶ್ರೋತಾ ವಾ ''ನಾನ್ಯೋಽತೋಽಸ್ತಿ ದ್ರಷ್ಟಾ'' (ಬೃ. ೩-೭-೨೩) ಇತ್ಯಾದಿನಾ। ಪರಮೇಶ್ವರಸ್ತು ಅವಿದ್ಯಾಕಲ್ಪಿತಾತ್ ಶಾರೀರಾತ್ ಕರ್ತುರ್ಭೋಕ್ತುರ್ವಿಜ್ಞಾನಾತ್ಮಾಖ್ಯಾತ್ ಅನ್ಯಃ। ಯಥಾ ಮಾಯಾವಿನಶ್ಚರ್ಮಖಡ್ಗಧರಾತ್ ಸೂತ್ರೇಣ ಆಕಾಶಮ್ ಅಧಿರೋಹತಃ ಸ ಏವ ಮಾಯಾವೀ ಪರಮಾರ್ಥರೂಪೋ ಭೂಮಿಷ್ಠೋಽನ್ಯಃ। ಯಥಾ ವಾ ಘಟಾಕಾಶಾದ್ಯುಪಾಧಿ ಅಪರಿಚ್ಛಿನ್ನಾತ್ ಅನುಪಾಧಿಃಪರಿಚ್ಛಿನ್ನ ಆಕಾಶೋಽನ್ಯಃ। -ಸೂ. ಭಾ. ೧-೧-೧೭-೧೦೪.

(೩) ಪರ ಏವಾತ್ಮಾ ದೇಹೇನ್ದ್ರಿಯಮನೋಬುದ್ಧ್ಯುಪಾಧಿಭಿಃ ಅಪರಿಚ್ಛಿದ್ಯಮಾನಃ ಬಾಲೈಃ 'ಶಾರೀರಃ' ಇತ್ಯುಪಚರ್ಯತೇ। ಯಥಾ ಘಟಕರಕಾದ್ಯುಪಾಧಿವಶಾತ್ ಅಪರಿಚ್ಛಿನ್ನಮಪಿ ನಭಃ ಪರಿಚ್ಛಿನ್ನವತ್ ಅವಭಾಸತೇ; ತದ್ವತ್। ತದಪೇಕ್ಷಯಾ ಚ ಕರ್ಮಕರ್ತೃತ್ವಾದಿಭೇದವ್ಯವಹಾರೋ ನ ವಿರುಧ್ಯತೇ ಪ್ರಾಕ್ ''ತತ್ತ್ವಮಸಿ'' ಇತ್ಯಾತ್ಮೈಕತ್ವೋಪದೇಶಗ್ರಹಣಾತ್॥

-ಸೂ. ಭಾ. ೧-೨-೬-೧೫೮.

(೪) ತದೇವಮ್ ಅವಿದ್ಯಾತ್ಮಕೋಪಾಧಿಪರಿಚ್ಛೇದಾಪೇಕ್ಷಮೇವ ಈಶ್ವರಸ್ಯ ಈಶ್ವರತ್ವಮ್, ಸರ್ವಜ್ಞತ್ವಮ್, ಸರ್ವಶಕ್ತಿತ್ವಂ ಚ । ನ ಪರಮಾರ್ಥತೋ ವಿದ್ಯಯಾ ಅಪಾಸ್ತಸರ್ವೋಪಾಧಿ ಸ್ವರೂಪೇ ಆತ್ಮನಿ ಈಶಿತ್ರೀಶಿತವ್ಯಸರ್ವಜ್ಞತ್ವಾದಿವ್ಯವಹಾರಃ ಉಪಪದ್ಯತೇ। ತಥಾ ಚೋಕ್ತಮ್- ''ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ'' (ಛಾಂ. ೭-೨೪-೧) ಇತಿ, ''ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್'' (ಬೃ. ೪-೫-೧೫) ಇತ್ಯಾದಿನಾ ಚ। ಏವಂ ಪರಮಾರ್ಥಾವಸ್ಥಾಯಾಂ ಸರ್ವವ್ಯವಹಾರಾಭಾವಂ ವದನ್ತಿ ವೇದಾನ್ತಾಃ ಸರ್ವೇ। ತಥಾ ಈಶ್ವರಗೀತಾಸ್ವಪಿ ''ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ। ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ॥ ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ

ವಿಭುಃ। ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ''(ಗೀ. ೫-೧೪, ೧೫) ಇತಿ ಪರಮಾರ್ಥಾವಸ್ಥಾಯಾಮ್ ಈಶಿತ್ರೀಶಿತವ್ಯಾದಿವ್ಯವಹಾರಾಭಾವಃ ಪ್ರದರ್ಶ್ಯತೇ। ವ್ಯವಹಾರಾವಸ್ಥಾಯಾಂ ತು ಉಕ್ತಃ ಶ್ರುತಾವಪಿ ಈಶ್ವರಾದಿವ್ಯವಹಾರಃ ''ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ'' (ಬೃ. ೪-೪-೨೨) ಇತಿ । ತಥಾ ಚ ಈಶ್ವರಗೀತಾಸ್ವಪಿ ''ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ'' (ಗೀ.೧೮-೬೧) ಇತಿ ॥ -ಸೂ.ಭಾ.೨-೧-೧೪-೪೪೦-೪೪೧.

೧೩೫. ಈಶ್ವರಸಂತೆ ಜೀವನೂ ಪರಮಾರ್ಥವಾಗಿ ಬೇರೆ ಇರುತ್ತಾನೆಂದು ಕೆಲವರು ಎಣಿಸಿರುತ್ತಾರೆ. ಶಾಸ್ತ್ರಸಿದ್ಧನಾಗಿರುವದರಿಂದ ಈಶ್ವರನು ಇಲ್ಲವೆನ್ನುವದು ಹೇಗೆ ಸರಿಯಲ್ಲವೋ ಪ್ರತ್ಯಕ್ಷಾನುಮಾನಸಿದ್ಧನಾಗಿರುವದರಿಂದ ಜೀವನು ಇಲ್ಲವೆನ್ನುವದೂ ಹಾಗೆಯೇ ಸರಿಯಲ್ಲ- ಎಂಬುದು ಅವರ ಅಭಿಪ್ರಾಯವು.

ಇದು ಸರಿಯಲ್ಲ. ಏಕೆಂದರೆ ಅಂತಃಕರಣವೆಂಬ ಉಪಾಧಿಯಿಂದ ಜೀವರೂಪವು ಪರಿಕಲ್ಪಿತವಾಗಿರುತ್ತದೆಯೇ ಹೊರತು ಸ್ವತಂತ್ರವಾಗಿ ಜೀವತ್ವವು ಯಾರಿಗೂ ತೋರುವದಿಲ್ಲ. ಜೀವನು ಪ್ರತ್ಯಕ್ಷಾನುಮಾನಗಳಿಗೆ ಗೋಚರನೆಂಬುದನ್ನು ಹಿಂದೆ (೫೫) ಖಂಡಿಸಿರುತ್ತೇವೆ. ನಿತ್ಯಮುಕ್ತನೂ ಸರ್ವಜ್ಞನೂ ಆಗಿರುವ ಈಶ್ವರನಿಗಿಂತ ಬೇರೆಯಾಗಿ ಚೇತನವಸ್ತುವೆಂಬುದೇ ಇಲ್ಲವೆಂದು ಶ್ರುತಿಯು ಸಾರುತ್ತಿದೆ. ಶ್ರುತಿಸ್ಮೃತಿಗಳಲ್ಲಿ ಜೀವೇಶ್ವರರ ಅನನ್ಯತ್ವವನ್ನು ಹೊಗಳಿರುವದೂ ಭೇದವನ್ನು ನಿಂದಿಸಿರುವದೂ ಆತ್ಮೈಕತ್ವವಾದಕ್ಕೆ ಬೆಂಬಲವಾಗಿದೆ ಎಂದು ಆಗಲೆ (೧೨೨) ತಿಳಿಸಿರುತ್ತೇವೆ. ಆದ್ದರಿಂದ ಮಾಯಾವಿಯೊಬ್ಬನೇ ಮಾಯೆಯಿಂದ ಅನೇಕರಾಗಿ ಕಾಣಿಸುವಂತೆ ಅದ್ವಿತೀಯಾತ್ಮನೊಬ್ಬನೇ ಅವಿದ್ಯೆಯಿಂದ ನಾನಾರೂಪವಾಗಿ ಕಾಣುತ್ತಾನೆ ಎಂದೇ ನಿಶ್ಚಯಿಸಬೇಕು.

(೧) ಯಾವದೇವ ಚ ಅಯಂ ಬುದ್ಧ್ಯುಪಾಧಿಸಂಬನ್ಧಃ, ತಾವತ್ ಜೀವಸ್ಯ ಜೀವತ್ವಮ್ ಸಂಸಾರಿತ್ವಂ ಚ। ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿಸಂಬನ್ಧಪರಿಕಲ್ಪಿತಸ್ವರೂಪವ್ಯತಿರೇಕೇಣ ಅಸ್ತಿ। ನ ಹಿ ನಿತ್ಯಮುಕ್ತಸ್ವರೂಪಾತ್ ಸರ್ವಜ್ಞಾತ್ ಈಶ್ವರಾತ್ ಅನ್ಯಶ್ಚೇತನೋ ಧಾತುರ್ದ್ವಿತೀಯೋ ವೇದಾನ್ತಾರ್ಥನಿರೂಪಣಾಯಾಮ್ ಉಪಲಭ್ಯತೇ। ''ನಾನ್ಯೋऽತೋऽಸ್ತಿ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ'' (ಬೃ. ೩-೭-೨೩), ''ನಾನ್ಯದತೋऽಸ್ತಿ ದ್ರಷ್ಟೃ....ಶ್ರೋತೃ....ಮನ್ತೃ....ವಿಜ್ಞಾತೃ'' (ಬೃ. ೩-೮-೧೧), ''ತತ್ತ್ವಮಸಿ'' (ಛಾಂ.೬-೮-೭), ''ಅಹಂ ಬ್ರಹ್ಮಾಸ್ಮಿ'' (ಬೃ. ೧-೪-೭) ಇತ್ಯಾದಿ ಶ್ರುತಿಶತೇಭ್ಯಃ॥

-ಸೂ.ಭಾ. ೨-೩-೩೦-೧೪೦.

(೨) ಅಪರೇ ತು ವಾದಿನಃ ಪಾರಮಾರ್ಥಿಕಮೇವ ಜೈವಂ ರೂಪಮ್ ಇತಿ ಮನ್ಯನ್ತೇ ಅಸ್ಮದೀಯಾಶ್ಚ ಕೇಚಿತ್। ತೇಷಾಂ ಸರ್ವೇಷಾಮ್ ಆತ್ಮೈಕತ್ವಸಮ್ಯಗ್ದರ್ಶನಪ್ರತಿಪಕ್ಷಭೂತಾನಾಂ ಪ್ರತಿಬೋಧಾಯ ಇದಂ ಶಾರೀರಕಮ್ ಆರಬ್ಧಮ್। ಏಕ ಏವ ಪರಮೇಶ್ವರಃ ಕೂಟಸ್ಥನಿತ್ಯಃ

ವಿಜ್ಞಾನಧಾತುಃ ಅವಿದ್ಯಯಾ ಮಾಯಯಾ ಮಾಯಾವಿವತ್ ಅನೇಕಧಾ ವಿಭಾವ್ಯತೇ, ನಾನ್ಯೋ ವಿಜ್ಞಾನಧಾತುರಸ್ತಿ ಇತಿ॥ -ಸೂ. ಭಾ. ೧-೩-೧೯-೨೬೯.

೧೩೬. ಜೀವೇಶ್ವರವಿಭಾಗವು ಆವಿದ್ಯಕವೆಂದೂ ಜೀವೇಶ್ವರೈಕ್ಯವೇ ಪರಮಾರ್ಥ ವೆಂದೂ ಹೇಳುವವರ ಮತದಲ್ಲಿ, ಜೀವೇಶ್ವರರಿಗಿರುವ ವಿರುದ್ಧಗುಣಗಳನ್ನು ಕಡೆಗಣಿಸಿದಂತಾಗುತ್ತದೆ; ಈಶ್ವರನಿಗೇ ಸಂಸಾರಿತ್ವವು ಪ್ರಾಪ್ತವಾಗುತ್ತದೆ; ಆಗ ಈಶ್ವರನಿಲ್ಲವೆಂದೂ ಆಗುತ್ತದೆ. ಈಶ್ವರನಿಗಿಂತ ಬೇರೆಯಾಗಿ ಸಂಸಾರಿಯಿಲ್ಲವೆಂಬ ಮತದಲ್ಲಿ ಸಂಸಾರವೇ ಇಲ್ಲವೆಂದಾಗುತ್ತದೆ, ಅದೂ ಪ್ರತ್ಯಕ್ಷಾದಿಪ್ರಮಾಣವಿರುದ್ಧ ವಾಗುತ್ತದೆ. ಶಾಸ್ತ್ರಕ್ಕೆ ಅಧಿಕಾರಿಯಾದ ಜೀವನೇ ಇಲ್ಲದಿದ್ದರೆ ಬಂಧಮೋಕ್ಷಾದಿ ಶಾಸ್ತ್ರವೂ ವ್ಯರ್ಥವಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಜೀವನ ಜೀವತ್ವವು ಪರಮಾರ್ಥವು ಎಂದು ಕೆಲವರು ವಾದಿಸುತ್ತಾರೆ.

ಈ ವಾದವು ಸರಿಯಲ್ಲ. ಏಕೆಂದರೆ ಜೀವೇಶ್ವರರಿಗೆ ವಿರುದ್ಧಗುಣಗಳಿವೆ ಎಂದು ತೋರುವದು ಅವಿದ್ಯೆಯಿಂದ. ಸಂಸಾರಿತ್ವವೇ ಆವಿದ್ಯಕವೆಂದು ಹೇಳುತ್ತಿರುವ ವೇದಾಂತಿಗಳ ಮತದಲ್ಲಿ ಈಶ್ವರನಿಗೆ ಸಂಸಾರಿತ್ವವುಂಟಾಗುವದೆಂದು ಆಕ್ಷೇಪಿಸುವದಕ್ಕೆ ಅವಕಾಶವಿರುವದಿಲ್ಲ. ಕಲ್ಪಿತವಾದ ಬಿಸಿಲುಕುದುರೆಯ ನೀರಿನಿಂದ ಊಷರ ಭೂಮಿಯು ಕೆಸರಾಗಲಾರದು. ಈ ಮತದಲ್ಲಿ ಸಂಸಾರಿಯಾಗಿ ತೋರುತ್ತಿರುವ ಜೀವನು ಪರಮಾರ್ಥವಾಗಿ ಅಪಹತಪಾಪ್ಮತ್ವಾದಿಗುಣಗಳುಳ್ಳವನು ಎಂದು ಹೇಳುತ್ತಾರೆಯೇ ಹೊರತು ಈಶ್ವರನು ಧರ್ಮಾಧರ್ಮಾದಿಗೋಚರನೆಂದೇನೂ ಹೇಳುವದಿಲ್ಲ. ಶಾಸ್ತ್ರಸಿದ್ಧನಾಗಿರುವ ಈಶ್ವರನನ್ನು ಇಲ್ಲವೆಂದೂ ವೇದಾಂತಿಗಳು ಹೇಳುವದಿಲ್ಲ. ಸಂಸಾರಸಂಸಾರಿಗಳು ಅವಿದ್ಯಾಕಲ್ಪಿತವೆಂದು ಒಪ್ಪಿರುವದರಿಂದ ಜ್ಞಾನವುಂಟಾಗುವ ವರೆಗೂ ಸಂಸಾರಿತ್ವವು ಉಂಟೆಂದು ಕಲ್ಪಿಸಿರುವದರಿಂದಲೂ ಶಾಸ್ತ್ರಕ್ಕೆ ಅಧಿಕಾರಿಯಿಲ್ಲ ದಂತಾಗುವದೆಂಬುದೂ ಸರಿಯಲ್ಲ. ಆತ್ಮೈಕತ್ವವು ಪ್ರತ್ಯಕ್ಷಾದಿವಿರುದ್ಧವೆಂಬುದಂತೂ ಸರಿಯೇ ಅಲ್ಲ. ಏಕೆಂದರೆ ಪ್ರತ್ಯಕ್ಷಾದಿವ್ಯವಹಾರಗಳು ಅವಿದ್ಯಾವಿಷಯವೆಂದು ಹಿಂದೆ (೨೮) ಹೇಳಿದ್ದಾಗಿದೆ.

(೧) ಯತ್ತೂಕ್ತಮ್ ನ ವಿರುದ್ಧಗುಣಯೋರನ್ಯೋನ್ಯಾತ್ಮತ್ವಸಂಭವಃ ಇತಿ। ನಾಯಂ ದೋಷಃ। ವಿರುದ್ಧಗುಣತಾಯಾ ಮಿಥ್ಯಾತ್ವೋಪಪತ್ತೇಃ। ಯತ್ಪುನರುಕ್ತಮ್ ಈಶ್ವರಾಭಾವಪ್ರಸಙ್ಗಃ ಇತಿ। ತದಸತ್। ಶಾಸ್ತ್ರಪ್ರಾಮಾಣ್ಯಾತ್। ಅನಭ್ಯುಪಗಮಾಚ್ಚ। ನ ಹಿ ಈಶ್ವರಸ್ಯ ಸಂಸಾರ್ಯಾತ್ಮತ್ವಂ ಪ್ರತಿಪಾದ್ಯತೇ ಇತ್ಯಭ್ಯುಪಗಚ್ಛಾಮಃ, ಕಿಂ ತರ್ಹಿ ಸಂಸಾರಿಣಃ ಸಂಸಾರಿತ್ವಾಪೋಹೇನ ಈಶ್ವರಾತ್ಮತ್ವಂ ಪ್ರತಿಪಿಪಾದಯಿಷಿತಮ್ ಇತಿ। ಏವಂ ಚ ಸತಿ ಅದ್ವೈತೇಶ್ವರಸ್ಯ ಅಪಹತಪಾಪ್ಮತ್ವಾದಿಗುಣತಾ, ವಿಪರೀತಗುಣತಾ ತು ಇತರಸ್ಯ ಮಿಥ್ಯಾ ಇತಿ ವ್ಯವತಿಷ್ಠತೇ। ಯದಪ್ಯುಕ್ತಮ್ ಅಧಿಕಾರ್ಯಭಾವಃ ಪ್ರತ್ಯಕ್ಷಾದಿವಿರೋಧಶ್ಚ ಇತಿ। ತದಪ್ಯಸತ್। ಪ್ರಾಕ್ಪ್ರಬೋಧಾತ್ ಸಂಸಾರಿತ್ವಾಭ್ಯುಪಗಮಾತ್। ತದ್ವಿಷಯತ್ವಾಚ್ಚ ಪ್ರತ್ಯಕ್ಷಾದಿವ್ಯವಹಾರಸ್ಯ॥ -ಸೂ. ಭಾ. ೪-೧-೩-೫೧೦.

(೨) ಯತ್ತೂಕ್ತಮ್ ಈಶ್ವರಸ್ಯ ಕ್ಷೇತ್ರಜ್ಞೈಕತ್ವೇ ಸಂಸಾರಿತ್ವಮ್ ಪ್ರಾಪ್ನೋತಿ, ಕ್ಷೇತ್ರಜ್ಞಾನಾಂ ಚ ಈಶ್ವರೈಕತ್ವೇ ಸಂಸಾರಿಣೋಽಭಾವಾತ್ ಸಂಸಾರಾಭಾವಪ್ರಸಙ್ಗಃ ಇತಿ। ಏತೌ ದೋಷೌ ಪ್ರತ್ಯುಕ್ತೌ-ವಿದ್ಯಾವಿದ್ಯಯೋರ್ವೈಲಕ್ಷಣ್ಯಾಭ್ಯುಪಗಮಾತ್ ಇತಿ। ಕಥಮ್? ಅವಿದ್ಯಾಪರಿಕಲ್ಪಿತ ದೋಷೇಣ ತದ್ವಿಷಯಂ ವಸ್ತು ಪಾರಮಾರ್ಥಿಕಂ ನ ದುಷ್ಯತಿ ಇತಿ। ತಥಾ ಚ ದೃಷ್ಟಾನ್ತೋ ದರ್ಶಿತಃ- ಮರೀಚ್ಯಮ್ಬುನಾ ಊಷರದೇಶೋ ನ ಪಙ್ಕೀಕ್ರಿಯತೇ ಇತಿ। ಸಂಸಾರಿಣೋಽಭಾವಾತ್ ಸಂಸಾರಾಭಾವಪ್ರಸಙ್ಗದೋಷೋಽಪಿ ಸಂಸಾರಸಂಸಾರಿಣೋರವಿದ್ಯಾಕಲ್ಪಿತತ್ವೋಪಪತ್ತ್ಯಾ ಪ್ರತ್ಯುಕ್ತಃ ॥ -ಗೀ. ಭಾ. ೧೩-೨-೭೭೦.

೧೩೭. ಜೀವನು ಹುಟ್ಟುತ್ತಾನೆ, ಸಾಯುತ್ತಾನೆ; ಶಾಸ್ತ್ರದಲ್ಲಿ ವಿಧಿಸಿದ ಕರ್ಮಗಳನ್ನು ಮಾಡುತ್ತಾನೆ; ಸತ್ತಬಳಿಕ ಸ್ವರ್ಗನರಕಗಳನ್ನೂ ಜನ್ಮಾಂತರಗಳನ್ನೂ ಪಡೆಯುತ್ತಾನೆ ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಹೀಗೆ ಲೋಕಾನುಭವದಿಂದಲೂ ಶಾಸ್ತ್ರದಿಂದಲೂ ಸಿದ್ಧವಾಗಿರುವ ಜೀವನ ಕರ್ತೃತ್ವಭೋಕ್ತೃತ್ವವನ್ನು ಅಲ್ಲಗಳೆಯುವದು ಸರಿಯಲ್ಲ. ತಾರ್ಕಿಕರು ಸಂಸಾರಿತ್ವವು ಪರಮಾರ್ಥವೆಂದೂ ಅವನಿಗಿಂತ ಈಶ್ವರನು ಬೇರೆಯೆಂದೂ ಹೇಳುತ್ತಿದ್ದಾರೆ. ಆದ್ದರಿಂದ ಆತ್ಮೈಕತ್ವವಾದವು ತರ್ಕಕ್ಕೂ ವಿರುದ್ಧವಾಗಿದೆ-ಎಂದು ಆಕ್ಷೇಪಿಸುವವರಿಗೆ ಬೇರೆಯಾಗಿ ಉತ್ತರವನ್ನು ಕೊಡಬೇಕಾದದ್ದೇ ಇಲ್ಲ.

ಜೀವನಿಗೆ ಜನನಮರಣಗಳು ಪ್ರತ್ಯಕ್ಷವಾಗಿಲ್ಲ; ಶರೀರಸಂಬಂಧದಿಂದ ಹುಟ್ಟುತ್ತಾನೆ, ಸಾಯುತ್ತಾನೆ-ಎಂಬ ವ್ಯವಹಾರವಿದೆ. ಜೀವನು ಹುಟ್ಟುತ್ತಾನೆಂದು ಶ್ರುತಿಯಲ್ಲಿ ಹೇಳಿರುವದು ಮಾಯಿಕಸೃಷ್ಟಿಯ ವಿಷಯವೆಂದು ಹಿಂದೆ (೧೧೯) ತಿಳಿಸಿರುತ್ತೇವೆ. ಕರ್ಮವನ್ನು ಮಾಡುವದು ದೇಹಾದಿಗಳಲ್ಲಿಯೇ ಕಂಡುಬಂದಿದೆ; ಆದರೆ ಆತ್ಮನಿಗೆ ಅಧ್ಯಾಸದಿಂದಲ್ಲದೆ ನಿಜವಾಗಿ ದೇಹಾದಿಗಳ ಸಂಬಂಧವಿದೆ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಶರೀರವು ಪ್ರತ್ಯಕ್ಷವಾಗಿದ್ದರೂ ಆತ್ಮನು ಪ್ರತ್ಯಕ್ಷನಲ್ಲವಾದ್ದರಿಂದ ಆತ್ಮಶರೀರಗಳ ಸಂಬಂಧವೂ ಪ್ರತ್ಯಕ್ಷವಲ್ಲ. ಧರ್ಮಾಧರ್ಮಗಳಿಂದ ಶರೀರವನ್ನು ಸಂಪಾದಿಸಿಕೊಂಡಿರುತ್ತಾನೆಂಬುದೂ ಸರಿಯಲ್ಲ; ಏಕೆಂದರೆ ಕರ್ಮವನ್ನು ಮಾಡುವದಕ್ಕೆ ಮೊದಲೇ ಶರೀರವು ಬೇಕಾಗಿರುತ್ತದೆ. ಹಿಂದಿನ ಜನ್ಮದ ಶರೀರದಲ್ಲಿ ಮಾಡಿದ ಕರ್ಮದ ಫಲವು ಈ ಜನ್ಮದ ಶರೀರವು ಎಂದರೆ ಆ ಶರೀರಕ್ಕೆ ಅದರ ಹಿಂದಿನ ಜನ್ಮದ ಕರ್ಮ, ಆ ಶರೀರಕ್ಕೆ ಮತ್ತೊಂದು ಹಿಂದಿನ ಜನ್ಮದ ಕರ್ಮ- ಹೀಗೆ ಬೇಕಾಗಿ ಎಲ್ಲಿಯೂ ಸಶರೀರತ್ವವು ಸಿದ್ಧಿಸುವದಿಲ್ಲ; ಅಂಧಪರಂಪರೆಯೇ ಆಗುತ್ತದೆ. ಶಾಸ್ತ್ರಗಳಲ್ಲಿ ಕರ್ಮವನ್ನು ವಿಧಿಸಿರುವದೂ ನಿಷೇಧಿಸಿರುವದೂ ಆವಿದ್ಯಕವಾದ ಶರೀರಸಂಬಂಧವನ್ನು ಇಟ್ಟುಕೊಂಡೇ ಆಗಿರುವದರಿಂದ ಶಾಸ್ತ್ರಪ್ರಮಾಣದಿಂದಲೂ ಜೀವನಿಗೆ ಸಶರೀರತ್ವವು ಸಿದ್ಧವಾಗುವದಿಲ್ಲ. ಹಾಗಾದರೆ ಕ್ರಿಯಾಫಲಗಳೂ ಆವಿದ್ಯಕವಾಗಿರುವದರಿಂದ ಶಾಸ್ತ್ರೋಪದೇಶವು ವ್ಯರ್ಥವಲ್ಲವೆ? ಎನ್ನುವ ಹಾಗೂ ಇಲ್ಲ; ಏಕೆಂದರೆ ಸಾಧನಫಲಗಳು ಸತ್ಯವೆಂದು ನಂಬಿರುವ ಅವಿದ್ಯಾವಂತರಿಗಾಗಿಯೇ ಶಾಸ್ತ್ರವು ಕರ್ಮೋಪದೇಶವನ್ನು ಮಾಡುತ್ತದೆ. ಆದ್ದರಿಂದ

ಕರ್ತೃತ್ವಭೋಕ್ತೃತ್ವರೂಪವಾದ ಜೀವತ್ವವು ಪರಮಾರ್ಥವೆನ್ನುವದಕ್ಕೆ ಯಾವ ಪ್ರಮಾಣವೂ ಇಲ್ಲವಾಗಿ ಆತ್ಮೈಕತ್ವವಾದಕ್ಕೆ ಜೀವತ್ವಪ್ರತೀತಿಯು ಬಾಧಕವಾಗಲಾರದು. ಧರ್ಮಾಧರ್ಮೌ, ಕರ್ಮ, ಹೇತುಃ, ಶರೀರಮ್, ಕ್ಷೇತ್ರಮ್, ದೇಹಃ, ಫಲಮ್- ಇವು ಪರ್ಯಾಯಶಬ್ದಗಳು.

(೧) ನನು ಲೌಕಿಕೋ ಜನ್ಮಮರಣವ್ಯಪದೇಶೋ ಜೀವಸ್ಯ ದರ್ಶಿತಃ। ಸತ್ಯಂ ದರ್ಶಿತಃ। ಭಾಕ್ತಸ್ತ್ವೇಷ ಜೀವಸ್ಯ ಜನ್ಮಮರಣವ್ಯಪದೇಶಃ। ಕಿಮಾಶ್ರಯಃ ಪುನರಯಂ ಮುಖ್ಯೋ ಯದಪೇಕ್ಷಯಾ ಭಾಕ್ತಃ ಇತಿ? ಉಚ್ಯತೇ- ಚರಾಚರವ್ಯಪಾಶ್ರಯಃ। ಸ್ಥಾವರಜಙ್ಗಮಶರೀರ-ವಿಷಯೌ ಜನ್ಮಮರಣಶಬ್ದೌ। ಸ್ಥಾವರಜಙ್ಗಮಾನಿ ಹಿ ಭೂತಾನಿ ಜಾಯನ್ತೇ ಮ್ರಿಯನ್ತೇ ಚ। ಅತಸ್ತದ್ವಿಷಯೌ ಜನ್ಮಮರಣಶಬ್ದೌ ಮುಖ್ಯೌ ಸನ್ತೌ ತತ್ಸ್ಥೇ ಜೀವಾತ್ಮನಿ ಉಪಚರ್ಯೇತೇ। ತದ್ಭಾವಭಾವಿತ್ವಾತ್। ಶರೀರಪ್ರಾದುರ್ಭಾವತಿರೋಭಾವಯೋರ್ಹಿ ಸತೋಃ ಜನ್ಮಮರಣಶಬ್ದೌ ಭವತಃ, ನಾಸತೋಃ। ನ ಹಿ ಶರೀರಸಂಬನ್ಧಾತ್ ಅನ್ಯತ್ರ ಜೀವೋ ಜಾತೋ ಮೃತೋ ವಾ ಕೇನಚಿತ್ ಲಕ್ಷ್ಯತೇ॥ -ಸೂ. ಭಾ.೨-೩-೧೬-೧೧೮.

(೨) ನ ಹಿ ಆತ್ಮನಃ ಶರೀರಾತ್ಮಾಭಿಮಾನಲಕ್ಷಣಂ ಮಿಥ್ಯಾಜ್ಞಾನಂ ಮುಕ್ತ್ವಾ ಅನ್ಯತಃ ಸಶರೀರತ್ವಂ ಶಕ್ಯಂ ಕಲ್ಪಯಿತುಮ್। ನಿತ್ಯಮ್ ಅಶರೀರತ್ವಮ್ ಅಕರ್ಮನಿಮಿತ್ತತ್ವಾತ್ ಇತ್ಯವೋಚಾಮ। ತತ್ಕೃತಧರ್ಮಾಧರ್ಮನಿಮಿತ್ತಂ ಸಶರೀರತ್ವಮ್ ಇತಿ ಚೇತ್। ನ। ಶರೀರಸಂಬನ್ಧಸ್ಯ ಅಸಿದ್ಧತ್ವಾತ್ ಧರ್ಮಾಧರ್ಮಯೋಃ ಆತ್ಮಕೃತತ್ವಾಸಿದ್ಧೇಃ। ಶರೀರಸಂಬನ್ಧಸ್ಯ ಧರ್ಮಾಧರ್ಮಯೋಸ್ತತ್ಕೃತತ್ವಸ್ಯ ಚ ಇತರೇತರಾಶ್ರಯತ್ವಪ್ರಸಙ್ಗಾತ್, ಅನ್ಧಪರಂಪರೈಷಾ ಅನಾದಿತ್ವಕಲ್ಪನಾ॥ -ಸೂ. ಭಾ. ೧-೧-೪-೫೮.

(೩) 'ಋತೌ ಭಾರ್ಯಾಮುಪೇಯಾತ್' ಇತ್ಯನುಜ್ಞಾ। 'ಗುರ್ವಙ್ಗನಾಂ ನೋಪಗಚ್ಛೇತ್' ಇತಿ ಪರಿಹಾರಃ। ತಥಾ 'ಅಗ್ನೀಷೋಮೀಯಂ ಪಶುಂ ಸಂಜ್ಞಪಯೇತ್' ಇತ್ಯನುಜ್ಞಾ। 'ನ ಹಿಂಸ್ಯಾತ್ ಸರ್ವಾ ಭೂತಾನಿ'' ಇತಿ ಪರಿಹಾರಃ । ಏವಂ ಲೋಕೇಽಪಿ ಮಿತ್ರಮ್ ಉಪಸೇವಿತವ್ಯಮ್' ಇತ್ಯನುಜ್ಞಾ। 'ಶತ್ರುಃ ಪರಿಹರ್ತವ್ಯಃ' ಇತಿ ಪರಿಹಾರಃ। ಏವಂಪ್ರಕಾರೌ ಅನುಜ್ಞಾಪರಿಹಾರೌ ಏಕತ್ವೇಽಪ್ಯಾತ್ಮನಃ ದೇಹಸಂಬನ್ಧಾತ್ ಸ್ಯಾತಾಮ್। ದೇಹೈಃ ಸಂಬನ್ಧಃ ದೇಹಸಂಬನ್ಧಃ। ಕಃ ಪುನರ್ದೇಹಸಂಬನ್ಧಃ ? ದೇಹಾದಿರಯಂ ಸಙ್ಘಾತಃ ಅಹಮೇವ ಇತಿ ಆತ್ಮನಿ ವಿಪರೀತಪ್ರತ್ಯಯೋತ್ಪತ್ತಿಃ। ದೃಷ್ಟಾ ಚ ಸಾ ಸರ್ವಪ್ರಾಣಿನಾಮ್ 'ಅಹಂ ಗಚ್ಛಾಮಿ', 'ಅಹಮಾಗಚ್ಛಾಮಿ', 'ಅಹಮನ್ಧಃ', 'ಅಹಮನನ್ಧಃ', 'ಅಹಂ ಮೂಢಃ', 'ಅಹಮಮೂಢಃ', ಇತ್ಯೇವಮಾತ್ಮಿಕಾ। ನ ಹ್ಯಸ್ಯಾಃ ಸಮ್ಯಗ್ದರ್ಶನಾತ್ ಅನ್ಯತ್ ನಿವಾರಕಮ್ ಅಸ್ತಿ। ಪ್ರಾಕ್ತು ಸಮ್ಯಗ್‌ದರ್ಶನಲಕ್ಷಣಾತ್ ಪ್ರತತೈಷಾ ಭ್ರಾನ್ತಿಃ ಸರ್ವಜನ್ತುಷು। ತದೇವಮ್ ಅವಿದ್ಯಾನಿಮಿತ್ತದೇಹಾದ್ಯುಪಾಧಿಸಂಬನ್ಧಕೃತಾತ್ ವಿಶೇಷಾತ್ ಐಕಾತ್ಮ್ಯಾಭ್ಯುಪಗಮೇಽಪಿ ಅನುಜ್ಞಾಪರಿಹಾರೌ ಅವಕಲ್ಪೇತೇ॥ -ಸೂ. ಭಾ. ೨-೩-೪೮-೧೬೫.

(೪) ನ ಚ ಶಾಸ್ತ್ರಾನರ್ಥಕ್ಯಮ್ । ಯಥಾಪ್ರಸಿದ್ಧಾವಿದ್ವತ್ಪುರುಷವಿಷಯತ್ವಾತ್ ಶಾಸ್ತ್ರಸ್ಯ। ಅವಿದುಷಾಂ ಹಿ ಫಲಹೇತ್ವೋರನಾತ್ಮನೋಃ ಆತ್ಮದರ್ಶನಂ ನ ವಿದುಷಾಮ್॥

-ಗೀ. ಭಾ.೧೩-೨-೭೬೪.

೧೩೮. ಆತ್ಮನು ಒಬ್ಬನೇ ಎಂಬ ಮತದಲ್ಲಿ ಒಬ್ಬನು ಮಾಡಿದ ಕರ್ಮದ ಫಲವನ್ನು ಎಲ್ಲರೂ ಅನುಭವಿಸಬೇಕಲ್ಲವೆ? ಒಬ್ಬನಿಗೆ ಜ್ಞಾನವಾದರೆ ಎಲ್ಲರಿಗೂ ಮುಕ್ತಿಯಾಗಬೇಕಲ್ಲವೆ?- ಎಂದು ಕೆಲವರು ಆಕ್ಷೇಪಿಸುವದುಂಟು.

ಮೊದಲನೆಯದಾಗಿ ಆತ್ಮೈಕತ್ವವನ್ನು ಒಪ್ಪಿದರೆ ಒಬ್ಬನ ಕರ್ಮಫಲವಾಗಲಿ, ಅವನ ಕರ್ಮದ ಫಲವನ್ನು ಅನುಭವಿಸುವದಕ್ಕೆ ಬೇರೆಯ ಜೀವರುಗಳಾಗಲಿ, ಇರುವದೇ ಇಲ್ಲವಾದ್ದರಿಂದ ಈ ಆಕ್ಷೇಪಕ್ಕೆ ಅವಕಾಶವೇ ಇಲ್ಲ- ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಜೀವರು ವ್ಯವಹಾರದಲ್ಲಿ ಅನೇಕರಾಗಿ ಕಾಣುವ ಸ್ಥಿತಿಯಲ್ಲಿಯೇ ಕರ್ಮ, ಕರ್ಮಫಲ- ಮುಂತಾದವುಗಳನ್ನು ಹೇಳಬೇಕಾಗಿರುವದರಿಂದ ಈ ದೃಷ್ಟಿಯಿಂದಲೇ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಬೇಕಾಗಿದೆ

ಆಕಾಶವು ಒಂದೇ ಆದರೂ ಘಟಾಕಾಶಗಳು ಹಲವು ಇರುವಂತೆಯೂ ಸೂರ್ಯನು ಒಬ್ಬನೇ ಆದರೂ ಜಲಸೂರ್ಯಕರೂಪವಾದ ಪ್ರತಿಬಿಂಬಗಳು ಹಲವು ಇರುವಂತೆಯೂ ಪರಮಾತ್ಮನು ಒಬ್ಬನೇ ಆದರೂ ಜೀವರು ಹಲವರು ಇರಬಹುದಾಗಿದೆ. ಜೀವನು ಪರಮಾತ್ಮನ ಅಂಶವೆಂದರೆ ಘಟಾಕಾಶ, ಜಲ ಸೂರ್ಯಕಾದಿಗಳಂತೆ ಎಂದು ಹಿಂದೆ (೧೩೩) ತಿಳಿಸಿಯೇ ಇರುತ್ತೇವೆ. ಈ ದೃಷ್ಟಾಂತಗಳನ್ನು ಈಗ ಸ್ವಲ್ಪ ಬಿಡಿಸಿನೋಡೋಣ. ಒಂದು ಘಟಾಕಾಶದಲ್ಲಿ ಅಧ್ಯಾರೋಪಿತವಾದ ಧೂಳು, ಹೊಗೆ-ಮುಂತಾದವು ಮತ್ತೊಂದು ಘಟಾಕಾಶಕ್ಕೆ ತಟ್ಟುವದಿಲ್ಲ. ಒಂದು ಘಟಾಕಾಶವು ಘಟವೆಂಬ ಉಪಾಧಿತಂತ್ರವಾಗಿ ಹುಟ್ಟಿದರೆ, ನಾಶವಾದರೆ, ಘಟದ ಜೊತೆಯಲ್ಲಿ ಸ್ಥಲದಿಂದ ಸ್ಥಲಕ್ಕೆ ಹೋದರೆ ಅಥವಾ ಬಂದರೆ ಮತ್ತೊಂದು ಹುಟ್ಟುವದಿಲ್ಲ, ನಾಶವಾಗುವದಿಲ್ಲ, ಹೋಗುವದಿಲ್ಲ, ಬರುವದಿಲ್ಲ. ಇದರಂತೆ ಒಂದು ಜಲಸೂರ್ಯಕವು ಕಾರಣ ವಿಶೇಷದಿಂದ ಅಲುಗಾಡಿದಂತೆ ತೋರಿದರೆ ಮಿಕ್ಕ ಪ್ರತಿಬಿಂಬಗಳು ಅಲುಗಾಡುವದಿಲ್ಲ. ಘಟಾಕಾಶ, ಸೂರ್ಯ, ಪ್ರತಿಬಿಂಬ- ಇವುಗಳ ದೃಷ್ಟಾಂತವನ್ನು ವೇದಾಂತದ ಮೂಲಗ್ರಂಥಗಳಲ್ಲಿ ಕೊಟ್ಟಿರುವದು ಜೀವತ್ವವೂ ಜೀವಾನೇಕತ್ವವೂ ಬ್ರಹ್ಮದಲ್ಲಿ ಕಲ್ಪಿತವಾಗಿದೆ ಎಂಬುದನ್ನು ವಿಶದಗೊಳಿಸುವದಕ್ಕೇ ಹೊರತು ನಿಜವಾಗಿ ಬ್ರಹ್ಮಕ್ಕೆ ಏತರಿಂದಾದರೂ ಅವಚ್ಛೇದವಾಗಿದೆಯೆಂದಾಗಲಿ ಪ್ರತಿಬಿಂಬವು ಆಗಿದೆಯೆಂದಾಗಲಿ ತಿಳಿಸುವದಕ್ಕಲ್ಲ. ಇದನ್ನರಿಯದೆ ಕೆಲವರು ವ್ಯಾಖ್ಯಾನಪ್ರಸ್ಥಾನದವರು ಅವಚ್ಛೇದವಾದ ಮತ್ತು ಪ್ರತಿಬಿಂಬವಾದ- ಎಂಬ ಎರಡು ವಾದಗಳನ್ನು ಕಲ್ಪಿಸಿಕೊಂಡು ಒಬ್ಬರೊಡನೊಬ್ಬರು ಜಗಳವಾಡುತ್ತಿರುತ್ತಾರೆ. ಇದಂತಿರಲಿ. ಅಕಲ್ಪಿತಜೀವರನ್ನು ಒಪ್ಪುವ ಕಪಿಲ ಕಾಣಾದಾದಿಮತಗಳಲ್ಲಿ ಆತ್ಮನು ಸರ್ವಗತನಾಗಿರುವದರಿಂದ ಒಬ್ಬ ಜೀವನ ಕರ್ಮಫಲಾದಿಗಳು ಮಿಕ್ಕವರಿಗೂ ಬಂದರೂ ಬರಬಹುದು. ಕಲ್ಪಿತಜೀವರನ್ನೊಪ್ಪುವ ವೇದಾಂತಿಗಳಿಗೆ ಈ ದೋಷವು ಸ್ವಲ್ಪವೂ ತಾಕುವಹಾಗಿಲ್ಲ.

(೧) ಯಥೈಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿರ್ಯುತೇ।

ನ ಸರ್ವೇ ಸಂಪ್ರಯುಜ್ಯನ್ತೇ ತದ್ವಜ್ಜೀವಾಃ ಸುಖಾದಿಭಿಃ॥ -ಮಾಂ.ಕಾ. ೩-೫

ಸರ್ವದೇಹೇಷು ಆತ್ಮೈಕತ್ವೇ ಏಕಸ್ಮಿನ್ ಜನನಮರಣಸುಖದುಃಖಾದಿಮತಿ ಆತ್ಮನಿ ಸರ್ವಾತ್ಮನಾಂ ತತ್ಸಂಬನ್ಧಃ ಕ್ರಿಯಾಫಲಸಾಙ್ಕರ್ಯಂ ಚ ಸ್ಯಾತ್ ಇತಿ ಯೇ ಆಹುರ್ದ್ವೈತಿನಃ ತಾನ್ ಪ್ರತಿ ಇದಮುಚ್ಯತೇ- ಯಥಾ ಏಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿರ್ಯುತೇ ಸಂಯುಕ್ತೇ ನ ಸರ್ವೇ ಘಟಾಕಾಶಾದಯಃ ತದ್ರಜೋಧೂಮಾದಿಭಿಃ ಸಂಪ್ರಯುಜ್ಯನ್ತೇ ತದ್ವತ್ ಜೀವಾಃ ಸುಖಾದಿಭಿಃ॥ -ಮಾಂ.ಕಾ.ಭಾ ೩-೫-೧೩೪,೧೩೫.

(೨) ನ ಹಿ ಕರ್ತುರ್ಭೋಕ್ತುಶ್ಚ ಆತ್ಮನಃ ಸನ್ತತಃ ಸರ್ವೈಃ ಶರೀರೈಃ ಸಂಬನ್ಧೋಽಸ್ತಿ। ಉಪಾಧಿತನ್ತ್ರೋ ಹಿ ಜೀವಃ ಇತ್ಯುಕ್ತಮ್। ಉಪಾಧ್ಯಸನ್ತಾನಾಚ್ಚ ನಾಸ್ತಿ ಜೀವಸನ್ತಾನಃ। ತತಶ್ಚ ಕರ್ಮವ್ಯತಿಕರಃ ಫಲವ್ಯತಿಕರೋ ವಾ ನ ಭವಿಷ್ಯತಿ॥ -ಸೂ. ಭಾ. ೨-೩-೪೯-೧೬೭.

(೩) ಆಭಾಸ ಏವ ಚ ಏಷ ಜೀವಃ ಪರಸ್ಯ ಆತ್ಮನೋ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ। ನ ಸ ಏವ ಸಾಕ್ಷಾತ್, ನಾಪಿ ವಸ್ತ್ವನ್ತರಮ್। ಅತಶ್ಚ ಯಥಾ ನೈಕಸ್ಮಿನ್ ಜಲಸೂರ್ಯಕೇ ಕಮ್ಪಮಾನೇ ಜಲಸೂರ್ಯಕಾನ್ತರಂ ಕಮ್ಪತೇ, ಏವಂ ನೈಕಸ್ಮಿನ್ ಜೀವೇ ಕರ್ಮಫಲಸಂಬನ್ಧಿನಿ ಜೀವಾನ್ತರಸ್ಯ ತತ್ಸಂಬನ್ಧಃ। ಏವಮಪಿ ಅವ್ಯತಿಕರ ಏವ ಕರ್ಮಫಲಯೋಃ॥ -ಸೂ. ಭಾ. ೨-೩-೫೦-೧೬೮.

(೪) ಮರಣೇ ಸಂಭವೇ ಚೈವ ಗತ್ಯಾಗಮನಯೋರಪಿ।

ಸ್ಥಿತೌ ಸರ್ವಶರೀರೇಷು ಹ್ಯಾಕಾಶೇನಾವಿಲಕ್ಷಣಃ॥ -ಮಾಂ.ಕಾ. ೩-೯.

ಘಟಾಕಾಶಜನ್ಮನಾಶಗಮನಾಗಮನಸ್ಥಿತಿವತ್ ಸರ್ವಶರೀರೇಷು ಆತ್ಮನೋ ಜನ್ಮ ಮರಣಾದಿಃ। ಆಕಾಶೇನ ಅವಿಲಕ್ಷಣಃ ಪ್ರತ್ಯೇತವ್ಯಃ ಇತ್ಯರ್ಥಃ॥ -ಮಾಂ.ಕಾ.ಭಾ. ೩-೯-೧೪೬.

೧೪೩. ಸೃಷ್ಟವಾದ ಶರೀರಗಳಲ್ಲಿ ಪರಮೇಶ್ವರನೇ ಜೀವನಾಗಿ ಒಳಹೊಕ್ಕಿರುವನೆಂದು ಶ್ರುತಿಯು ಹೇಳುತ್ತದೆ. 'ಪರಮೇಶ್ವರನೇ ನೀನು' ಎಂದೂ ಉಪದೇಶಿಸುತ್ತದೆ. ಹೀಗಿರುವದರಿಂದ ಪರಮೇಶ್ವರನೇ ಜಗತ್ತನ್ನು ಸೃಷ್ಟಿಸಿ ಶರೀರವನ್ನು ಪಡೆದುಕೊಂಡು ಸಂಸಾರಿಯಾಗಿರುವನೆಂದು ಹೇಳಿದಂತೆ . ಆಗುತ್ತದೆ; ಸ್ವತಂತ್ರನಾದ ಈಶ್ವರನು ಪರತಂತ್ರನಾಗಿ ಬದ್ಧನಾಗಿರುವನೆಂದಾಗಲಿ ಸರ್ವಜ್ಞನಾಗಿ ಅತ್ಯಂತಪರಿಶುದ್ಧನಾಗಿರುವ ಈಶ್ವರನು ಮಲಿನವಾದ ಶರೀರವನ್ನು ತಾನೆಂದು ತಿಳಿದುಕೊಂಡಿರುವನೆಂದಾಗಲಿ ಹೇಳುವದಕ್ಕಾಗುವದಿಲ್ಲ. ಜೀವನು ಪರಮೇಶ್ವರನೇ ಆಗಿದ್ದರೆ ಅವನು ತನ್ನ ಸಂಸಾರಬಂಧವನ್ನು ತಾನೇ ಬಿಡುಗಡೆಮಾಡಿಕೊಳ್ಳಬಹುದು; ಆದರೆ ಹಾಗೆ ಆಗುವಂತಿಲ್ಲ. ಆದ್ದರಿಂದ ಜೀವೇಶ್ವರೈಕ್ಯವು ಶ್ರುತಿಯ ತಾತ್ಪರ್ಯವಾಗಿರಲಾರದು- ಎಂಬುದೊಂದು ಆಕ್ಷೇಪವಿದೆ. ಈ ಆಕ್ಷೇಪವನ್ನು ಪರಿಹರಿಸಿಕೊಳ್ಳುವದಕ್ಕಾಗಿ ಜೀವನಿಗಿಂತ ಬೇರೆಯಾಗಿಯೇ ಈಶ್ವರನಿರುವನೆಂದರೆ ಅದ್ವೈತಹಾನಿಯಾಗುತ್ತದೆ.

ಜೀವನು ಕಲ್ಪಿತನಾಗಿರುವದರಿಂದ ದೋಷವಿಲ್ಲ ಎಂದರೆ ಕಲ್ಪಿತನಾದ ಜೀವನೂ ಅಕಲ್ಪಿತನಾದ ಈಶ್ವರನೂ ಒಂದೇ ಎಂದು ಹೇಳುವದು ಹೇಗೆ ಸರಿಯಾದೀತು? ಜೀವತ್ವವನ್ನು ಪರಮಾರ್ಥವೆಂದಾದರೂ ಒಪ್ಪಬೇಕು, ಅಪರಮಾರ್ಥವೆಂದಾದರೂ ಒಪ್ಪಬೇಕು. ಎರಡನ್ನೂ ಹೇಳಿದರೆ ಹೇಗೆ? -ಎಂಬ ಶಂಕೆಯು ಕೆಲವು ಜಿಜ್ಞಾಸುಗಳಿಗೆ ಬರಬಹುದು.

ಇದಕ್ಕೆ ಪರಿಹಾರವೇನೆಂದರೆ: ಜೀವನು ಎಂಬ ಶಬ್ದಕ್ಕೆ ಚೈತನ್ಯವು ಎಂದಿಷ್ಟೇ ಅರ್ಥವಾದರೆ ಜೀವನು ಪರಮಾರ್ಥವಸ್ತುವೇ ಸರಿ; ಆದರೆ ಆ ದೃಷ್ಟಿಯಲ್ಲಿ ಜೀವನಲ್ಲಿ ಜೀವತ್ವವೇ ಇರುವದಿಲ್ಲ. ಜೀವನು ಎಂದರೆ ಸಂಸಾರದುಃಖವನ್ನು ಅನುಭವಿಸುವವನು, ಕಿಂಚಿಜ್ಜ್ಞನು, ಅಲ್ಪಶಕ್ತಿಯುಳ್ಳವನು- ಎಂದು ಅರ್ಥವಾದರೆ, ಉಪಾಧಿಯಾದ ಅಂತಃಕರಣದ ಸಂಬಂಧದಿಂದಾದ ಚಿದಾಭಾಸಕ್ಕೆ ಆಗುವಂತೆ ತೋರುವ ದುಃಖವು ನಿಜವಾಗಿ ಆತ್ಮನಿಗೆ ಆಗುವದಿಲ್ಲವೆಂದು ಹೇಳಬೇಕು. ಇದನ್ನು ತಿಳಿಸುವದಕ್ಕಾಗಿಯೇ ಜೀವನು ಕನ್ನಡಿಯಲ್ಲಿ ತೋರುವ ಪ್ರತಿಬಿಂಬದಂತೆ ಪರಮಾತ್ಮನ ಆಭಾಸಮಾತ್ರನು ಎಂದು ವೇದಾಂತಿಗಳು ಹೇಳುವರು. ಈ ದೃಷ್ಟಿಯಿಂದ ನೋಡಿದಾಗ ಜೀವನೂ ಅವನಿಗೆ ಆಗುವ ಸುಖದುಃಖಗಳೂ ಎಲ್ಲವೂ ಅನೃತವೇ. 'ಯಕ್ಷನಿಗೆ ತಕ್ಕ ಬಲಿ' ಎಂಬ ಸಂಸ್ಕೃತದ ಗಾದೆಯಂತೆ ಕಲ್ಪಿತಜೀವನಿಗೆ ಕಲ್ಪಿತಭೋಕ್ತೃತ್ವವಿರುವದು ಸ್ವಾಭಾವಿಕವಾಗಿದೆ. ಕೆಲವು ಶ್ರುತಿಗಳಲ್ಲಿ ಕರ್ತೃತ್ವಭೋಕ್ತೃತ್ವವು ಜೀವನಿಗಲ್ಲ, ಅಂತಃಕರಣಕ್ಕೇ ಎಂದು ಹೇಳಿರುವದು ಕರ್ತೃತ್ವಭೋಕ್ತೃತ್ವವು ಉಪಾಧಿಪಕ್ಷಪಾತಿ ಎಂದು ತಿಳಿಸುವದಕ್ಕೇ ಹೊರತು ಅವಿದ್ಯೆಯಿಂದ ಕಲ್ಪಿತವಾದ ಅಂತಃಕರಣಕ್ಕೆ ನಿಜವಾಗಿ ಸುಖದುಃಖಭೋಗವುಂಟೆಂದು ತಿಳಿಸುವದಕ್ಕಲ್ಲ. ಈ ಎಲ್ಲಾ ಕಾರಣಗಳಿಂದಲೂ ಜೀವನು ಪರಮಾತ್ಮನೇ ಎಂದು ಹೇಳುವದೂ ಅವಿದ್ಯಾಕಲ್ಪಿತಸ್ವರೂಪವೆಂದು ಹೇಳುವದೂ ಪರಸ್ಪರ ವಿರುದ್ಧವಲ್ಲ; ದೃಷ್ಟಿಭೇದದಿಂದ ಎರಡೂ ಸರಿಯಾಗುತ್ತದೆ.

(೧) ತಥಾ ಚ ಬ್ರಾಹ್ಮಣಮ್ ''ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'' (ಛಾಂ. ೬-೩-೨) ಇತ್ಯೇವಂಜಾತೀಯಕಂ ಪರಸ್ಯೈವ ಆತ್ಮನಃ ಜೀವಭಾವೇನ ಅವಸ್ಥಾನಂ ದರ್ಶಯತಿ ॥ -ಸೂ. ಭಾ. ೧-೪-೨೨-೩೮೪.

(೨) ನ ಚ ಬ್ರಹ್ಮಣೋಽನ್ಯೋ ಗುಹಾಯಾಂ ನಿಹಿತೋಽಸ್ತಿ ''ತತ್ಸೃಷ್ಟ್ವಾ। ತದೇವಾನುಪ್ರಾವಿಶತ್'' (ತೈ. ೨-೬) ಇತಿ ಸ್ರಷ್ಟುರೇವ ಪ್ರವೇಶಶ್ರವಣಾತ್॥

-ಸೂ. ಭಾ. ೧-೪-೨೨-೩೮೮.

(೩) ಜೀವೋ ಹಿ ನಾಮ ದೇವತಾಯಾ ಆಭಾಸಮಾತ್ರಮ್ । ಬುದ್ಧ್ಯಾದಿಭೂತಮಾತ್ರಾಸಂಸರ್ಗಜನಿತಃ-ಆದರ್ಶೇ ಇವ ಪ್ರವಿಷ್ಟಃ ಪುರುಷಪ್ರತಿಬಿಮ್ಬಃ, ಜಲಾದಿಷ್ವಿವ ಚ ಚನ್ದ್ರ

ಸೂರ್ಯಾದೀನಾಮ್। ಅಚಿನ್ತ್ಯಾನನ್ತಶಕ್ತಿಮತ್ಯಾ ದೇವತಾಯಾ ಬುದ್ಧ್ಯಾದಿಸಂಬನ್ಧಃ ಚೈತನ್ಯಾಭಾಸಃ, ದೇವತಾಸ್ವರೂಪವಿವೇಕಾಗ್ರಹಣನಿಮಿತ್ತಃ 'ಸುಖೀ', 'ದುಃಖೀ', 'ಮೂಢಃ' ಇತ್ಯಾದ್ಯನೇಕವಿಕಲ್ಪಪ್ರತ್ಯಯಹೇತುಃ। ಛಾಯಾಮಾತ್ರೇಣ ಜೀವರೂಪೇಣ ಅನುಪ್ರವಿಷ್ಟತ್ವಾತ್ ದೇವತಾ ನ ದೈಹಿಕೈಃ ಸ್ವತಃ ಸುಖದುಃಖಾದಿಭಿಃ ಸಂಬಧ್ಯತೇ। ಯಥಾ ಪುರುಷಾದಿತ್ಯಾದಯಃ ಆದರ್ಶೋದಕಾದಿಷು ಛಾಯಾಮಾತ್ರೇಣ ಅನುಪ್ರವಿಷ್ಟಾಃ ಆದರ್ಶೋದಕಾದಿದೋಷೈಃ ನ ಸಂಬಧ್ಯನ್ತೇ ತದ್ವತ್ ದೇವತಾಪಿ॥ -ಛಾಂ. ಭಾ. ೬-೩-೨-೪೬೪.

(೪) ನನು ಛಾಯಾಮಾತ್ರಶ್ಚೇತ್ ಜೀವಃ ಮೃಷೈವ ಪ್ರಾಪ್ತಃ। ತಥಾ ಪರಲೋಕೇಹಲೋಕಾದಿ ಚ ತಸ್ಯ । ನೈಷ ದೋಷಃ। ಸದಾತ್ಮನಾ ಸತ್ಯತ್ವಾಭ್ಯುಪಗಮಾತ್। ಸರ್ವಂ ಚ ನಾಮರೂಪಾದಿ ಸದಾತ್ಮನೈವ ಸತ್ಯಂ ವಿಕಾರಜಾತಮ್, ಸ್ವತಸ್ತು ಅನೃತಮೇವ। 'ವಾಚಾರಮ್ಭಣಂ ವಿಕಾರೋ ನಾಮಧೇಯಮ್' ಇತ್ಯುಕ್ತತ್ವಾತ್, ತಥಾ ಜೀವೋಽಪಿ' ಇತಿ । ಯಕ್ಷಾನುರೂಪೋ ಹಿ ಬಲಿಃ ಇತಿ ನ್ಯಾಯಪ್ರಸಿದ್ಧಿಃ। -ಛಾಂ. ಭಾ. ೬-೩-೨-೪೬೫.

(೫) ಇದಂ ಹಿ ಕರ್ತೃತ್ವಂ ಭೋಕ್ತೃತ್ವಂ ಚ ಸತ್ತ್ವಕ್ಷೇತ್ರಜ್ಞಯೋಃ ಇತರೇತರಸ್ವಭಾವಾವಿವೇಕಕೃತಂ ಕಲ್ಪ್ಯತೇ। ಪರಮಾರ್ಥತಸ್ತು ನಾನ್ಯತರಸ್ಯಾಪಿ ಸಂಭವತಿ। ಅಚೇತನತ್ವಾತ್ ಸತ್ತ್ವಸ್ಯ, ಅವಿಕ್ರಿಯತ್ವಾಚ್ಚ ಕ್ಷೇತಜ್ಞಸ್ಯ। ಅವಿದ್ಯಾಪ್ರತ್ಯುಪಸ್ಥಾಪಿತಸ್ವಭಾವತ್ವಾಚ್ಚ ಸತ್ತ್ವಸ್ಯ ಸುತರಾಂ ನ ಸಂಭವತಿ ॥ -ಸೂ. ಭಾ. ೧-೨-೧೨-೧೭೫.

(೬) ಯಾವದ್ ಹಿ ಅವಿದ್ಯಾ ನ ನಿವರ್ತತೇ ತಾವತ್ ಧರ್ಮಾದಿಗೋಚರತ್ವಂ ಜೀವಸ್ಯ ಜೀವತ್ವಂ ಚ ನ ನಿವರ್ತತೇ। ತನ್ನಿವೃತ್ತೌ ತು ಪ್ರಾಜ್ಞ ಏವ 'ತತ್ತ್ವಮಸಿ' ಇತಿ ಶ್ರುತ್ಯಾ ಪ್ರತ್ಯಾಯ್ಯತೇ॥ -ಸೂ. ಭಾ. ೧-೪-೬-೩೫೧.

# ೧೯. ಪಂಚಕೋಶವಿವೇಕ

೧೮೦. ಪಂಚಕೋಶವಿವೇಕಕ್ರಮದಿಂದ ಸರ್ವಸಾಕ್ಷಿರೂಪನಾದ ಆತ್ಮನನ್ನು ತಿಳಿಸಿಕೊಡುವದಕ್ಕೆ ಈ ಅಧ್ಯಾಯವನ್ನು ಪ್ರಾರಂಭಿಸಿದೆ. ಜೀವೇಶ್ವರೈಕ್ಯವನ್ನು ಒಪ್ಪಿರುವ ವೇದಾಂತದಲ್ಲಿ ಸಂಸಾರಿಯಾದ ಜೀವನು ಕಲ್ಪಿತನು, ಅವನ ಪರಮಾರ್ಥಸ್ವರೂಪವಾದ ಸಾಕ್ಷಿಯು ಈಶ್ವರನೇ ಎಂದು ಪ್ರತಿಪಾದಿಸಿರುತ್ತದೆ. ಜೀವರುಗಳು ಅನೇಕರಾಗಿ ಕಂಡರೂ ಆ ಅನೇಕತ್ವವು ಮಿಥ್ಯೆಯಾಗಿರುವದರಿಂದ ಜೀವೇಶ್ವರೈಕ್ಯಕ್ಕೆ ಯಾವ ಹಾನಿಯೂ ಇಲ್ಲವೆಂಬುದು ಸ್ಪಷ್ಟವಾಗಿರುತ್ತದೆ. ಆದರೆ ಜೀವನು ಕಲ್ಪಿತನೆಂದು ನಿರ್ಣಯಮಾಡುವದಕ್ಕೆ ಆಧಾರವಾಗಿರುವ ಸಾಕ್ಷ್ಯನುಭವವು ಒಂದೇ ಎಂಬುದಕ್ಕೆ ಪ್ರಮಾಣವಿಲ್ಲ. ಸಾಕ್ಷಿಯು ಒಬ್ಬನೇ ಆದರೆ ಒಬ್ಬ ಜೀವನ ಸುಖದುಃಖಾದಿಗಳನ್ನು ಮತ್ತೊಬ್ಬ ಜೀವನ ಸಾಕ್ಷಿಯು ಬೆಳಗುವದಿಲ್ಲವೇಕೆ ?-ಎಂದು ಶಂಕಿಸಿ ಕೆಲವರು

ವಾದಿಗಳು ಜೀವಸಾಕ್ಷಿಗಳು ಅನೇಕವೆಂತಲೂ ಈಶ್ವರಸಾಕ್ಷಿಯು ಜೀವಸಾಕ್ಷಿಗಳಿಗಿಂತ ಬೇರೆ ಎಂತಲೂ ಕಲ್ಪಿಸಿರುತ್ತಾರೆ.

ಆದರೆ ಸಾಕ್ಷಿತ್ವದ ಸ್ವಭಾವವನ್ನು ಮರೆತದ್ದರಿಂದ ಈ ಅನರ್ಥಕರವಾದ ಕಲ್ಪನೆಯು ಏರ್ಪಟ್ಟಿರುತ್ತದೆ. ಸಾಕ್ಷಿಯು ಒಬ್ಬನಿರಬೇಕು ಅಥವಾ ಸಾಕ್ಷಿಗಳು ಅನೇಕರಿರಬೇಕು ಎಂದು ಅನುಮಾನದಿಂದ ಸಾಕ್ಷಿಯನ್ನು ಸಾಧಿಸತಕ್ಕದ್ದಲ್ಲ. ಸಾಕ್ಷಿ ಎಂದರೆ ಪ್ರಮಾತೃವನ್ನು ಕೂಡ ಬೆಳಗುತ್ತಿರುವ ಆತ್ಮಚೈತನ್ಯವು. ಆ ಚೈತನ್ಯದಲ್ಲಿ ಪ್ರಮೇಯಗತವಾದ ಸಂಖ್ಯಾದಿಗುಣಗಳು ಹೇಗೆ ಬರಬೇಕು ? ಒಂದೊಂದು ದೇಹಕ್ಕೆ ಒಬ್ಬೊಬ್ಬ ಸಾಕ್ಷಿಯು ಇರಬೇಕೆಂದು ಕಲ್ಪಿಸುವಾಗಲೂ ಆ ಸಾಕ್ಷಿಗಳನ್ನು ಕಲ್ಪಿಸುವ ಪ್ರಮಾತೃವನ್ನು ನೇರಾಗಿ ಬೆಳಗುತ್ತಿರುವ ಚೈತನ್ಯವೇ ನಿಜವಾದ ಸಾಕ್ಷಿಯು. ಸಾಕ್ಷಿಯು ಬೆಳಗುವ ಸಾಕ್ಷ್ಯದಲ್ಲಿಯೇ ದೇಶಕಾಲಗಳೂ ಅಡಕವಾಗಿರುತ್ತವೆ; ದೇಶಕಾಲಗಳಿಲ್ಲದೆ ಸಂಖ್ಯೆಯು ಇರಲಾರದು. ಆದ್ದರಿಂದ ಅನೇಕತ್ವವು ಸಾಕ್ಷ್ಯಗತವಾಗಿರುವದೇ ಹೊರತು ಸಾಕ್ಷಿಗೆ ಸೇರಿದ್ದಲ್ಲ. ಜೀವಸಾಕ್ಷಿಯೇ ನಿಜವಾಗಿ ನಮ್ಮ ಆತ್ಮನಾಗಿರುವದರಿಂದ ಅದಕ್ಕಿಂತ ಭಿನ್ನವೆಂದು ಕಲ್ಪಿಸುವ ಈಶ್ವರಸಾಕ್ಷಿಯು ಅನಾತ್ಮವೇ ಆಗುತ್ತದೆ. ಸಾಕ್ಷಿನಾನಾತ್ವವು ಯುಕ್ತಿಗೆ ವಿರುದ್ಧ; ಯಾವ ಶ್ರುತಿಯಲ್ಲಿಯೂ ಪ್ರತಿಪಾದಿತವಾಗಿಲ್ಲ. ಈ ವಿಷಯವನ್ನು ಹಿಂದೆಯೇ (೮೫) ಒಮ್ಮೆ ತಿಳಿಸಲಾಗಿದೆ. ಈ ಅಭಿಪ್ರಾಯವು ಈಶ್ವರನು ಸರ್ವಜೀವರುಗಳಲ್ಲಿಯೂ ಇರುವ ಒಬ್ಬನೇ ಒಬ್ಬನಾದ ಅದ್ವಿತೀಯನಿರ್ಗುಣಸಾಕ್ಷಿಚೈತನ್ಯವು ಎಂದು ಸಾರುತ್ತಿರುವ ಶ್ರುತಿಗೂ ವಿರುದ್ಧವಾಗಿರುತ್ತದೆ. ಆದ್ದರಿಂದ ಅನೇಕ ಘಟಾಕಾಶಗಳಂತೆಯೂ ಅನೇಕ ಜಲಸೂರ್ಯಪ್ರತಿಬಿಂಬಗಳಂತೆಯೂ ಇರುವ ಜೀವರು ಚಿದಾಭಾಸರೂಪರಾಗಿರುವದರಿಂದಲೂ ಈ ಆಭಾಸವು ಅವಿದ್ಯಾಕಲ್ಪಿತವಾಗಿರುವದರಿಂದ ಅದಕ್ಕೆ ಸಂಬಂಧಪಟ್ಟ ಸಂಸಾರವೂ ಆವಿದ್ಯಕವಾಗಿರುತ್ತದೆ; ಪರಮಾರ್ಥರೂಪವಾಗಿರುವ ಸಾಕ್ಷಿಯಾದ ಪರಮೇಶ್ವರನಿಗೆ ತಟ್ಟುವದಿಲ್ಲ- ಎಂಬ ಅದ್ವೈತವೇದಾಂತಿಗಳ ಸಿದ್ಧಾಂತಕ್ಕೆ ಯಾವ ಆಕ್ಷೇಪವೂ ಇರುವದಿಲ್ಲ.

(೧) ಈಶ್ವರಶ್ಚೇದನಾತ್ಮಾ ಸ್ಯಾತ್ ನಾನಾವಸ್ಮೀತಿ ಧಾರಯೇತ್।
ಆತ್ಮಾ ಚೇದೀಶ್ವರೋಽಸ್ಮೀತಿ ವಿದ್ಯಾ ಸಾಽನ್ಯನಿವರ್ತಿಕಾ ॥ -ಉಪ. ಪದ್ಯ ೩-೧.

(೨) ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ॥ -ಶ್ವೇ. ೬-೧೧.

(೩) ಯಥಾ ಚ ಆಕಾಶೋ ಘಟಾದಿಷು ಗಚ್ಛತ್ಸು ಗಚ್ಛನ್ನಿವ ವಿಭಾವ್ಯಮಾನೋಽಪಿ ನ ಪರಮಾರ್ಥತೋ ಗಚ್ಛತಿ । ಯಥಾ ಚ ಉದಶರಾವಾದಿಕಮ್ಪನಾತ್ ತದ್ಗತೇ ಸೂರ್ಯಪ್ರತಿಬಿಮ್ಬೇ ಕಮ್ಪಮಾನೇಽಪಿ ನ ತದ್ವಾನ್ ಸೂರ್ಯಃ ಕಮ್ಪತೇ, ಏವಮ್ ಅವಿದ್ಯಾಪ್ರತ್ಯುಪಸ್ಥಾಪಿತೇ

ಬುದ್ಧ್ಯಾದ್ಯುಪಹಿತೇ ಜೀವಾಖ್ಯೇ ಅಂಶೇ ದುಃಖಾಯಮಾನೇಽಪಿ ನ ತದ್ವಾನ್ ಈಶ್ವರೋ ದುಃಖಾಯತೇ। ಜೀವಸ್ಯಾಪಿ ತು ದುಃಖಪ್ರಾಪ್ತಿಃ ಅವಿದ್ಯಾನಿಮಿತ್ತೈವ ಇತ್ಯುಕ್ತಮ್। ತಥಾ ಚ ಅವಿದ್ಯಾನಿಮಿತ್ತಜೀವಭಾವವ್ಯುದಾಸೇನ ಬ್ರಹ್ಮಭಾವಮೇವ ಜೀವಸ್ಯ ಪ್ರತಿಪಾದಯನ್ತಿ ವೇದಾನ್ತಾಃ ''ತತ್ತ್ವಮಸಿ'' ಇತ್ಯೇವಮಾದಯಃ ॥ -ಸೂ. ಭಾ. ೨-೩-೪೬-೧೬೨.

(೪) ಅಯಂ ಹಿ ವೃಕ್ಷಃ ಊರ್ಧ್ವಮೂಲಃ, ಅವಾಕ್ಶಾಖಃ ಅಶ್ವತ್ಥಃ, ಅವ್ಯಕ್ತ ಮೂಲಪ್ರಭವಃ, ಕ್ಷೇತ್ರಸಂಜ್ಞಕಃ ಸರ್ವಪ್ರಾಣಿಕರ್ಮಫಲಾಶ್ರಯಃ। ತಂ ಪರಿಷ್ವಕ್ತೌ ಸುಪರ್ಣಾವಿವ ಅವಿದ್ಯಾಕಾಮಕರ್ಮವಾಸನಾಶ್ರಯಲಿಙ್ಗೋಪಾಧ್ಯಾತ್ಮೇಶ್ವರೌ। ತಯೋಃ ಪರಿಷ್ವಕ್ತಯೋಃ ಅನ್ಯಃ ಏಕಃ ಕ್ಷೇತ್ರಜ್ಞಃ ಲಿಙ್ಗೋಪಾಧಿಃ ವೃಕ್ಷಮಾಶ್ರಿತಃ ಪಿಪ್ಪಲಂ ಕರ್ಮನಿಷ್ಪನ್ನಂ ಸುಖದುಃಖಲಕ್ಷಣಂ ಫಲಂ ಸ್ವಾದು ಅನೇಕವಿಚಿತ್ರವೇದನಾಸ್ವಾದರೂಪಂ ಸ್ವಾದು ಅತ್ತಿ ಭಕ್ಷಯತಿ ಉಪಭುಙ್ಕ್ತೇ ಅವಿವೇಕತಃ। ಅನಶ್ನನ್ ಅನ್ಯಃ ಇತರಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಸರ್ವಜ್ಞಃ ಸರ್ವಸತ್ತ್ವೋಪಾಧಿಃ ಈಶ್ವರಃ ನಾಶ್ನಾತಿ। ಪ್ರೇರಯಿತಾ ಹಿ ಅಸೌ ಉಭಯೋರ್ಭೋಜ್ಯ-ಭೋಕ್ತ್ರೋಃ ನಿತ್ಯಸಾಕ್ಷಿತ್ವಸತ್ತಾಮಾತ್ರೇಣ॥ -ಮುಂ. ಭಾ. ೩-೧-೧-೯೧.

೧೪೧. ಸಾಕ್ಷಿಯು ಪ್ರಮಾತೃವನ್ನೂ ನೋಡುತ್ತಿರುವದರಿಂದ ಪ್ರಮಾತೃವು ಪ್ರಮೇಯಕ್ಕಿಂತ ಭಿನ್ನನಾಗಿರುವಂತೆ, ಪ್ರಮಾತ್ರಾದಿಗಳೆಲ್ಲಕ್ಕಿಂತ ಭಿನ್ನನಾಗಿರಬಹುದು. ಆದರೆ ಶರೀರೇಂದ್ರಿಯಮನೋಬುದ್ಧಿಗಳಿಗಿಂತ ಪ್ರಮಾತೃವು ಭಿನ್ನನಾಗಿದ್ದಮಾತ್ರಕ್ಕೆ ಪ್ರಮಾತೃವಾಗಲಿ ದೇಹೇಂದ್ರಿಯಾದಿಗಳಾಗಲಿ ಅಸತ್ಯವಾಗಿರಬೇಕೆಂಬುದಿಲ್ಲ. ಏಕೆಂದರೆ ದೇಹಾದಿಗಳು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿರುತ್ತವೆ. ಆದ್ದರಿಂದ ಘಟಾದಿ ಗಳಿರುವವರೆಗೆ ಘಟಾದ್ಯಾಕಾಶಗಳು ನಿಜವಾಗಿರುವಂತೆ ಅಥವಾ ಜಲಾದಿಗಳಿರುವವರೆಗೆ ಜಲಾದಿ ಪ್ರತಿಬಿಂಬಗಳೂ ನಿಜವಾಗಿರುವಂತೆ, ಪ್ರಮಾತೃವೂ ಅವನ ಉಪಾಧಿಗಳಾದ ದೇಹಾದಿಗಳೂ ನಿಜವಾಗಿಯೇ ಇರುತ್ತವೆ ಎಂದು ಕಲ್ಪಿಸುವದು ಯುಕ್ತ. ದೇಹಾದಿ ಗಳಿಗಿಂತ ಬೇರೆಯಾಗಿ ನಮ್ಮ ಹೊರಗಡೆಯಲ್ಲಿ ಪೃಥಿವ್ಯಾದಿಗಳೂ ಇರುವದರಿಂದ ಅವುಗಳೂ ನಿಜವಾಗಿಯೇ ಇರುವವೆಂದು ಅನುಭವಾನುಸಾರವಾಗಿ ಎಣಿಸುವದೇ ಯುಕ್ತ. ಇದೆಲ್ಲ ನಿಜವಾದರೆ ಸಾಕ್ಷಿಯು ಅದ್ವಿತೀಯಪರಮಾತ್ಮನು ಎಂದು ಹೇಳು ವದಕ್ಕೆ ಆಗುವದೇ ಇಲ್ಲವಲ್ಲ !- ಎಂಬುದೊಂದು ಶಂಕೆಯು ಎದ್ದುಕೊಳ್ಳುವದಕ್ಕೆ ಅವಕಾಶವಿದೆ.

ಆದರೆ ಶರೀರ, ಇಂದ್ರಿಯ- ಮುಂತಾದ ಉಪಾಧಿಗಳ ಧರ್ಮವನ್ನು ತನ್ನವೆಂದು ಅಧ್ಯಾಸಮಾಡಿಕೊಂಡಲ್ಲದೆ ಆತ್ಮನು ಪ್ರಮಾತೃವಾಗಲಾರನು ಎಂದು ಹಿಂದೆ (೨೮) ತಿಳಿಸಿಕೊಟ್ಟಿರುತ್ತೇವೆ. ಆದ್ದರಿಂದ ಸ್ವರೂಪದಿಂದ ಆತ್ಮನು ಪ್ರಮಾತೃವಲ್ಲ, ಕರ್ತೃಭೋಕ್ತೃವೂ ಅಲ್ಲ. ಪ್ರಮಾತೃವು ನಿಜವಾಗಿ ಪ್ರಮಾತೃಸ್ವಭಾವದವನೇ ಆಗಿದ್ದರೆ ಶ್ರುತಿಯು 'ನೀನು ಈಶ್ವರನು' ಎಂದೂ, ಬ್ರಹ್ಮವನ್ನು ತಿಳಿದವನು ಬ್ರಹ್ಮವೇ

ಆಗುವನೆಂದೂ ಆದರದಿಂದ ಬೋಧಿಸುತ್ತಿರಲಿಲ್ಲ. ಏಕೆಂದರೆ ಪ್ರಮಾತೃಸ್ವಭಾವದವನು ಆ ಸ್ವಭಾವವನ್ನು ಬಿಟ್ಟು ಪರಮಾತ್ಮಸ್ವರೂಪದವನಾಗುವದು ಎಂದಿಗೂ ಸಂಭವವಿಲ್ಲ. ದೇಹಾದಿಗಳು ಆತ್ಮನಿಗೆ ನಿಜವಾಗಿ ಸೇರಿಕೊಂಡಿಲ್ಲವೆಂಬುದನ್ನೂ ಹಿಂದೆ (೧೩೭) ತಿಳಿಸಿಕೊಟ್ಟಿದ್ದಾಗಿದೆ. ದೇಹಾದಿಗಳು ನಿಜವಾಗಿರುವವೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಲೋಕದಲ್ಲಿ ಶರೀರವಿರುವದಕ್ಕೆ ಪ್ರಮಾಣವೇನೆಂದು ಕೇಳಿದರೆ ಇಂದ್ರಿಯಗಳೇ ಪ್ರಮಾಣವೆಂದು ಜನರು ಹೇಳುತ್ತಾರೆ; ಇಂದ್ರಿಯಗಳು ಇರುವವೆನ್ನುವದಕ್ಕೆ ಪ್ರಮಾಣವೇನೆಂದರೆ ಮನಸ್ಸಿಗೆ ಗೊತ್ತಾಗುವದೇ ಪ್ರಮಾಣವೆನ್ನುವರು. ಮನಸ್ಸಿದೆ ಎಂಬುದಕ್ಕೆ ಪ್ರಮಾಣವೇನೆಂದು ಕೇಳಿದರೆ ನನ್ನ ಅನುಭವವೇ ಪ್ರಮಾಣವೆನ್ನುವರು. ಆದ್ದರಿಂದ ಈ ಪರಾಗ್ದೃಷ್ಟಿಯ ಅನುಭವವನ್ನು ಬಿಟ್ಟರೆ ಶರೀರಾದಿಗಳು ನಿಜವಾಗಿವೆ ಎನ್ನುವದಕ್ಕೆ ಮತ್ತೆ ಯಾವ ಪ್ರಮಾಣವೂ ಇರುವದಿಲ್ಲ. ಏಕೆಂದರೆ ಶರೀರೇಂದ್ರಿಯಮನಸ್ಸುಗಳ ಸಂಘಾತವು ನಾನು ಎಂದು ತಪ್ಪಾಗಿ ತಿಳಿದುಕೊಂಡ ಹೊರತು ಪ್ರಮಾತೃತ್ವವು ಏರ್ಪಡುವದಿಲ್ಲ; ಪ್ರಮಾತೃತ್ವವು ನಿಜವೆಂದು ಒಪ್ಪಿದ ಹೊರತು ಶರೀರಾದಿಗಳು ಬರಿಯ ಅನುಭವಕ್ಕೆ ಕಾಣುವವೆಂದು ಹೇಳುವದಕ್ಕೆ ಬರುವದಿಲ್ಲ. ಆತ್ಮನಿಗೆ ಶರೀರೇಂದ್ರಿಯಾದಿಗಳು ಇಲ್ಲವೆಂದೇ ಶ್ರುತಿಯಲ್ಲಿ ಹೇಳಿರುತ್ತದೆ. ಸಾಕ್ಷಿದೃಷ್ಟಿಯನ್ನು **ಪ್ರತ್ಯಗ್ದೃಷ್ಟಿ** (ಒಳಗಿನ ನೋಟ) ಎಂದೂ ಪ್ರಮಾತೃದೃಷ್ಟಿಯನ್ನು ಪರಾಗ್ದೃಷ್ಟಿ (ಹೊರಗಿನ ದೃಷ್ಟಿ) ಎಂದೂ ಕರೆಯುವರು. ಪರಾಗ್ದೃಷ್ಟಿಯು ಆವಿದ್ಯಕವೆಂಬುದನ್ನು ಹಿಂದೆ (೮೩ರಲ್ಲಿ) ತಿಳಿಸಿಕೊಟ್ಟಿದ್ದಾಗಿರುತ್ತದೆ.

(೧) ಆತ್ಮೇನ್ದ್ರಿಯಮನೋಯುಕ್ತಂ ಶರೀರೇನ್ದ್ರಿಯಮನೋಭಿಃ ಸಹಿತಂ ಸಂಯುಕ್ತಮ್ ಆತ್ಮಾನಂ ಭೋಕ್ತಾ ಇತಿ ಸಂಸಾರೀ ಇತಿ ಆಹುಃ ಮನೀಷಿಣಃ ವಿವೇಕಿನಃ । ನ ಹಿ ಕೇವಲಸ್ಯ ಆತ್ಮನಃ ಭೋಕ್ತೃತ್ವಮ್ ಅಸ್ತಿ । ಬುದ್ಧ್ಯಾದ್ಯುಪಾಧಿಕೃತಮೇವ ತಸ್ಯ ಭೋಕ್ತೃತ್ವಮ್ । ತಥಾ ಚ ಶ್ರುತ್ಯನ್ತರಂ ಕೇವಲಸ್ಯ ಅಭೋಕ್ತೃತ್ವಮೇವ ದರ್ಶಯತಿ । ''ಧ್ಯಾಯತೀವ ಲೇಲಾಯತೀವ'' (ಬೃ.) ಇತ್ಯಾದಿ । ಏವಂ ಚ ಸತಿ ವಕ್ಷ್ಯಮಾಣರಥಕಲ್ಪನಯಾ ವೈಷ್ಣವಸ್ಯ ಪದಸ್ಯ ಆತ್ಮತಯಾ ಪ್ರತಿಪತ್ತಿಃ ಉಪಪದ್ಯತೇ ನಾನ್ಯಥಾ। ಸ್ವಭಾವಾನತಿಕ್ರಮಾತ್॥ -ಕ. ಭಾ. ೧-೩-೪-೮.

(೨) ನಾನ್ಯದನ್ಯದ್ಭವೇದ್ಯಸ್ಮಾನ್ನಾನ್ಯತ್ಕಿಂಚಿದ್ವಿಚಿನ್ತಯೇತ್।
ಅನ್ಯಸ್ಯಾನ್ಯಾತ್ಮಭಾವೇ ಹಿ ನಾಶಸ್ತಸ್ಯ ಧ್ರುವೋ ಭವೇತ್॥ - ಉಪ. ೧೫-೧

(೩) ಸಿದ್ಧಾದೇವಾಹಮಿತ್ಯಸ್ಮಾದ್ಯುಷ್ಮದ್ಧರ್ಮೋ ನಿಷಿಧ್ಯತೇ।
ರಜ್ಜ್ವಾಮಿವಾಹಿಧೀರ್ಯುಕ್ತ್ಯಾ ತತ್ತ್ವಮಿತ್ಯಾದಿಶಾಸನೈಃ॥ - ಉಪ. ೧೮-೪

(೪) ನ ಹಿ ಆತ್ಮನಿ ಕುಣ್ಡೇ ಬದರಮ್, ಕ್ಷೀರೇ ಸರ್ಪಿಃ, ತಿಲೇ ತೈಲಮ್, ಭಿತ್ತೌ ಚಿತ್ರಮಿವ ಚ ಪ್ರತ್ಯಕ್ಷಾದಿಭಿಃ ದೇಹ ಉಪಲಭ್ಯತೇ। ತಸ್ಮಾತ್ ನ ಪ್ರತ್ಯಕ್ಷಾದಿವಿರೋಧಃ ॥ - ಉಪ. ೨-೪೨.

(೫) ಅಚಕ್ಷುಷ್ಕಾದಿಶಾಸ್ತ್ರಾಚ್ಚ ನೇನ್ದ್ರಿಯಾಣಿ ಸದಾ ಮಮ।

ಅಪ್ರಾಣೋ ಹ್ಯಮನಾಃ ಶುಭ್ರ ಇತಿ ಚಾಥರ್ವಣೇ ವಚಃ॥ - ಉಪ. ೧೩-೧೨

(೬) ಯತ್ ತಾವತ್ ಸ್ವಾಭಾವಿಕಂ ಪರಾಗೇವ ಅನಾತ್ಮದರ್ಶನಮ್। ತದಾತ್ಮದರ್ಶನಸ್ಯ ಪ್ರತಿಬನ್ಧಕಾರಣಮ್ ಅವಿದ್ಯಾ। ತತ್ಪ್ರತಿಕೂಲತ್ವಾತ್॥ - ಕ.ಭಾ. ೨-೧-೨-೧೧೨

೧೪೨. ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ಕ್ರಮಕ್ರಮವಾಗಿ ಕಳೆಯುವದಕ್ಕಾಗಿ ತೈತ್ತಿರೀಯಶ್ರುತಿಯಲ್ಲಿ ಉಪಯೋಗಿಸಿರುವ ಅಧ್ಯಾರೋಪಾಪವಾದನ್ಯಾಯಕ್ಕೆ **ಪಂಚ ಕೋಶವಿವೇಕ**ವೆಂದು ಹೆಸರು. ಮನುಷ್ಯನು ಸ್ವಾಭಾವಿಕವಾದ ಅವಿದ್ಯೆಯಿಂದ ಅನ್ನರಸ ಮಯವಾದ ದೇಹವನ್ನೇ ಆತ್ಮನೆಂದು ತಿಳಿಯುತ್ತಿರುವನಷ್ಟೆ. ಆದರೆ ಈ ದೇಹವು ಅನಾತ್ಮವೇ ಎಂದು ತಿಳಿಸುವದಕ್ಕಾಗಿ ಅದಕ್ಕಿಂತ ಒಳಗಿರುವ ಪಂಚವೃತ್ತಿಯ ಪ್ರಾಣ ವನ್ನೇ ಆತ್ಮನೆಂದು ಕಲ್ಪಿಸಿ ಅನ್ನಮಯಕೋಶವು ಆತ್ಮನ ಶರೀರಮಾತ್ರವು ಎಂದು ಬೋಧಿಸಿರುತ್ತದೆ. ದೇಹವು ನಿಜವಾಗಿ ಕ್ರಿಯಾಪ್ರಧಾನಪ್ರಾಣಕ್ಕಿಂತ ಬೇರೆಯಾಗಿರು ವದಿಲ್ಲ; ಏಕೆಂದರೆ ಗಡಿಗೆಯು ಎಲ್ಲೆಲ್ಲಿಯೂ ಮಣ್ಣಿನಿಂದ ವ್ಯಾಪ್ತವಾಗಿರುವಂತೆ ಅನ್ನಮಯಕೋಶವು ಪ್ರಾಣದಿಂದ ಪೂರ್ಣವಾಗಿರುತ್ತದೆ, ವ್ಯಾಪ್ತವಾಗಿರುತ್ತದೆ. ಆದ್ದರಿಂದ ಗಡಿಗೆಯೆಂಬುದು ನಿಜವಾಗಿ ಮಣ್ಣೇ ಆಗಿರುವಂತೆ ದೇಹವೆಲ್ಲವೂ ಪ್ರಾಣವೇ. ಇದರಂತೆ ಬೇರೆಬೇರೆಯ ಮನೋವೃತ್ತಿಗಳಿಗಿಂತ ಬೇರೆಯಾಗಿ ಪ್ರಾಣವೂ ಇಲ್ಲ; ಆದ್ದರಿಂದ ಪ್ರಾಣಮಯಕೋಶವು ನಿಜವಾಗಿ ಮನೋಮಯನೆಂಬ ಆತ್ಮನೇ. ಆದರೆ ಸರಿಯಾಗಿ ನೋಡಿದರೆ ಮನೋಮಯವೆಂಬ ಕೋಶದಲ್ಲಿಯೂ ಆತ್ಮತ್ವವು ಅಧ್ಯಾರೋಪಿತವಾಗಿರುವದೇ ಹೊರತು ಅದು ನಿಜವಾಗಿ ಆತ್ಮನಲ್ಲ; ಅದು ವಿಜ್ಞಾನ ಮಯನೆಂಬ ಆತ್ಮನಿಂದ ಪೂರ್ಣವಾಗಿರುತ್ತದೆ. ಆ ವಿಜ್ಞಾನಮಯವೆಂಬುದೂ ಒಂದು ಕೋಶವೇ; ಏಕೆಂದರೆ ಅದು ತನ್ನನ್ನು ವ್ಯಾಪಿಸಿಕೊಂಡಿರುವ ಆನಂದಮಯರೂಪನಾದ ಆತ್ಮನಿಗಿಂತ ಬೇರೆಯಾಗಿರುವದಿಲ್ಲ. ಈ ಆನಂದಮಯವೆಂಬುದೂ ತನ್ನ ವಿಶೇಷ ರೂಪದಿಂದ ಆತ್ಮನಲ್ಲ; ಅದರಲ್ಲೆಲ್ಲ ಆನಂದಸಾಮಾನ್ಯವೇ ವ್ಯಾಪಿಸಿಕೊಂಡಿರುತ್ತದೆ ಯಾದ್ದರಿಂದ ಆನಂದವೇ ನಿಜವಾದ ಆತ್ಮನು.

ಇಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯ- ಎಂಬಿವುಗಳನ್ನು ಜಿಜ್ಞಾಸುವು ಕ್ರಮಕ್ರಮವಾಗಿ ಆತ್ಮನೆಂದು ಭಾವಿಸುತ್ತಾ ಹೋಗುತ್ತಾನಾದರೂ ನಿಜವಾಗಿ ಅವು ಆತ್ಮನಲ್ಲ; ಅವುಗಳು ಒಂದನ್ನೊಂದು ವ್ಯಾಪಿಸಿ ಕೊಂಡಿರುವ ಆತ್ಮನ ಕೋಶಗಳು. ಕತ್ತಿಯನ್ನು ಮುಚ್ಚಿಕೊಂಡಿರುವ ಒರೆಯಂತೆ ಇವು ಆತ್ಮನನ್ನು ಮುಸುಕಿಕೊಂಡು ತಾವೇ ಆತ್ಮನೆಂಬ ಭ್ರಾಂತಿಯನ್ನುಂಟುಮಾಡುತ್ತಿರುವವು. ಅನ್ನಮಯವಾದ ನಮ್ಮ ಶರೀರವು ಹೊರಗಿನ ಸ್ಥೂಲಪ್ರಪಂಚದ ಒಂದು ಭಾಗವು.

ಪ್ರಾಣಮಯವು ಕ್ರಿಯಾತ್ಮಕವಾದ ಸಮಷ್ಟಿವಾಯುವಿನ ಒಂದು ಭಾಗವು; ಈ ಉಪಾಧಿಯಿಂದ ನಾವು ಪ್ರಾಣಿಗಳೆನಿಸಿರುವೆವು. ಮನೋಮಯವು ವೇದಾತ್ಮಕವಾದ ವೃತ್ತಿಯ ಸಮಷ್ಟಿಮನಸ್ಸಿನ ಒಂದು ಭಾಗವು ; ಈ ಉಪಾಧಿಯಿಂದ ನಾವು ಮಂತೃ (ಮನನಮಾಡುವವರು) ಎನಿಸಿರುವೆವು. ವಿಜ್ಞಾನಮಯವು ವೇದಾರ್ಥವನ್ನು ನಿಶ್ಚಯಿಸಿಕೊಂಡು ಕರ್ಮವನ್ನು ಮಾಡುವ ಸಮಷ್ಟಿಬುದ್ಧಿಯ ಒಂದು ಭಾಗವು ; ಈ ವಿಜ್ಞಾನವೆಂಬ ಉಪಾಧಿಯಿಂದಲೇ ನಾವು ಜ್ಞಾತೃ, ಕರ್ತೃ-ಎನಿಸಿಕೊಂಡಿರುವದು ಇದರಂತೆ ಆನಂದಮಯವು ನಮ್ಮ ಭೋಕ್ತೃತ್ವಕ್ಕೆ ಉಪಾಧಿಯಾಗಿರುತ್ತದೆ. ಕರ್ಮೋಪಾಸನೆಗಳ ಫಲವನ್ನನುಭವಿಸುವ ಭೋಕ್ತೃವಿನ ಸಮಷ್ಟ್ಯುಪಾಧಿಯ ಒಂದಂಶವಿದು. ಹೀಗೆ ಅನ್ನಮಯವನ್ನು ಹಿಡಿದು ಆನಂದಮಯದವರೆಗಿನ ಐದು ಕೋಶಗಳೂ ಆತ್ಮನ ಉಪಾಧಿಗಳೆಂಬುದನ್ನು ಅರಿಯದೆ ನಾವು ಅವನ್ನು ಆತ್ಮನಲ್ಲಿ ಬೆರೆಸಿಕೊಂಡೇ ವ್ಯವಹಾರಮಾಡುತ್ತಾ ಅವೇ ಆತ್ಮನೆಂಬ ಭ್ರಾಂತಿಗೆ ಪಕ್ಕಾಗಿರುವೆವು. ಎಲ್ಲಕ್ಕೂ ಆಧಾರವಾಗಿರುವ ನಮ್ಮ ನಿಜವಾದ ಆತ್ಮನು ಸುಖದುಃಖಾದಿವಿಶೇಷಗಳಿಲ್ಲದವನಾದ್ದರಿಂದ ನಿರ್ವಿಶೇಷಾನಂದಸ್ವರೂಪನಾಗಿರುತ್ತಾನೆ. ಈ ಆನಂದದ ನಿಮಿತ್ತದಿಂದಲೇ ಪ್ರಾಣಿಗಳ ಕರಣಗಳ ವ್ಯಾಪಾರಗಳು ನಡೆಯುತ್ತಿವೆ ; ಅದರಿಂದಲೇ ಆನಂದವುಂಟಾಗುತ್ತಿದೆ. ಸರ್ವಾಂತರನೂ ಸರ್ವಸಾಕ್ಷಿಯೂ ಆಗಿರುವ ನಿರ್ವಿಶೇಷನಾದ ಆನಂದಸ್ವರೂಪನಾದ ಆತ್ಮನನ್ನು ಮೇಲೆ ಹೇಳಿದ ಕ್ರಮದಿಂದ ಅರಿತುಕೊಂಡರೆ ಆಗ ಆತ್ಮನಿಗೆ ಯಾವ ದೇಹಾದಿಗಳಾಗಲಿ ಪಂಚಭೂತಗಳ ಸಂಬಂಧವಾಗಲಿ ಇಲ್ಲವೆಂದು ಅರಿತುಕೊಂಡು ಸಂಸಾರಭಯವಿಲ್ಲದೆ ತನ್ನ ಸ್ವರೂಪದಲ್ಲಿಯೇ ತಾನು ನೆಲೆನಿಲ್ಲುವನೆಂದು **ತೈತ್ತಿರೀಯೋಪನಿಷತ್ತಿನಲ್ಲಿ** ವಿವರಿಸಿರುತ್ತದೆ.

(೧) ಅನ್ನಮಯಾದಿಭ್ಯಃ ಆನನ್ದಮಯಾನ್ತೇಭ್ಯ ಆತ್ಮಭ್ಯಃ ಅಭ್ಯನ್ತರತಮಂ ಬ್ರಹ್ಮ ವಿದ್ಯಯಾ ಪ್ರತ್ಯಗಾತ್ಮತ್ವೇನ ದಿದರ್ಶಯಿಷು ಶಾಸ್ತ್ರಮ್ ಅವಿದ್ಯಾಕೃತಪಞ್ಚಕೋಶಾಪನಯನೇನ ಅನೇಕತುಷಕೋದ್ರವವಿತುಷೀಕರಣೇನೇವ ತದನ್ತರ್ಗತತಣ್ಡುಲಾನ್ ಪ್ರಸ್ತೌತಿ॥

-ತೈ.ಭಾ. ೨-೨-೧೨೨.

(೨) ಮನುಷ್ಯಾಃ ಪಶವಶ್ಚ ಯೇ, ತೇ ಪ್ರಾಣಕರ್ಮಣೈವ ಚೇಷ್ಟಾವನ್ತೋ ಭವನ್ತಿ। ಅತಶ್ಚ ನಾನ್ನಮಯೇನೈವ ಪರಿಚ್ಛಿನ್ನೇನ ಆತ್ಮನಾ ಆತ್ಮವನ್ತಃ ಪ್ರಾಣಿನಃ, ಕಿಂ ತರ್ಹಿ, ತದನ್ತರ್ಗತೇನ ಪ್ರಾಣಮಯೇನಾಪಿ ಸಾಧಾರಣೇನೈವ ಸರ್ವಪಿಣ್ಡವ್ಯಾಪಿನಾ ಆತ್ಮವನ್ತೋ ಮನುಷ್ಯಾದಯಃ। ಏವಂ ಮನೋಮಯಾದಿಭಿಃ ಪೂರ್ವಪೂರ್ವವ್ಯಾಪಿಭಿಃ ಉತ್ತರೋತ್ತರೈಃ ಸೂಕ್ಷ್ಮೈಃ ಆನನ್ದಮಯಾನ್ತೈಃ ಆಕಾಶಾದಿಭೂತಾರಬ್ಧೈಃ ಅವಿದ್ಯಾಕೃತೈಃ ಆತ್ಮವನ್ತಃ ಸರ್ವೇ ಪ್ರಾಣಿನಃ। ತಥಾ ಸ್ವಾಭಾವಿಕೇನಾಪಿ ಆಕಾಶಾದಿಕಾರಣೇನ ನಿತ್ಯೇನ ಅವಿಕೃತೇನ ಸರ್ವಗತೇನ ಸತ್ಯಜ್ಞಾನಾನನ್ತಲಕ್ಷಣೇನ ಪಞ್ಚಕೋಶಾತಿಗೇನ ಸರ್ವಾತ್ಮನಾ ಆತ್ಮವನ್ತಃ। ಸ ಹಿ ಪರಮಾರ್ಥತಃ ಆತ್ಮಾ ಸರ್ವೇಷಾಮ್ ಇತ್ಯೇತದಪಿ ಅರ್ಥಾತ್ ಉಕ್ತಂ ಭವತಿ ॥ -ತೈ.ಭಾ. ೨-೩-೧೨೬,೧೨೭.

(೩) ಯತ್ ಯದಿ ಏಷ ಆಕಾಶೇ ಪರಮೇ ವ್ಯೋಮ್ನಿ ಗುಹಾಯಾಂ ನಿಹಿತಃ ಆನನ್ದಃ ನ ಸ್ಯಾತ್ ನ ಭವೇತ್, ಕೋ ಹ್ಯೇವ ಲೋಕೇ ಅನ್ಯಾತ್ ಅಪಾನಚೇಷ್ಟಾಂ ಕುರ್ಯಾತ್ ? ಇತ್ಯರ್ಥಃ। ಕಃ ಪ್ರಾಣ್ಯಾತ್ ಪ್ರಾಣನಂ ವಾ ಕುರ್ಯಾತ್? ತಸ್ಮಾತ್ ಅಸ್ತಿ ತದ್ ಬ್ರಹ್ಮ ಯದರ್ಥಾಃ ಕಾರ್ಯಕರಣಪ್ರಾಣನಾದಿಚೇಷ್ಟಾಃ। ತತ್ಕೃತ ಏವ ಚ ಆನನ್ದೋ ಲೋಕಸ್ಯ॥ -ತೈ. ೨-೭-೧೮೮.

(೪) ತಸ್ಮಿನ್ ಏತಸ್ಮಿನ್ ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇ ಸರ್ವಕಾರ್ಯಧರ್ಮ ವಿಲಕ್ಷಣೇ ಬ್ರಹ್ಮಣಿ ಇತಿ ವಾಕ್ಯಾರ್ಥಃ। ಅಭಯಮ್ ಇತಿ ಕ್ರಿಯಾವಿಶೇಷಣಮ್। ಅಭಯಾಮ್ ಇತಿ ವಾ ಲಿಙ್ಗಾನ್ತರಂ ಪರಿಣಮ್ಯತೇ। ಪ್ರತಿಷ್ಠಾಂ ಸ್ಥಿತಿಮ್ ಆತ್ಮಭಾವಂ ವಿನ್ದತೇ ಲಭತೇ। ಅಥ ತದಾ ಸಃ ತಸ್ಮಿನ್, ನಾನಾತ್ವಸ್ಯ ಭಯಹೇತೋಃ ಅವಿದ್ಯಾಕೃತಸ್ಯ ಅದರ್ಶನಾತ್, ಅಭಯಂ ಗತೋ ಭವತಿ। ಸ್ವರೂಪಪ್ರತಿಷ್ಠೋ ಹ್ಯಸೌ ಯದಾ ಭವತಿ ತದಾ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ, ನಾನ್ಯದ್ ವಿಜಾನಾತಿ ॥ -ತೈ. ೨-೭-೧೯೦.

೧೪೩. ಅನ್ನಮಯಕ್ಕೆ ಪ್ರಾಣಮಯವೂ ಪ್ರಾಣಮಯಕ್ಕೆ ಮನೋಮಯವೂ ಅದಕ್ಕೆ ವಿಜ್ಞಾನಮಯವೂ ಆ ವಿಜ್ಞಾನಮಯಕ್ಕೆ ಆನಂದಮಯವೂ ಆತ್ಮನೆಂದು ಶ್ರುತಿಯಲ್ಲಿ ಹೇಳಿದೆ. ಈ ಒಬ್ಬೊಬ್ಬ ಆತ್ಮನಿಗೂ ಅನ್ನಮಯಕ್ಕಿರುವಂತೆಯೇ ಎಡಬಲ ಪಕ್ಷಗಳು, ಮಧ್ಯಭಾಗ, ಪ್ರತಿಷ್ಠಾರೂಪವಾಗಿರುವ ಪುಚ್ಛ-ಎಂದು ಅವಯವಗಳನ್ನು ಹೇಳಿದೆ. ಆದ್ದರಿಂದ ಇವು ನಿಜವಾಗಿಯೂ ಒಂದರೊಳಗೊಂದು ಇರಬೇಕು ಎಂದು ತಟ್ಟನೆ ತೋರುವಂತಿದೆ.

ಆದರೆ ಈ ಕಲ್ಪನೆಯು ಸರಿಯಲ್ಲ. ಏಕೆಂದರೆ ಇವುಗಳಲ್ಲಿ ಒಂದನ್ನು ಆತ್ಮನೆಂದು ತಿಳಿದಾಗ ಮಿಕ್ಕದ್ದರಲ್ಲಿ ಆತ್ಮಬುದ್ಧಿಯಿರುವದಿಲ್ಲ. ಒಬ್ಬರಿಗೆ ಅನೇಕ ಆತ್ಮರು ಅವನ ಸ್ವರೂಪಭೂತರಾಗಿರುತ್ತಾರೆಂದು ಹೇಳುವದು ಅರ್ಥವಿಲ್ಲದ ಮಾತು. ಆದ್ದರಿಂದ ನಮಗೆಲ್ಲರಿಗೂ ಪ್ರಸಿದ್ಧವಾಗಿರುವ ಅನ್ನಮಯಕೋಶವನ್ನು ಮೊದಲುಮಾಡಿಕೊಂಡು ಕೊಂಬೆಯಮೇಲೆ ಚಂದ್ರನಿದ್ದಾನೆ ಎಂದು ತೋರಿಸುವ ಹಾಗೆ ಶ್ರುತಿಯು ಪ್ರಾಣಮಯಾದಿಗಳನ್ನು ತೋರಿಸಿರುತ್ತದೆ. ಈ ಐದು ಕೋಶಗಳಲ್ಲಿಯೂ ನಮಗೆ ಒಂದೊಂದು ಸ್ಥಿತಿಯಲ್ಲಿ ಆತ್ಮಬುದ್ಧಿಯಿರುವದರಿಂದ ಬಹುಸೂಕ್ಷ್ಮವಾಗಿರುವ ಅರುಂಧತೀನಕ್ಷತ್ರವನ್ನು ತೋರಿಸಿಕೊಡುವವರು ಅದರ ಬಳಿಯಲ್ಲಿರುವ ಸ್ಥೂಲವಾಗಿ ರುವ ಮತ್ತೊಂದು ನಕ್ಷತ್ರವನ್ನೇ ಅರುಂಧತಿ ಎಂದು ತೋರಿಸಿ ಬಳಿಕ 'ಅದರ ಹತ್ತಿರವೇ ನಿಜವಾದ ಅರುಂಧತಿ ಇದೆ' -ಎಂದು ತಿಳಿಸಿಕೊಡುವಂತೆ- ಆನಂದಮಯಾಂತವಾದ ಕೋಶಗಳನ್ನೇ ಶ್ರುತಿಯು ಮೊದಲು ಆತ್ಮನೆಂದು ತಿಳಿಸಿ ಇವುಗಳೆಲ್ಲಕ್ಕೂ ಸಾಕ್ಷಿಯಾಗಿ ನಿಜವಾಗಿ ಆತ್ಮನಾಗಿರುವ ಪರಮಾತ್ಮನನ್ನೇ ತಿಳಿಸಿಕೊಟ್ಟಿರುತ್ತದೆ. ಆದ್ದರಿಂದಲೇ ಪರಮಾತ್ಮನಲ್ಲಿ ಯಾವ ವಿಶೇಷವೂ ಇಲ್ಲವೆಂದು ನಿಷೇಧಿಸಿರುತ್ತದೆ.

(೧)ಏಕೋ ಹಿ ಪ್ರತ್ಯಗಾತ್ಮಾ ಭವತಿ, ನ ದ್ವೌ ಪ್ರತ್ಯಗಾತ್ಮಾನೌ ಸಂಭವತಃ॥

-ಸೂ. ಭಾ. ೧-೨-೨೦-೧೯೫.

(೨) ಏಕೋ ಹಿ ಕಾರ್ಯಕರಣಸಙ್ಘಾತಃ ಏಕೇನ ಆತ್ಮನಾ ಆತ್ಮವಾನ್॥

-ಬೃ. ಭಾ. ೩-೫-೧-೫೩.

(೩)ಸ ಹಿ ಪುರುಷಃ ಇಹ ವಿದ್ಯಯಾ ಅನ್ತರತಮಂ ಬ್ರಹ್ಮ ಸಙ್ಕ್ರಾಮಯಿತುಮ್ ಇಷ್ಟಃ। ತಸ್ಯ ಚ ಬಾಹ್ಯಾಕಾರವಿಶೇಷೇಷು ಅನಾತ್ಮಸು ಆತ್ಮಭಾವಿತಾಬುದ್ಧಿಃ, ಅನಾಲಮ್ಬ್ಯ ವಿಶೇಷಂ ಕಂಚಿತ್ ಸಹಸಾ ಅನ್ತರತಮಪ್ರತ್ಯಗಾತ್ಮವಿಷಯಾ ನಿರಾಲಮ್ಬನಾ ಚ ಕರ್ತುಮ್ ಅಶಕ್ಯಾ ಇತಿ ದೃಷ್ಟಶರೀರಾತ್ಮ ಸಾಮಾನ್ಯಕಲ್ಪನಯಾ ಶಾಖಾಚನ್ದ್ರನಿದರ್ಶನವತ್ ಅನ್ತಃ ಪ್ರವೇಶಯನ್ ಆಹ॥

-ತೈ. ೨-೧-೧೧೭.

(೪) ತಸ್ಮಾತ್ ವೈ ಏತಸ್ಮಾತ್ ಯಥೋಕ್ತಾತ್ ಅನ್ನರಸಮಯಾತ್ ಪಿಣ್ಡಾತ್ ಅನ್ಯಃ ವ್ಯತಿರಿಕ್ತಃ ಅನ್ತರಃ ಅಭ್ಯನ್ತರಃ ಆತ್ಮಾ ಪಿಣ್ಡವದೇವ ಮಿಥ್ಯಾಪರಿಕಲ್ಪಿತ ಆತ್ಮತ್ವೇನ ಪ್ರಾಣಮಯಃ॥

-ತೈ. ೨-೨-೧೨೩.

(೫) ದೇಹದೀನಾಂ ಬುದ್ಧ್ಯನ್ತಾನಾಂ ಪ್ರತ್ಯಗಾತ್ಮತ್ವೇನ ಕಲ್ಪಿತಾನಾಮ್ ಅವಿದ್ಯಯಾ, ಪರಮಃ ಉಪದ್ರಷ್ಟೃತ್ವಾದಿಲಕ್ಷಣಃ ಆತ್ಮಾ ಇತಿ ಪರಮಾತ್ಮಾ ಸಃ ॥ -ಗೀ. ಭಾ. ೧೩-೨೨-೮೧೬.

(೬) ರಸಾದಯಃ ಅನ್ನರಸಮಯಃ, ಪ್ರಾಣಮಯಃ ಇತ್ಯೇವಮಾದಯಃ ಯೇ ಕೋಶಾ ಇವ ಕೋಶಾಃ ಅಸ್ಯಾದೇರಿವ ಉತ್ತರೊತ್ತರಾಪೇಕ್ಷಯಾ ಬಹಿರ್ಭಾವಾತ್ ಪೂರ್ವಪೂರ್ವಸ್ಯ। ವ್ಯಾಖ್ಯಾತಾಃ ವಿಸ್ಪಷ್ಟಮ್ ಆಖ್ಯಾತಾಃ ತೈತ್ತಿರೀಯಕೇ ತೈತ್ತಿರೀಯಕಶಾಖೋಪನಿಷದ್ವಲ್ಲ್ಯಾಮ್, ತೇಷಾಂ ಕೋಶಾನಾಮ್ ಆತ್ಮಾ ಯೇನಾತ್ಮನಾ ಪಞ್ಚಾಪಿ ಕೋಶಾಃ ಆತ್ಮವನ್ತೋಽನ್ತರತಮೇನ। ಸ ಹಿ ಸರ್ವೇಷಾಂ ಜೀವನನಿಮಿತ್ತತ್ವಾತ್ ಜೀವಃ। ಕೋಽಸೌ ಇತಿ ? ಆಹ-ಪರ ಏವಾತ್ಮಾ ಯಃ ಪೂರ್ವಂ 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತಿ ಪ್ರಕೃತಃ। ಯಸ್ಮಾತ್ ಆತ್ಮನಃ ಸ್ವಪ್ನಮಾಯಾದಿವತ್ ಆಕಾಶಾದಿಕ್ರಮೇಣ ರಸಾದಯಃ ಕೋಶಲಕ್ಷಣಾಃ ಸಙ್ಘಾತಾಃ ಆತ್ಮಮಾಯಾವಿಸರ್ಜಿತಾಃ ಇತ್ಯುಕ್ತಮ್, ಸ ಆತ್ಮಾ ಅಸ್ಮಾಭಿಃ ಯಥಾ ಖಂ ತಥಾ ಇತಿ ಸಂಪ್ರಕಾಶಿತಃ ॥

-ಮಾಂ. ಕಾ. ಭಾ. ೩-೧೧-೧೮೪

೧೪೪. ತೈತ್ತಿರೀಯದಲ್ಲಿ ಹೇಳಿರುವ ಪಂಚಕೋಶವಿವೇಕಕ್ರಮದಲ್ಲಿ ಎಲ್ಲಕ್ಕೂ ಒಳಗಿರುವ ಆತ್ಮನೆಂದು ಹೇಳಿರುವದು ಸವಿಶೇಷಬ್ರಹ್ಮವೊ, ನಿರ್ವಿಶೇಷಬ್ರಹ್ಮವೊ ಎಂಬುದೊಂದು ವಿಚಾರಣೀಯವಾದ ವಿಷಯವು. ಮನೋಮಯಾದಿಗಳನ್ನು ಒಂದಕ್ಕಿಂತ ಒಂದು ಒಳಗಿನ ಆತ್ಮನೆಂದು ಹೇಳಿರುವದರಲ್ಲಿ ಆನಂದಮಯನನ್ನು ಹೇಳಿದಮೇಲೆ ಮತ್ತೊಬ್ಬ ಒಳಗಿನ ಆತ್ಮನನ್ನು ಹೇಳಿರುವದಿಲ್ಲ. ಫಲಶ್ರುತಿಯಲ್ಲಿ ಆನಂದಮಯನನ್ನು ಉಪಸಂಕ್ರಮಿಸುತ್ತಾನೆ ಎಂದು ಹೇಳಿ ಅಷ್ಟರಿಂದಲೇ ಬ್ರಹ್ಮ ಪ್ರಾಪ್ತಿಯ ಉಪಸಂಹಾರವನ್ನು ಮಾಡಿರುತ್ತದೆ. ಆದ್ದರಿಂದ ಇಲ್ಲಿ ಆನಂದಮಯನನ್ನೇ

ಬ್ರಹ್ಮವೆಂದು ಹೇಳಿದೆ; 'ಸತ್ಯಂ ಜ್ಞಾನಮನನ್ತಮ್' ಎಂದು ಪ್ರಾರಂಭದಲ್ಲಿ ಹೇಳಿದ್ದು ಈ ಆನಂದಮಯನನ್ನೇ ಎಂದು ಒಬ್ಬ **ವೃತ್ತಿಕಾರರು** ಅಭಿಪ್ರಾಯಪಟ್ಟಿದ್ದರು.

ಈ ಅಭಿಪ್ರಾಯವು ಸರಿಯಲ್ಲ. ಆನಂದಮಯಾತ್ಮನಿಗೆ ಬ್ರಹ್ಮವು ಪುಚ್ಛವು ಎಂಬ ಆನಂದಮಯನಿಗಿಂತ ಬೇರೆಯಾಗಿ ಬ್ರಹ್ಮವನ್ನು ಹೇಳಿರುತ್ತದೆ; ಅದು ಆನಂದರೂಪವಾದ ಆತ್ಮನೆಂದೂ ಹೇಳಿದೆ (೨-೫) ಆನಂದಮಯಾತ್ಮನ ಪ್ರಕರಣವಾದಮೇಲೆ ಆನಂದಮಯನ ವಿಷಯದ ವರ್ಣನೆಯ ಉಪಸಂಹಾರವನ್ನು ಮಾಡದೆ 'ಬ್ರಹ್ಮವು ಅಸತ್ತೆಂದು ತಿಳಿದರೆ ಅಸತ್ತೇ ಆಗುವನು' ಎಂದು ಹೇಳಿರುವುದು ಬ್ರಹ್ಮವು ನಿರ್ವಿಶೇಷವಾದ್ದರಿಂದ ಅದು ಇಲ್ಲವೆಂಬ ಶಂಕೆಯನ್ನು ಅಜ್ಞರಾದ ಜನರು ಮಾಡಬಹುದೆಂಬುದನ್ನು ಲಕ್ಷ್ಯದಲ್ಲಿಟ್ಟು ಹೇಳಿದ್ದೆಂದು ಗೊತ್ತಾಗುತ್ತದೆ. ಆನಂದಮಯವು ಪ್ರಿಯಾದ್ಯವಯವಗಳಿಂದೊಡಗೂಡಿ ಸರ್ವಲೋಕಪ್ರಸಿದ್ಧವಾಗಿರುವದರಿಂದ ಅದು ಇದೆಯೊ, ಇಲ್ಲವೊ ?-ಎಂಬ ಶಂಕೆಯುಂಟಾಗುವದಕ್ಕೆ ಕಾರಣವಿರುವದಿಲ್ಲ. ಬ್ರಹ್ಮವು ಆಕಾಶಾದಿಯಾಗಿ ಅನ್ನಮಯದವರೆಗಿನ ಕಾರ್ಯವನ್ನು ಸೃಷ್ಟಿಸಿ ಅದರೊಳಗೆ ಪ್ರವೇಶಿಸಿರುವದೆಂದೂ ಹೃದಯಗುಹೆಯಲ್ಲಿರುವ ಅದನ್ನು ಅರಿತರೆ ಪರಮಪುರುಷಾರ್ಥಪ್ರಾಪ್ತಿಯು ಲಭಿಸುವದೆಂದೂ ಶ್ರುತಿಯಲ್ಲಿ ಹೇಳಿರುತ್ತದೆ. ಅನ್ನಮಯಾದಿಯಾಗಿ ಆನಂದಮಯನವರೆಗಿನ ಆತ್ಮನನ್ನು ಉಪಸಂಕ್ರಮಣಮಾಡುತ್ತಾನೆ ಎಂದರೆ ಅವಿದ್ಯಾನಾಶವನ್ನು ಮಾಡಿಕೊಂಡು ಪರಮಾರ್ಥಸ್ವರೂಪವನ್ನು ಅರಿತುಕೊಳ್ಳುತ್ತಾನೆ ಎಂದು ಹೇಳಿರುವದರಿಂದ ಬ್ರಹ್ಮಜ್ಞಾನಕ್ಕಾಗಿಯೇ ಈ ಪಂಚಕೋಶಗಳನ್ನು ಉದಾಹರಿಸಿದೆ ಎಂದು ನಿಶ್ಚಯವಾಗುತ್ತದೆ. ಫಲಶ್ರುತಿಯು ಮುಂದಿನ ವಾಕ್ಯದಲ್ಲಿ ಅವಾಙ್ಮನಸಗೋಚರವಾದ ಬ್ರಹ್ಮವನ್ನೇ ತಿಳಿಸಿರುವದರಿಂದ ಇಲ್ಲಿ ನಿರ್ವಿಶೇಷಬ್ರಹ್ಮವು ಪ್ರತಿಪಾದಿತವಾಗಿದೆ ಎಂದು ಗೊತ್ತಾಗುತ್ತದೆ- ಎಂದು ಆಚಾರ್ಯರು ನಿರ್ಣಯಿಸಿರುತ್ತಾರೆ.

(೧) ಯದ್ಯಪಿ ಅನ್ನಮಯಾದಿಭ್ಯ ಇವ ಆನನ್ದಮಯಾತ್ 'ಅನ್ಯೋಽನ್ತರ ಆತ್ಮಾ' ಇತಿ ನ ಶ್ರೂಯತೇ, ತಥಾಪಿ ನಾನನ್ದಮಯಸ್ಯ ಬ್ರಹ್ಮತ್ವಮ್। ಯತಃ ಆನಂದಮಯಂ ಪ್ರಕೃತ್ಯ ಶ್ರೂಯತೇ 'ತಸ್ಯ ಪ್ರಿಯಮೇವ ಶಿರಃ। ಮೋದೋ ದಕ್ಷಿಣಃ ಪಕ್ಷಃ। ಪ್ರಮೋದ ಉತ್ತರಃ ಪಕ್ಷಃ। ಆನನ್ದ ಆತ್ಮಾ। ಬ್ರಹ್ಮ ಪುಚ್ಛಂ ಪ್ರತಿಷ್ಠಾ।' (ತೈ. ೨-೫) ಇತಿ। ತತ್ರ ಯದ್ ಬ್ರಹ್ಮ ಮಂತ್ರವರ್ಣೇ ಪ್ರಕೃತಮ್ 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' ಇತಿ, ತದಿಹ 'ಬ್ರಹ್ಮ ಮಯಪರ್ಯನ್ತಾಃ ಪಞ್ಚ ಕೋಶಾಃ ಕಲ್ಪ್ಯನ್ತೇ॥

-ಸೂ. ಭಾ. ೧-೧-೧೯-೧೦೭.

(೨) ಅಪಿ ಚ ''ಬ್ರಹ್ಮ ಪುಚ್ಛಂ ಪ್ರತಿಷ್ಠಾ'' ಇತ್ಯುಕ್ತ್ವಾ ಇದಮುಚ್ಯತೇ ''ತದಪ್ಯೇಷ ಶ್ಲೋಕೋ ಭವತಿ। ಅಸನ್ನೇವ ಸ ಭವತಿ। ಅಸದ್ಬ್ರಹ್ಮೇತಿ ವೇದ ಚೇತ್, ಅಸ್ತಿ ಬ್ರಹ್ಮೇತಿ ಚೇದ್ವೇದ। ಸನ್ತಮೇನಂ ತತೋ ವಿದುರಿತಿ'' (ತೈ. ೨-೬) ಇತಿ। ಅಸ್ಮಿಂಶ್ಚ ಶ್ಲೋಕೇ ಅನನುಕೃಷ್ಯ ಆನನ್ದಮಯಂ

ಬ್ರಹ್ಮಣ ಏವ ಭಾವಾಭಾವವೇದನಯೋರ್ಗುಣದೋಷಾಭಿಧಾನಾತ್ ಗಮ್ಯತೇ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಇತ್ಯತ್ರ ಬ್ರಹ್ಮಣಃ ಏವ ಸ್ವಪ್ರಧಾನತ್ವಮ್ ಇತಿ। ನ ಚಾನನ್ದಮಯಸ್ಯ ಆತ್ಮನಃ ಭಾವಾಭಾವಶಙ್ಕಾ ಯುಕ್ತಾ। ಪ್ರಿಯಮೋದಾದಿವಿಶೇಷಸ್ಯ ಆನನ್ದಮಯಸ್ಯ ಸರ್ವಲೋಕಪ್ರಸಿದ್ಧತ್ವಾತ್॥ -ಸೂ. ಭಾ. ೧-೧-೧೯-೧೦೪.

(೩) ತಸ್ಮಾತ್ ನ ಪ್ರಾಪ್ತಿಃ ಸಙ್ಕ್ರಮಣಮ್, ನಾಪಿ ಅನ್ನಮಯಾದೀನಾಮನ್ಯತಮಕರ್ತೃಕಮ್। ಪಾರಿಶೇಷ್ಯಾತ್ ಅನ್ನಮಯಾದ್ಯಾನನ್ದಮಯಾನ್ತಾತ್ಮ ವ್ಯತಿರಿಕ್ತಕರ್ತೃಕಂ ಜ್ಞಾನಮಾತ್ರಂ ಚ ಸಂಕ್ರಮಣಮ್ ಉಪಪದ್ಯತೇ। ಜ್ಞಾನಮಾತ್ರತ್ವೇ ಚ ಆನನ್ದಮಯಾನ್ತಸ್ಥಸ್ಯೈವ ಸರ್ವಾನ್ತರಸ್ಯ ಆಕಾಶಾದ್ಯನ್ನಮಯಾನ್ತಂ ಸೃಷ್ಟ್ವಾ ಪ್ರವಿಷ್ಟಸ್ಯ ಹೃದಯಗುಹಾಭಿಸಂಬನ್ಧಾತ್ ಅನ್ನಮಯಾದಿಷು ಅನಾತ್ಮಸು ಆತ್ಮವಿಭ್ರಮಃ ಸಂಕ್ರಮಣೇನ ಆತ್ಮವಿವೇಕವಿಜ್ಞಾನೋತ್ಪತ್ತ್ಯಾ ವಿನಶ್ಯತಿ। ತದೇತತ್ ಅಸ್ಮಿನ್ ಅವಿದ್ಯಾವಿಭ್ರಮನಾಶೇ ಸಂಕ್ರಮಣ ಶಬ್ದಃ ಉಪಚರ್ಯತೇ॥ -ತೈ. ಭಾ. ೨-೮-೨೨೦

(೪) ನನು ಆನನ್ದಮಯಸ್ಯ ಉಪಸಂಕ್ರಮಿತವ್ಯಸ್ಯ ಅನ್ನಮಯಾದಿವತ್ ಅಬ್ರಹ್ಮತ್ವೇ ಸತಿ ನೈವ ವಿದುಷೋ ಬ್ರಹ್ಮಪ್ರಾಪ್ತಿಫಲಂ ನಿರ್ದಿಷ್ಟಂ ಭವೇತ್। ನೈಷ ದೋಷಃ। ಆನನ್ದಮಯೋಪಸಂಕ್ರಮಣನಿರ್ದೇಶೇನೈವಪುಚ್ಛಪ್ರತಿಷ್ಠಾಭೂತಬ್ರಹ್ಮಪ್ರಾಪ್ತೇಃ ಫಲಸ್ಯ ನಿರ್ದಿಷ್ಟತ್ವಾತ್। ''ತದಪ್ಯೇಷ ಶ್ಲೋಕೋ ಭವತಿ । ಯತೋ ವಾಚೋ ನಿವರ್ತನ್ತೇ'' ಇತ್ಯಾದಿನಾ ಚ ಪ್ರಪಞ್ಚ್ಯಮಾನತ್ವಾತ್॥ -ಸೂ. ಭಾ.೧-೧-೧೯-೧೧೦.

(೫) ಅಪಿ ಚ ಆನನ್ದಮಯಸ್ಯ ಬ್ರಹ್ಮತ್ವೇ ಪ್ರಿಯಾದ್ಯವಯವತ್ವೇನ ಸವಿಶೇಷಂ ಬ್ರಹ್ಮ ಅಭ್ಯುಪಗನ್ತವ್ಯಮ್। ನಿರ್ವಿಶೇಷಮ್ ತು ಬ್ರಹ್ಮ ವಾಕ್ಯವಿಶೇಷೇ ಶ್ರೂಯತೇ। ವಾಙ್ಮನಸಯೋಃ ಅಗೋಚರತ್ವಾಭಿಧಾನಾತ್ ''ಯತೋ ವಾಚೋ ನಿವರ್ತನ್ತೇ। ಅಪ್ರಾಪ್ಯ ಮನಸಾ ಸಹ । ಆನನ್ದಂ ಬ್ರಹ್ಮಣೋ ವಿದ್ವಾನ್। ನ ಬಿಭೇತಿ ಕುತಶ್ಚನೇತಿ'' (ತೈ. ೨-೯) ಇತಿ॥

-ಸೂ. ಭಾ. ೧-೧-೧೯-೧೦೯.

## ೨೦. ಅವಸ್ಥಾತ್ರಯವಿವೇಕ

೧೪೫. ಸಾಕ್ಷ್ಯವಾದ ಪಂಚಕೋಶಗಳು ಸಾಕ್ಷಿಗಿಂತ ಭಿನ್ನವಾಗಿಲ್ಲವೆಂಬುದನ್ನು ಸಾಕ್ಷಿಯು ದೇಶಕಾಲಾತೀತನಾಗಿರುವದರಿಂದ ಅವನಲ್ಲಿ ಸಂಖ್ಯಾದಿಗಳಿಲ್ಲವೆಂಬ ಯುಕ್ತಿಯಿಂದಲೂ ಆ ಸಾಕ್ಷಿಯಾದ ಆತ್ಮನಲ್ಲಿ ಶರೀರಾದಿಗಳನ್ನು ಕಾಣುವದಕ್ಕೆ ಪರಾಗ್ದೃಷ್ಟಿಯೇ ಕಾರಣವಾದ್ದರಿಂದ ಪ್ರತ್ಯಗ್ದೃಷ್ಟಿಯಿಂದ ನೋಡಿದರೆ ಶರೀರಾದಿಗಳೇ ಇರುವದಿಲ್ಲ ಎಂಬ ಯುಕ್ತಿಯಿಂದಲೂ ಹಿಂದಿನ ಪಾಠದಲ್ಲಿ ತಿಳಿಸಿಕೊಟ್ಟಿದ್ದಾಗಿದೆ. ಪರಾಗ್ದೃಷ್ಟಿಗೆ ಜಾಗ್ರದವಸ್ಥಾಭಿಮಾನವೇ ತವರುಮನೆಯಾಗಿರುವರಿಂದ ಪ್ರತ್ಯಕ್ ದೃಷ್ಟಿಯು ಅಳವಡುವದಕ್ಕೆ ವೇದಾಂತದಲ್ಲಿ ಅವಸ್ಥಾತ್ರಯವಿವೇಕವನ್ನು ಹೇಳಿರುತ್ತದೆ.

ಅವಸ್ಥಾತ್ರಯಸಾಕ್ಷಿತ್ವವನ್ನು ಅಧ್ಯಾರೋಪಮಾಡಿ ಆತ್ಮನಲ್ಲಿ ಸಪ್ರಪಂಚತ್ವವನ್ನು ಅಲ್ಲಗಳೆಯುವದಕ್ಕೆ ಅವಸ್ಥಾತ್ರಯವಿಚಾರವು ಉಪಯುಕ್ತವಾಗಿರುತ್ತದೆ.

ಈ ವಿಚಾರಮಾರ್ಗದಲ್ಲಿ ಮೊಟ್ಟಮೊದಲನೆಯ ಹೆಜ್ಜೆ ಯಾವದೆಂದರೆ, ಜಿಜ್ಞಾಸುವಾದವನು ಎಚ್ಚರ, ಕನಸು, ತನಿನಿದ್ರೆ- ಇವುಗಳು ಮೂರನ್ನೂ ನಾನೇ ಕಾಣುವವನು ಎಂಬುದನ್ನು ಮನದಂದುಕೊಳ್ಳಬೇಕು. ಕನಸುಕಂಡ ನಾನೇ ಎಚ್ಚರ ವಾಗಿರುವೆನು ಎಂಬ ಪ್ರತ್ಯಭಿಜ್ಞೆಯಿಂದ ನನ್ನ ಸ್ವರೂಪವು ಈ ಎರಡು ಅವಸ್ಥೆಗಳಿಗಿಂತಲೂ ವಿಲಕ್ಷಣವಾದದ್ದು, ಅವುಗಳೆರಡಕ್ಕೂ ವ್ಯಾಪಕನು, ಶುದ್ಧನು, ಅದ್ವಿತೀಯನು- ಎಂಬುದನ್ನು ಅರಿತುಕೊಳ್ಳಬೇಕು.

(೧) ಉಭೌ ಸ್ವಪ್ನಜಾಗರಿತಾನ್ತೌ । ಯೇನ ಆತ್ಮನಾ ಅನುಪಶ್ಯತಿ ಲೋಕಃ ಇತಿ ಸರ್ವಂ ಪೂರ್ವವತ್। ತಂ ಮಹಾನ್ತಂ ವಿಭುಮ್ ಆತ್ಮಾನಂ ಮತ್ವಾ ಅವಗಮ್ಯ ಆತ್ಮಭಾವೇನ ಸಾಕ್ಷಾತ್ ''ಅಹಮಸ್ಮಿ ಪರಮಾತ್ಮಾ'' ಇತಿ ಧೀರೋ ನ ಶೋಚತಿ ॥ -ಕ. ೨-೧-೪-೧೧೭.

(೨) ಪರ್ಯಾಯೇಣ ತ್ರಿಸ್ಥಾನತ್ವಾತ್ ಸೋಽಹಮ್ ಇತಿ ಸ್ಮೃತ್ಯಾ ಪ್ರತಿಸನ್ಧಾನಾಚ್ಚ ಸ್ಥಾನತ್ರಯವ್ಯತಿರಿಕ್ತತ್ವಮ್, ಏಕತ್ವಂ, ಶುದ್ಧತ್ವಮ್, ಅಸಙ್ಗತ್ವಂ ಚ ಸಿದ್ಧಮ್ ಇತ್ಯಭಿಪ್ರಾಯಃ॥

-ಮಾಂ. ಕಾ. ಭಾ. ೧-೧-೧೯.

೧೪೬. ಎಚ್ಚರದ ಅಭಿಮಾನವೇ ಪರಾಗ್ದೃಷ್ಟಿಗೆ ಕಾರಣವೆಂಬುದನ್ನು ಮನಗಾಣುವದಕ್ಕೆ ಎಚ್ಚರದ ಅಭಿಮಾನದಿಂದ ನಮಗೆ ಸ್ವಾಭಾವಿಕವಾಗಿ ತೋರುವ ಆತ್ಮಸ್ವರೂಪವನ್ನು ಮನಗಾಣುವದು ಅವಶ್ಯವು. ಜೀವರುಗಳು ಪ್ರಪಂಚದಲ್ಲಿದ್ದು ಕೊಂಡು ಎಚ್ಚರಕನಸುತನಿನಿದ್ರೆಗಳನ್ನು ಒಂದಾಗುತ್ತಲೊಂದನ್ನು ಅನುಭವಿಸುತ್ತಿರುವ ರೆಂದು ತಿಳಿಯುವದೇ ಜಾಗ್ರದಭಿಮಾನದ ಸ್ವರೂಪವು. ಎಚ್ಚರದಲ್ಲಿ ಕಾಣುವ ನನ್ನ ಶರೀರಾದಿಗಳೂ ಪ್ರತ್ಯಕ್ಷಾದಿಗಳಿಂದ ತೋರಿಬರುವ ಸಮಸ್ತಬ್ರಹ್ಮಾಂಡವೂ ಅದರಲ್ಲಿ ರುವ ಕರ್ತೃಭೋಕ್ತೃ ರೂಪರಾದ ಎಲ್ಲಾ ಜೀವರೂ ಎಚ್ಚರಕ್ಕೇ ಕಟ್ಟುಬಿದ್ದಿರುತ್ತಾರೆ. ನಾನು ನಿಜವಾಗಿ ಶಾರೀರನಲ್ಲ, ಎಚ್ಚರದಲ್ಲಿ ತೋರುವ ಬಾಹ್ಯಾಧ್ಯಾತ್ಮಿಕರೂಪವಾದ ಸಮಸ್ತಪ್ರಪಂಚವನ್ನೂ ಬೆಳಗುತ್ತಿರುವ ಚೈತನ್ಯಸ್ವರೂಪನು-ಎಂದು ತಿಳಿಯುವದು ಎಚ್ಚರವನ್ನು ಮೀರಿದ ದೃಷ್ಟಿಯು. ಎಚ್ಚರದಲ್ಲಿರುವ ಶರೀರಾದಿಗಳಲ್ಲಿ ಅಭಿಮಾನ ವಿಟ್ಟಿರುವ ಆತ್ಮಸ್ವರೂಪವನ್ನು ಶಾರೀರ, ಪಿಂಡಾತ್ಮ, ಜೀವ, ವಿಜ್ಞಾನಾತ್ಮ, ಕರ್ತೃಭೋಕ್ತೃ-ಎಂದು ಕರೆಯುತ್ತಾರೆ. ಶಾಸ್ತ್ರದೃಷ್ಟಿಯಿಂದ ಎಚ್ಚರವನ್ನು ಪರಿಶೀಲಿಸಿ ಈಗ ವರ್ಣಿಸಿರುವ ರೂಪಕ್ಕೆ, ಎಂದರೆ ಎಚ್ಚರದ ಸಮಷ್ಟಿಪ್ರಪಂಚವೆಲ್ಲವನ್ನೂ ಬೆಳಗುತ್ತಿರುವ ಆತ್ಮರೂಪಕ್ಕೆ **ವಿರಾಟ್, ವೈಶ್ವಾನರ-** ಎಂದು ಹೆಸರು.

ಇದನು ತಿಳಿಸುವದಕ್ಕಾಗಿ ಮಾಂಡೂಕ್ಯೋಪನಿಷತ್ತಿನಲ್ಲಿ ವೈಶ್ವಾನರನನ್ನು ಹೀಗೆಂದು ವರ್ಣಿಸಿದೆ : ಈ ಆತ್ಮನಿಗೆ ಹೊರ ಅರಿವು, ದ್ಯುಲೋಕವೇ ಮುಂತಾದ ಏಳು ಅಂಗಗಳು, ಇಂದ್ರಿಯಪ್ರಾಣಾಂತಃಕರಣರೂಪವಾದ ಹತ್ತೊಂಭತ್ತು ಅರಿವಿನ ದ್ವಾರಗಳು, ಸ್ಥೂಲವಿಷಯಭೋಗವೂ ಇರುವವು. ಇವನು ಆತ್ಮನ ಒಂದು ಪಾದವು ಮಾತ್ರ; ಆತ್ಮನು ಇದ್ದಂತೆ ವರ್ಣಿಸುವ ರೂಪವಿದಲ್ಲ.

(೧) ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಙ್ಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥ -ಮಾಂ. ೩.

(೨) ಕಥಮ್ 'ಅಯಮಾತ್ಮಾ ಬ್ರಹ್ಮ' ಇತಿ ಪ್ರತ್ಯಗಾತ್ಮನೋಽಸ್ಯ ಚತುಷ್ಪಾತ್ತ್ವೇ ಪ್ರಕೃತೇ, ದ್ಯುಲೋಕಾದೀನಾಂ ಮೂರ್ಧಾದ್ಯಙ್ಗತ್ವಮಿತಿ ? ನೈಷ ದೋಷಃ, ಸರ್ವಸ್ಯ ಪ್ರಪಞ್ಚಸ್ಯ ಸಾಧಿದೈವಿಕಸ್ಯ ಅನೇನ ಆತ್ಮನಾ ಚತುಷ್ಪಾತ್ತ್ವಸ್ಯ ವಿವಕ್ಷಿತತ್ವಾತ್॥ -ಮಾಂ. ಭಾ. ೩-೧೨.

೧೪೭. ಕನಸಿನಲ್ಲಿ ಜಾಗ್ರದ್ವಾಸನೆಯಿಂದ ಮನಸ್ಸಿಗೆ ಮಾತ್ರ ಕಾಣುವ ಕಲ್ಪಿತಪ್ರಪಂಚವು ತೋರುತ್ತಿರುವದೆಂದೂ ಅದು ಕನಸುಕಾಣುವವನೊಬ್ಬನಿಗೇ ತೋರುತ್ತಿರುವದೆಂದೂ ಆದರೆ ಎಚ್ಚರದಲ್ಲಿ ಎಲ್ಲರಿಗೂ ಇಂದ್ರಿಯಗಳ ಮೂಲಕ ಕಾಣುವ ಸತ್ಯಪ್ರಪಂಚವೂ ಅದರಲ್ಲಿ ಅನೇಕ ಕರ್ತೃಭೋಕ್ತೃಗಳೂ ತೋರುತ್ತಿರುವರೆಂದೂ ಜನರು ಸ್ವಾಭಾವಿಕವಾಗಿ ಎಣಿಸುತ್ತಾರೆ. ಇದಕ್ಕೆ ಎಚ್ಚರದಭಿಮಾನವೇ ಕಾರಣವು. ಶಾಸ್ತ್ರದೃಷ್ಟಿಯಿಂದ ಪರಿಶೀಲಿಸಿದರೆ ಎಚ್ಚರಕ್ಕೂ ಕನಸಿಗೂ ಯಾವದೊಂದು ಭೇದವೂ ಇರುವದಿಲ್ಲ. ಹೇಗೆಂದರೆ ಕನಸಿನಲ್ಲಿಯೂ ಎಚ್ಚರದಂತೆ ಬಾಹ್ಯಾಧ್ಯಾತ್ಮಿಕ ಪ್ರಪಂಚವು ಕಾಣುತ್ತಿರುತ್ತದೆ ; ಆ ಪ್ರಪಂಚವನ್ನೆಲ್ಲ, ಎಚ್ಚರದ ಪ್ರಪಂಚವನ್ನು ಹೇಗೋ ಹಾಗೆ ಆತ್ಮನೇ ಬೆಳಗುತ್ತಿರುತ್ತಾನೆ. ಆದ್ದರಿಂದ ಎಚ್ಚರದ ಪ್ರಪಂಚವೊಂದೇ ಸತ್ಯವೆಂಬುದು ಎಚ್ಚರದಭಿಮಾನದ ವ್ಯಾವಹಾರಿಕದೃಷ್ಟಿಯ ತೀರ್ಪು ; ಈ ತೀರ್ಪೇ ಕಡೆಯದಲ್ಲ. ಎಚ್ಚರದ ವಾಸನೆಯಿಂದ ಕನಸುಕಾಣುವದೆಂದು ಒಪ್ಪಿದರೂ ಈ ಎರಡು ಅವಸ್ಥೆಗಳೂ ಆತ್ಮನಿಗಿಂತ ಬೇರೆಯಾಗಿಲ್ಲದ್ದರಿಂದಲೂ ಒಂದನ್ನೊಂದು ಬಿಟ್ಟುಹೋಗುವದುಂಟಾದ್ದರಿಂದಲೂ ಅಸತ್ಯವೇ ಆಗುತ್ತವೆ. ಕನಸಿನ ಪ್ರಪಂಚವು ಒಬ್ಬೊಬ್ಬರಿಗೇ ಕಾಣುವದೆಂದೂ ಎಚ್ಚರದ ಪ್ರಪಂಚವು ಮಾತ್ರ ಅನೇಕರಿಗೆ ಸಾಧಾರಣವಾಗಿರುವದೆಂದೂ ಭಾವಿಸುವದಕ್ಕೆ ಯಾವ ಆಧಾರವೂ ಇಲ್ಲ. ಕನಸುಕಾಣುವವನಿಗೇ ಆ ಅವಸ್ಥೆಯ ಪ್ರಪಂಚವು ತೋರುತ್ತಿರುವಂತೆಯೇ ಎಚ್ಚರವಾಗಿರುವವನಿಗೇ ಆ ಅವಸ್ಥೆಯ ಪ್ರಪಂಚವು ತೋರುತ್ತಿರುತ್ತದೆ. ಸುಷುಪ್ತಿಯಲ್ಲಿ ಈ ಎರಡೂ ಸಮವಾಗಿಯೇ ಇಲ್ಲವಾಗುತ್ತವೆ. ಕನಸಿನ ಪ್ರಪಂಚವನ್ನು ನೋಡುವ ಆತ್ಮನಿಗೆ **ತೈಜಸನು, ಹಿರಣ್ಯಗರ್ಭನು**-ಎಂದು ಹೆಸರು. ಮಾಂಡೂಕ್ಯದಲ್ಲಿ ತೈಜಸನನ್ನು ವರ್ಣಿಸಿರುವ ಬಗೆ ಹೇಗೆಂದರೆ : ಈ ಆತ್ಮನಿಗೆ ಒಳ ಅರಿವೂ, ದ್ಯುಲೋಕವೇ ಮುಂತಾದ ಏಳು ಅಂಗಗಳೂ

ಇಂದ್ರಿಯಪ್ರಾಣಾಂತಃಕರಣರೂಪವಾದ ಹತ್ತೊಂಬತ್ತು ಅರಿವಿನ ದ್ವಾರಗಳೂ ಇವೆ ; ಸೂಕ್ಷ್ಮ ವಿಷಯದ ಭೋಗವಿರುವದು. ಇವನು ಆತ್ಮನ ಎರಡನೆಯ ಪಾದವು ; ಆತ್ಮನ ಸ್ವತಃಸಿದ್ಧರೂಪವಿದಲ್ಲ.

(೧)ಸ್ವಪ್ನಸ್ಥಾನೋಽನ್ತಃಪ್ರಜ್ಞಃ ಸಪ್ತಾಙ್ಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ -ಮಾಂ.೪.

(೨) ಸವಸ್ತು ಸಂವೃತಿಸತಾ ವಸ್ತುನಾ ಸಹ ವರ್ತತೇ ಇತಿ ಸವಸ್ತು। ತಥಾ ಚ ಉಪಲಬ್ಧಿರುಪಲಮ್ಭಃ। ತೇನ ಸಹ ವರ್ತತೇ ಇತಿ ಸೋಪಲಮ್ಭಂ ಚ । ಶಾಸ್ತ್ರಾದಿ ಸರ್ವವ್ಯವಹಾರಾಸ್ಪದಂ ಗ್ರಾಹ್ಯಗ್ರಾಹಕಲಕ್ಷಣಂ ದ್ವಯಂ ಲೌಕಿಕಂ, ಲೋಕಾದನಪೇತಂ ಲೌಕಿಕಂ ಜಾಗರಿತಮ್ ಇತ್ಯೇತತ್। ಏವಂಲಕ್ಷಣಂ ಜಾಗರಿತಮ್ ಇಷ್ಯತೇ ವೇದಾನ್ತೇಷು। ಅವಸ್ತು ಸಂವೃತೇರಪಿ ಅಭಾವಾತ್। ಸೋಪಲಮ್ಭಂ ವಸ್ತುವತ್ ಉಪಲಮ್ಭನಮ್ ಉಪಲಮ್ಭಃ ಅಸತ್ಯಪಿ ವಸ್ತುನಿ ತೇನ ಸಹ ವರ್ತತೇ ಇತಿ ಸೋಪಲಮ್ಭಂ ಚ ಶುದ್ಧಂ ಕೇವಲಂ ಪ್ರವಿಭಕ್ತಂ ಜಾಗರಿತಾತ್ ಸ್ಥೂಲಾತ್ ಸರ್ವಪ್ರಾಣಿಸಾಧಾರಣತ್ವಾತ್ ಲೌಕಿಕಂ ಇಷ್ಯತೇ ಸ್ವಪ್ನಃ ಇತ್ಯರ್ಥಃ।

-ಮಾಂ.ಕಾ. ಭಾ ೪-೮೭-೩೪೬.

(೩) ಪ್ರಜ್ಞಾನವ್ಯತಿರೇಕೇಣ ಸ್ವಪ್ನಜಾಗರಿತಯೋರ್ನ ಕಶ್ಚಿದ್ವಸ್ತುವಿಶೇಷೋ ಗೃಹ್ಯತೇ। ತಸ್ಮಾತ್ ಪ್ರಜ್ಞಾನವ್ಯತಿರೇಕೇಣ ಅಭಾವೋ ಯುಕ್ತಸ್ತೇಷಾಮ್॥ -ಬೃ.ಭಾ. ೨-೪-೭-೩೬೧.

(೪) ತರ್ಹಿ ಆಗನ್ತುಕೇ ತ್ವೇತೇ। ನ ತವಾತ್ಮಭೂತೇ। ಯದಿ ತವ ಆತ್ಮಭೂತೇ ಚೈತನ್ಯಸ್ವರೂಪವತ್ ಸ್ವತಃಸಿದ್ಧೇ ಸನ್ತತೇ ಏವ ಸ್ಯಾತಾಮ್। ಕಿಂಚ ಸ್ವಪ್ನಜಾಗರಿತೇ ನ ತವ ಆತ್ಮಭೂತೇ। ವ್ಯಭಿಚಾರಿತ್ವಾತ್, ವಸ್ತ್ರಾದಿವತ್॥ - ಉಪ.ಗ. ೫೪.

ಸ್ವಪ್ನಜಾಗ್ರದವಸ್ಥೆಗಳ ಹೋಲಿಕೆಗೆ ಮಾಂಡೂಕ್ಯಕಾರಿಕೆಗಳನೇಕವನ್ನು ಉದಾಹರಿಸಬಹುದಾದರೂ ಮುಖ್ಯವಾಗಿ ಈ ಕಾರಿಕೆಗಳನ್ನೂ ಅವುಗಳ ಭಾಷ್ಯಗಳನ್ನೂ ನೋಡಿರಿ:

ಸ್ವಪ್ನಜಾಗರಿತೇ ಸ್ಥಾನೇ ಹ್ಯೇಕಮಾಹುರ್ಮನೀಷಿಣಃ।
ಭೇದಾನಾಂ ಹಿ ಸಮತ್ವೇನ ಪ್ರಸಿದ್ಧೇನೈವ ಹೇತುನಾ॥ -ಮಾಂ.ಕಾ. ೨-೫
ಆದಾವನ್ತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ ತಥಾ।
ವಿತಥೈಃ ಸದೃಶಾಃ ಸನ್ತೋಽವಿತಥಾ ಇವ ಲಕ್ಷಿತಾಃ॥ ೨-೬
ಸಪ್ರಯೋಜನತಾ ತೇಷಾಂ ಸ್ವಪ್ನೇ ವಿಪ್ರತಿಪದ್ಯತೇ।
ತಸ್ಮಾದಾದ್ಯನ್ತವತ್ತ್ವೇನ ಮಿಥ್ಯೈವ ಖಲು ತೇ ಸ್ಮೃತಾಃ॥ ೨-೭
ಅಪೂರ್ವಂ ಸ್ಥಾನಿಧರ್ಮೋ ಹಿ ಯಥಾ ಸ್ವರ್ಗನಿವಾಸಿನಾಮ್।
ತಾನಯಂ ಪ್ರೇಕ್ಷತೇ ಗತ್ವಾ ಯಥೈವೇಹ ಸುಶಿಕ್ಷಿತಃ॥

ಸ್ವಪ್ನವೃತ್ತಾವಪಿ ತ್ವನ್ತಶ್ಚೇತಸಾ ಕಲ್ಪಿತಂ ತ್ವಸತ್।
ಬಹಿಶ್ಚೇತೋ ಗೃಹೀತಂ ಸದ್ದೃಷ್ಟಂ ವೈತಥ್ಯಮೇತಯೋಃ। ೨-೯
ಜಾಗದ್ವೃತ್ತಾವಪಿ ತ್ವನ್ತಶ್ಚೇತಸಾ ಕಲ್ಪಿತಂ ತ್ವಸತ್।
ಬಹಿಶ್ಚೇತೋ ಗೃಹೀತಂ ಸದ್ಯುಕ್ತಂ ವೈತಥ್ಯಮೇತಯೋಃ।। ೨-೧೦
ಗ್ರಹಣಾಜ್ಜಾಗರಿತವತ್ತದ್ಧೇತುಃ ಸ್ವಪ್ನ ಇಷ್ಯತೇ।
ತದ್ಧೇತುತ್ವಾತ್ತು ತಸ್ಯೈವ ಸಜ್ಜಾಗರಿತಮಿಷ್ಯತೇ ।। ೪-೩೭
ಉತ್ಪಾದಸ್ಯಾಪ್ರಸಿದ್ಧತ್ವಾದಜಂ ಸರ್ವಮುದಾಹೃತಮ್।
ನ ಚ ಭೂತಾದಭೂತಸ್ಯ ಸಂಭವೋಽಸ್ತಿ ಕಥಂಚನ ।। ೪-೩೮
ಅಸಜ್ಜಾಗರಿತೇ ದೃಷ್ಟ್ವಾ ಸ್ವಪ್ನೇ ಪಶ್ಯತಿ ತನ್ಮಯಃ ।
ಅಸತ್ಸ್ವಪ್ನೇಽಪಿ ದೃಷ್ಟ್ವಾ ಚ ಪ್ರತಿಬುದ್ಧೋ ನ ಪಶ್ಯತಿ ।। ೪-೩೯

(೧) ಯಥಾ ಸ್ವಪ್ನಃ ಸ್ವಪ್ನದೃಶ ಏವ ಸನ್ ಸಾಧಾರಣವಿದ್ಯಮಾನವಸ್ತುವತ್ ಅವಭಾಸತೇ, ತಥಾ ತತ್ಕಾರಣತ್ವಾತ್ ಸಾಧಾರಣವಿದ್ಯಮಾನವಸ್ತುವತ್ ಅವಭಾಸಮಾನಮ್। ನ ತು ಸಾಧಾರಣಂ ವಿದ್ಯಮಾನವಸ್ತು ಸ್ವಪ್ನವದೇವ ಇತ್ಯಭಿಪ್ರಾಯಃ।। - ಮಾಂ.ಕಾ.ಭಾ. ೪-೩೭-೨೭೮

೧೪೮. ಎಚ್ಚರಕ್ಕೂ ಕನಸಿಗೂ ಯಾವ ತಾರತಮ್ಯವೂ ಇಲ್ಲ ಎಂದು ವೇದಾಂತಿಗಳು ಹೇಳುವದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ. ಎಚ್ಚರದಲ್ಲಿ ಕಾಣುವ ವಸ್ತುಗಳು ಕನಸಿನ ವಸ್ತುಗಳಂತೆಯೇ ಇರುವವು; ಪರಮಾರ್ಥವಾದ ಅದ್ವೈತಜ್ಞಾನವು ಎರಡರಲ್ಲಿಯೂ ಇರುವದಿಲ್ಲ. ಅದ್ವೈತಜ್ಞಾನವಾದಾಗ ಇವೆರಡೂ ಮಿಥ್ಯೆಯೆಂದು ನಿಶ್ಚಯವಾಗುವದರಿಂದ ವೇದಾಂತಿಗಳು ಇವೆರಡನ್ನೂ ಕನಸೆಂದೇ ಕರೆಯುತ್ತಾರೆ; ತನ್ನ ಕಾಲದಲ್ಲಿ ಸತ್ಯವಾಗಿ ಎಚ್ಚರದಂತೆ ತೋರಿ ನಿಜವಾಗಿ ಎಚ್ಚರವಾಗುತ್ತಲೂ ಹುಸಿತೋರಿಕೆ ಎಂದು ಕಾಣುವದೇ ಕನಸಿನ ಸ್ವಭಾವವಾದ್ದರಿಂದ ಈ ಎರಡವಸ್ಥೆಗಳನ್ನೂ ಕನಸೆನ್ನುವದು ಯುಕ್ತವೇ ಆಗಿರುತ್ತದೆ.

(೧) ನನು ಜಾಗರಿತಂ ಪ್ರಬೋಧರೂಪತ್ವಾತ್ ನ ಸ್ವಪ್ನಃ। ನೈವಮ್ ಸ್ವಪ್ನ ಏವ। ಕಥಮ್? ಪರಮಾರ್ಥಸ್ವಾತ್ಮಪ್ರಬೋಧಾಭಾವಾತ್ ಸ್ವಪ್ನವತ್ ಅಸದ್ವಸ್ತುದರ್ಶನಾಚ್ಚ।।

-ಐ.ಭಾ. ೧-೩-೧೨-೫೬.

(೨) ಜಾಗ್ರತ್ಪ್ರಜ್ಞಾ ಅನೇಕಸಾಧನಾ ಬಹಿರ್ವಿಷಯೇವ ಅವಭಾಸಮಾನಾ ಮನಃಸ್ಪನ್ದನಮಾತ್ರಾ ಸತೀ ತಥಾಭೂತಂ ಸಂಸ್ಕಾರಂ ಮನಸಿ ಆಧತ್ತೇ। ತನ್ಮನಃ ತಥಾ ಸಂಸ್ಕೃತಂ ಚಿತ್ರಿತ ಇವ ಪಟಃ ಬಾಹ್ಯಸಾಧನಾನಪೇಕ್ಷಂ ಅವಿದ್ಯಾಕಾಮಕರ್ಮಭಿಃ ಪ್ರೇರ್ಯಮಾಣಂ ಜಾಗ್ರದ್ವದವಭಾಸತೇ।। -ಮಾಂ.ಭಾ. ೪-೧೪.

(೩) ಯಥಾ ಸ್ವಪ್ನೇ ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ।
ತಥಾ ಜಾಗ್ರದ್ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ।। ೪-೬೧

ಅದ್ವಯಂ ಚ ದ್ವಯಾಭಾಸಂ ಚಿತ್ತಂ ಸ್ವಪ್ನೇ ನ ಸಂಶಯಃ।
ಅದ್ವಯಂ ಚ ದ್ವಯಾಭಾಸಂ ತಥಾ ಜಾಗ್ರನ್ನ ಸಂಶಯಃ॥ ೪-೬೨
ಸ್ವಪ್ನದೃಕ್ಚರನ್ ಸ್ವಪ್ನೇ ದಿಕ್ಷು ವೈ ದಶಸು ಸ್ಥಿತಾನ್।
ಅಣ್ಡಜಾನ್ ಸ್ವೇದಜಾನ್ವಾಪಿ ಜೀವಾನ್ ಪಶ್ಯತಿ ಯಾನ್ ಸದಾ॥ ೪-೬೩
ಸ್ವಪ್ನದೃಕ್ಚಿತ್ತದೃಶ್ಯಾಸ್ತೇ ನ ವಿದ್ಯನ್ತೇ ತತಃ ಪೃಥಕ್।
ತಥಾ ತದ್ದೃಶ್ಯಮೇವೇದಂ ಸ್ವಪ್ನದೃಕ್ಚಿತ್ತಮಿಷ್ಯತೇ॥ ೪-೬೪
ಚರಞ್ಜಾಗರಿತೇ ಜಾಗ್ರದ್ದಿಕ್ಷು ವೈ ದಶಸು ಸ್ಥಿತಾನ್।
ಅಣ್ಡಜಾನ್ ಸ್ವೇದಜಾನ್ವಾಪಿ ಜೀವಾನ್ಪಶ್ಯತಿ ಯಾನ್ ಸದಾ॥ ೪-೬೫
ಜಾಗ್ರಚ್ಚಿತ್ತೇಕ್ಷಣೀಯಾಸ್ತೇ ನ ವಿದ್ಯನ್ತೇ ತತಃ ಪೃಥಕ್।
ತಥಾ ತದ್ದೃಶ್ಯಮೇವೇದಂ ಜಾಗ್ರತಶ್ಚಿತ್ತಮಿಷ್ಯತೇ॥ ೪-೬೬

(೪)ಜಾಗ್ರತೋ ದೃಶ್ಯಾಃ ಜೀವಾಃ ತಚ್ಚಿತ್ತಾವ್ಯತಿರಿಕ್ತಾಃ ಚಿತ್ತೇಕ್ಷಣೀಯತ್ವಾತ್। ಸ್ವಪ್ನದೃಕ್ಚಿತ್ತೇಕ್ಷಣೀಯಜೀವವತ್। ತಚ್ಚ ಜೀವೇಕ್ಷಣಾತ್ಮಕಂ ಚಿತ್ತಂ ದ್ರಷ್ಟುರವ್ಯತಿರಿಕ್ತಮ್। ದ್ರಷ್ಟೃದೃಶ್ಯತ್ವಾತ್ ಸ್ವಪ್ನಚಿತ್ತವತ್॥ -ಮಾಂ.ಕಾ.ಭಾ. ೪-೬೬-೩೧೭

೧೪೯. ಬೌದ್ಧರೂ ಎಚ್ಚರಕನಸುಗಳು ಒಂದಕ್ಕೊಂದು ಸಮಾನವಾಗಿರುವವೆಂದು ಹೇಳುತ್ತಾರೆ. ಆ ಕಾರಣದಿಂದ 'ಜಾಗ್ರದವಸ್ಥೆಯ ಪ್ರತ್ಯಯಗಳಿಗೂ, ಸ್ವಪ್ನಾವಸ್ಥೆಯ ಪ್ರತ್ಯಯಗಳಿಗೆ ಹೊರಗಿನ ವಿಷಯಗಳು ಇಲ್ಲದಿರುವಂತೆಯೇ, ಹೊರಗೆ ಯಾವ ವಿಷಯಗಳೂ ಇರುವದಿಲ್ಲ' ಎಂದು ಅನುಮಾನದಿಂದ ಕಲ್ಪಿಸುತ್ತಾರೆ. ಅಂತೂ ಹೀಗೆ ವಿಜ್ಞಾನಕ್ಕೆ ವಿಷಯವಾದ ಪದಾರ್ಥವು ವಿಜ್ಞಾನಕ್ಕಿಂತ ಹೊರಚ್ಚಾಗಿಲ್ಲವಾದ್ದರಿಂದ ವಿಜ್ಞಾನವೇ ತತ್ತ್ವ ಎಂಬುದು ಅವರ ತೀರ್ಮಾನ. ಆದರೆ ಅವರ ಮತದಲ್ಲಿ ಎರಡವಸ್ಥೆಗಳಿಗೂ ಸಮಾನವಾಗಿದ್ದು ಅವುಗಳನ್ನು ನೋಡುವ ಯಾವ ಕೂಟಸ್ಥಚೈತನ್ಯವನ್ನೂ ಒಪ್ಪಿಲ್ಲವಾದ್ದರಿಂದ ಅವರ ಈ ವಾದವು ನಿಲ್ಲುವದಿಲ್ಲ. ಇದಲ್ಲದೆ ಕನಸು ಎಚ್ಚರವಾಗುತ್ತಲೂ ಬಾಧಿತವಾಗುತ್ತದೆ ; ಹಾಗೆ ಎಚ್ಚರವು ಯಾವ ಅವಸ್ಥೆಯಲ್ಲಿ ಬಾಧಿತವಾಗುತ್ತದೆ?- ಎಂಬ ಆಕ್ಷೇಪಕ್ಕೆ ಅವರಲ್ಲಿ ಉತ್ತರವಿಲ್ಲ. ಕನಸನ್ನು ಎಚ್ಚರದಲ್ಲಿ ಸ್ಮರಿಸಿಕೊಂಡು ಅದು ಮಿಥ್ಯೆ ಎನ್ನುತ್ತೇವಷ್ಟೆ? ಹಾಗೆ ಎಚ್ಚರವೂ ಹಿಂದಿನ ಅವಸ್ಥೆಯಲ್ಲಾದ ಒಂದು ಅವಸ್ಥೆ ಎಂದು ಯಾವ ಅವಸ್ಥೆಯಲ್ಲಿ ಅದರ ಮಿಥ್ಯಾತ್ವವನ್ನು ನಿರ್ಧರಿಸುತ್ತೇವೆ? ಈ ಆಕ್ಷೇಪಕ್ಕೂ ಅವರಲ್ಲಿ ಸಮಾಧಾನವಿಲ್ಲ. ಕನಸಿನ ಹೋಲಿಕೆ ಎಚ್ಚರಕ್ಕೆ ಇದೆ ಎಂಬ ಒಂದೇ ಕಾರಣದಿಂದ ಎಚ್ಚರದ ಪದಾರ್ಥಗಳು ಇಲ್ಲವೆಂದು ಕಲ್ಪಿಸುವ ಅನುಮಾನವೂ ಸರಿಯಲ್ಲ. ಇದೇ ಕಾರಣದಿಂದ ಮಾಯೆ, ಬಿಸಿಲುಕುದುರೆಯ ನೀರು, ಗಂಧರ್ವನಗರ- ಮುಂತಾದ ಪ್ರತ್ಯಯಗಳಿಗೂ ಜಾಗ್ರದವಸ್ಥೆಯ ಪ್ರತ್ಯಯಗಳಿಗೂ ಹೋಲಿಕೆ

ಯಿದೆ ಎಂಬಿಷ್ಟೇ ಕಾರಣದಿಂದ ಜಾಗ್ರತ್ಪ್ರತ್ಯಯಗಳಿಗೂ ವಿಷಯವಿಲ್ಲ ಎಂಬ ಕಲ್ಪನೆಯು ಸರಿಯಲ್ಲ. ಬೆಂಕಿಯಂತೆ ಮಂ ೦ ಪದಾರ್ಥವಾದ್ದರಿಂದ ಅದೂ ಬಿಸಿ-ಎನ್ನಬಹುದೇನು? ವೇದಾಂತಿಗಳಾದರೆ ಆತ್ಮಜ್ಞಾನದ ದೃಷ್ಟಿಯಿಂದ ಎರಡವಸ್ಥೆಗಳನ್ನೂ ಕನಸೇ ಎಂದು ಅರಿಯುವದರಿಂದ ಅವರ ಮತದಲ್ಲಿ ಜಾಗ್ರತ್ತಿನ ಸತ್ಯತ್ವವು ಬಾಧಿತವಾಗುತ್ತದೆ ಎನ್ನುವದು ಯುಕ್ತವಾಗುತ್ತದೆ; ಏಕೆಂದರೆ ಆತ್ಮನಲ್ಲಿಯೇ ಜಾಗ್ರತ್ಸ್ವಪ್ನಗಳೆರಡೂ ಕಲ್ಪಿತವಾಗಿರುತ್ತವೆ.

(೧) ಅತ್ರೋಚ್ಯತೇ। ನ ಸ್ವಪ್ನಾದಿಪ್ರತ್ಯಯವತ್ ಜಾಗ್ರತ್ಪ್ರತ್ಯಯಾ ಭವಿತುಮರ್ಹನ್ತಿ। ಕಸ್ಮಾತ್? ವೈಧರ್ಮ್ಯಾತ್। ವೈಧರ್ಮ್ಯಂ ಹಿ ಭವತಿ ಸ್ವಪ್ನಜಾಗರಿತಯೋಃ। ಕಿಂ ಪುನರ್ವೈಧರ್ಮ್ಯಮ್? ಬಾಧಾಬಾಧೌ ಇತಿ ಬ್ರೂಮಃ। ಬಾಧ್ಯತೇ ಹಿ ಸ್ವಪ್ನೋಪಲಬ್ಧಂ ವಸ್ತು ಪ್ರತಿಬುದ್ಧಸ್ಯ 'ಮಿಥ್ಯಾ ಮಯೋಪಲಬ್ಧೋ ಮಹಾಜನಸಮಾಗಮಃ' ಇತಿ। 'ನ ಹ್ಯಸ್ತಿ ಮಮ ಮಹಾಜನಸಮಾಗಮಃ। ನಿದ್ರಾಗ್ಲಾನಂ ತು ಮೇ ಮನೋ ಬಭೂವ, ತೇನೈಷಾ ಭ್ರಾನ್ತಿರುದ್ಬಭೂವ' ಇತಿ। ಏವಂ ಮಾಯಾದಿಷ್ವಪಿ ಭವತಿ ಯಥಾಯಥಂ ಬಾಧಃ। ನೈವಂ ಜಾಗರಿತೋಪಲಬ್ಧಂ ವಸ್ತು ಸ್ತಮ್ಭಾದಿಕಂ ಕಸ್ಯಾಂಚಿದಪ್ಯವಸ್ಥಾಯಾಂ ಬಾಧ್ಯತೇ॥

ಸೂ. ಭಾ. ೨-೨-೨೯-೬೧.

(೨) ಅಪಿ ಚ ಸ್ಮೃತಿರೇಷಾ ಯತ್ ಸ್ವಪ್ನದರ್ಶನಮ್। ಉಪಲಬ್ಧಿಸ್ತು ಜಾಗರಿತದರ್ಶನಮ್। ಸ್ಮೃತ್ಯುಪಲಬ್ಧ್ಯೋಶ್ಚ ಪ್ರತ್ಯಕ್ಷಮ್ ಅನ್ತರಂ ಸ್ವಯಮ್ ಅನುಭೂಯತೇ ಅರ್ಥವಿಪ್ರಯೋಗ ಸಂಪ್ರಯೋಗಾತ್ಮಕಮ್ 'ಇಷ್ಟಂ ಪುತ್ರಂ ಸ್ಮರಾಮಿ ನೋಪಲಭೇ ಉಪಲಬ್ಧುಮಿಚ್ಛಾಮಿ' ಇತಿ। ತತ್ರೈವಂ ಸತಿ ನ ಶಕ್ಯತೇ ವಕ್ತುಂ 'ಮಿಥ್ಯಾ ಜಾಗರಿತೋಪಲಬ್ಧಿಃ, ಉಪಲಬ್ಧಿತ್ವಾತ್ ಸ್ವಪ್ನೋಪಲಬ್ಧಿವತ್, ಇತಿ ಉಭಯೋರನ್ತರಂ ಸ್ವಯಮನುಭವತಾ। ನ ಚ ಸ್ವಾನುಭವಾಪಲಾಪಃ ಪ್ರಾಜ್ಞಮಾನಿಭಿರ್ಯುಕ್ತಃ ಕರ್ತುಮ್॥ -ಸೂ. ಭಾ. ೨-೨-೨೯-೬೧.

(೩) ಅಪಿ ಚ ಅನುಭವವಿರೋಧಪ್ರಸಙ್ಗಾತ್, ಜಾಗರಿತಪ್ರತ್ಯಯಾನಾಂ ಸ್ವತೋ ನಿರಾಲಮ್ಬನತಾಂ ವಕ್ತುಮಶಕ್ನುವತಾ ಸ್ವಪ್ನಪ್ರತ್ಯಯಸಾಧರ್ಮ್ಯಾತ್ ವಕ್ತುಮಿಷ್ಯತೇ। ನ ಚ ಯೋ ಯಸ್ಯ ಸ್ವತೋ ಧರ್ಮೋ ನ ಸಂಭವತಿ ಸೋಽನ್ಯಸ್ಯ ಸಾಧರ್ಮ್ಯಾತ್ ತಸ್ಯ ಸಂಭವಿಷ್ಯತಿ। ನ ಹ್ಯಗ್ನಿರುಷ್ಣೋಽನುಭೂಯಮಾನಃ ಉದಕಸಾಧರ್ಮ್ಯಾತ್ ಶೀತೋ ಭವಿಷ್ಯತಿ। ದರ್ಶಿತಂ ತು ವೈಧರ್ಮ್ಯಂ ಸ್ವಪ್ನಜಾಗರಿತಯೋಃ॥ -ಸೂ. ಭಾ. ೨-೨-೨೯-೬೧.

(೪) ಸ್ವಪ್ನಜಾಗರಿತಸ್ಥಾನೇ ಹ್ಯೇಕಮಾಹುರ್ಮನೀಷಿಣಃ।
ಭೇದಾನಾಂ ಹಿ ಸಮತ್ವೇನ ಪ್ರಸಿದ್ಧೇನೈವ ಹೇತುನಾ॥ -ಮಾಂ. ಕಾ. ೨-೫.
ಉಭಯೋರಪಿ ವೈತಥ್ಯಂ ಭೇದಾನಾಂ ಸ್ಥಾನಯೋರ್ಯದಿ।
ಕ ಏತಾನ್ ಬುಧ್ಯತೇ ಭೇದಾನ್ ಕೋ ವೈ ತೇಷಾಂ ವಿಕಲ್ಪಕಃ॥
ಕಲ್ಪಯತ್ಯಾತ್ಮನಾತ್ಮಾನಮಾತ್ಮಾ ದೇವಃ ಸ್ವಮಾಯಯಾ।
ನ ಏವ ಬುಧ್ಯತೇ ಭೇದಾನಿತಿ ವೇದಾನ್ತನಿಶ್ಚಯಃ॥ - ಮಾಂ. ಕಾ. ೨-೧೧, ೧೨

೧೫೦. ಎಚ್ಚರಕನಸುಗಳ ಪ್ರಪಂಚವು ಆತ್ಮನಿಗೆ ಯಾವಾಗಲೂ ಸಂಬದ್ಧವಾದಂತೆ ಕಾಣುತ್ತಲೇ ಇರಬೇಕೆಂಬ ನಿಯಮವೂ ಇಲ್ಲ. ಏಕೆಂದರೆ ಸುಷುಪ್ತಾವಸ್ಥೆಯಲ್ಲಿ . ಪ್ರಪಂಚವೆಲ್ಲವೂ ಆತ್ಮನಲ್ಲಿಯೇ ಅಡಕವಾಗಿರುತ್ತದೆ; ಪ್ರಪಂಚದಲ್ಲಿ ತೋರುವ ವಸ್ತುಗಳ ಬಿಡಿಬಿಡಿಯ ಜ್ಞಾನಗಳೂ ಆತ್ಮನಲ್ಲಿ ಒಂದಾಗಿರುತ್ತವೆ; ವಿಷಯಸುಖಗಳು ಯಾವದೂ ಇಲ್ಲದೆ ಆತ್ಮರೂಪವಾದ ಆನಂದದಲ್ಲಿಯೇ ಒಂದಾಗಿರುತ್ತವೆ. ಆಗ ಆತ್ಮನಿಗೆ ಯಾವ ಸಂಸಾರವೂ ಇರುವದಿಲ್ಲ. ಈ ಕಾರಣದಿಂದಲೇ ಛಾಂದೋಗ್ಯದಲ್ಲಿ ಜೀವನು ಆ ಅವಸ್ಥೆಯಲ್ಲಿ ಸದ್ರೂಪವಾದ ಬ್ರಹ್ಮದಲ್ಲಿ ಒಂದಾಗಿರುತ್ತಾನೆಂದು ಹೇಳಿದೆ; ಬೃಹದಾರಣ್ಯಕದಲ್ಲಿ ಪ್ರಾಜ್ಞನೊಡನೆ ಆಲಿಂಗಿತನಾಗಿರುತ್ತಾನೆಂದು ಹೇಳಿದೆ; ಮಾಂಡೂಕ್ಯದಲ್ಲಿ ಆತ್ಮನು ಏಕೀಭೂತನೂ ಪ್ರಜ್ಞಾನಘನನೂ ಆನಂದಮಯನೂ ಆಗಿರುತ್ತಾನೆಂದು ವರ್ಣಿಸಿರುತ್ತದೆ. ಕೇವಲ ಚಿನ್ಮಾತ್ರವಾಗಿರುವ ಈ ರೂಪಕ್ಕೆ ಪ್ರಾಜ್ಞನೆಂದು ಹೆಸರು. ಸುಷುಪ್ತಾತ್ಮನ ಸ್ವರೂಪವು ಆತ್ಮನ ಮೂರನೆಯ ಪಾದವು; ಆತ್ಮನ ಪರಮಾರ್ಥರೂಪವಲ್ಲ.

(೧) ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ॥

-ಛಾಂ. ೬-೮-೧.

(೨) ಅಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮ್॥ -ಬೃ. ೪-೩-೨೧.

(೩) ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನನ್ದಮಯೋಹ್ಯಾನನ್ದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ॥ -ಮಾಂ.೫.

೧೫೧. ಸುಷುಪ್ತಿಯ ವಿಷಯದಲ್ಲಿ ಎರಡು ಬಗೆಯ ತಪ್ಪು ಅಭಿಪ್ರಾಯಗಳಾಗುವ ಸಂಭವವಿದೆ. ಸುಷುಪ್ತಿಯಲ್ಲಿ ಏನೂ ಇಲ್ಲದಿದ್ದು ಎಚ್ಚರವಾಗುತ್ತಲೂ ವಿವಿಧ ಪ್ರಪಂಚವಾಗಿ ಕಾಣುವದರಿಂದ ಸುಷುಪ್ತಿಯಲ್ಲಿ ಪ್ರಪಂಚವೆಲ್ಲವೂ ಬೀಜರೂಪವಾಗಿರುತ್ತದೆ ಎಂಬುದೊಂದು; ಸುಷುಪ್ತಿಯಲ್ಲಿ ನಾನು ಮತ್ತೊಬ್ಬರು ಎಂಬ ಅನುಭವವೂ ಇರುವದಿಲ್ಲವಾದ್ದರಿಂದ ಆತ್ಮಸ್ವರೂಪವೂ ಆಗ ಇರುವದಿಲ್ಲವೆನ್ನಬೇಕು - ಎಂಬುದು ಮತ್ತೊಂದು. ಮೊದಲನೆಯ ತಿಳಿವಳಿಕೆಯು ಜಾಗ್ರದ್ದೃಷ್ಟಿಯಿಂದ ಸರಿಯೇ; ಆದ್ದರಿಂದಲೇ ಸುಷುಪ್ತಾತ್ಮನೂ ಅವ್ಯಾಕೃತಜಗದಾತ್ಮನೂ ಒಂದೇ ಎಂದೂ ಸುಷುಪ್ತಾತ್ಮನು ಜಗತ್ಕಾರಣನಾದ ಪರಮೇಶ್ವರನೇ ಎಂದೂ ಶ್ರುತಿಯಲ್ಲಿ ವರ್ಣಿಸಿದೆ. ಆದರೆ ಈ ಬೀಜಸ್ಥಿತಿಯನ್ನು ಕಲ್ಪಿಸುವದೂ ಮಿಥ್ಯಾಜ್ಞಾನದಿಂದಲೇ ಎಂದು ಹಿಂದೆ (೧೦೫) ತಿಳಿಸಿರುತ್ತೇವೆ. ಸುಷುಪ್ತಿಯಲ್ಲಿ ಯಾವ ವಿಶೇಷಅರಿವೂ ಇರುವದಿಲ್ಲವೆಂಬುದೂ ನಿಜವೇ; ಆದರೆ ಆತ್ಮನ ಸ್ವರೂಪವಾದ ಚೈತನ್ಯವೂ ಆಗ ಇರುವದಿಲ್ಲ

ವೆನ್ನುವದು ಸರಿಯಲ್ಲ. ಏಕೆಂದರೆ ಅಲ್ಲಿ ದ್ವಿತೀಯವಸ್ತುವನ್ನು ತಾನು ಅರಿಯಲಿಲ್ಲವೆಂಬ ಅನುಭವವಿರುವದೇ ಹೊರತು ತಾನೂ ಇರಲಿಲ್ಲವೆಂದೇನೂ ಅನುಭವವಿಲ್ಲ. ಅಲ್ಲಿ ನಾನು, ಇದು, ಅವನು-ಎಂಬ ವಿಶೇಷರೂಪವಾದ ಅರಿವಿಲ್ಲದಿರುವದು ನಿಜ; ಆದರೆ ಅಂತಃಕರಣ, ಇಂದ್ರಿಯ, ವಿಷಯ-ಎಂದು ವಿಂಗಡಿಸಿಕೊಂಡಿರುವ ಇಡಿಯ ಜಗತ್ತು ಪರಮಾತ್ಮನಲ್ಲಿ ಒಂದಾಗಿರುವದೇ ಅದಕ್ಕೆ ಕಾರಣವು, ಆತ್ಮನಿಲ್ಲದ್ದಲ್ಲ.

(೧) ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽನ್ತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್॥ -ಮಾಂ. ೬.

(೨) ಸುಷುಪ್ತಾವ್ಯಾಕೃತಯೋಸ್ತ್ವೇಕತ್ವಂ ಸಿದ್ಧಮೇವ। ನಿರ್ವಿಶೇಷತ್ವಾತ್॥

-ಮಾಂ. ಭಾ.೩.

(೩) ನ ಹಿ ಪ್ರಾಗುತ್ಪತ್ತೇರ್ನಾಮವದ್ರೂಪವದ್ವಾ ಇದಮ್ ಇತಿ ಗ್ರಹೀತುಂ ಶಕ್ಯಂ ವಸ್ತು ಸುಷುಪ್ತಕಾಲೇ ಇವ। ಯಥಾ ಸುಷುಪ್ತಾದುತ್ಥಿತಃ ಸತ್ತ್ವಮಾತ್ರಮ್ ಅವಗಚ್ಛತಿ ಸುಷುಪ್ತೇ 'ಸನ್ಮಾತ್ರಮೇವ ಕೇವಲಂ ವಸ್ತು' ಇತಿ, ತಥಾ ಪ್ರಾಗುತ್ಪತ್ತೇಃ ಇತ್ಯಭಿಪ್ರಾಯಃ॥

-ಛಾಂ. ಭಾ ೬-೨-೧-೪೪೯.

(೪) "ನಾಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ" (ಛಾಂ. ೮-೧೧-೧) ಇತಿ ಸುಷುಪ್ತಾವಸ್ಥಾಯಾಂ ವಿಶೇಷವಿಜ್ಞಾನಾಭಾವಮೇವ ದರ್ಶಯತಿ ನ ವಿಜ್ಞಾತಾರಂ ಪ್ರತಿಷೇಧತಿ। ಯತ್ತು ತತ್ರ 'ವಿನಾಶಮೇವಾಪೀತೋ ಭವತಿ' ಇತಿ, ತದಪಿ ವಿಶೇಷವಿಜ್ಞಾನವಿನಾಶಾಭಿಪ್ರಾಯಮೇವ ನ ವಿಜ್ಞಾತೃವಿನಾಶಾಭಿಪ್ರಾಯಮ್। "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್" (ಬೃ. ೪-೩-೩೦) ಇತಿ ಶ್ರುತ್ಯನ್ತರಾತ್॥ -ಸೂ. ಭಾ. ೧-೩-೧೯-೨೬೭.

(೫) ತತ್ರ ಸತಿ ಸಂಪನ್ನಸ್ತಾವತ್ ತತ್ ಏಕತ್ವಾತ್ ನ ವಿಜಾನಾತೀತಿ ಯುಕ್ತಮ್॥

-ಸೂ. ೩-೨-೭-೨೬೬.

(೬) ಯದ್ಧಿ ತದ್ವಿಶೇಷದರ್ಶನಕಾರಣಮ್ ಅನ್ತಃಕರಣಂ, ಚಕ್ಷುಃ, ರೂಪಂ ಚ ತತ್ ಅವಿದ್ಯಯಾ ಅನ್ಯತ್ವೇನ ಪ್ರತ್ಯುಪಸ್ಥಾಪಿತಮ್ ಆಸೀತ್, ತತ್ ಏತಸ್ಮಿನ್ ಕಾಲೇ ಏಕೀಭೂತಮ್। ಆತ್ಮನಃ ಪರೇಣ ಪರಿಷ್ವಙ್ಗಾತ್। ದ್ರಷ್ಟುರ್ಹಿ ಪರಿಚ್ಛಿನ್ನಸ್ಯ ವಿಶೇಷದರ್ಶನಾಯ ಕರಣಾನಿ ಅನ್ಯತ್ವೇನ ವ್ಯವತಿಷ್ಠತೇ। ಅಯಂ ತು ಸ್ವೇನ ಸರ್ವಾತ್ಮನಾ ಸಂಪರಿಷ್ವಕ್ತಃ ಸ್ವೇನ ಪರೇಣ ಪ್ರಾಜ್ಞೇನ ಆತ್ಮನಾ ಪ್ರಿಯಯೇವ ಪುರುಷಃ। ತೇನ ನ ಪೃಥಕ್ತ್ವೇನ ವ್ಯವಸ್ಥಿತಾನಿ ಕರಣಾನಿ ವಿಷಯಾಶ್ಚ। ತದಭಾವಾತ್ ವಿಶೇಷದರ್ಶನಂ ನಾಸ್ತಿ। ಕರಣಾದಿಕೃತಂ ಹಿ ತತ್ ನಾತ್ಮಕೃತಮ್। ಆತ್ಮಕೃತಮಿವ ಪ್ರತ್ಯವಭಾಸತೇ, ತಸ್ಮಾತ್ ತತ್ಕೃತಾ ಇಯಂ ಭ್ರಾನ್ತಿಃ ಆತ್ಮನೋ ದೃಷ್ಟಿಃ ಪರಿಲುಪ್ಯತ ಇತಿ॥

-ಬೃ. ಭಾ. ೪-೩-೨೩-೨೨೬.

೧೫೨. ಸುಷುಪ್ತಿಯನ್ನು ಎರಡು ದೃಷ್ಟಿಗಳಿಂದ ನೋಡುವದಕ್ಕೆ ಬರುತ್ತದೆ. ಜಾಗ್ರತ್ಸ್ವಪ್ನಗಳಿಗೆ ಹೋಲಿಸಿದರೆ ಸುಷುಪ್ತಿಯಲ್ಲಿರುವದು ಜಗತ್ಕಾರಣವಾದ ಬೀಜಾತ್ಮ

ನಾಗುವದು. ಈ ದೃಷ್ಟಿಯಿಂದಲೇ ಜೀವನು ಸುಷುಪ್ತಿಯಲ್ಲಿ ಬ್ರಹ್ಮದೊಡನೆ ಒಂದಾಗುವನೆಂದೂ ಆ ಬ್ರಹ್ಮದಿಂದ ಪ್ರಾಣಾದಿಸರ್ವಜಗತ್ತೂ ಎಚ್ಚರದಲ್ಲಿ ಉತ್ಪನ್ನ ವಾಗುವದೆಂದೂ ಶ್ರುತಿಯಲ್ಲಿ ಹೇಳಿರುತ್ತದೆ. ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ಜೀವನು ಜೀವನಲ್ಲ; ಅವನು ಬ್ರಹ್ಮವನ್ನು ಸೇರಿ ಒಂದಾಗದೆ ಇರುವದೆಂಬ ಕಾಲವೇ ಇಲ್ಲ. ಜಾಗ್ರತ್ಸ್ವಪ್ನಗಳಲ್ಲಿ ಉಪಾಧಿಗಳಿಂದ ಬೇರೊಂದಾದ ಜೀವರೂಪ ವನ್ನು ಹೊಂದಿದ್ದಂತೆ ತೋರುವದರಿಂದ ಸುಷುಪ್ತಿಯಲ್ಲಿ ಸದ್ರೂಪಬ್ರಹ್ಮವನ್ನು ಸೇರಿ ಒಂದಾಗುತ್ತಾನೆ ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಸುಷುಪ್ತಿಯು ಸುಷುಪ್ತಿಯಲ್ಲ; ಅವಸ್ಥಾತ್ರಯವೆಂಬುದು ಆತ್ಮನಲ್ಲಿ ಅಧ್ಯಾರೋಪಿತ ವಾಗಿರುವದೇ ಹೊರತು ಪರಮಾರ್ಥವಲ್ಲ. ಆದ್ದರಿಂದಲೇ ಶ್ರುತಿಯು 'ಇವು ಮೂರೂ ಸ್ವಪ್ನಗಳು' ಎಂದು ಹೇಳುತ್ತಿದೆ ಅವಸ್ಥಾತ್ರಯವನ್ನು ಸತ್ಯವೆಂದು ಅಧ್ಯಾ ರೋಪದೃಷ್ಟಿಯಿಂದ ಇಟ್ಟುಕೊಂಡಾಗ ಸುಷುಪ್ತಿಯಲ್ಲಿ ನಿಷ್ಪ್ರಪಂಚತ್ವವು ಇರುವ ದೆಂದೂ ಜಾಗ್ರತ್ಸ್ವಪ್ನಗಳಲ್ಲಿ ಸಪ್ರಪಂಚತ್ವವಿರುವದೆಂದೂ ಹೇಳುವೆವು; ಸುಷುಪ್ತಿ ಯಲ್ಲಿ ಜೀವನು ಯಾವದನ್ನೂ ಅರಿಯುವದಿಲ್ಲವೆಂದೂ ಜಾಗ್ರತ್ಸ್ವಪ್ನಗಳಲ್ಲಿ ದ್ವೈತವನ್ನು ಅರಿಯುತ್ತಿರುವನೆಂದೂ ಹೇಳುವದೂ ಈ ದೃಷ್ಟಿಯಿಂದಲೇ. ಆದರೆ ಸುಷುಪ್ತಿಯನ್ನು ಸುಷುಪ್ತಿದೃಷ್ಟಿಯಿಂದಲೇ ನೋಡಿದರೆ, ಆಗ ನಿಷ್ಪ್ರಪಂಚವಾದ ಆತ್ಮಮಾತ್ರವೇ ಇರುವದು. ಆ ಆತ್ಮನಿಗೆ ಯಾವ ಅವಸ್ಥೆಯೂ ಇಲ್ಲದ್ದರಿಂದ ಅವನು ಮೇಲೆ ಹೇಳಿದ ವೈಶ್ವಾನರ, ತೈಜಸ, ಪ್ರಾಜ್ಞ-ಎಂಬ ಅಧ್ಯಾರೋಪಿತರೂಪಗಳಿಗಿಂತ ಅತ್ಯಂತವಿಲಕ್ಷಣನಾದ **ತುರೀಯನು.** ಆ ಮೂರಕ್ಕೆ ಹೋಲಿಸಿದಾಗ ನಾಲ್ಕನೆಯವನು. ಈ ನಾಲ್ಕನೆಯದಾದ ಪರಮಾರ್ಥರೂಪದಲ್ಲಿ ಯಾವ ವಿಶೇಷಣವೂ ಇಲ್ಲದ್ದರಿಂದ ಅದನ್ನು ಅವಸ್ಥಾತ್ರಯದಲ್ಲಿ ಕಲ್ಪಿಸಬಹುದಾದ ರೂಪಗಳನ್ನೆಲ್ಲ ಅಲ್ಲಗಳೆಯುವದ ರಿಂದಲೇ ಶ್ರುತಿಯಲ್ಲಿ ವರ್ಣಿಸಿರುತ್ತದೆ.

(೧) ಸುಷುಪ್ತಿಕಾಲೇ ಚ ಪರೇಣ ಬ್ರಹ್ಮಣಾ ಜೀವಃ ಏಕತಾಂ ಗಚ್ಛತಿ। ಪರಸ್ಮಾಚ್ಚ ಬ್ರಹ್ಮಣಃ ಪ್ರಾಣಾದಿಕಂ ಜಗತ್ ಜಾಯತೇ ಇತಿ ವೇದಾನ್ತಮರ್ಯಾದಾ॥ -ಸೂ. ಭಾ. ೧-೪-೧೮-೩೭೬.

(೨) ಅಪಿ ಚ ನ ಕದಾಚಿತ್ ಜೀವಸ್ಯ ಬ್ರಹ್ಮಣಾ ಸಂಪತ್ತಿರ್ನಾಸ್ತಿ। ಸ್ವರೂಪಸ್ಯ ಅನಪಾಯಿತ್ವಾತ್। ಸ್ವಪ್ನಜಾಗರಿತಯೋಸ್ತು ಉಪಾಧಿಸಂಪರ್ಕವಶಾತ್ ಪರರೂಪಾಪತ್ತಿಮಿವ ಅಪೇಕ್ಷ್ಯ ತದುಪಶಮಾತ್ ಸುಷುಪ್ತೇ ಸ್ವರೂಪಾಪತ್ತಿಃ ವಕ್ಷ್ಯತೇ॥ -ಸೂ. ಭಾ. ೩-೨-೭-೨೬೬.

(೩) ಜೀವಪ್ರಸವಬೀಜಾತ್ಮಕತ್ವಮ್ ಅಪರಿತ್ಯಜ್ಯೈವ ಪ್ರಾಣಶಬ್ದತ್ವಂ ಸತಃ, ಸಚ್ಛಬ್ದವಾಚ್ಯತಾ ಚ। ಯದಿ ಹಿ ನಿರ್ಬೀಜರೂಪಂ ವಿವಕ್ಷಿತಂ ಬ್ರಹ್ಮ ಅಭವಿಷ್ಯತ್ ''ನೇತಿ ನೇತಿ'', ''ಯತೋ ವಾಚೋ ನಿವರ್ತನ್ತೇ'', ''ಅನ್ಯದೇವ ತದ್ವಿದಿತಾದಥೋ ಅವಿದಿತಾತ್'' ಇತ್ಯವಕ್ಷ್ಯತ್॥ -ಮಾಂ.ಕಾ. ೧-೪-೨೪.

(೪) ಬುದ್ಧ್ಯುಪಾಧಿಸ್ಥಾನವಿಶೇಷಯೋಗಾತ್ ಉದ್ಭೂತಸ್ಯ ವಿಶೇಷವಿಜ್ಞಾನಸ್ಯ ಉಪಾಧ್ಯುಪಶಮೇ ಯ ಉಪಶಮಃ ಸ ಪರಮಾತ್ಮನಾ ಸಂಬನ್ಧಃ ಇತಿ ಉಪಾಧ್ಯಪೇಕ್ಷಯೈವ ಉಪಚರ್ಯತೇ॥ -ಸೂ. ಭಾ. ೩-೨-೩೪-೩೧೦.

(೫) ಉಪಪದ್ಯತೇ ಚ ಅತ್ರ ಈದೃಶ ಏವ ಸಂಬನ್ಧಃ ನಾನ್ಯಾದೃಶಃ ''ಸ್ವಮಪೀತೋ ಭವತಿ'' (ಛಾಂ. ೬-೮-೧) ಇತಿ ಹಿ ಸ್ವರೂಪಸಂಬನ್ಧಮೇನಮ್ ಆಮನನ್ತಿ। ಸ್ವರೂಪಸ್ಯ ಚ ಅನಪಾಯಿತ್ವಾತ್ ನ ನರನಗರನ್ಯಾಯೇನ ಸಂಬನ್ಧೋ ಘಟತೇ॥ -ಸೂ. ಭಾ. ೩-೨-೩೫-೩೧೧.

(೬) ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾಃ॥ -ಐ. ೧-೩.

(೭) ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುರ್ಯಯೋಃ।
ಬೀಜನಿದ್ರಾಯತಃ ಪ್ರಾಜ್ಞಃ ಸಾ ಚ ತುರ್ಯೇ ನ ವಿದ್ಯತೇ॥ - ಮಾಂ. ಕಾ. ೧-೧೩.

(೮) ನಾನ್ತಃಪ್ರಜ್ಞಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮ್। ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿನ್ತ್ಯಮವ್ಯಪದೇಶ್ಯಮೇಕಾತ್ಮ-ಪ್ರತ್ಯಯಸಾರಂ ಪ್ರಪಞ್ಚೋಪಶಮಂ ಶಾನ್ತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ ಸ ಆತ್ಮಾ ಸ ವಿಜ್ಞೇಯಃ॥ - ಮಾಂ. ೭.

(೯) ಅದ್ವೈತಂ ಭೇದವಿಕಲ್ಪರಹಿತಂ ಚತುರ್ಥಂ ತುರೀಯಂ ಮನ್ಯನ್ತೇ। ಪ್ರತೀಯ ಮಾನ ಪಾದತ್ರಯರೂಪವೈಲಕ್ಷಣ್ಯಾತ್॥ -ಮಾಂ. ಭಾ. ೭-೪೨.

೧೫೩. ಅವಸ್ಥಾತ್ರಯರೂಪವಾದ ವಿಶೇಷವು ಆತ್ಮನಲ್ಲಿಲ್ಲವೇ **ಇಲ್ಲ ಎಂದು** ತಿಳಿಯುವದಕ್ಕೆ ಅನುಕೂಲವಾಗಿ **ಮಾಂಡೂಕ್ಯೋಪನಿಷತ್ತಿನಲ್ಲಿ ಓಂಕಾರ** ನಿರ್ಣಯ ವನ್ನು ಮಾಡಿರುತ್ತದೆ. **ಓಂಕಾರ, ಬ್ರಹ್ಮ, ಆತ್ಮ- ಈ ಮೂರೂ ಒಂದೇ ತತ್ತ್ವಕ್ಕೆ ಹೆಸರುಗಳು.** ಜಾಗ್ರತ್ತಿನಲ್ಲಿಯೂ ಸ್ವಪ್ನದಲ್ಲಿಯೂ ಪ್ರಪಂಚವು ಕಾಣುತ್ತಿರುವದೆಂದೂ ಸುಷುಪ್ತಿಯಲ್ಲಿ ಬೀಜರೂಪವಾಗಿರುವದೆಂದೂ ಈ ಪ್ರಪಂಚವು ಅವಿದ್ಯಾಕಲ್ಪಿತವಾಗಿ ಆತ್ಮನಲ್ಲಿ ಕಾಣುತ್ತಿರುವದೆಂದೂ ಪರಮಾರ್ಥದೃಷ್ಟಿಯಿಂದ ನೋಡಿದಾಗ ಆತ್ಮನು ಪ್ರಪಂಚೋಪಶಮನೂ ಶಿವನೂ ಅದ್ವೈತನೂ ಆಗಿರುವನೆಂದೂ ಆ ಉಪನಿಷತ್ತಿನಲ್ಲಿ ಪ್ರತಿಪಾದಿಸಿರುತ್ತದೆಯಷ್ಟೆ? ಪ್ರಪಂಚವು ನಾಮಾತ್ಮಕವಾಗಿಯೂ ರೂಪಾತ್ಮಕ ವಾಗಿಯೂ ತೋರುತ್ತಿರುವದಾದರೂ ಪರಮಾರ್ಥತತ್ತ್ವದಲ್ಲಿ ನಾಮವೂ ಇಲ್ಲ, ರೂಪವೂ ಇಲ್ಲ. ಇದನ್ನು ತಿಳಿಸಿಕೊಡುವದಕ್ಕಾಗಿ ನಾಮವನ್ನು ಪ್ರವಿಲಯಮಾಡಿದ ತತ್ತ್ವವನ್ನು ಓಂಕಾರವೆಂದೂ ರೂಪವನ್ನು ಪ್ರವಿಲಯಮಾಡಿದ ತತ್ತ್ವವನ್ನು ಬ್ರಹ್ಮ ವೆಂದೂ ಲಕ್ಷಣೆಯಿಂದ ಕರೆದು ಓಂಕಾರವೇ ಬ್ರಹ್ಮವು, ಬ್ರಹ್ಮವೆಂದರೆ ಈ ನಮ್ಮ ಪ್ರತ್ಯಗಾತ್ಮನೇ- ಎಂದು ಆ ಉಪನಿಷತ್ತಿನಲ್ಲಿ ತಿಳಿಸಿರುತ್ತದೆ. ಓಂಕಾರವು ಸರ್ವ ವಾಚಕವು, ಬ್ರಹ್ಮವು ಅದಕ್ಕೆ ವಾಚ್ಯವಾದ ಸರ್ವವೂ ಆಗಿದೆ. ಓಂಕಾರಕ್ಕೆ ಲಕ್ಷ್ಯವಾದ ಬ್ರಹ್ಮವು, ಅಥವಾ ಓಂಕಾರವು, ನಮ್ಮ ಆತ್ಮನೇ ಆಗಿದ್ದು ಪಾದತ್ರಯವಿಲಕ್ಷಣವೂ

ಮಾತ್ರಾತ್ರಯಾತೀತವೂ ಆಗಿರುತ್ತದೆ. ರೂಪದೃಷ್ಟಿಯಿಂದ ವೈಶ್ವಾನರನೆಂಬ ಪಾದವಾಗಿರುವ ಆತ್ಮನು ನಾಮದೃಷ್ಟಿಯಿಂದ ಅಕಾರವೆಂಬ ಮಾತ್ರೆಯಾಗಿರುವನು; ಹೀಗೆಯೇ ತೈಜಸನು ಉಕಾರಮಾತ್ರೆಯಾಗಿಯೂ ಪ್ರಾಜ್ಞನು ಮಕಾರಮಾತ್ರೆಯಾಗಿಯೂ ಇರುವನು. ಅಕಾರವು ಅಕ್ಷರಗಳ ಆದಿಯೂ ಸರ್ವವರ್ಣಗಳ ವ್ಯಾಪಕಸ್ವರವೂ ಆಗಿರುವಂತೆ, ವೈಶ್ವಾನರನು ಮಿಕ್ಕ ಪಾದಗಳಿಗೆ ಆದಿಯೂ ವಿರಾಡ್ರೂಪದಿಂದ ಸರ್ವವ್ಯಾಪಕನೂ ಆಗಿರುತ್ತಾನೆ. ಉಕಾರವು ಅಕಾರದಿಂದ ಉತ್ಕೃಷ್ಟವಾಗಿ (ಮೇಲಕ್ಕೆ ಎಳೆಯಲ್ಪಟ್ಟು) ಓಂಕಾರದ ಅಕಾರಮಕಾರಗಳಿಗೆ ನಡುವಿನ ಮಾತ್ರೆಯಾಗಿರುವಂತೆ, ತೈಜಸನು ವೈಶ್ವಾನರನಿಂದ ಉತ್ಕೃಷ್ಟವಾದ ವಾಸನಾಮಯವಾದ ಉಪಾಧಿಯುಳ್ಳವನಾಗಿ ಮಿಕ್ಕ ಎರಡು ಪಾದಗಳಿಗೆ ನಡುವಿನ ಪಾದವಾಗಿರುತ್ತಾನೆ; ಏಕೆಂದರೆ ಅವನಿಗೆ ಉಪಾಧಿಯಾಗಿರುವ ವಾಸನಾಮಯಪ್ರಪಂಚವು ಎಚ್ಚರದ ಪ್ರಪಂಚದಂತೆ ತೋರುತ್ತಲೂ ಇದೆ. ಸುಷುಪ್ತಿಯ ಪ್ರಪಂಚದಂತೆ ಅಸತ್ತಾಗಿಯೂ ಇದೆಯಾದ್ದರಿಂದ ವೈಶ್ವಾನರನ ಉಪಾಧಿಗೂ ಪ್ರಾಜ್ಞನ ಉಪಾಧಿಗೂ ಹೋಲಿಕೆಯುಳ್ಳದ್ದಾಗಿದೆ. ಮಕಾರವು ಮಿಕ್ಕೆರಡು ಮಾತ್ರೆಗಳನ್ನು ಅಳೆಯುವಂತೆಯೂ ಅವುಗಳ ಲಯಸ್ಥಾನದಂತೆಯೂ ಇರುವ ಹಾಗೆಯೇ ಪ್ರಾಜ್ಞನು ಮಿಕ್ಕೆರಡು ಪಾದಗಳನ್ನು ಅಳೆಯುವಂತೆಯೂ ಅವುಗಳ ಲಯಸ್ಥಾನದಂತೆಯೂ ಇರುತ್ತಾನೆ. ಈ ಕಾರಣದಿಂದ ಪಾದತ್ರಯವಿಲಕ್ಷಣನಾದ **ತುರೀಯಾತ್ಮನು ಬ್ರಹ್ಮಪದಕ್ಕೆ ಲಕ್ಷ್ಯಾರ್ಥವೂ ಮಾತ್ರಾತ್ರಯಕ್ಕೆ ಅತೀತವಾಗಿರುವದರಿಂದ ಓಂಕಾರಕ್ಕೆ ಲಕ್ಷ್ಯಾರ್ಥವೂ ಆಗಿರುತ್ತಾನೆ. ಈ ಬ್ರಹ್ಮದಲ್ಲಿ ಅಥವಾ ಓಂಕಾರದಲ್ಲಿ ಯಾವ ನಾಮವೂ ಇಲ್ಲ, ಯಾವ ರೂಪವೂ ಇಲ್ಲ-ಎಂದು ಆ ಉಪನಿಷತ್ತಿನಲ್ಲಿಯೂ ಅದರ ವ್ಯಾಖ್ಯಾನರೂಪವಾದ ಗೌಡಪಾದರ ಆಗಮಪ್ರಕರಣದಲ್ಲಿಯೂ ತಿಳಿಸಿರುತ್ತದೆ.** ಪರಮಾರ್ಥತತ್ತ್ವವನ್ನು ಯಾವದೊಂದು ಪದದಿಂದಲೂ ಹೇಳುವದಕ್ಕೆ ಬರುವದಿಲ್ಲ ಎಂದು ಹಿಂದೆ (೬೬) ಪ್ರತಿಪಾದಿಸಿರುವದನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬೇಕು.

(೧)ಅಭಿಧಾನಾಭಿಧೇಯಯೋರೇಕತ್ವೇಽಪಿ ಅಭಿಧಾನಪ್ರಾಧಾನ್ಯೇನ ನಿರ್ದೇಶಃ ಕೃತಃ ''ಓಮಿತ್ಯೇತದಕ್ಷರಮಿದಮ್ ಸರ್ವಮ್'' ಇತ್ಯಾದಿ। ಅಭಿಧಾನಪ್ರಾಧಾನ್ಯೇನ ನಿರ್ದಿಷ್ಟಸ್ಯ ಪುನರಭಿಧೇಯಪ್ರಾಧಾನ್ಯೇನ ನಿರ್ದೇಶಃ ಅಭಿಧಾನಾಭಿಧೇಯಯೋರೇಕತ್ವಪ್ರತಿಪತ್ತ್ಯರ್ಥಃ। ಇತರಥಾ ಹಿ ಅಭಿಧಾನತನ್ತ್ರಾ ಅಭಿಧೇಯಪ್ರತಿಪತ್ತಿಃ ಇತಿ ಅಭಿಧೇಯಸ್ಯ ಅಭಿಧಾನತ್ವಂ ಗೌಣಮ್ ಇತ್ಯಾಶಙ್ಕಾ ಸ್ಯಾತ್। ಏಕತ್ವಪ್ರತಿಪತ್ತೇಶ್ಚ ಪ್ರಯೋಜನಮ್ ಅಭಿಧಾನಾಭಿಧೇಯಯೋಃ ಏಕೇನೈವ ಪ್ರಯತ್ನೇನ ಯುಗಪತ್ ಪ್ರವಿಲಾಪಯನ್ ತದ್ವಿಲಕ್ಷಣಂ ಬ್ರಹ್ಮ ಪ್ರತಿಪದ್ಯೇತ ಇತಿ। ತಥಾ ಚ ವಕ್ಷ್ಯತಿ ''ಪಾದಾ ಮಾತ್ರಾ ಮಾತ್ರಾಶ್ಚ ಪಾದಾಃ'' ಇತಿ॥ -ಮಾಂ. ಭಾ. ೧-೭.

(೨) ರಜ್ಜ್ವಾದಿರಿವ ಸರ್ಪಾದಿವಿಕಲ್ಪಸ್ಯ ಆಸ್ಪದಂ, ಅದ್ವಯ ಆತ್ಮಾ ಪರಮಾರ್ಥತಃ ಸನ್ ಪ್ರಾಣಾದಿವಿಕಲ್ಪಸ್ಯ ಆಸ್ಪದಂ ಯಥಾ, ತಥಾ ಸರ್ವೋಽಪಿ ವಾಕ್ಪ್ರಪಞ್ಚಃ ಪ್ರಾಣಾದ್ಯಾತ್ಮವಿಕಲ್ಪವಿಷಯಃ ಓಙ್ಕಾರ ಏವ। ನ ಚ ಆತ್ಮಸ್ವರೂಪಮೇವ ತದಭಿಧಾಯಕತ್ವಾತ್। ಓಂಕಾರವಿಕಾರಶಬ್ದಾಭಿಧೇಯಶ್ಚ ಸರ್ವಃ ಪ್ರಾಣಾದಿಃ ಆತ್ಮವಿಕಲ್ಪಃ ಅಭಿಧಾನವ್ಯತಿರೇಕೇಣ ನಾಸ್ತಿ। "ವಾಚಾರಮ್ಭಣಂ ವಿಕಾರೋ ನಾಮಧೇಯಮ್", "ತದಸ್ಯೇದಂ ವಾಚಾ ತನ್ತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಮ್ । ಸರ್ವಂ ಹೀದಂ ನಾಮನೀ" (ಐ.ಆ.೨೧-೬) ಇತ್ಯಾದಿಶ್ರುತಿಭ್ಯಃ॥ -ಮಾಂ. ಅವ.-೪

(೩) ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಞ್ಚೋಪಶಮಃ ಶಿವೋಽದ್ವೈತ
ಏವಮೋಙ್ಕಾರ ಆತ್ಮೈವ ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ ಯ ಏವಂ ವೇದ॥
-ಮಾಂ. ೧೨.

ಅಮಾತ್ರಃ ಮಾತ್ರಾ ಯಸ್ಯ ನ ಸನ್ತಿ ಸೋಽಮಾತ್ರಃ ಓಂಕಾರಃ। ಚತುರ್ಥಸ್ತುರೀಯಃ ಆತ್ಮೈವ ಕೇವಲಃ ಅಭಿಧಾನಾಭಿಧೇಯರೂಪಯೋಃ ವಾಙ್ಮನಸಯೋಃ ಕ್ಷೀಣತ್ವಾತ್ ಽವ್ಯವಹಾರ್ಯಃ। ಪ್ರಪಞ್ಚೋಪಶಮಃ ಶಿವೋಽದ್ವೈತಃ ಸಂವೃತ್ತಃ॥ - ಮಾಂ. ಭಾ.-೬೮

ಏವಂ ಯಥೋಕ್ತವಿಜ್ಞಾನವತಾ ಪ್ರಯುಕ್ತಃ ಓಂಕಾರಸ್ತ್ರಿಮಾತ್ರಸ್ತ್ರಿಪಾದಃ ಆತ್ಮೈವ। ಸಂವಿಶತಿ ಆತ್ಮನಾ ಸ್ವೇನೈವ ಸ್ವಂ ಪಾರಮಾರ್ಥಿಕಮ್ ಆತ್ಮಾನಮ್ ಯ ಏವಂ ವೇದ। ಪರಮಾರ್ಥದರ್ಶನಾತ್ ಬ್ರಹ್ಮವಿತ್ ತೃತೀಯಂ ಬೀಜಭಾವಂ ದಗ್ಧ್ವಾ ಆತ್ಮಾನಂ ಪ್ರವಿಷ್ಟಃ ಇತಿ ನ ಪುನರ್ಜಾಯತೇ। ತುರೀಯಸ್ಯ ಅಬೀಜತ್ವಾತ್। ನ ಹಿ ರಜ್ಜುಸರ್ಪಯೋಃ ವಿವೇಕೇ ರಜ್ಜ್ವಾಂ ಪ್ರವಿಷ್ಟಃ ಸರ್ಪಃ ಬುದ್ಧಿಸಂಸ್ಕಾರಾತ್ ಪುನಃ ಪೂರ್ವವತ್ ತದ್ವಿವೇಕಿನಾಮ್ ಉತ್ಥಾಸ್ಯತಿ॥

- ಮಾಂ. ಭಾ. ೧೨-೬೮

(೪) ಅಜಮನಿದ್ರಮಸ್ವಪ್ನಮನಾಮಕಮರೂಪಕಮ್ ।
ಸಕೃದ್ವಿಭಾತಂ ಸರ್ವಜ್ಞಂ ನೋಪಚಾರಃ ಕಥಂಚನ । -ಮಾಂ.ಕಾ. ೩-೩೬.
ಸರ್ವಾಭಿಲಾಪವಿಗತಃ ಸರ್ವಚಿನ್ತಾಸಮುತ್ಥಿತಃ।
ಸುಪ್ರಶಾನ್ತಃ ಸಕೃಜ್ಜ್ಯೋತಿಃ ಸಮಾಧಿರಚಲೋಽಭಯಃ॥ - ಮಾಂ.ಕಾ. ೩-೩೭

## ೨೧. ಬಂಧಮೋಕ್ಷವ್ಯವಹಾರ

೧೫೪. ಆತ್ಮನು ಅವಸ್ಥಾತ್ರಯವನ್ನು ಅನುಭವಿಸುವಾಗಲೂ ತುರೀಯಾವಸ್ಥೆಯಲ್ಲಿಯೂ ಒಂದೇ ರೂಪದಿಂದ ಇರುತ್ತಾನಾದರೂ ಎಚ್ಚರದಲ್ಲಿ ಕುರುಡು, ಕುಂಟು- ಮುಂತಾದ ವಿಕಾರಗಳನ್ನು ಪಡೆಯುವಂತೆ ಅವಿದ್ಯೆಯಿಂದ ಕಾಣುತ್ತಾನೆ; ಕನಸಿನಲ್ಲಿ ಅಳುವದು, ದುಃಖಿಸುವದು-ಮುಂತಾದ ವಾಸನಾಮಯವಾದ ಅನರ್ಥದಿಂದ ಕೂಡಿಕೊಂಡಿರುವಂತೆ ಕಾಣುತ್ತಾನೆ; ಸುಷುಪ್ತಿಯಲ್ಲಿ ಯಾವದೊಂದನ್ನೂ

ಅರಿಯುವ ಶಕ್ತಿಯಿಲ್ಲದಂತೆ ನಾಶವೇ ಆದಂತೆ ಕಾಣುತ್ತಾನೆ. ಈ ಎಲ್ಲಾ ದೋಷಗಳಿಂದ ಮುಕ್ತನಾಗಿರುವದೇ ಆತ್ಮಸ್ವರೂಪವೆಂದು ತಿಳಿಯುವದೇ ಮೋಕ್ಷವು. ಹೀಗೆ ಏಕಾತ್ಮವಾದದಲ್ಲಿಯೂ ಬಂಧಮೋಕ್ಷಗಳು ಹೊಂದುತ್ತವೆ. ಮೋಕ್ಷವೆಂಬುದು ಬಂಧ ನಿವೃತ್ತಿಯೇ ಹೊರತು ಹೊಸದಾಗಿ ಏನಾದರೂ ಉಂಟಾಗುವದಲ್ಲ.

(೧) ಯೋಽತ್ರ 'ಅಭಿನಿಷ್ಪದ್ಯತೇ' ಇತ್ಯುಕ್ತಃ ಸ ಸರ್ವಬನ್ಧವಿನಿರ್ಮುಕ್ತಃ ಶುದ್ಧೇನೈವ ಆತ್ಮನಾ ಅವತಿಷ್ಠತೇ। ಪೂರ್ವತ್ರ ತು 'ಅನ್ಧೋ ಭವತ್ಯಪಿ, ರೋದಿತೀವ, ವಿನಾಶಮೇವಾಪೀತೋ ಭವತಿ' ಇತಿ ಚ ಅವಸ್ಥಾತ್ರಯಕಲುಷಿತೇನ ಆತ್ಮನಾ ಇತ್ಯಯಂ ವಿಶೇಷಃ॥

-ಸೂ. ಭಾ. ೪-೪-೨-೫೭೨.

(೨) ಫಲತ್ವಪ್ರಸಿದ್ಧಿರಪಿ ಮೋಕ್ಷಸ್ಯ ಬನ್ಧನಿವೃತ್ತಿಮಾತ್ರಾಪೇಕ್ಷಾ, ನಾಪೂರ್ವೋಪಜನಾಪೇಕ್ಷಾ। -ಸೂ. ಭಾ. ೪-೪-೨-೫೭೨.

೧೫೫. ಮೋಕ್ಷವು ಪಡೆಯುವದಲ್ಲ. ನಿತ್ಯಪ್ರಾಪ್ತವಾದದ್ದೇ ಎಂಬ ವೇದಾಂತಿಗಳ ಮತವು ಶ್ರುತಿಯುಕ್ತಿವಿರುದ್ಧವೆಂದು ಕೆಲವರಿಗೆ ತೋರುವ ಸಂಭವವಿದೆ. ಏಕೆಂದರೆ ''ಈ ಸಂಪ್ರಸಾದನು ಈ ಶರೀರವನ್ನು ಬಿಟ್ಟೆದ್ದು ತನ್ನ ರೂಪದಿಂದ ಸಿದ್ಧನಾಗುತ್ತಾನೆ. ಅವನೇ ಉತ್ತಮಪುರುಷನು'' (ಛಾಂ. ೮-೧೨-೩) ಎಂದು ಶ್ರುತಿಯು ಹೇಳುತ್ತದೆ. ಇದರಿಂದ ಸುಷುಪ್ತಾವಸ್ಥೆಗಿಂತ ಬೇರೆಯಾಗಿ ಮುಕ್ತಾವಸ್ಥೆಯಿದೆಯೆಂದೂ ಶರೀರವನ್ನು ಬಿಟ್ಟಮೇಲೆ ಮುಕ್ತಿಯು ಹೊಸದಾಗಿ ಉಂಟಾಗುವದೆಂದೂ ಶ್ರುತಿಗೆ ಅಭಿಮತವೆಂದು ಸ್ಪಷ್ಟವಾಗುತ್ತದೆ. ಅವಸ್ಥಾತ್ರಯ ವಿಲಕ್ಷಣವಾದದ್ದೇ ಮುಕ್ತಿಯೆಂದು ಎಲ್ಲರೂ ಒಪ್ಪಬೇಕಾದ್ದರಿಂದ ಜೀವನು ಅವಸ್ಥಾತ್ರಯವಂತನಾಗಿರುವಾಗ ಮುಕ್ತಿಯಿರುವದೆಂಬುದು ಯುಕ್ತಿವಿರುದ್ಧ ವಾಗಿಯೂ ಇರುತ್ತದೆ -ಎಂದು ಪ್ರಾಪ್ಯಮುಕ್ತಿವಾದಿಗಳು ವಾದಿಸಬಹುದು.

ಆದರೆ ಸಿದ್ಧಾಂತಕ್ಕೆ ಅನುಗುಣವಾಗಿಯೂ ಶ್ರುತಿಗೆ ಅರ್ಥವನ್ನು ಮಾಡಬಹುದು. ಹೇಗೆಂದರೆ ಅವಸ್ಥಾತ್ರಯವು ಅವಿದ್ಯೆಯಿಂದ ಆತ್ಮನಲ್ಲಿ ತೋರುವದೇ ಹೊರತು ನಿಜವಾಗಿಲ್ಲವೆಂದು ಆಗಲೆ ತೋರಿಸಿಕೊಟ್ಟದ್ದಾಗಿದೆ. ವಿದ್ಯಾರೂಪವಾದ ವಿವೇಕಜ್ಞಾನವು ಉಂಟಾಗುವ ಮೊದಲು ಶರೀರಾದ್ಯುಪಾಧಿ ಗಳೊಡನೆ ಅವಿವಿಕ್ತವಾಗಿರುವಂತೆ ಇರುವ ಆತ್ಮಸ್ವರೂಪವು ವಿವೇಕದಿಂದ ಶರೀರಾದಿಗಳನ್ನು ಬಿಟ್ಟೆದ್ದ ಜ್ಞಾನಿಗೆ ಶುದ್ಧಸ್ವರೂಪವು ಪ್ರಾಪ್ತವಾದಂತೆ ಆಗುತ್ತದೆ. ಹೀಗೆ ಅವಿದ್ಯೆಯಿಂದ ಅಪ್ರಾಪ್ತವಾಗಿದ್ದದ್ದು ವಿದ್ಯೆಯಿಂದ ಪ್ರಾಪ್ತವಾಗುತ್ತದೆಂದು ಶ್ರುತಿಯ ಅಭಿಪ್ರಾಯವಾಗಬಹುದಾಗಿದೆ. ಸ್ಫಟಿಕವು ಉಪಾಧಿಯಿಂದ ಕೆಂಪಾಗಿ ಅಥವಾ ಕಪ್ಪಾಗಿ ಕಂಡಮಾತ್ರದಿಂದ ಅದರ ಸ್ವಚ್ಛವಾದ ಬಿಳಿಯ ಬಣ್ಣವು ಹೋಯಿತೆಂದು

ಹೇಳಲಾಗುವದಿಲ್ಲವಷ್ಟೆ? 'ತನ್ನ ಸ್ವರೂಪವನ್ನು ಪಡೆಯುತ್ತಾನೆ' ಎಂದು ಶ್ರುತಿಯಲ್ಲಿರುವದರಿಂದ ಮೊದಲೂ ಆ ರೂಪವು ಇರುತ್ತದೆ ಎಂದು ಹೇಳಿದಂತೆ ಆಗುತ್ತದೆ. ಆದ್ದರಿಂದ ಆವಿದ್ಯಕವಾದ ಬಂಧಮೋಕ್ಷಗಳಲ್ಲದೆ ನಿಜವಾದ ಬಂಧಮೋಕ್ಷಗಳು ಇಲ್ಲವೆಂದು ತಿಳಿಯಬೇಕು. ಏಕೆಂದರೆ ಅದ್ವೈತವೇ ಪರಮಾರ್ಥವಾಗಿರುತ್ತದೆಯಾದ್ದರಿಂದ ಸಮಸ್ತಲೌಕಿಕವೈದಿಕವ್ಯವಹಾರಗಳೂ ಆವಿದ್ಯಕವೇ ಆಗಿರುತ್ತವೆ. **ಇಲ್ಲದ್ದು ಹೊಸದಾಗಿ ಹುಟ್ಟಲಾರದು; ಇದ್ದದ್ದು ನಾಶವಾಗಲಾರದು; ಆದ್ದರಿಂದ ಬಂಧಮೋಕ್ಷಗಳು ಪರಮಾರ್ಥವಲ್ಲ ಎಂಬುದು ಯುಕ್ತಿಯುಕ್ತವೂ ಆಗಿದೆ.**

(೧) ಯಥಾ ಶುದ್ಧಸ್ಯ ಸ್ಫಟಿಕಸ್ಯ ಸ್ವಾಚ್ಛ್ಯಂ ಶೌಕ್ಲ್ಯಂ ಚ ಸ್ವರೂಪಂ ಪ್ರಾಗ್ವಿವೇಕಗ್ರಹಣಾತ್ ರಕ್ತನೀಲಾದ್ಯುಪಾಧಿಭಿಃ ಅವಿವಿಕ್ತಮಿವ ಭವತಿ। ಪ್ರಮಾಣಜನಿತವಿವೇಕಗ್ರಹಣಾತ್ತು ಪರಾಚೀನಃ ಸ್ಫಟಿಕಃ ಸ್ವಾಚ್ಛ್ಯೇನ ಶೌಕ್ಲ್ಯೇನ ಚ ಸ್ವೇನ ರೂಪೇಣ ಅಭಿನಿಷ್ಪದ್ಯತೇ ಇತ್ಯುಚ್ಯತೇ ಪ್ರಾಗಪಿ ತಥೈವ ಸನ್। ತಥಾ ದೇಹಾದ್ಯುಪಾಧ್ಯವಿವಿಕ್ತಸ್ಯೈವ ಸತೋ ಜೀವಸ್ಯ ಶ್ರುತಿಕೃತಂ ವಿವೇಕವಿಜ್ಞಾನಂ ಶರೀರಾತ್ ಸಮುತ್ಥಾನಂ ವಿವೇಕವಿಜ್ಞಾನಫಲಂ ಸ್ವರೂಪೇಣಾಭಿನಿಷ್ಪತ್ತಿಃ ಕೇವಲಾತ್ಮಸ್ವರೂಪಾವಗತಿಃ॥ -ಸೂ. ಭಾ. ೧-೩-೧೯-೨೬೬.

(೨) ಏವಂ ಪ್ರಾಪ್ತೇ ಬ್ರೂಮಃ- ಕೇವಲೇನೈವ ಆತ್ಮನಾ ಆವಿರ್ಭವತಿ ನ ಧರ್ಮಾನ್ತರೇಣ ಇತಿ। ಕುತಃ? 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಇತಿ ಸ್ವಶಬ್ದಾತ್। ಅನ್ಯಥಾ ಹಿ ಸ್ವಶಬ್ದೇನ ವಿಶೇಷಣಮ್ ಅನವಕ್ಲೃಪ್ತಂ ಸ್ಯಾತ್। ನನು ಆತ್ಮೀಯಾಭಿಪ್ರಾಯಃ ಸ್ವಶಬ್ದೋ ಭವತಿ। ನ। ತಸ್ಯ ಅವಚನೀಯತ್ವಾತ್। ಯೇನೈವ ಹಿ ಕೇನಚಿತ್ ರೂಪೇಣ ಅಭಿನಿಷ್ಪದ್ಯತೇ ತಸ್ಯೈವ ಆತ್ಮೀಯತ್ವೋಪಪತ್ತೇಃ 'ಸ್ವೇನ' ಇತಿ ವಿಶೇಷಣಮ್ ಅನರ್ಥಕಂ ಸ್ಯಾತ್। ಆತ್ಮವಚನತಾಯಾಂ ತು ಅರ್ಥವತ್ ಕೇವಲೇನೈವ ಆತ್ಮರೂಪೇಣ ಅಭಿನಿಷ್ಪದ್ಯತೇ, ನ ಆಗನ್ತುಕೇನ ಅಪರರೂಪೇಣಾಪಿ ಇತಿ॥ -ಸೂ. ಭಾ. ೪-೪-೧-೫೯೧.

(೩) ಯದಪಿ 'ಅಭಿನಿಷ್ಪದ್ಯತೇ' ಇತಿ ಉತ್ಪತ್ತಿಪರ್ಯಾಯತ್ವಮ್, ಯದಪಿ ಪೂರ್ವಾವಸ್ಥಾಪೇಕ್ಷಮ್। ಯಥಾ ರೋಗನಿವೃತ್ತೌ ಆರೋಗೋಽಭಿನಿಷ್ಪದ್ಯತೇ ಇತಿ ತದ್ವತ್॥

-ಸೂ. ಭಾ. ೪-೪-೨-೫೯೨.

(೪) ಯದಾ ವಿತಥಂ ದ್ವೈತಮ್, ಆತ್ಮೈವೈಕಃ ಪರಮಾರ್ಥತಃ ಸನ್ ತದಾ ಇದಂ ನಿಷ್ಪನ್ನಂ ಭವತಿ-ಸರ್ವೋಽಯಂ ಲೌಕಿಕೋ ವೈದಿಕಶ್ಚ ವ್ಯವಹಾರೋಽವಿದ್ಯಾವಿಷಯ ಏವ ಇತಿ॥

-ಮಾಂ. ಕಾ. ಭಾ. ೨-೩೨-೧೧೧.

(೫) ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ।
ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ॥ - ಮಾಂ. ಕಾ. ೨-೩೨.

ಉತ್ಪತ್ತಿಪ್ರಲಯೋರಭಾವಾತ್ ಬನ್ಧಾದಯೋ ನ ಸನ್ತಿ ಇತ್ಯೇಷಾ ಪರಮಾರ್ಥತಾ॥

-ಮಾಂ. ಕಾ. ಭಾ. ೨-೩೨-೧೧೨.

೧೫೬. ಮೋಕ್ಷದಲ್ಲಿ ಹೊಸದಾಗಿ ಯಾವದೂ ಉಂಟಾಗದೆ ಇರುವದಾದರೆ, ಮೋಕ್ಷಕ್ಕಾಗಿ ಪ್ರಯತ್ನವೇಕೆ ?- ಎಂದು ಆಕ್ಷೇಪಿಸುವಹಾಗಿಲ್ಲ. ಏಕೆಂದರೆ ಅವಿದ್ಯೆಯಿಂದ ಬಂಧವಾಗಿರುವದರಿಂದ ಅವಿದ್ಯೆಯನ್ನು ಹೋಗಲಾಡಿಸುವದಕ್ಕೆ ವಿದ್ಯೆಯನ್ನು ಸಂಪಾದಿಸಿಕೊಳ್ಳುವದು ಅಗತ್ಯವಾಗಿರುತ್ತದೆ. 'ಆತ್ಮನು ಯಾವಾಗಲೂ ಒಂದೇ ರೂಪದವನಾಗಿದ್ದರೆ ವಿದ್ಯಾವಿದ್ಯೆಗಳಿಂದಲೇ ಬಂಧಮೋಕ್ಷಗಳಾಗುವವೆಂದಲ್ಲವೆ, ವೇದಾಂತಿಗಳು ಹೇಳುತ್ತಾರೆ? 'ಹಾಗಾದರೆ ವಿದ್ಯಾವಿದ್ಯೆಗಳಿಂದ ಆತ್ಮನಲ್ಲಿ ವಿಶೇಷವಾಗುವದೆಂದಾಯಿತಲ್ಲ! ಅವಿದ್ಯೆಯಿರುವದು, ಹೋಗುವದು, ವಿದ್ಯೆಯು ಬರುವದು -ಎಂಬ ವಿಶೇಷವನ್ನಾದರೂ ಒಪ್ಪಬೇಕಷ್ಟೆ?' ಎಂದು ಆಕ್ಷೇಪಿಸುವ ಹಾಗಿಲ್ಲ. ಅವಿದ್ಯೆಯಿಂದ ಹಗ್ಗವನ್ನು ಹಾವೆಂದು ತಿಳಿದಾಗಲೂ ಆಮೇಲೆ ಅದು ಹಗ್ಗವೇ ಎಂದು ತಿಳಿದಾಗಲೂ ಅಂಜಿಕೆಯೂ ಭಯವೂ ಉಂಟಾಗಿಹೋಗುವದು ನಿಜವಾದರೂ ವಸ್ತುವಿನಲ್ಲಿ ಯಾವ ವಿಶೇಷವೂ ಆಗಿಲ್ಲದಿರುವಂತೆ ವಿದ್ಯಾವಿದ್ಯೆಗಳಿಂದ ಆತ್ಮನಲ್ಲಿ ಯಾವ ವಿಶೇಷವೂ ಆಗಿರುವದಿಲ್ಲ. ಅವಿದ್ಯೆಯೆಂಬುದು ದೇಹೇಂದ್ರಿಯಗಳ ವ್ಯಾಪಾರದಿಂದ ಆಗುವ ಭ್ರಾಂತಿಯು. ಯಾವನಿಗೆ ಅವಿದ್ಯೆಯು ವಿಷಯವಾಗಿ ಕಾಣುತ್ತದೆಯೋ ಅವನು ಅವಿದ್ಯಾವಂತನಲ್ಲ ಎಂಬುದೇ ಯುಕ್ತ; ಶ್ರುತಿಯೂ ಆತ್ಮನಲ್ಲಿ ಅವಿದ್ಯಾಕರ್ತೃತ್ವವಿಲ್ಲವೆಂದೇ ಹೇಳುತ್ತಿದೆ.

(೧)ಮೋಕ್ಷಸ್ಯ ಇದಾನೀಮಿವ ನಿರ್ವಿಶೇಷತ್ವೇ ತದರ್ಥಾಧಿಕಯತ್ನಾನುಪಪತ್ತಿಃ, ಶಾಸ್ತ್ರವೈಯರ್ಥ್ಯಂ ಚ ಪ್ರಾಪ್ನೋತಿ ಇತಿ ಚೇತ್। ನ। ಅವಿದ್ಯಾಭ್ರಮಾಪೋಹಾರ್ಥತ್ವಾತ್। ನ ಹಿ ವಸ್ತುತಃ ಮುಕ್ತಾಮುಕ್ತತ್ವವಿಶೇಷೋಽಸ್ತಿ। ಕಿಂ ತು ತದ್ವಿಷಯಾ ಅವಿದ್ಯಾ ಅಪೋಹ್ಯತೇ ಶಾಸ್ತ್ರೋಪದೇಶಜನಿತವಿಜ್ಞಾನೇನ। ಪ್ರಾಕ್ತದುಪದೇಶಪ್ರಾಪ್ತೇಃ ತದರ್ಥಶ್ಚ ಪ್ರಯತ್ನಃ ಉಪಪದ್ಯತ ಏವ॥ -ಬೃ. ಭಾ. ೪-೪-೬-೨೭೪.

(೨) ನ ಚ ಅವಿದ್ಯಾವತ್ತ್ವೇ ತದಪಗಮೇ ಚ ವಸ್ತುನಃ ಕಶ್ಚಿದ್ ವಿಶೇಷೋಽಸ್ತಿ। ಯಥಾ ಕಶ್ಚಿತ್ ಸನ್ತಮಸೇ ಪತಿತಾಂ ಕಾಂಚಿದ್ರಜ್ಜುಮ್ ಅಹಿಂ ಮನ್ಯಮಾನಃ ಭೀತೋ ವೇಪಮಾನಃ ಪಲಾಯತೇ। ತಂ ಚ ಅಪರೋ ಬ್ರೂಯಾತ್ ಮಾ ಭೈಷೀಃ ನಾಯಮ್ ಅಹಿಃ, ರಜ್ಜುರೇವ, ಇತಿ। ನ ಚ ತದುಪಶ್ರುತ್ಯ ಅಹಿಕೃತಂ ಭಯಮ್ ಉತ್ಸೃಜೇತ್ ವೇಪಥುಂ ಪಲಾಯನಂ ಚ। ನ ತು ಅಹಿಬುದ್ಧಿಕಾಲೇ ತದಪಗಮಕಾಲೇ ಚ ವಸ್ತುನಃ ಕಶ್ಚಿದ್ವಿಶೇಷಃ ಸ್ಯಾತ್। ತಥೈವ ಇಹಾಪಿ ದ್ರಷ್ಟವ್ಯಮ್॥ -ಸೂ. ಭಾ. ೧-೪-೬-೩೫೧.

(೩) ಅವಿದ್ಯಾವತಃ ಅವಿದ್ಯಾನಿವೃತ್ತ್ಯನಿವೃತ್ತಿಕೃತೋ ಆತ್ಮನಃ ವಿಶೇಷಃ ಸ್ಯಾತ್ ಇತಿ ಚೇತ್।ನ। ಅವಿದ್ಯಾಕಲ್ಪನಾವಿಷಯತ್ವಾಭ್ಯುಪಗಮಾತ್ ರಜ್ಜೂಷರಶುಕ್ತಿಕಾಗಗನಾನಾಂ ಸರ್ಪೋದಕರಜತಮಲಿನತ್ವಾದಿವತ್ ಅದೋಷಃ ಇತಿ ಅವೋಚಾಮ। ತಿಮಿರಾತಿಮಿರದೃಷ್ಟಿವತ್ ಅವಿದ್ಯಾಕರ್ತೃತ್ವಾಕರ್ತೃತ್ವಕೃತಃ ಆತ್ಮನೋ ವಿಶೇಷಃ ಸ್ಯಾತ್ ಇತಿ ಚೇತ್, ನ। ''ಧ್ಯಾಯತೀವ ಲೇಲಾಯತೀವ'' ಇತಿ ಸ್ವತೋಽವಿದ್ಯಾಕರ್ತೃತ್ವಸ್ಯ ಪ್ರತಿಷಿದ್ಧತ್ವಾತ್। ಅನೇಕ

ವ್ಯಾಪಾರಸಂನಿಪಾತಜನಿತತ್ವಾಚ್ಚ ಅವಿದ್ಯಾಭ್ರಮಸ್ಯ। ವಿಷಯತ್ವೋಪಪತ್ತೇಶ್ಚ। ಯಸ್ಯ ಚ ಅವಿದ್ಯಾಭ್ರಮಃ ಘಟಾದಿವತ್ ವಿವಿಕ್ತೋ ಗೃಹ್ಯತೇ ಸ ನಾವಿದ್ಯಾಭ್ರಮವಾನ್। 'ಅಹಂ ನ ಜಾನೇ ಮುಗ್ಧೋಽಸ್ಮಿ' ಇತಿ ಪ್ರತ್ಯಯದರ್ಶನಾತ್ ಅವಿದ್ಯಾಭ್ರಮವತ್ತ್ವಮೇವ ಇತಿ ಚೇತ್। ನ। ತಸ್ಯಾಪಿ ವಿವೇಕಗ್ರಹಣಾತ್। ನ ಹಿ ಯೋ ಯಸ್ಯ ವಿವೇಕೇನ ಗ್ರಹೀತಾ ಸ ತಸ್ಮಿನ್ ಭ್ರಾನ್ತಃ ಇತ್ಯುಚ್ಯತೇ। ತಸ್ಯ ಚ ವಿವೇಕಗ್ರಹಣಮ್, ತಸ್ಮಿನ್ನೇವ ಚ ಭ್ರಮಃ ಇತಿ ವಿಪ್ರತಿಷಿದ್ಧಮ್॥ -ಬೃ.೪-೪-೬-೨೭೪.

೧೫೭. ಬಂಧಮುಕ್ತಿಗಳು ನಿಜವಾಗಿಯೇ ಆಗುತ್ತವೆ ಎಂದು ಕಲ್ಪಿಸಿದರೆ ಶ್ರುತಿಯಲ್ಲಿ ಹೇಳಿರುವ ಮುಕ್ತಿಯನ್ನು ಮುಖ್ಯಾರ್ಥದಲ್ಲಿಟ್ಟುಕೊಂಡಂತೆ ಆಗುತ್ತದೆ. ಜನರು ನಾವು ಈಗಲೇ ಮುಕ್ತರೆಂದುಕೊಂಡು ಅಲಸರಾಗುವ ಸಂಭವವೂ ತಪ್ಪುತ್ತದೆ ಆದ್ದರಿಂದ ಬಂಧಮೋಕ್ಷಗಳು ಈ ಆವಿದ್ಯಕವೆಂಬ ಪಕ್ಷಕ್ಕಿಂತ ಅವು ಸತ್ಯವೆಂಬುವರ ಪಕ್ಷವೇ ಉತ್ತಮ ಎಂದು ಕೆಲವರು ವಾದಿಸುತ್ತಾರೆ.

ಈ ವಾದವು ಸರಿಯಲ್ಲ. ಏಕೆಂದರೆ ಬಂಧಮೋಕ್ಷಗಳು ನಿಜವಾಗಿರುತ್ತವೆ ಎನ್ನುವವರು ಈ ಅವಸ್ಥೆಗಳೆರಡೂ ಪರಸ್ಪರವಿರುದ್ಧವಾಗಿರುವದರಿಂದ ಒಟ್ಟಿಗೆ ಇರುತ್ತವೆಯೆನ್ನುವದಕ್ಕಿಲ್ಲ; ಒಂದಾಗುತ್ತಲೊಂದಾಗುವದಾದರೆ ನಿಮಿತ್ತವಿಲ್ಲದೆ ಮೋಕ್ಷವಾಗಲಾರದು. ನಿಮಿತ್ತವಶದಿಂದ ಆದದ್ದು ಸ್ವಾಭಾವಿಕವಲ್ಲವಾದ್ದರಿಂದ ಅಸತ್ಯವೆಂದೇ ಆಗುತ್ತದೆ. ಇದಲ್ಲದೆ ಮೋಕ್ಷಸತ್ಯತ್ವವಾದಿಗಳು ಅನಾದಿಯಾದ ಬಂಧಕ್ಕೆ ಕೊನೆಯುಂಟೆಂದೂ ಆದಿಯುಳ್ಳ ಮೋಕ್ಷವು ಅನಂತವಾಗಿರುವದೆಂದೂ ಒಪ್ಪಬೇಕಾಗುವದು. ಇದು ದೃಷ್ಟವಿರುದ್ಧ. ಅನಾದಿಗೂ ಬೀಜಾಂಕುರಸಂತತಿಯಂತೆ ಅಂತವುಂಟೆಂಬ ಯುಕ್ತಿಯು ಸರಿಯಲ್ಲ; ಏಕೆಂದರೆ ಬೀಜವೂ ಅಂಕುರವೂ ಸಾದಿ, ಸಂತತಿ ಎಂಬ ಬೇರೊಂದು ಪದಾರ್ಥವೂ ಇಲ್ಲ. ಬಂಧವೆಂಬ ಒಂದು ಅವಸ್ಥೆಯಿಂದ ಮುಕ್ತಿ ಎಂಬ ಮತ್ತೊಂದು ಅವಸ್ಥೆಗೆ ಬಂದವನು ನಿತ್ಯನೆಂದು ಹೇಳುವದಕ್ಕೂ ಆಗುವದಿಲ್ಲ. ಮೋಕ್ಷವು ಸಾಧನನಿಮಿತ್ತವಾಗಿ ಆಗುವದೆಂದಾದರೆ ಅನಿತ್ಯವೆಂದೂ ಆತ್ಮನ ಸ್ವಭಾವವಲ್ಲವೆಂದೂ ಹೇಳಿದಂತಾಗುವದು. ಇದೂ ಅನಿಷ್ಟವು. ಆದ್ದರಿಂದ ಬಂಧಮೋಕ್ಷಗಳು ಸತ್ಯವೆಂಬುದು ಯುಕ್ತಿಗೂ ವೇದಾಂತಸಿದ್ಧಾಂತಕ್ಕೂ ವಿರುದ್ಧವಾಗಿರುತ್ತದೆ. ಆದಿಯುಳ್ಳದ್ದು ಪ್ರಧ್ವಂಸಾಭಾವದಂತೆ ನಿತ್ಯವಾಗಿರಬಹುದು ಎಂದರೆ ಮೋಕ್ಷವೂ ಅಭಾವವೆಂದಾಗುತ್ತದೆ. ಪ್ರಧ್ವಂಸಾದಿವಿಶೇಷಗಳು ಅಭಾವದಲ್ಲಿಲ್ಲ ಎಂದು ಹಿಂದೆ (೯೯) ತೋರಿಸಿಕೊಟ್ಟಿರುವದರಿಂದಲೂ ಇದು ಅಯುಕ್ತ.

(೧) ಯದಿ ತಾವತ್ ಆತ್ಮನೋ ಬನ್ಧಮುಕ್ತಾವಸ್ಥೇ ಯುಗಪತ್ ಸ್ಯಾತಾಮ್, ಕ್ರಮೇಣ ವಾ? ಯುಗಪತ್ ತಾವತ್ ವಿರೋಧಾತ್ ನ ಸಂಭವತಃ । ಸ್ಥಿತಿಗತೀ ಇವ ಏಕಸ್ಮಿನ್। ಕ್ರಮಭಾವಿತ್ವೇ ಚ ನಿರ್ನಿಮಿತ್ತತ್ವಂ ಸನಿಮಿತ್ತತ್ವಂ ವಾ । ನಿರ್ನಿಮಿತ್ತತ್ವೇಽನಿರ್ಮೋಕ್ಷಪ್ರಸಙ್ಗಃ। ಸನಿಮಿತ್ತತ್ವೇ ಚ

ಸ್ವತೋಽಭಾವಾತ್ ಅಪರಮಾರ್ಥತ್ವಪ್ರಸಙ್ಗಃ। ತಥಾ ಚ ಸತಿ ಅಭ್ಯುಪಗಮಹಾನಿಃ। ಕಿಂ ಚ ಬನ್ಧಮುಕ್ತಾವಸ್ಥಯೋಃ ಪೌರ್ವಾಪರ್ಯನಿರೂಪಣಾಯಾಂ ಬನ್ಧಾವಸ್ಥಾ ಪೂರ್ವಂ ಪ್ರಕಲ್ಪ್ಯ, ಅನಾದಿಮತೀ ಅನ್ತವತೀ ಚ। ತಚ್ಚ ಪ್ರಮಾಣವಿರುದ್ಧಮ್। ತಥಾ ಮೋಕ್ಷಾವಸ್ಥಾ ಆದಿಮತೀ ಅನನ್ತಾ ಚ ಪ್ರಮಾಣವಿರುದ್ಧೈವ ಅಭ್ಯುಪಗಮ್ಯತೇ। ನ ಚ ಅವಸ್ಥಾವತೋಽವಸ್ಥಾನ್ತರಂ ಗಚ್ಛತೋ ನಿತ್ಯತ್ವಮ್ ಉಪಪಾದಯಿತುಂ ಶಕ್ಯಮ್॥ - ಗೀ. ಭಾ. ೧೩-೨-೭೬೩.

(೨) ಅಯಂ ಚ ಅಪರಃ ಆತ್ಮನಃ ಸಂಸಾರಮೋಕ್ಷಯೋಃ ಪರಮಾರ್ಥಸದ್ಭಾವವಾದಿನಾಂ ದೋಷಃ ಉಚ್ಯತೇ। ಅನಾದೇಃ ಅತೀತಕೋಟಿರಹಿತಸ್ಯ ಸಂಸಾರಸ್ಯ ಅನ್ತವತ್ತ್ವಂ ಸಮಾಪ್ತಿರ್ನ ಸೇತ್ಸ್ಯತಿ ಯುಕ್ತಿತಃ ಸಿದ್ಧಿಂ ನೋಪಯಾಸ್ಯತಿ। ನ ಹಿ ಅನಾದಿಃ ಸನ್ ಅನ್ತವಾನ್ ಕಶ್ಚಿತ್ ಪದಾರ್ಥೋ ದೃಷ್ಟೋ ಲೋಕೇ। ಬೀಜಾಙ್ಕುರಸಂಬನ್ಧನೈರನ್ತರ್ಯವಿಚ್ಛೇದೋ ದೃಷ್ಟಃ ಇತಿ ಚೇತ್। ನ। ಏಕವಸ್ತ್ವಭಾವೇನ ಅಪೋದಿತತ್ವಾತ್। ತಥಾ ಅನನ್ತತಾಪಿ ವಿಜ್ಞಾನಪ್ರಾಪ್ತಿ ಕಾಲಪ್ರಭವಸ್ಯ ಮೋಕ್ಷಸ್ಯ ಆದಿಮತೋ ನ ಭವಿಷ್ಯತಿ। ಘಟಾದಿಷು ಅದರ್ಶನಾತ್॥

- ಮಾಂ. ಕಾ. ಭಾ. ೪-೩೦-೨೭೦-೨೭೧.

(೩) ಬೀಜಾಙ್ಕುರಾಖ್ಯೋ ದೃಷ್ಟಾನ್ತೋ ಯಃ ನ ಸಾಧ್ಯೇನ ಸಮಃ ತುಲ್ಯೋ ಮಮ ಇತ್ಯಭಿಪ್ರಾಯಃ। ನನು ಪ್ರತ್ಯಕ್ಷಃ ಕಾರ್ಯಕಾರಣಭಾವಃ ಬೀಜಾಙ್ಕುರಯೋರನಾದಿಃ। ನ। ಪೂರ್ವಸ್ಯ ಪೂರ್ವಸ್ಯ ಅಪರವತ್ ಆದಿಮತ್ತ್ವಾಭ್ಯುಪಗಮಾತ್। ಯಥಾ ಇದಾನೀಮ್ ಉತ್ಪನ್ನಃ ಅಪರಃ ಅಙ್ಕುರಃ ಬೀಜಾತ್ ಆದಿಮಾನ್, ಬೀಜಂ ಚ ಅಪರಮ್ ಅನ್ಯಸ್ಮಾತ್ ಅಙ್ಕುರಾತ್ ಇತಿ ಕ್ರಮೇಣ ಉತ್ಪನ್ನತ್ವಾತ್ ಆದಿಮತ್। ಏವಂ ಪೂರ್ವಃ ಪೂರ್ವಃ ಅಙ್ಕುರಃ ಬೀಜಂ ಚ ಪೂರ್ವಂ ಪೂರ್ವಮ್ ಆದಿಮದೇವ ಇತಿ ಪ್ರತ್ಯೇಕಂ ಸರ್ವಸ್ಯ ಬೀಜಾಙ್ಕುರಜಾತಸ್ಯ ಆದಿಮತ್ತ್ವಾತ್ ಕಸ್ಯಚಿದಪಿ ಅನಾದಿತ್ವಾನುಪಪತ್ತಿಃ। ಏವಂ ಹೇತುಫಲಯೋಃ। ಅಥ ಬೀಜಾಙ್ಕುರಸನ್ತತೇಃ ಅನಾದಿಮತ್ತ್ವಮ್ ಇತಿ ಚೇತ್। ನ। ಏಕತ್ವಾನುಪಪತ್ತೇಃ। ನ ಹಿ ಬೀಜಾಙ್ಕುರವ್ಯತಿರೇಕೇಣ ಬೀಜಾಙ್ಕುರಸನ್ತತಿರ್ನಾಮ ಏಕಾ ಅಭ್ಯುಪಗಮ್ಯತೇ, ಹೇತುಫಲಸನ್ತತಿರ್ವಾ ತದನಾದಿತ್ವವಾದಿಭಿಃ॥

- ಮಾಂ. ಕಾ. ಭಾ. ೪-೨೦-೨೪೭-೨೪೮.

(೪) ಪ್ರಧ್ವಂಸಾಭಾವವತ್ ನಿತ್ಯೋಽಪಿ ಮೋಕ್ಷೋ ಆರಭ್ಯ ಏವ ಇತಿ ಚೇತ್। ನ ಮೋಕ್ಷಸ್ಯ ಭಾವರೂಪತ್ವಾತ್। ಪ್ರಧ್ವಂಸಾಭಾವೋಽಪಿ ಆರಭ್ಯತೇ ಇತಿ ನ ಸಂಭವತಿ। ಅಭಾವಸ್ಯ ವಿಶೇಷಾಭಾವಾತ್ ವಿಕಲ್ಪಮಾತ್ರಮೇತತ್॥ - ತೈ. ಭಾ. ಅವ.-೯

೧೫೮. ಆತ್ಮನಿಗೆ ಬ್ರಹ್ಮತ್ವವು ಸ್ವರೂಪವೇ ಆದರೂ ಅದು ಯಾವದಾದರೊಂದು ನಿಮಿತ್ತದಿಂದ ಬಂಧಾವಸ್ಥೆಯಲ್ಲಿ ಮರೆಯಾಗಿದ್ದು ಅಥವಾ ಮಸುಕಾಗಿದ್ದು ಸಾಧನಗಳಿಂದ ಆ ನಿಮಿತ್ತವು ಹೋಗಲಾಗಿ ಮುಕ್ತಾವಸ್ಥೆಯಲ್ಲಿ ತೋರಿಕೊಳ್ಳುವದು. ಅಥವಾ ಆತ್ಮನಲ್ಲಿ ಒಂದಾನೊಂದು ಕಾರ್ಯದಿಂದ ಬಂಧವು ಮುಕ್ತಿಯಾಗಿ ವಿಕಾರವಾಗುತ್ತದೆ. ಅಥವಾ ಸಂಸ್ಕಾರದಿಂದ ಕಾಣಿಸಿಕೊಳ್ಳುತ್ತದೆ- ಎಂಬ ಬಗೆಯ ವಾದಗಳೆಲ್ಲವೂ ನಿಸ್ಸಾರವೆಂಬುದು ಈಗ ಸ್ಪಷ್ಟವಾಗುತ್ತದೆ. ಏಕೆಂದರೆ ಚಿನ್ನವೇ

ಮುಂತಾದವುಗಳಿಗೆ ಮತ್ತೊಂದು ವಸ್ತುವಿನ ಸಂಪರ್ಕವಾಗಿದ್ದಾಗ ಪ್ರಕಾಶವು ಮರೆಯಾಗಿದ್ದು ಬಿಳಿಗಾರವೇ ಮುಂತಾದವುಗಳನ್ನು ಹಾಕಿ ತೊಳೆದಮೇಲೆ ತಮ್ಮ ಮೊದಲಿನ ಥಾಳಥಳ್ಯವು ಬರಬಹುದು. ನಕ್ಷತ್ರಾದಿಗಳು ಸೂರ್ಯಾದಿಪ್ರಕಾಶಗಳಿಂದ ಮಂಕಾಗಿದ್ದು ಆ ಹೆಚ್ಚಿನ ಪ್ರಕಾಶಗಳು ಇಲ್ಲವಾಗಲು ಮೊದಲಿನಂತೆ ಹೊಳೆಯ ಬಹುದು; ಆದರೆ ಹಾಗೆ ಆತ್ಮನ ಚೈತನ್ಯಸ್ವರೂಪವು ಏತರ ಸಂಪರ್ಕ ದಿಂದಲೂ ಮರೆಯಾಗತಕ್ಕದ್ದಲ್ಲ. ಅಥವಾ ಮತ್ತೊಂದರಿಂದ ಮಂಕಾಗತಕ್ಕದ್ದೂ ಅಲ್ಲ. ಏಕೆಂದರೆ ಆತ್ಮನು ಅಸಂಗನು, ಅದ್ವಿತೀಯನು. ಮೋಕ್ಷವು ಉತ್ಪಾದ್ಯವೋ ವಿಕಾರ್ಯವೋ ಆದರೆ ಸಾಧನವು ಬೇಕಾಗುತ್ತದೆ. ಆದರೆ ನಿಮಿತ್ತಾಂತರದಿಂದ ಉಂಟಾದದ್ದು ಕೃತಕವೂ ಅನಿತ್ಯವೂ ಆಗಿರುತ್ತದೆ ಎಂದು ನಾವು ತಿಳಿಸಿಕೊಟ್ಟಿರುತ್ತೇವೆ. ಆದ್ದರಿಂದ ಮೋಕ್ಷವು ಉತ್ಪಾದ್ಯವೆಂದಾಗಲಿ ವಿಕಾರ್ಯವೆಂದಾಗಲಿ ಹೇಳುವದಕ್ಕಿಲ್ಲ. ನಿತ್ಯಶುದ್ಧವಾಗಿರುವ ಬ್ರಹ್ಮವೇ ಮುಕ್ತ್ಯವಸ್ಥೆಯಾಗಿರುವದರಿಂದ ಅದರಲ್ಲಿ ಹೊಸದಾಗಿ ಗುಣವನ್ನುಂಟು ಮಾಡಿ ಅಥವಾ ದೋಷವನ್ನು ತೆಗೆದುಹಾಕಿ ಸಂಸ್ಕಾರವನ್ನು ಮಾಡಬೇಕಾದ ಅವಶ್ಯಕತೆಯೂ ಇಲ್ಲ. ಹೀಗೆ ಮುಕ್ತಿಯೆಂಬುದು ಪರಮಾರ್ಥವಾಗಿ ಆಗತಕ್ಕ ಫಲವೆಂಬುದು ಯಾವ ಯುಕ್ತಿಗೂ ಹೊಂದುವದಿಲ್ಲ.

(೧) ಸುವರ್ಣಾದೀನಾಂ ತು ದ್ರವ್ಯಾನ್ತರಸಂಪರ್ಕಾತ್ ಅಭಿಭೂತಸ್ವರೂಪಾಣಾಮ್ ಅನಭಿವ್ಯಕ್ತಾಸಾಧಾರಣವಿಶೇಷಾಣಾಂ ಕ್ಷಾರಪ್ರಕ್ಷೇಪಾದಿಭಿಃ ಶೋಧ್ಯಮಾನಾನಾಂ ಸ್ವರೂಪೇಣ ಅಭಿನಿಷ್ಪತ್ತಿಃ ಸ್ಯಾತ್। ತಥಾ ನಕ್ಷತ್ರಾದೀನಾಮ್ ಅಹನಿ ಅಭಿಭೂತಪ್ರಕಾಶಾನಾಮ್ ಅಭಿಭಾವಕವಿಯೋಗೇ ರಾತ್ರೌ ಸ್ವರೂಪೇಣ ಅಭಿನಿಷ್ಪತ್ತಿಃ ಸ್ಯಾತ್। ನ ತು ತಥಾ ಆತ್ಮಚೈತನ್ಯಜ್ಯೋತಿಷಃ ನಿತ್ಯಸ್ಯ ಕೇನಚಿತ್ ಅಭಿಭವಃ ಸಂಭವತಿ । ಅಸಂಸರ್ಗಿತ್ವಾತ್ ವ್ಯೋಮ್ನ ಇವ॥

-ಸೂ. ಭಾ. ೧-೩-೧೯-೨೬೫.

(೨) ಭಾವಾನ್ತರಾಪತ್ತೌ ಹಿ ಮೋಕ್ಷಸ್ಯ ಸರ್ವೋಪನಿಷದ್ವಿವಕ್ಷಿತೋಽರ್ಥಃ ಆತ್ಮೈಕತ್ವಾಖ್ಯಃ ಸ ಬಾಧಿತೋ ಭವೇತ್। ಕರ್ಮಹೇತುಕಶ್ಚ ಮೋಕ್ಷಃ ಪ್ರಾಪ್ನೋತಿ ನ ಜ್ಞಾನನಿಮಿತ್ತಃ ಇತಿ। ಸ ಚಾನಿಷ್ಟಃ। ಅನಿತ್ಯತ್ವಂ ಮೋಕ್ಷಸ್ಯ ಪ್ರಾಪ್ನೋತಿ। ನ ಹಿ ಕ್ರಿಯಾನಿರ್ವೃತ್ತೋಽರ್ಥೋ ನಿತ್ಯೋ ದೃಷ್ಟಃ। ನಿತ್ಯಶ್ಚ ಮೋಕ್ಷೋಽಭ್ಯುಪಗಮ್ಯತೇ "ಏಷ ನಿತ್ಯೋ ಮಹಿಮಾ" ಇತಿ ಮನ್ತ್ರವರ್ಣಾತ್। ನ ಚ ಸ್ವಾಭಾವಿಕಾತ್ ಸ್ವಭಾವಾತ್ ಅನ್ಯತ್ ನಿತ್ಯಂ ಕಲ್ಪಯಿತುಂ ಶಕ್ಯಮ್। ಸ್ವಾಭಾವಿಕಶ್ಚೇತ್ ಅಗ್ನ್ಯೌಷ್ಣವತ್ ಆತ್ಮನಃ ಸ್ವಭಾವಃ, ಸ ನ ಶಕ್ಯತೇ ಪುರುಷವ್ಯಾಪಾರಾನುಭಾವೀ ಇತಿ ವಕ್ತುಮ್॥

-ಬೃ. ಭಾ. ೪-೪-೬-೨೭೧.

(೩) ಯಸ್ಯ ತು ಉತ್ಪಾದ್ಯೋ ಮೋಕ್ಷಃ ತಸ್ಯ ಮಾನಸಂ ವಾಚಿಕಂ ಕಾಯಿಕಂ ವಾ ಕಾರ್ಯಮ್ ಅಪೇಕ್ಷತೇ ಇತಿ ಯುಕ್ತಮ್। ತಥಾ ವಿಕಾರ್ಯತ್ವೇ ಚ। ತಯೋಃ ಪಕ್ಷಯೋಃ ಮೋಕ್ಷಸ್ಯ ಧ್ರುವಮ್ ಅನಿತ್ಯತ್ವಮ್, ನ ಹಿ ದಧ್ಯಾದಿ ವಿಕಾರ್ಯಮ್, ಉತ್ಪಾದ್ಯಂ ವಾ ಘಟಾದಿ ನಿತ್ಯಂ ದೃಷ್ಟಂ ಲೋಕೇ॥ -ಸೂ. ಭಾ. ೧-೧-೪-೪೮.

(೪) ನಾಪಿ ಸಂಸ್ಕಾರ್ಯೋ ಮೋಕ್ಷಃ ಯೇನ ವ್ಯಾಪಾರಮ್ ಅಪೇಕ್ಷೇತ। ಸಂಸ್ಕಾರೋ ಹಿ ನಾಮ ಸಂಸ್ಕಾರ್ಯಸ್ಯ ಗುಣಾಧಾನೇನ ವಾ ಸ್ಯಾತ್ ದೋಷಾಪನಯನೇನ ವಾ। ನ ತಾವತ್ ಗುಣಾಧಾನೇನ ಸಂಭವತಿ। ಅನಾಧೇಯಾತಿಶಯಬ್ರಹ್ಮಸ್ವರೂಪತ್ವಾತ್ ಮೋಕ್ಷಸ್ಯ। ನಾಪಿ ದೋಷಾಪನಯನೇನ। ನಿತ್ಯಶುದ್ಧಬ್ರಹ್ಮಸ್ವರೂಪತ್ವಾತ್ ಮೋಕ್ಷಸ್ಯ॥ -ಸೂ. ಭಾ. ೧-೧-೪-೪೯.

೧೫೯. ಆತ್ಮನು ನಿತ್ಯಮುಕ್ತನೇ ಆಗಿದ್ದರೆ ಮುಕ್ತಿಗಾಗಿ ಶಾಸ್ತ್ರಶ್ರವಣವನ್ನು ಮಾಡುವದು ವ್ಯರ್ಥ, ಶಾಸ್ತ್ರವು ಮೋಕ್ಷೋಪಾಯಗಳನ್ನು ತಿಳಿಸುವದಕ್ಕೆ ಹೊರಡುವದೂ ವ್ಯರ್ಥ. ಆದ್ದರಿಂದ ಮೋಕ್ಷವೆಂಬುದು ನಿಜವಾಗಿಯೇ ಹೊಸದಾಗಿ ಪಡೆಯತಕ್ಕ ಫಲವಿಶೇಷವೆಂದೇ ತಿಳಿಯಬೇಕು-ಎಂದು ಕೆಲವರು ವಾದಿಸುತ್ತಾರೆ.

ಈ ವಾದಕ್ಕೆ ಪ್ರತ್ಯುತ್ತರವನ್ನು ಆಗಲೆ (೧೫೬) ಹೇಳಿದ್ದಾಗಿದೆ. ಅಜ್ಞರಿಗೆ ನಾವು ಯಾವಾಗಲೂ ನಿತ್ಯಶುದ್ಧಬುದ್ಧಮುಕ್ತಸ್ವರೂಪರು- ಎಂಬ ತಿಳಿವಳಿಕೆಯಿಲ್ಲದಿರುವದರಿಂದ ಅವರು ನಿತ್ಯಮುಕ್ತರಾದರೂ ಬದ್ಧರೇ ಆಗಿರುತ್ತಾರೆ. ಆ ಅವಿದ್ಯೆಯನ್ನು ಕಳೆಯುವದಕ್ಕೆ ಶಾಸ್ತ್ರೋಪದೇಶವು ಅವಶ್ಯವಾಗಿರುತ್ತದೆ. ಆದರೆ ಯಾರಿಗೆ ಈ ತಿಳಿವಳಿಕೆಯಿರುತ್ತದೆಯೋ ಅವರಿಗೆ ಉಪದೇಶವು ಬೇಕಾಗಿರುವದೇ ಇಲ್ಲ. ಇದನ್ನು ಆಗಲೆ (೩೯) ಹೇಳಿರುತ್ತೇವೆ. ಮುಕ್ತರಲ್ಲಿ ಸಂಸಾರಸಂಸಾರಿತ್ವಾದಿಗಳಿಲ್ಲವೆಂದು ದ್ವೈತಿಗಳೂ ಒಪ್ಪಿರುತ್ತಾರೆ; ಅವರ ಮತದಲ್ಲಿ ಶಾಸ್ತ್ರಾನರ್ಥಕ್ಯವೇನೂ ಬರುವದಿಲ್ಲ. ಅವರ ಮತದಲ್ಲಿಯೂ ಬಂಧಾವಸ್ಥೆಯಲ್ಲಿಯೇ ಶಾಸ್ತ್ರವು ಅರ್ಥವತ್ತಾಗಿರುತ್ತದೆ. ಅದರಂತೆ ವೇದಾಂತಮತದಲ್ಲಿಯೂ ಆತ್ಮೈಕತ್ವವನ್ನು ತಿಳಿದುಕೊಂಡವರಿಗೆ ಶಾಸ್ತ್ರವು ಅನರ್ಥಕವೆಂದೇ ಆಗಲಿ; ಅವಿದ್ಯಾವಿಷಯದಲ್ಲಿ ಸಾರ್ಥಕವೆಂದಾದರೆ ಸಾಕು.

(೧) ಯೋಽಯಂ ಲೌಕಿಕೋ ವೈದಿಕಶ್ಚ ವ್ಯವಹಾರಃ ಸ ಉತ್ಪನ್ನವಿವೇಕಜ್ಞಾನಸ್ಯ ಸ್ಥಿತಪ್ರಜ್ಞಸ್ಯ ಅವಿದ್ಯಾಕಾರ್ಯತ್ವಾತ್ ಅವಿದ್ಯಾನಿವೃತ್ತೌ ನಿವರ್ತತೇ। ಅವಿದ್ಯಾಯಾಶ್ಚ ವಿದ್ಯಾವಿರೋಧಾತ್ ನಿವೃತ್ತಿಃ॥ -ಗೀ. ಭಾ. ೨-೬೯-೧೩೨.

(೨) ಮುಕ್ತಾತ್ಮನಾಂ ಹಿ ಸಂಸಾರಸಂಸಾರಿತ್ವವ್ಯವಹಾರಾಭಾವಃ ಸರ್ವೈರೇವ ಆತ್ಮವಾದಿಭಿಃ ಇಷ್ಯತೇ। ನ ಚ ತೇಷಾಂ ಶಾಸ್ತ್ರಾನರ್ಥಕ್ಯಾದಿದೋಷಪ್ರಾಪ್ತಿಃ ಅಭ್ಯುಪಗತಾ। ತಥಾ ನಃ ಕ್ಷೇತ್ರಜ್ಞಾನಾಮ್ ಈಶ್ವರೈಕತ್ವೇ ಸತಿ ಶಾಸ್ತ್ರಾನರ್ಥಕ್ಯಂ ಭವತು, ಅವಿದ್ಯಾವಿಷಯೇ ಚ ಅರ್ಥವತ್ತ್ವಮ್। ಯಥಾ ದ್ವೈತಿನಾಂ ಸರ್ವೇಷಾಂ ಬನ್ಧಾವಸ್ಥಾಯಾಮೇವ ಶಾಸ್ತ್ರಾರ್ಥವತ್ತ್ವಮ್। ನ ಮುಕ್ತಾವಸ್ಥಾಯಾಮ್, ಏವಮ್॥ -ಗೀ. ಭಾ.೧೩-೨-೬೬೨.

೧೬೦. ಸಂಸಾರಿತ್ವವು ಅವಿದ್ಯಕವೆಂಬುದು ನಿಜವಾದರೆ 'ನಾನು ಅಸಂಸಾರಿ, ಕರ್ತೃಭೋಕ್ತೃವಲ್ಲ' ಎಂಬ ಜ್ಞಾನದಿಂದಲ್ಲವೆ, ಹೋಗಬೇಕು? ಆದರೆ ಸಾಯುವವರೆಗೂ ಯಾರೊಬ್ಬರಿಗೂ ಈ ಸಂಸಾರಿತ್ವಸ್ವರೂಪವು ಹೋಗುವದಿಲ್ಲ. ಹೀಗಿರುವಲ್ಲಿ ಅಸಂಸಾರಿತ್ವಜ್ಞಾನವು ಆಗುವದು ಹೇಗೆ? ಆದ್ದರಿಂದ ಶರೀರವು ಇರುವವರೆಗೂ

ಬಂಧವು ನಿಜವಾಗಿಯೇ ಇದ್ದು ಅದು ಬಿದ್ದುಹೋದಬಳಿಕವೇ ಮೋಕ್ಷವು ಸತ್ಯವಾಗಿ ಆಗಬೇಕು ಎಂದು ಕೆಲವರು ವಾದಿಸುತ್ತಾರೆ.

ಇದು ಸರಿಯಲ್ಲ. ಏಕೆಂದರೆ ಸ್ವರ್ಗಾದಿಫಲವನ್ನು ಕೊಡುವ ಅಗ್ನಿಹೋತ್ರಾದಿ ಕರ್ಮಜ್ಞಾನದಂತೆ ಅಕರ್ತ್ರಾತ್ಮಸ್ವರೂಪವಾದ ಬ್ರಹ್ಮದ ಜ್ಞಾನವೂ ಶಾಸ್ತ್ರಪ್ರಮಾಣದಿಂದ ಆಗುವದಕ್ಕೆ ಅಡ್ಡಿಯಿರುವದಿಲ್ಲ. ಇದನ್ನು ಆಗಲೆ (೭೨) ಹೇಳಿರುತ್ತೇವೆ. ಅವಿದ್ಯಾಕಾಮ ಕರ್ಮಗಳೇ ಸಂಸಾರಿತ್ವಬಂಧವು; ಇದು ಜಾಗ್ರದವಸ್ಥೆಯಲ್ಲಿ ಪರಮಾರ್ಥ ವಾಗಿರುವಂತೆ ತೋರಿದರೂ ಸುಷುಪ್ತಿಯಲ್ಲಿ ಯಾವ ಅವಿದ್ಯಾಕಾಮಕರ್ಮಗಳೂ ಇರುವದಿಲ್ಲವೆಂಬುದು ಸರ್ವಾನುಭವಸಿದ್ಧವಾಗಿರುತ್ತದೆ. ಇದನ್ನು ಅವಸ್ಥಾತ್ರಯ ವಿಚಾರದ ಪಾಠದಲ್ಲಿ ತಿಳಿಸಿದ್ದಾಗಿರುತ್ತದೆ. ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳಿಲ್ಲದ ಅಸಂಸಾರಿಸ್ವಭಾವವೇ ಇರುತ್ತದೆಯೆಂದು ಶ್ರುತಿಯೂ ತಿಳಿಸುತ್ತದೆ. ಆದ್ದರಿಂದ ಶರೀರವು ಇರುವಾಗಲೆ ಅಸಂಸಾರಿತ್ವವನ್ನು ಅರಿತುಕೊಳ್ಳುವದಕ್ಕೆ ಅವಕಾಶವಿದೆ.

(೧) ಏಕವಾಕ್ಯತಯಾ ತು ಉಪಸಂಹ್ರಿಯಮಾಣಂ ಫಲಂ ನಿತ್ಯಶುದ್ಧಬುದ್ಧಮುಕ್ತ ಸ್ವಭಾವತಾ ಅಸ್ಯ ನೈಕತ್ರ ಪುಞ್ಜೀಕೃತ್ಯ ಪ್ರದರ್ಶಿತಾ ಇತಿ ತತ್ಪ್ರದರ್ಶನಾಯ ಕಣ್ಡಿಕಾ ಆರಭ್ಯತೇ। ಸುಷುಪ್ತೇ ಹಿ ಏವಂರೂಪತಾ ಅಸ್ಯ ವಕ್ಷ್ಯಮಾಣಾ । ''ತದ್ವಾ ಅಸ್ಯ ಏತದತಿಚ್ಛನ್ದಾ ಅಪಹತಪಾಪ್ಮಾಽಭಯಂ ರೂಪಮ್'' ಇತಿ॥ -ಬೃ. ಭಾ. ೪-೩-೧೯-೨೦೭.

(೨) ಇದಾನೀಂ ಯೋಽಸೌ ಸರ್ವಾತ್ಮಭಾವೋ ಮೋಕ್ಷಃ ವಿದ್ಯಾಫಲಮ್ ಕ್ರಿಯಾಕಾರಕ ಫಲಶೂನ್ಯಮ್, ಸ ಪ್ರತ್ಯಕ್ಷತೋ ನಿರ್ದಿಶ್ಯತೇ ಯತ್ರ ಅವಿದ್ಯಾಕಾಮಕರ್ಮಾಣಿ ನ ಸನ್ತಿ। ತದೇತತ್ ಪ್ರಸ್ತುತಮ್ ''ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಞ್ಚನ ಸ್ವಪ್ನಂ ಪಶ್ಯತಿ'' ಇತಿ। ತದೇತತ್ ವಾ ಅಸ್ಯ ರೂಪಮ್ ಯಃ ಸರ್ವಾತ್ಮಭಾವಃ, 'ಸೋಽಸ್ಯ ಪರಮೋ ಲೋಕಃ' ಇತ್ಯುಕ್ತಃ॥

-ಬೃ. ಭಾ. ೪-೩-೨೧-೨೧೩.

(೩) ಅತ್ರ ಚೈತತ್ಪ್ರಕೃತಮ್ ಅವಿದ್ಯಾಕಾಮಕರ್ಮವಿನಿರ್ಮುಕ್ತಮೇವ ತದ್ರೂಪಮ್, ಯತ್ ಸುಷುಪ್ತೇ ಆತ್ಮನೋ ಗೃಹ್ಯತೇ ಪ್ರತ್ಯಕ್ಷತಃ ಇತಿ ॥ - ಬೃ. ಭಾ. ೪-೩-೨೨-೨೧೬.

(೪) ಏವಮಯಂ ಸ್ವಾಭಾವಿಕೇ ಸ್ವೇ ಆತ್ಮನಿ ಸರ್ವಸಂಸಾರಧರ್ಮಾತೀತೋ ವರ್ತತೇ ಸ್ವಾಪಕಾಲೇ ಇತಿ॥ -ಬೃ. ಭಾ. ೨-೧-೧೯-೩೦೧.

(೫) ನಾಯಮಾತ್ಮಾ ಅನ್ಯೋಽನ್ಯತ್ರಾಭೂತ್, ಅನ್ಯೋ ವಾ ಅನ್ಯಸ್ಮಾತ್ ಆಗತಃ । ಸಾಧನಾನ್ತರಂ ವಾ ಆತ್ಮನಿ ಅಸ್ತಿ। ಕಿಂ ತರ್ಹಿ ಸ್ವಾತ್ಮನ್ಯೇವಾಭೂತ್ । ''ಸ್ವಮಾತ್ಮಾನಮಪೀತೋ ಭವತಿ'', ''ಸತಾ ಸೋಮ್ಯ ತದಾ ಸಂಪನ್ನೋ ಭವತಿ'', ''ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ'', ''ಪರೇ ಆತ್ಮನಿ ಸಂಪ್ರತಿಷ್ಠತೇ'' ಇತ್ಯಾದಿಶ್ರುತಿಭ್ಯಃ॥ -ಬೃ. ಭಾ. ೨-೧-೧೯-೩೦೨.

೧೬೧. ಶ್ರುತಿಯಲ್ಲಿ ''ತನ್ನ ರೂಪದಿಂದ ಸಿದ್ಧನಾಗುತ್ತಾನೆ'' (ಛಾಂ. ೮-೩-೪), ''ಬ್ರಹ್ಮವೇ ಆಗಿದ್ದು ಬ್ರಹ್ಮವನ್ನು ಸೇರಿಹೋಗುತ್ತಾನೆ'' (ಬೃ. ೪-೪-೬),

''ವಿಮುಕ್ತ ನಾಗಿದ್ದೇ ವಿಮುಕ್ತನಾಗುತ್ತಾನೆ'' (ಕ. ೨-೨-೨), ''ಅಶರೀರನಾಗಿರುವವನನ್ನು ಪ್ರಿಯಾಪ್ರಿಯಗಳು ಮುಟ್ಟುವದಿಲ್ಲ'' (ಛಾಂ. ೮-೧೨-೧)-ಎಂಬ ವಚನಗಳು ಕಂಡುಬರುತ್ತವೆ. ಇವುಗಳ ಆಧಾರದಿಂದ ಸತ್ತಮೇಲೆ ಆಗುವ ವಿದೇಹಮುಕ್ತಿ, ಬದುಕಿರುವಾಗ ಆಗುವ ಜೀವನ್ಮುಕ್ತಿ- ಎಂದು ಮುಕ್ತಿಯು ಎರಡು ಬಗೆ ಎಂದು ಕೆಲವರು ವಾದಿಸಿರುತ್ತಾರೆ.

ಈ ವಾದವು ಶ್ರುತಿಗೂ ವೇದಾಂತಸಿದ್ಧಾಂತಕ್ಕೂ ವಿರುದ್ಧವಾಗಿರುತ್ತದೆ. ಏಕೆಂದರೆ ''ತತ್ತ್ವಮಸಿ'' (ನೀನು ಆ ಸದ್ಬ್ರಹ್ಮವೇ ಆಗಿರುತ್ತೀಯೆ), ''ಅಹಂ ಬ್ರಹ್ಮಾಸ್ಮಿ'' (ನಾನು ಬ್ರಹ್ಮವಾಗಿರುವೆನು), ''ಅಯಮಾತ್ಮಾ ಬ್ರಹ್ಮ'' (ಈ ಆತ್ಮನು ಬ್ರಹ್ಮವು) -ಇವೇ ಮುಂತಾದವು ಈಗಲೇ ಇಲ್ಲಿಯೇ ಆತ್ಮನು ಬ್ರಹ್ಮವಾಗಿರುವನೆಂದು ಹೇಳುತ್ತಿವೆ. 'ನೀನು ಬ್ರಹ್ಮವೇ ಆಗಿರುವೆ' ಎಂಬ ವಾಕ್ಯವನ್ನು 'ನೀನು ಸತ್ತಬಳಿಕ ಬ್ರಹ್ಮವಾಗುವೆ' ಎನ್ನುವದಾಗುವದಿಲ್ಲ. ''ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ॥'' (ಬೃ. ೪-೪-೬) ಎಂಬ ವಾಕ್ಯವು ಜೀವನು ಈಗಲೇ ಬ್ರಹ್ಮವಾಗಿರುವನೆಂದು ಸ್ಪಷ್ಟವಾಗಿ ಹೇಳುತ್ತಿದೆ; ಮುಂದೆ ಬ್ರಹ್ಮವಾಗಿ ಬ್ರಹ್ಮವನ್ನು ಸೇರುವನು ಎಂದೇನೂ ಹೇಳುವದಿಲ್ಲ. ''ಸ್ವೇನ ರೂಪೇಣ ಅಭಿನಿಷ್ಪದ್ಯತೇ'' (ತನ್ನ ರೂಪದಿಂದ ಸಿದ್ಧವಾಗುವನು) ಎಂಬ ವಾಕ್ಯವು ಜ್ಞಾನದಿಂದ ತನ್ನ ನಿತ್ಯಸಿದ್ಧವಾದ ಸ್ವರೂಪವನ್ನು ಅರಿತುಕೊಳ್ಳುವನು ಎಂದೇ ಹೇಳುತ್ತದೆಯೆಂಬುದನ್ನು ಹಿಂದೆ (೧೫೫) ತಿಳಿಸಿಕೊಟ್ಟಿರುತ್ತೇವೆ. ಇನ್ನು ''ವಿಮುಕ್ತಶ್ಚ ವಿಮುಚ್ಯತೇ'' (ವಿಮುಕ್ತನೇ ವಿಮುಕ್ತ ನಾಗುತ್ತಾನೆ) ಎಂಬ ಕಠ (೨-೨-೧) ವಾಕ್ಯವೂ ಆತ್ಮನು ನಿತ್ಯಮುಕ್ತನೇ ಆಗಿರುತ್ತಾನೆಂದು ಸ್ಪಷ್ಟವಾಗಿ ಹೇಳುತ್ತಿದೆ. **''ಬ್ರಹ್ಮಾಪ್ಯೇತಿ'', ''ವಿಮುಚ್ಯತೇ'' ಎಂದು ಮತ್ತೆ ಹೇಳಿರುವದೇಕೆ? ಎಂದು ಪ್ರತಿವಾದಿಗಳು ಕೇಳಬಹುದು. ಈಗಲೇ ಅವಿದ್ಯಾಕಾಮಕಾರ್ಮಗಳಿಂದ ಮುಕ್ತನಾಗಿರುತ್ತಾನೆ; ಸತ್ತಬಳಿಕ ಅಜ್ಞರಂತೆ ಶರೀರಗ್ರಹಣವನ್ನು ಮಾಡುವದಿಲ್ಲ- ಎಂಬ ಅಭಿಪ್ರಾಯದಿಂದ ಮಾತ್ರವೇ ಈ ಮಾತುಗಳನ್ನು ಹೇಳಿರುತ್ತದೆ.** ಆದ್ದರಿಂದ ಜ್ಞಾನವು ಬಂದಕೂಡಲೆ ಆಗುವ **ಸದ್ಯೋಮುಕ್ತಿಯು** ಒಂದೇ, ಮುಕ್ತಿಯು ಎರಡೆಂಬುದು ಸರಿಯಲ್ಲ. ಮುಕ್ತಿಯೆಂದರೆ ಬ್ರಹ್ಮವೇ, ಬ್ರಹ್ಮದಲ್ಲಿ ಅನೇಕಾಕಾರಗಳಿಲ್ಲ. ಆದ್ದರಿಂದಲೂ ಮುಕ್ತಿಯು ಎರಡು ವಿಧವೆಂಬುದು ಸರಿಯಲ್ಲ.

(೧) ನ ಹಿ 'ತತ್ತ್ವಮಸಿ' ಇತ್ಯಸ್ಯ ವಾಕ್ಯಸ್ಯ ಅರ್ಥಃ ''ತತ್ತ್ವಂ ಮೃತೋ ಭವಿಷ್ಯಸಿ'' ಇತ್ಯೇವಂ ಪರಿಣೇತುಂ ಶಕ್ಯಃ॥ -ಸೂ. ಭಾ. ೩-೩-೩೨-೩೭೧.

(೨) ಯದ್ಯಪಿ ದೇಹವಾನಿವ ಲಕ್ಷ್ಯತೇ ಸ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ। ಯಸ್ಮಾತ್ ನ ಹಿ ತಸ್ಯ ಅಬ್ರಹ್ಮತ್ವಪರಿಚ್ಛೇದಹೇತವಃ ಕಾಮಾಃ ಸನ್ತಿ । ತಸ್ಮಾತ್ ಇಹೈವ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ನ

ಶರೀರಪಾತೋತ್ತರಕಾಲಮ್। ನ ಹಿ ವಿದುಷೋ ಮೃತಸ್ಯ ಭಾವಾನ್ತರಾಪತ್ತಿಃ, ಜೀವತೋಽನ್ಯೋ ಭಾವಃ। ದೇಹಾನ್ತರಪ್ರತಿಸನ್ಧಾನಾಭಾವಮಾತ್ರೇಣೈವ ತು ಬ್ರಹ್ಮಾಪ್ಯೇತಿ ಇತ್ಯುಚ್ಯತೇ॥

-ಬೃ.ಭಾ.೪-೪-೬-೨೭೧.

(೩) ಧ್ಯಾನಂ ಹಿ ತಸ್ಯ ಅನುಷ್ಠಾನಂ ಸಮ್ಯಗ್ವಿಜ್ಞಾನಪೂರ್ವಕಮ್। ತಂ ಸರ್ವೈಷಣಾ ವಿನಿರ್ಮುಕ್ತಃಸನ್ ಸಮಂ ಸರ್ವಭೂತಸ್ಥಂ ಧ್ಯಾತ್ವಾ ನ ಶೋಚತಿ । ತದ್ವಿಜ್ಞಾನಾತ್ ಅಭಯಪ್ರಾಪ್ತೇಃ ಶೋಕಾವಸರಾಭಾವಾತ್ ಕುತೋ ಭಯೇಕ್ಷಾ? ಇಹೈವ ಅವಿದ್ಯಾಕೃತಕಾಮಕರ್ಮಬನ್ಧನೈಃ ಮುಕ್ತೋ ಭವತಿ। ವಿಮುಕ್ತಶ್ಚ ವಿಮುಚ್ಯತೇ। ಪುನಃ ಶರೀರಂ ನ ಗೃಹ್ಣಾತಿ ಇತ್ಯರ್ಥಃ॥

- ಕ. ೨-೨-೧-೧೩೪.

(೪) ಬ್ರಹ್ಮೈವ ಹಿ ಮುಕ್ತ್ಯವಸ್ಥಾ। ನ ಚ ಬ್ರಹ್ಮಣೋಽನೇಕಾಕಾರಯೋಗೋಽಸ್ತಿ॥

-ಸೂ.ಭಾ. ೩-೪-೫೨-೪೯೯.

೧೬೨. ಶರೀರವಿರುವಾಗ ಆಗುವ ಮುಕ್ತಿಯು ಗೌಣವು; ಏಕೆಂದರೆ ಆಗ ಶರೀರವೂ ಪ್ರಾರಬ್ಧಕರ್ಮವೂ ಅದಕ್ಕೆ ತಕ್ಕಷ್ಟು ಅವಿದ್ಯಾಕಾಮಗಳೂ ಇರುತ್ತವೆ. ಈ ಅವಿದ್ಯಾಲೇಶವೂ ಇಲ್ಲದ ವಿದೇಹಮುಕ್ತಿಯೇ ಮುಖ್ಯಮುಕ್ತಿಯು ಎಂದು ಕೆಲವರು ವೇದಾಂತಿಗಳು ವಾದಿಸುತ್ತಿರುವರು. ಇದಂತೂ ಸರಿಯೇ ಅಲ್ಲ. ಏಕೆಂದರೆ ಆತ್ಮನಿಗೆ ಶರೀರವು ಇರುವದೆಂಬುದು ಮಿಥ್ಯಾಭಿಮಾನದಿಂದಲೇ ಹೊರತು ಪರಮಾರ್ಥವಲ್ಲ; ಇದನ್ನು ಹಿಂದೆಯೇ (೧೩೭) ತಿಳಿಸಿದ್ದಾಗಿದೆ. ಈಗ ಶರೀರವು ತೋರುತ್ತಿರುವದರಿಂದ ಸತ್ತಬಳಿಕವೇ ನಿಜವಾದ ಅಶರೀರತ್ವವುಂಟಾಗುವದು ಎಂಬುದೂ ಸರಿಯಲ್ಲ; ಏಕೆಂದರೆ ಕನಸಿನಲ್ಲಿ ಈ ಶರೀರವಿರುವದಿಲ್ಲ, ಸುಷುಪ್ತಿಯಲ್ಲಿ ಯಾವ ಶರೀರದ ಸಂಬಂಧವೂ ಇರುವದಿಲ್ಲ. ಆದ್ದರಿಂದ ಅಶರೀರತ್ವವು ಸ್ವಾಭಾವಿಕವಾಗಿರುತ್ತದೆ. ಜ್ಞಾನಿಗೆ ಯಾವ ಕಾಮಕರ್ಮಗಳೂ ಇರುವದಕ್ಕೆ ಅವಕಾಶವಿಲ್ಲ; ಏಕೆಂದರೆ ಅವನಲ್ಲಿ ಅವಿದ್ಯೆಯು ಸಂಪೂರ್ಣವಾಗಿ ಹೋಗಿರುತ್ತದೆ. ಅವಿದ್ಯೆ ಎಂದರೆ ತಪ್ಪುತಿಳಿವಳಿಕೆ. ಯಾವನಿಗೆ ವಸ್ತುವು ಇಂಥದ್ದೆಂಬ ನಿಶ್ಚಯರೂಪವಾದ ವಿಶೇಷಜ್ಞಾನವು ಆಗಿರುವ ದಿಲ್ಲವೋ ಅವನಿಗೆ ತಪ್ಪುತಿಳಿವಳಿಕೆಯುಂಟಾಗುತ್ತದೆ. ಆತ್ಮನು ಬ್ರಹ್ಮವೇ ಎಂಬ ನಿಶ್ಚಯವುಂಟಾಗಿರುವ ಜ್ಞಾನಿಗೆ ಮತ್ತೆ ತಪ್ಪುತಿಳಿವಳಿಕೆಯುಂಟಾಗಲು ಕಾರಣವಿಲ್ಲ. ಹಿಂದಿನ ಅವಿದ್ಯೆಯ ಸಂಸ್ಕಾರದಿಂದ ಮಿಥ್ಯಾಪ್ರತ್ಯಯದಂತೆ ಕಾಣುವ ಸ್ಮೃತಿಗಳುಂಟಾಗುವದುಂಟು. ದಿಕ್ಕುತಿಳಿದವರಿಗೂ ಆಗುವ ದಿಗ್ಭ್ರಾಂತಿಯಂತೆ ಈ ಮಿಥ್ಯಾಜ್ಞಾನಾಭಾಸವು ಸಮ್ಯಗ್ಜ್ಞಾನದಿಂದ ಬಾಧ್ಯವಾದೀತೇ ಹೊರತು ಆ ಜ್ಞಾನಕ್ಕೆ ಬಾಧಕವಾಗಲಾರದು. ಜ್ಞಾನಿಗೆ ಅವಿದ್ಯೆಯು ಇರುವದಕ್ಕೆ ಅವಕಾಶವಿಲ್ಲವೆಂಬುದನ್ನು ಹಿಂದೆಯೂ ತಿಳಿಸಿರುತ್ತೇವೆ. ಆದ್ದರಿಂದ ಬದುಕಿರುವಾಗಲೇ ಈಗಲೇ ಮುಕ್ತಿಯಾಗುತ್ತದೆ, ಸತ್ತಬಳಿಕವಲ್ಲ ಎಂದು ಆಚಾರ್ಯರು ಮತ್ತೆಮತ್ತೆ ಸಾರಿರುತ್ತಾರೆ.

(೧) ಶರೀರೇ ಪತಿತೇ ಅಶರೀರತ್ವಂ ಸ್ಯಾತ್। ನ ಜೀವತಃ ಇತಿ ಚೇತ್। ನ। ಸಶರೀರತ್ವಸ್ಯ ಮಿಥ್ಯಾಜ್ಞಾನನಿಮಿತ್ತತ್ವಾತ್। ನ ಹಿ ಆತ್ಮನಃ ಶರೀರಾತ್ಮಾಭಿಮಾನಲಕ್ಷಣಂ ಮಿಥ್ಯಾಜ್ಞಾನಂ ಮುಕ್ತ್ವಾ ಅನ್ಯತಃ ಸಶರೀರತ್ವಂ ಶಕ್ಯಂ ಕಲ್ಪಯಿತುಮ್। ನಿತ್ಯಮ್ ಅಶರೀರತ್ವಮ್, ಅಕರ್ಮನಿಮಿತ್ತತ್ವಾತ್ ಇತ್ಯವೋಚಾಮ ॥ -ಸೂ. ಭಾ.೧-೧-೪-೫೮.

(೨) ನ ಚ ವಿಪರೀತಪ್ರತ್ಯಯೋ ವಿದ್ಯಾವತಃ ಉತ್ಪದ್ಯತೇ। ನಿರ್ವಿಷಯತ್ವಾತ್। ಅನವಧೃತ ವಿಷಯವಿಶೇಷಸ್ವರೂಪಂ ಹಿ ಸಾಮಾನ್ಯಮಾತ್ರಮ್ ಆಶ್ರಿತ್ಯ ವಿಪರೀತಪ್ರತ್ಯಯಃ ಉತ್ಪದ್ಯಮಾನಃ ಉತ್ಪದ್ಯತೇ। ಯಥಾ ಶುಕ್ತಿಕಾಯಾಂ ರಜತಮಿತಿ। ಸ ಚ ವಿಷಯವಿಶೇಷಾವಧಾರಣವತಃ ಅಶೇಷವಿಪರೀತಪ್ರತ್ಯಯಾಶ್ರಯಸ್ಯ ಉಪಮರ್ದಿತತ್ವಾತ್ ನ ಪೂರ್ವವತ್ ಸಂಭವತಿ। ಶುಕ್ತಿಕಾದೌ ಸಮ್ಯಕ್ಪ್ರತ್ಯಯೋತ್ಪತ್ತೌ ಪುನರದರ್ಶನಾತ್। ಕ್ವಚಿತ್ ತು ವಿದ್ಯಾಯಾಃ ಪೂರ್ವೋತ್ಪನ್ನ-ವಿಪರೀತಪ್ರತ್ಯಯಜನಿತಸಂಸ್ಕಾರೇಭ್ಯೋ ವಿಪರೀತಪ್ರತ್ಯಯಾವಭಾಸಾಃ ಸ್ಮೃತಯಃ ಜಾಯಮಾನಾಃ ವಿಪರೀತಪ್ರತ್ಯಯಭ್ರಾನ್ತಿಮ್ ಅಕಸ್ಮಾತ್ ಕುರ್ವನ್ತಿ। ಯಥಾ ವಿಜ್ಞಾತದಿಗ್ವಿಭಾಗಸ್ಯಾಪಿ ಅಕಸ್ಮಾತ್ ದಿಗ್ವಿಪರ್ಯಯವಿಭ್ರಮಃ। ಸಮ್ಯಗ್ಜ್ಞಾನವತೋಽಪಿ ಚೇತ್ ಪೂರ್ವವತ್ ವಿಪರೀತಪ್ರತ್ಯಯ ಉತ್ಪದ್ಯತೇ ಸಮ್ಯಗ್ಜ್ಞಾನೇಽಪ್ಯವಿಸ್ರಮ್ಭಾತ್ ಶಾಸ್ತ್ರಾರ್ಥವಿಜ್ಞಾನಾದೌ ಪ್ರವೃತ್ತಿರಸಮಞ್ಜಸಾ ಸ್ಯಾತ್॥ -ಬೃ.ಭಾ. ೧-೪-೧೦-೧೭೩.

(೩) ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯನ್ತಿ ಕಾಮಾಃ॥

-ಮುಂ. ೩-೨-೨.

ಯಸ್ತು ಪರಮಾರ್ಥತತ್ತ್ವವಿಜ್ಞಾನಾತ್ ಪರ್ಯಾಪ್ತಕಾಮಃ ಆತ್ಮಕಾಮತ್ವೇನ ಪರಿ ಸಮನ್ತತಃ ಆಪ್ತಾಃ ಕಾಮಾಃ ಯಸ್ಯ ತಸ್ಯ ಪರ್ಯಾಪ್ತಕಾಮಸ್ಯ ಕೃತಾತ್ಮನಃ ಅವಿದ್ಯಾಲಕ್ಷಣಾತ್ ಅಪರರೂಪಾತ್ ಅಪನೀಯ ಸ್ವೇನ ಪರೇಣ ರೂಪೇಣ ಕೃತಃ ಆತ್ಮಾ ವಿದ್ಯಯಾ ಯಸ್ಯ ತಸ್ಯ ಕೃತಾತ್ಮನಸ್ತು ಇಹೈವ ತಿಷ್ಠತ್ಯೇವ ಶರೀರೇ ಸರ್ವೇ ಧರ್ಮಾಧರ್ಮಪ್ರವೃತ್ತಿಹೇತವಃ ಪ್ರವಿಲೀಯನ್ತಿ ಪ್ರವಿಲೀಯನ್ತೇ ವಿಲಯಮ್ ಉಪಯಾನ್ತಿ ನಶ್ಯನ್ತಿ ಇತ್ಯರ್ಥಃ। ಕಾಮಾಃ । ತಜ್ಜನ್ಮಹೇತುವಿನಾಶಾತ್ ನ ಜಾಯನ್ತೇ ಇತ್ಯಭಿಪ್ರಾಯಃ॥ -ಮುಂ.೩-೨-೨-೧೧೨.

(೪) ಅತ್ರ ಇಹೈವ ಪ್ರದೀಪನಿರ್ವಾಣವತ್ ಸರ್ವಬನ್ಧನೋಪಶಮಾತ್ ಬ್ರಹ್ಮ ಸಮಶ್ನುತೇ। ಬ್ರಹ್ಮೈವ ಭವತಿ ಇತ್ಯರ್ಥಃ॥ - ಕ.ಭಾ. ೨-೩-೧೪-೧೮೧.

(೫) ಪರಾಮೃತಾಃ ಪರಮ್ ಅಮೃತಮ್ ಅಮರಣಧರ್ಮಕಂ ಬ್ರಹ್ಮ ಆತ್ಮಭೂತಂ ಯೇಷಾಂ ತೇ ಪರಾಮೃತಾಃ ಜೀವನ್ತ ಏವ ಬ್ರಹ್ಮಭೂತಾಃ। ಪರಾಮೃತಾಃ ಸನ್ತಃ ಪರಿಮುಚ್ಯನ್ತಿ ಪರಿ ಸಮನ್ತಾತ್ ಪ್ರದೀಪನಿರ್ವಾಣವತ್ ಭಿನ್ನ ಘಟಾಕಾಶವಚ್ಚ ನಿವೃತ್ತಿಮ್ ಉಪಯಾನ್ತಿ॥

-ಮುಂ.ಭಾ. ೩-೨-೬-೧೧೮.

(೬) ಇಹೈವ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ, ನ ಶರೀರಪಾತೋತ್ತರಕಾಲಮ್॥

-ಬೃ.ಭಾ.೪-೪-೬-೨೭೧.

(೭) ತಸ್ಮಾತ್ ಮಿಥ್ಯಾಪ್ರತ್ಯಯನಿಮಿತ್ತತ್ವಾತ್ ಸಶರೀರತ್ವಸ್ಯ ಸಿದ್ಧಂ ಜೀವತೋಽಪಿ ವಿದುಷೋಽಶರೀರತ್ವಮ್॥ -ಸೂ.ಭಾ. ೧-೧-೪-೬೦.

(೮) ದರ್ಶಯತಿ ಚ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ.೪-೫-೧೫) ಇತ್ಯಾದಿನಾ ಬ್ರಹ್ಮಾತ್ಮತ್ವದರ್ಶಿನಂಪ್ರತಿ ಸಮಸ್ತಸ್ಯ ಕ್ರಿಯಾಕಾರಕಫಲಲಕ್ಷಣಸ್ಯ ವ್ಯವಹಾರಸ್ಯ ಅಭಾವಮ್। ನ ಚಾಯಂ ವ್ಯವಹಾರಾಭಾವಃ ಅವಸ್ಥಾವಿಶೇಷನಿಬದ್ಧೋऽಭಿಧೀಯತೇ ಇತಿ ಯುಕ್ತಂ ವಕ್ತುಮ್। "ತತ್ತ್ವಮಸಿ" ಇತಿ ಬ್ರಹ್ಮಾತ್ಮಭಾವಸ್ಯ ಅನವಸ್ಥಾವಿಶೇಷನಿಬನ್ಧನತ್ವಾತ್॥

-ಸೂ. ಭಾ. ೨-೧-೧೪-೪೩೫

# ೨೨. ಅಪರಬ್ರಹ್ಮ

೧೬೩. ಮೋಕ್ಷವು ಉತ್ಪಾದ್ಯವಲ್ಲ, ವಿಕಾರ್ಯವಲ್ಲ, ಸಂಸ್ಕಾರ್ಯವಲ್ಲ; ಆದ್ದರಿಂದ ಅದು ಸಾಧನದಿಂದ ಪಡೆದುಕೊಳ್ಳತಕ್ಕದ್ದಲ್ಲ ಎಂದು ಹಿಂದೆ (೧೫೮) ಹೇಳಿದೆ. ಇದು ನಿಜವಾದರೂ ಮೋಕ್ಷವು ಪ್ರಾಪ್ಯವೇ ಆಗಿರಬಹುದಲ್ಲ !- ಎಂಬ ಶಂಕೆಯೊಂದು ಉಳಿದುಕೊಂಡಿರುತ್ತದೆ. "ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. ೮-೧೨-೩) ಎಂಬಲ್ಲಿ ಮೋಕ್ಷವು ಪ್ರಾಪ್ಯವಾದ ಅವಸ್ಥಾಂತರವಲ್ಲವೆಂದೂ ಅವಿದ್ಯೆಯಿಂದ ಅಪ್ರಾಪ್ತವಾದಂತಾಗಿದ್ದ ಮೋಕ್ಷವನ್ನು ವಿದ್ಯೆಯಿಂದ ಪಡೆಯುವದನ್ನೇ ಆ ಶ್ರುತಿಯಲ್ಲಿ ಹೇಳಿದೆಯೆಂದೂ (೧೫೫) ಸಮಾಧಾನವನ್ನು ಹೇಳಿಯಾದರೂ ಮೋಕ್ಷವು ಪ್ರಾಪ್ಯವೆಂದು ಪ್ರತ್ಯಕ್ಷಶ್ರುತಿಗಳಿಂದಲೇ ತಿಳಿಯಬರುತ್ತದೆ. ಏಕೆಂದರೆ ಬ್ರಹ್ಮಜ್ಞಾನಿಯು ಒಂದಾನೊಂದು ಮಾರ್ಗದಿಂದ ಹೋಗಿ ಬ್ರಹ್ಮವನ್ನು ಪಡೆಯುತ್ತಾನೆಂದೂ ಅಲ್ಲಿ ಸಂಕಲ್ಪಮಾತ್ರದಿಂದ ಬೇಕಾದದ್ದು ಸನ್ನಿಹಿತವಾಗುವ ಸಿದ್ಧಿಗಳನ್ನು ಪಡೆದುಕೊಳ್ಳುತ್ತಾನೆಂದೂ ಶ್ರುತಿಯಲ್ಲಿ ವರ್ಣಿಸಿದೆ. ಆದ್ದರಿಂದ ಮುಕ್ತಿಯು ಪ್ರಾಪ್ಯವೇ ಆಗಿರುತ್ತದೆ- ಎಂದು ಕೆಲವರು ಶಂಕಿಸಬಹುದಾಗಿದೆ.

ಈ ಶಂಕೆಯು ಸರಿಯಲ್ಲ. ಏಕೆಂದರೆ ಮೋಕ್ಷಾವಸ್ಥೆ ಎಂದರೆ ಬ್ರಹ್ಮವೇ ಹೊರತು ಬೇರೆಯಲ್ಲ. ಬ್ರಹ್ಮವೆಂದರೆ ನಮ್ಮ ಆತ್ಮನೇ ಆಗಿರುವದರಿಂದ ಅದು ಆಪ್ಯವೆನ್ನುವಂತಿಲ್ಲ. ಆತ್ಮನಿಗಿಂತ ಬ್ರಹ್ಮವು ಬೇರೆ ಎಂಬವರ ಮತದಲ್ಲಿಯೂ ಅದು ಸರ್ವಗತವಾಗಿರುವದರಿಂದ ನಿತ್ಯಪ್ರಾಪ್ತವಾಗಿರುತ್ತದೆ; ಸರ್ವಗತವಾಗಿರುವ ಆಕಾಶವನ್ನು ಎಲ್ಲಿಗಾದರೂ ಹೋಗಿ ಮುಟ್ಟಬೇಕಾಗಿರುವದಿಲ್ಲವಷ್ಟೆ? ಅದರಂತೆಯೇ ಇಲ್ಲಿಯೂ ತಿಳಿಯಬೇಕು. ಇನ್ನು **ಶ್ರುತಿಯಲ್ಲಿ ಗತಿ, ಐಶ್ವರ್ಯ - ಮುಂತಾದವುಗಳನ್ನು ಹೇಳಿರುವದು ಕಾರ್ಯವಾದ ಅಪರಬ್ರಹ್ಮದ ವಿಷಯವಾಗಿರುತ್ತದೆ,** ಪರಬ್ರಹ್ಮದ ವಿಷಯವಲ್ಲ. ಪರಬ್ರಹ್ಮವು ಎಲ್ಲರ ಆತ್ಮನೇ ಆಗಿ ಸರ್ವಗತವಾಗಿರುವದರಿಂದ ಅದರಲ್ಲಿ ಗನ್ತೃತ್ವವಾಗಲಿ ಗನ್ತವ್ಯತ್ವವಾಗಲಿ ಇರುವಂತೆಯೇ ಇಲ್ಲ. ಅದಕ್ಕೆ ಗೊತ್ತಾದ ಒಂದು ಪ್ರದೇಶವೂ ಇರುವದಿಲ್ಲವಾದ್ದರಿಂದಲೂ ಅದು ಗಂತವ್ಯವಲ್ಲ.

(೧) ಬ್ರಹ್ಮೈವ ಹಿ ಮುಖ್ಯವಸ್ಥಾ॥ -ಸೂ. ಭಾ. ೩-೪-೫೨-೯೯.

(೨) ನ ಚ ಆಪ್ಯತ್ವೇನಾಪಿ ಕಾರ್ಯಾಪೇಕ್ಷಾ। ಸ್ವಾತ್ಮಸ್ವರೂಪತ್ವೇ ಸತಿ ಅನಾಪ್ಯತ್ವಾತ್। ಸ್ವರೂಪವ್ಯತಿರಿಕ್ತತ್ವೇಽಪಿ ಬ್ರಹ್ಮಣೋ ನಾಪ್ಯತ್ವಮ್। ಸರ್ವಗತತ್ವೇನ ನಿತ್ಯಾಪ್ತಸ್ವರೂಪತ್ವಾತ್ ಸರ್ವೇಣ ಬ್ರಹ್ಮಣಃ। ಆಕಾಶಸ್ಯೇವ॥ -ಸೂ. ಭಾ. ೧-೧-೪-೪೮.

(೩) ಗತ್ಯೈಶ್ವರ್ಯಾದಿಶ್ರುತಿವಿರೋಧಃ ಇತಿ ಚೇತ್। ಅಥಾಪಿ ಸ್ಯಾತ್ ಯದ್ಯಪ್ರಾಪ್ಯೋ ಮೋಕ್ಷಃ, ತದಾ ಗತಿಶ್ರುತೀನಾಂ ''ಸ ಏಕಧಾ'' (ಛಾಂ. ೭-೨೬-೨), ''ಸ ಯದಿ ಪಿತೃಲೋಕಕಾಮೋ ಭವತಿ'' (ಛಾಂ. ೮-೨-೧), ''ಸ್ತ್ರೀಭಿರ್ವಾ ಯಾನೈರ್ವಾ'' (ಛಾಂ. ೮-೧೨-೩)- ಇತ್ಯಾದಿಶ್ರುತೀನಾಂ ಚ ಕೋಪಃ ಸ್ಯಾತ್ ಇತಿ ಚೇತ್। ನ। ಕಾರ್ಯಬ್ರಹ್ಮವಿಷಯತ್ವಾತ್ ತಾಸಾಮ್। ಕಾರ್ಯೇ ಹಿ ಬ್ರಹ್ಮಣಿ ಸ್ತ್ರ್ಯಾದಯಃ ಸ್ಯುಃ ನ ಕಾರಣೇ। ''ಏಕಮೇವಾದ್ವಿತೀಯಮ್'', ''ಯತ್ರ ನಾನ್ಯತ್ ಪಶ್ಯತಿ'', ''ತತ್ ಕೇನ ಕಂ ಪಶ್ಯೇತ್'' ಇತ್ಯಾದಿಶ್ರುತಿಭ್ಯಃ॥ -ತೈ.೧-೧೧-೭೬.

(೪) ಅಸ್ಯ ಹಿ ಕಾರ್ಯಬ್ರಹ್ಮಣೋ ಗನ್ತವ್ಯತ್ವಮ್ ಉಪಪದ್ಯತೇ ಪ್ರದೇಶವತ್ತ್ವಾತ್। ನ ತು ಪರಸ್ಮಿನ್ ಬ್ರಹ್ಮಣಿ ಗನ್ತೃತ್ವಂ ಗನ್ತವ್ಯತ್ವಂ ಗತಿರ್ವಾ ಅವಕಲ್ಪತೇ। ಸರ್ವಗತತ್ವಾತ್ ಪ್ರತ್ಯಗಾತ್ಮತ್ವಾಚ್ಚ ॥ -ಸೂ. ೪-೩-೭-೫೭೩.

೧೬೪. ಬ್ರಹ್ಮವು ಎರಡೆಂಬುದು ಕಲ್ಪನಾಮಾತ್ರವಲ್ಲ. ಪರ, ಅಪರ-ಎರಡು ಬ್ರಹ್ಮವೂ ಓಂಕಾರವೆಂದು ಉಪಾಸನೆಮಾಡಬೇಕೆಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಅವಿದ್ಯಾಕೃತವಾದ ವಿಶೇಷಗಳನ್ನು ತಿರಸ್ಕಾರಮಾಡಿ 'ಸ್ಥೂಲವಲ್ಲ, ಅಣುವಲ್ಲ, ಅದಲ್ಲ ಅದಲ್ಲ' ಎಂದು ಮುಂತಾಗಿ ಹೇಳಿರುವದು **'ಪರಬ್ರಹ್ಮವು'**. ನಾಮರೂಪಾದಿವಿಶೇಷಗಳಿಂದ ಕೂಡಿ ಉಪಾಸನೆಗಾಗಿ ಹೇಳಿದಾಗ ಅದೇ ಬ್ರಹ್ಮವೇ **'ಅಪರಬ್ರಹ್ಮವು'** ಎನಿಸುತ್ತದೆ. ಜ್ಞೇಯವಾದ ಪರಬ್ರಹ್ಮವನ್ನು ಅವಿಕೃತ, ಮುಖ್ಯ, ಕಾರಣಬ್ರಹ್ಮ, ನಿರುಪಾಧಿಕಬ್ರಹ್ಮ, ನಿಷ್ಪ್ರಪಂಚಬ್ರಹ್ಮ, ನಿರ್ಗುಣಬ್ರಹ್ಮ-ಎಂದು ಮುಂತಾಗಿಯೂ ಉಪಾಸ್ಯವಾದ ಅಪರಬ್ರಹ್ಮವನ್ನು ಕಾರ್ಯಬ್ರಹ್ಮ, ಸೋಪಾಧಿಕ ಬ್ರಹ್ಮ, ಸಪ್ರಪಂಚಬ್ರಹ್ಮ, ಅಮುಖ್ಯಬ್ರಹ್ಮ, ಸವಿಶೇಷಬ್ರಹ್ಮ, ಸಗುಣಬ್ರಹ್ಮ, ಸಾಕಾರಬ್ರಹ್ಮ, ಸೋಪಾಧ್ಯಾಖ್ಯಬ್ರಹ್ಮ-ಎಂದು ಮುಂತಾಗಿಯೂ ಕರೆಯುವರು. ಈ ಭೇದವೂ ಅವಿದ್ಯೆಯಿಂದ ಕಲ್ಪಿಸಿರತಕ್ಕದ್ದೇ ಆದ್ದರಿಂದ ಅದ್ವೈತಶ್ರುತಿಗೆ ಇದು ಬಾಧಕವಲ್ಲ.

(೧) ಕಿಂ ದ್ವೇ ಬ್ರಹ್ಮಣೀ ಪರಮ್ ಅಪರಂ ಚ ಇತಿ? ಬಾಢಂ ದ್ವೇ। ''ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ'' (ಪ್ರ. ೫-೨) ಇತ್ಯಾದಿ ದರ್ಶನಾತ್। ಕಿಂ ಪುನಃ ಪರಂ ಬ್ರಹ್ಮ, ಕಿಮಪರಮ್ ಇತಿ? ಉಚ್ಯತೇ। ಯತ್ರ ಅವಿದ್ಯಾಕೃತನಾಮರೂಪಾದಿವಿಶೇಷಪ್ರತಿಷೇಧಾತ್ ಅಸ್ಥೂಲಾದಿಶಬ್ದೈಃ ಬ್ರಹ್ಮ ಉಪದಿಶ್ಯತೇ, ತತ್ ಪರಮ್। ತದೇವ ಯತ್ರ ನಾಮರೂಪಾದಿ ವಿಶೇಷೇಣ ಕೇನಚಿತ್ ವಿಶಿಷ್ಟಮ್ ಉಪಾಸನಾಯ ಉಪದಿಶ್ಯತೇ ''ಮನೋಮಯಃ

ಪ್ರಾಣಶರೀರೋ ಭಾರೂಪಃ'' (ಛಾಂ.೩-೧೪-೨) ಇತ್ಯಾದಿಶಬ್ದೈಃ ತತ್ ಅಪರಮ್। ನನ್ವೇವಮ್ ಅದ್ವಿತೀಯಶ್ರುತಿಃ ಉಪರುಧ್ಯೇತ। । ಅವಿದ್ಯಾಕೃತನಾಮರೂಪೋಪಾಧಿಕತಯಾ ಪರಿಹೃತತ್ವಾತ್॥'' -ಸೂ. ಭಾ. ೪-೩-೧೪-೫೮೭.

(೨) ದ್ವಿರೂಪಂ ಹಿ ಬ್ರಹ್ಮ ಅವಗಮ್ಯತೇ, ನಾಮರೂಪವಿಕಾರಭೇದೋಪಾಧಿವಿಶಿಷ್ಟಮ್, ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಮ್। ''ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ... ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್'' (ಬೃ. ೪-೫-೧೫), ''ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಮ್'' (ಛಾಂ. ೭-೨೪-೧), ''ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಽಭಿವದನ್ಯದಾಸ್ತೇ''(ತೈ. ಆ. ೩-೧೨-೭) ''ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್ । ಅಮೃತಸ್ಯ ಪರಂ ಸೇತುಂ ದಗ್ಧೇನ್ಧನಮಿವಾನಲಮ್'' (ಶ್ವೇ. ೬-೧೯), ''ನೇತಿ ನೇತಿ'' (ಬೃ.೨-೩-೬) ಇತಿ,''ಅಸ್ಥೂಲಮನಣು'' (ಬೃ. ೩-೮-೮), ''ನ್ಯೂನಮನ್ಯತ್ಸ್ಥಾನಂ ಸಂಪೂರ್ಣಮನ್ಯತ್'' (?) ಇತಿ ಚೈವಂ ಸಹಸ್ರಶೋ ವಿದ್ಯಾವಿದ್ಯಾವಿಷಯಭೇದೇನ ಬ್ರಹ್ಮಣೋ ದ್ವಿರೂಪತಾಂ ದರ್ಶಯನ್ತಿ ವಾಕ್ಯಾನಿ॥ - ಸೂ. ಭಾ.೧-೧-೧೨-೯೦.

(೩) ಏವಮೇಕಮಪಿ ಬ್ರಹ್ಮ ಅಪೇಕ್ಷಿತೋಪಾಧಿಸಂಬನ್ಧಂನಿರಸ್ತೋಪಾಧಿ ಸಂಬನ್ಧಂ ಚ ಉಪಾಸ್ಯತ್ವೇನ, ಜ್ಞೇಯತ್ವೇನ ಚ ವೇದಾನ್ತೇಷು ಉಪದಿಶ್ಯತೇ॥ -ಸೂ. ಭಾ.೧-೧-೧೨-೯೩.

೧೬೫. ಗತಿಪೂರ್ವಕವಾಗಿ ಪಡೆದ ಬ್ರಹ್ಮದಿಂದ ಮತ್ತೆಮರಳಿ ಬರುವದಿಲ್ಲವೆಂದು ಶ್ರುತಿಯಲ್ಲಿದೆ. ಬ್ರಹ್ಮವು ಜಗತ್ಕಾರಣವಾಗಿದ್ದರೆ ಕಾರ್ಯವಾದದ್ದನ್ನು ಬ್ರಹ್ಮವೆಂದು ಕರೆಯುವದು ಸರಿಯಾಗುವದಿಲ್ಲ; ಆದರೆ ಹಾಗೆಂದು ಶ್ರುತಿಯಲ್ಲಿ ಕರೆದಿದೆ. ಒಂದಾನೊಂದು ನಾಡಿಯಿಂದ ಹೊರಟುಹೋದವರು ಅಮೃತತ್ವವನ್ನು ಪಡೆಯುತ್ತಾರೆಂದು ಶ್ರುತಿಯಲ್ಲಿ ಸ್ಪಷ್ಟವಾಗಿಯೇ ಹೇಳಿರುತ್ತದೆ. ಈ ಎಲ್ಲಾ ಕಾರಣಗಳಿಂದ ಬ್ರಹ್ಮವು ಪ್ರಾಪ್ಯವೆಂಬುದೇ ಶ್ರುತಿಸಮ್ಮತವೆಂದು ಕೆಲವರಿಗೆ ತೋರಬಹುದು. ಬ್ರಹ್ಮವು ನಿತ್ಯಪ್ರಾಪ್ತವಾಗಿದ್ದರೂ ಪ್ರಾಪ್ತವೇ ಆಗಿರುವ ಭೂಮಿಯ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗುವಂತೆಯೂ ತನ್ನದೇ ಆಗಿರುವ ಬಾಲ್ಯಾವಸ್ಥೆಯನ್ನು ಬಿಟ್ಟು ತನ್ನದೇ ಆಗಿರುವ ವಾರ್ಧಕ್ಯವನ್ನು ಪಡೆಯುವಂತೆಯೂ ಬ್ರಹ್ಮವು ಏತಕ್ಕೆ ಪ್ರಾಪ್ಯವಾಗಿರಬಾರದು?- ಎಂದೂ ಕೆಲವರು ಶಂಕಿಸಬಹುದಾಗಿದೆ.

ಇದಕ್ಕೆಲ್ಲ ಪರಿಹಾರವೇನೆಂದರೆ: 'ಈ ಮಾನವ ಆವರ್ತಕ್ಕೆ ಮರಳಿಬರುವದಿಲ್ಲ', 'ಅವರಿಗೆ ಇಲ್ಲಿಗೆ ಮತ್ತೆ ಬರುವದೆಂಬುದಿಲ್ಲ' -ಎಂಬ ವಾಕ್ಯಗಳಲ್ಲಿ ಮತ್ತೊಂದು ಕಲ್ಪದಲ್ಲಿ ಹಿಂದಕ್ಕೆ ಬರಬಹುದೆಂಬ ಅಭಿಪ್ರಾಯವು ಅಡಗಿದೆ. ಸರ್ವಗತವಾದದ್ದು

ಹೋಗಿ ಪಡೆಯತಕ್ಕದ್ದಲ್ಲ ಎಂಬ ಅನುಭವಪೂರ್ಣಯುಕ್ತಿಗೆ ವಿರುದ್ಧವಾಗಿ ಶ್ರುತಿಯು ಹೇಳುವಂತಿಲ್ಲವಾದ್ದರಿಂದ ಈ ಅರ್ಥವನ್ನು ಮಾಡಬೇಕು. ಕಾರ್ಯಬ್ರಹ್ಮಲೋಕದಲ್ಲಿ ಜ್ಞಾನವನ್ನು ಸಂಪಾದಿಸಿಕೊಂಡವರು ಅಲ್ಲಿಂದಲೇ ಮುಕ್ತರಾದರೆ ಮರಳಿ ಸಂಸಾರಕ್ಕೆ ಬರುವದಿಲ್ಲ-ಎಂಬರ್ಥದಲ್ಲಿ **ಕ್ರಮಮುಕ್ತಿ**ಯನ್ನೂ ಶ್ರುತಿಯು ಹೇಳಬಹುದಾಗಿದೆ. ಈ ಅರ್ಥಕ್ಕೆ ಸ್ಮೃತಿಯೂ ಇದೆ. 'ಭೂತಪ್ರಲಯವಾಗುವವರೆಗೆ ಇರುವ ಸ್ಥಾನವನ್ನು ಅಮೃತತ್ವವೆನ್ನುತ್ತಾರೆ' ಎಂದು ಸ್ಮೃತಿಯಿದೆ. ಬ್ರಹ್ಮಲೋಕವು ಇತರಲೋಕಗಳಿಗೆ ಹೋಲಿಸಿದರೆ ಕಲ್ಪದಲ್ಲೆಲ್ಲ ನಾಶವಾಗದೆ ಇರುವದರಿಂದ ಅದನ್ನು ಸಾಪೇಕ್ಷವಾಗಿ ಅಮೃತವೆಂದು ಕರೆಯುವದು ತಪ್ಪಲ್ಲ. ಕಾರ್ಯಬ್ರಹ್ಮವು ಪರಬ್ರಹ್ಮಕ್ಕೆ ಸಮೀಪವಾಗಿ ರುವದರಿಂದಲೂ, ಪರಬ್ರಹ್ಮವನ್ನೇ ಕೆಲವು ಕಾರ್ಯಧರ್ಮಗಳಿಂದೊಡಗೂಡಿದಂತೆ ಉಪಾಸನೆಮಾಡುವಾಗ ಅದು ಅಪರಬ್ರಹ್ಮ ಅಥವಾ ಕಾರ್ಯಬ್ರಹ್ಮ ಎನ್ನಿಸಿಕೊಳ್ಳುವ ದರಿಂದಲೂ ಅದನ್ನು ಬ್ರಹ್ಮವೆಂದು ಕರೆಯಬಹುದಾಗಿದೆ. ಆದ್ದರಿಂದ ಈ ಸಂದರ್ಭ ದಲ್ಲಿ ಅನಾವೃತ್ತಿ, ಅಮೃತತ್ವ, ಬ್ರಹ್ಮ-ಈ ಶಬ್ದಗಳೆಲ್ಲ ಗೌಣಾರ್ಥದಲ್ಲಿ ಪ್ರಯುಕ್ತವಾಗಿವೆ ಎಂದು ತಿಳಿಯಬೇಕು. ಬ್ರಹ್ಮದಲ್ಲಿ ದೇಶಕಾಲಾದಿಯಾದ ಯಾವ ವಿಶೇಷವೂ ಇಲ್ಲವೆಂದು ಶ್ರುತಿ ಹೇಳುತ್ತಿರುವದರಿಂದ ಭೂಪ್ರದೇಶದಂತೆಯೂ ಪಾರ್ಥಕಾವಸ್ಥೆ ಯಂತೆಯೂ ಅದು ಪಡೆಯತಕ್ಕದ್ದಲ್ಲ. ಆದ್ದರಿಂದ ಪರಬ್ರಹ್ಮವು ಪ್ರಾಪ್ಯವಲ್ಲ- ಎಂಬುದೇ ಸಿದ್ಧಾಂತವಾಗಿರುತ್ತದೆ.

(೧) "ನ ಚ ಪುನರಾವರ್ತತೇ" ಇತಿ "ಇಮಂ ಮಾನವಮಾವರ್ತಂ ನಾವರ್ತನ್ತೇ" ಇತ್ಯಾದಿಶ್ರುತಿವಿರೋಧಃ ಇತಿ ಚೇತ್। ನ । 'ಇಮಂ' ಮಾನವಮ್ ಇತಿ ವಿಶೇಷಣಾತ್, "ತೇಷಾಮಿಹ ನ ಪುನರಾವೃತ್ತಿರಸ್ತಿ" ಇತಿ ಚ । ಯದಿ ಹಿ ಏಕಾನ್ತೇನೈವ ನಾವರ್ತೇರನ್ 'ಇಮಂ ಮಾನವಮ್', 'ಇಹ' ಇತಿ ಚ ವಿಶೇಷಣಮ್ ಅನರ್ಥಕಂ ಸ್ಯಾತ್।'ಇಮಮ್' 'ಇಹ' ಇತಿ ಆಕೃತಿ ಮಾತ್ರಮ್ ಉಚ್ಯತೇ ಇತಿ ಚೇತ್। ನ। ಅನಾವೃತ್ತಿಶಬ್ದೇನೈವ ನಿತ್ಯಾನಾವೃತ್ತ್ಯರ್ಥಸ್ಯ ಪ್ರತೀತತ್ವಾತ್, ಆಕೃತಿಕಲ್ಪನಾ ಅನರ್ಥಿಕಾ। ಅತಃ 'ಇಮಮ್', 'ಇಹ' ಇತಿ ಚ ವಿಶೇಷಣಾರ್ಥವತ್ತ್ವಾಯ ಅನ್ಯತ್ರಾऽऽವೃತ್ತಿಃ ಕಲ್ಪನೀಯಾ॥ -ಛಾಂ. ೫-೧೦-೨-೪೦೫.

(೨) ಕಾರ್ಯಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ ತತ್ರೈವ ಉತ್ಪನ್ನಸಮ್ಯಗ್ದರ್ಶನಾಃ ಸನ್ತಃ ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹ ಅತಃ ಪರಂ ಪರಿಶುದ್ಧಂ ವಿಷ್ಣೋಃ ಪರಮಂ ಪದಂ ಪ್ರತಿಪದ್ಯನ್ತೇ ಇತಿ। ಇತ್ಥಂ ಕ್ರಮಮುಕ್ತಿಃ, ಅನಾವೃತ್ತ್ಯಾದಿಶ್ರುತ್ಯಭಿಧಾನೇಭ್ಯೋऽಭ್ಯುಪಗನ್ತವ್ಯಾ । ನ ಹಿ ಅಞ್ಜಸೈವ ಗತಿಪೂರ್ವಿಕಾ ಪರಪ್ರಾಪ್ತಿಃ ಸಂಭವತಿ ಇತಿ ಉಪಪಾದಿತಮ್॥

-ಸೂ. ಭಾ. ೪-೩-೧೦-೫೭೬.

(೩) ಆಭೂತಸಂಪ್ಲವಸ್ಥಾನಸ್ಯ ಅಮೃತತ್ವೇನ ವಿವಕ್ಷಿತತ್ವಾತ್। ತತ್ರೈವೋಕ್ತಂ ಪೌರಾಣಿಕೈಃ "ಆಭೂತಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ"(ವಿ.ಪು. ೨-೮-೯೭) ಇತಿ॥

-ಛಾಂ. ಭಾ. ೫-೧೦-೨-೪೦೫.

(೪) ಪರಬ್ರಹ್ಮಸಾಮೀಪ್ಯಾತ್ ಅಪರಸ್ಯ ಬ್ರಹ್ಮಣಃ ತಸ್ಮಿನ್ನಪಿ ಬ್ರಹ್ಮಶಬ್ದಪ್ರಯೋಗೋ ನ ವಿರುಧ್ಯತೇ। ಪರಮೇವ ಹಿ ಬ್ರಹ್ಮ ವಿಶುದ್ಧೋಪಾಧಿಸಂಬನ್ಧಂ ಕ್ವಚಿತ್ ಕೈಶ್ಚಿತ್ ವಿಕಾರಧರ್ಮೈಃ ಮನೋಮಯತ್ವಾದಿಭಿಃ ಉಪಾಸನಾಯ ಉಪದಿಶ್ಯಮಾನಮ್ ಅಪರಮ್ ಇತಿ ಸ್ಥಿತಿಃ ॥

-ಸೂ. ಭಾ. ೪-೩-೯-೫೭೫.

(೫) ತಸ್ಮಾತ್ ''ತಯೋರ್ಧ್ವಮಾಯನ್ನಮೃತತ್ವಮೇತಿ'' ಇತಿ ಸಗುಣಬ್ರಹ್ಮೋಪಾಸಕಸ್ಯ ಪ್ರಾಣೈಃ ಸಹ ನಾಡ್ಯಾ ಗಮನಮ್, ಸಾಪೇಕ್ಷಮೇವ ಚ ಅಮೃತತ್ವಮ್, ನ ಸಾಕ್ಷಾನ್ಮೋಕ್ಷಃ ಇತಿ ಗಮ್ಯತೇ॥ -ಛಾಂ. ೫-೧೦-೨-೪೦೫.

(೬) ನನು ಲೋಕೇ ಗತಸ್ಯಾಪಿ ಗನ್ತವ್ಯತಾ ದೇಶಾನ್ತರವಿಶಿಷ್ಟಾ ದೃಷ್ಟಾ। ಯಥಾ ಪೃಥಿವೀಸ್ಥ ಏವ ಪೃಥಿವೀಂ ದೇಶಾನ್ತರದ್ವಾರೇಣ ಗಚ್ಛತೀತಿ । ತಥಾ ಅನನ್ಯತ್ವೇಽಪಿ ಬಾಲಸ್ಯ ಕಾಲಾನ್ತರವಿಶಿಷ್ಟಂ ವಾರ್ಧಕಂ ಸ್ವಾತ್ಮಭೂತಮೇವ ಗನ್ತವ್ಯಂ ದೃಷ್ಟಮ್। ತದ್ವತ್ ಬ್ರಹ್ಮಣೋಽಪಿ ಸರ್ವಶಕ್ತ್ಯುಪೇತತ್ವಾತ್ ಕಥಂಚಿತ್ ಗನ್ತವ್ಯತಾ ಸ್ಯಾತ್ ಇತಿ। ನ। ಪ್ರತಿಷಿದ್ಧಸರ್ವವಿಶೇಷತ್ವಾತ್ ಬ್ರಹ್ಮಣಃ। ''ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್'' (ಶ್ವೇ. ೬-೧೯), ''ಅಸ್ಥೂಲಮನಣ್ವ- ಹ್ರಸ್ವಮದೀರ್ಘಮ್'' (ಬೃ.೩-೮-೮), ''ನ ಬಾಹ್ಯಾಭ್ಯನ್ತರೋ ಹ್ಯಜಃ'' (ಮುಂ. ೨-೧-೨), ''ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ'' (ಬೃ.೪-೪-೨೫), ''ಸ ಏಷ ನೇತಿನೇತ್ಯಾತ್ಮಾ'' (ಬೃ. ೩-೯-೨೬) ಇತ್ಯಾದಿಶ್ರುತಿಸ್ಮೃತಿನ್ಯಾಯೇಭ್ಯೋ ನ ದೇಶಕಾಲಾದಿವಿಶೇಷಯೋಗಃ ಪರಮಾತ್ಮನಿ ಕಲ್ಪಯಿತುಂ ಶಕ್ಯತೇ, ಯೇನ ಭೂಪ್ರದೇಶವಯೋಽವಸ್ಥಾನ್ಯಾಯೇನ ಅಸ್ಯ ಗನ್ತವ್ಯತಾ ಸ್ಯಾತ್। ಭೂವಯಸೋಽಸ್ತು ಪ್ರದೇಶಾವಸ್ಥಾದಿವಿಶೇಷ- ಯೋಗಾತ್ ಉಪಪದ್ಯತೇ ದೇಶಕಾಲವಿಶಿಷ್ಟಾ ಗನ್ತವ್ಯತಾ॥ -ಸೂ. ಭಾ. ೪-೩-೧೪-೫೮೨.

೧೬೬. ಪರಬ್ರಹ್ಮವಿದ್ಯೆಯ ಪ್ರಕರಣವೆಂದು ವೇದಾಂತಿಗಳು ಒಪ್ಪಿರುವ ಸ್ಥಳಗಳಲ್ಲಿಯೂ ನಾಡಿಯಮೂಲಕವಾಗಿ ಉತ್ಕ್ರಾಂತಿಯೂ ಗತಿಯೂ ಅಮೃತತ್ವಪ್ರಾಪ್ತಿಯೂ ಉಕ್ತವಾಗಿರುತ್ತದೆ. ಉದಾಹರಣೆಗೆ ಕಠದಲ್ಲಿ (೨-೩-೧೬) ನಾಡಿಯ ಮೂಲಕವಾಗಿ ಗತಿಯನ್ನೂ ಅಮೃತತ್ವವನ್ನೂ ಹೇಳಿದೆ. ಛಾಂದೋಗ್ಯದಲ್ಲಿ ನಾಮರೂಪನಿರ್ವಹಣಕರ್ತೃವಾದ ಪರಬ್ರಹ್ಮವನ್ನು ಹೇಳಿ ''ಪ್ರಜಾಪತಿಯ ಸಭೆಯಾದ ಸ್ಥಾನವನ್ನು ಪಡೆಯುವೆನು'' ಎಂದು ಪ್ರಾಪ್ಯಫಲವನ್ನು ಹೇಳಿರುತ್ತದೆ. **ತೈತ್ತಿರೀಯ**ದಲ್ಲಿ ಬ್ರಹ್ಮವನ್ನು ಅರಿತವನು ಈ ಲೋಕವನ್ನು ಬಿಟ್ಟುಹೋಗಿ ಅನ್ನಮಯಾದಿಕ್ರಮದಿಂದ ಆನಂದಮಯಾತ್ಮನನ್ನು ಪಡೆದುಕೊಳ್ಳುತ್ತಾನೆಂದು ಹೇಳಿದೆ. ಇದಲ್ಲದೆ ಪರಬ್ರಹ್ಮಜ್ಞಾನದಿಂದ ಆತ್ಮಸ್ವರೂಪವನ್ನು ಪಡೆಯುತ್ತಾರೆಂದು ಹೇಳುವ ಪ್ರಕರಣದಲ್ಲಿಯೇ ಛಾಂದೋಗ್ಯದಲ್ಲಿ ತನಗೆ ಬೇಕಾದದ್ದನ್ನು ತಿನ್ನುತ್ತಿರುವದು, ಆಡುತ್ತಿರುವದು, ದಿಂದ ಸಿದ್ಧವಾದ ಸ್ತ್ರ್ಯಾದಿಗಳೊಡನೆ ಸುಖಿಸುತ್ತಿರುವದು - ಮುಂತಾದ ಐಶ್ವರ್ಯವನ್ನು ಹೇಳಿದೆ. ಆದ್ದರಿಂದ ಗತ್ಯುತ್ಕ್ರಾಂತ್ಯೈಶ್ವರ್ಯವನ್ನು ಹೇಳಿರುವದೆಲ್ಲ

ಸಗುಣಬ್ರಹ್ಮವಿಷಯವೆಂದು ವಾದಿಸುವದಕ್ಕೆ ಬರುವಂತಿಲ್ಲವಲ್ಲ! -ಎಂದು ಕೆಲವರಿಗೆ ಅನ್ನಿಸಬಹುದು.

ಆದರೆ ಇವಕ್ಕೆಲ್ಲ ನಿರ್ಗುಣವಿದ್ಯೆಗೂ ಹೊಂದುವಂತೆ ಅರ್ಥವನ್ನು ಮಾಡುವದಕ್ಕೆ ಬರುತ್ತದೆ. ಹೇಗೆಂದರೆ ಕಠದಲ್ಲಿ ಹೇಳಿರುವದು ಅಪರಬ್ರಹ್ಮದ ಉಪಾಸಕರಿಗೆ ಆಗುವ ಗತಿಯೇ; ಪ್ರಕೃತವಾದ ಬ್ರಹ್ಮವಿದ್ಯೆಯನ್ನು ಹೊಗಳುವದಕ್ಕೆ ಅದನ್ನು ಅಲ್ಲಿ ಹೇಳಿರುತ್ತದೆ. ಅಪರವಿದ್ಯೆಯಿಂದ ಸುಷುಮ್ನಾನಾಡಿಯ ಮೂಲಕವಾಗಿ ಉತ್ಕ್ರಾಂತಿಯೂ ಅಮೃತತ್ವವೂ ದೊರಕುವದೆಂದು ಅದನ್ನು ಹೊಗಳುವದಕ್ಕಾಗಿ ಮಿಕ್ಕ ನಾಡಿಗಳ ಮೂಲಕ ಉತ್ಕ್ರಮಣವಾದವರಿಗೆ ಆಗುವ ಸಂಸಾರಗತಿಯನ್ನು ತಿಳಿಸುವಂತೆ ಪರವಿದ್ಯೆಯನ್ನು ಹೊಗಳುವದಕ್ಕಾಗಿ ಅಪರವಿದ್ಯೆಯಿಂದಾಗುವ ಆಪೇಕ್ಷಿಕಾಮೃತತ್ವವನ್ನು ಹೇಳುವದು ತಪ್ಪಲ್ಲ. ಅಥವಾ ಕಠದಲ್ಲಿ ಹೇಳಿರುವದು ಅಪರವಿದ್ಯೆಯಾದ ಅಗ್ನಿವಿದ್ಯೆಯ ಫಲದ ಉಪಸಂಹಾರವೆಂದಾದರೂ ಕಲ್ಪಿಸಬಹುದು. ಛಾಂದೋಗ್ಯದಲ್ಲಿರುವದು ಅಪರವಿದ್ಯೆಯ ಉಪಸಂಹಾರವೇ ಆದ್ದರಿಂದ ಅಲ್ಲಿ ಗತಿಯನ್ನು ಹೇಳಿರುವದು ದೋಷವಲ್ಲ. ಅಲ್ಲಿ ಪರಬ್ರಹ್ಮಸ್ವರೂಪವನ್ನು ಹೇಳುವ ವಾಕ್ಯವನ್ನು ಬೇರೆಯ ಪ್ರಕರಣವಾಗಿ ಭಾವಿಸುವದರಲ್ಲಿ ಯಾವ ವಿರೋಧವೂ ಇಲ್ಲ. ''ನಾನು ಬ್ರಾಹ್ಮಣರ ಯಶಸ್ಸಾಗುವೆನು'' ಎಂದು ಸರ್ವಾತ್ಮತ್ವವನ್ನು ಅಲ್ಲಿ ಹೇಳಿರುವದೂ ಸರ್ವಕರ್ಮ, ಸರ್ವಕಾಮ -ಎಂಬಂತೆ ಆಗಬಹುದು. ತೈತ್ತಿರೀಯವಾಕ್ಯದಲ್ಲಿ ಈ ಲೋಕವನ್ನು ಬಿಟ್ಟು ಎಂದರೆ ದೃಷ್ಟಾದೃಷ್ಟವಿಷಯಗಳಿಂದ ವಿರಕ್ತನಾಗಿ ಎಂದರ್ಥ; ಆದ್ದರಿಂದಲೇ ಈ ಶ್ರುತಿಯಲ್ಲಿ ಬ್ರಹ್ಮಪ್ರಾಪ್ತಿಯನ್ನು ಅದೃಶ್ಯತ್ವಾದಿಗುಣಗಳಿಂದ ವರ್ಣಿಸಿರುತ್ತದೆ. ಆದ್ದರಿಂದ ಇಲ್ಲಿಯೂ ಉತ್ಕ್ರಾಂತಿಗತಿಗಳನ್ನು ಹೇಳಿಲ್ಲ. ಇನ್ನು ಪರಬ್ರಹ್ಮಜ್ಞಾನದ ಪ್ರಕರಣದಲ್ಲಿ ಐಶ್ವರ್ಯವನ್ನು ವರ್ಣಿಸಿರುವದು ಹೇಗೆ ಸರಿ?- ಎಂದರೆ ಜ್ಞಾನಿಗೆ ಯಾವ ದುಃಖವೂ ಇಲ್ಲ ಎಂಬ ಸ್ತುತಿಗಾಗಿ ಈ ವರ್ಣನೆಯು ಬಂದಿರುತ್ತದೆ. ಅಥವಾ ಮುಕ್ತನು ಸರ್ವಾತ್ಮನಾಗಿರುವದರಿಂದ ದೇವತೆಗಳಿಗಾಗಲಿ ಯೋಗಿಗಳಿಗಾಗಲಿ ಇರುವ ಸಿದ್ಧಿಯೂ ಮುಕ್ತನದೇ ಎಂದು ಸರ್ವಾತ್ಮಭಾವವನ್ನು ಹೊಗಳುವದಕ್ಕೆ ಈ ಐಶ್ವರ್ಯವನ್ನು ಪರವಿದ್ಯಾಪ್ರಕರಣದಲ್ಲಿ ಹೇಳಿದೆ ಎಂದೂ ಕಲ್ಪಿಸಬಹುದಾಗಿದೆ.

(೧) ಪರವಿದ್ಯಾಪ್ರಕರಣೇಽಪಿ ಚ ತತ್ಸ್ತುತ್ಯರ್ಥಂ ವಿದ್ಯಾನ್ತರಾಶ್ರಯಗತ್ಯನುಕೀರ್ತನಮ್ ಉಪಪದ್ಯತೇ। ''ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ'' (ಛಾಂ. ೮-೬-೬) ಇತಿವತ್॥

-ಸೂ. ಭಾ. ೪-೩-೧೪-೫೮೧.

(೨) ಯೇ ಪುನಃ ಮನ್ದಬ್ರಹ್ಮವಿದಃ ವಿದ್ಯಾನ್ತರಶೀಲಿನಶ್ಚ ಬ್ರಹ್ಮಲೋಕಭಾಜಃ ಯೇ ಚ ತದ್ವಿಪರೀತಾಃ ಸಂಸಾರಭಾಜಃ, ತೇಷಾಮೇವ ಗತಿವಿಶೇಷಃ ಉಚ್ಯತೇ ಪ್ರಕೃತೋತ್ಕೃಷ್ಟವಿದ್ಯಾಫಲಸ್ತುತಯೇ। ಕಿಂ ಚಾನ್ಯತ್, ಅಗ್ನಿವಿದ್ಯಾ ಪೃಷ್ಟಾ ಪ್ರತ್ಯುಕ್ತಾ ಚ। ತಸ್ಯಾಶ್ಚ ಫಲಪ್ರಾಪ್ತಿಪ್ರಕಾರೋ ವಕ್ತವ್ಯಃ ಇತಿ ಮನ್ತ್ರಾರಮ್ಭಃ॥ - ಕ. ಭಾ. ೨-೩-೧೬-೧೮೩.

(೩) ''ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ'' (ಛಾಂ.೮-೧೪-೧) ಇತಿ ತು ಪೂರ್ವವಾಕ್ಯವಿಚ್ಛೇದೇನ ಕಾರ್ಯೇಽಪಿ ಪ್ರತಿಪತ್ತ್ಯಭಿಸನ್ಧಿಃ ನ ವಿರುಧ್ಯತೇ। ಸಗುಣೇಽಪಿ ಚ ಬ್ರಹ್ಮಣಿ ಸರ್ವಾತ್ಮತ್ವಸಂಕೀರ್ತನಂ 'ಸರ್ವಕರ್ಮಾ ಸರ್ವಕಾಮಃ' ಇತ್ಯಾದಿವತ್ ಅವಕಲ್ಪತೇ। ತಸ್ಮಾತ್ ಅಪರವಿಷಯಾ ಏವ ಗತಿಶ್ರುತಯಃ॥ -ಸೂ. ಭಾ. ೪-೩-೧೪-೫೮೧.

(೪) ಅಸ್ಮಾಲ್ಲೋಕಾತ್ ಪ್ರೇತ್ಯ। ದೃಷ್ಟಾದೃಷ್ಟೇಷ್ಟವಿಷಯಸಮುದಾಯೋ ಹಿ ಅಯಂ ಲೋಕಃ। ತಸ್ಮಾತ್ ಅಸ್ಮಾತ್ ಲೋಕಾತ್ ಪ್ರೇತ್ಯ ಪ್ರತ್ಯಾವೃತ್ಯ ನಿರಪೇಕ್ಷೋ ಭೂತ್ವಾ ಏತಂ ಯಥಾ ವ್ಯಾಖ್ಯಾತಂ....... ಆನನ್ದಮಯಮ್ ಆತ್ಮಾನಮ್ ಉಪಸಂಕ್ರಾಮತಿ। ಅಥಾದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿನ್ದತೇ॥ -ತೈ. ಭಾ. ೨-೮-೨೧೦.

(೫) ಅತ ಏವ ಚ ಜಕ್ಷಣಾದಿಸಂಕೀರ್ತನಮಪಿ ದುಃಖಾಭಾವಮಾತ್ರಾಭಿಪ್ರಾಯಂ ಸ್ತುತ್ಯರ್ಥಮ್' ''ಆತ್ಮರತಿಃ'' ಇತ್ಯಾದಿವತ್। ನ ಹಿ ಮುಖ್ಯಾನ್ಯೇವ ರತಿಕ್ರೀಡಾಮಿಥುನಾನಿ ಆತ್ಮನಿಮಿತ್ತಾನಿ ಶಕ್ಯನ್ತೇ ವರ್ಣಯಿತುಮ್। ದ್ವಿತೀಯವಿಷಯತ್ವಾತ್ ತೇಷಾಮ್॥

-ಸೂ. ಭಾ. ೪-೪-೬-೫೯೬.

(೬) ''ಜಕ್ಷತ್ ಕ್ರೀಡನ್'' ಇತ್ಯಾದಿಶ್ರುತಿವಿರೋಧಃ ಅಸಂವೇದ್ಯತ್ವೇ ಇತಿ ಚೇತ್। ನ। ಸರ್ವಾತ್ಮೈಕತ್ವೇ ಯಥಾಪ್ರಾಪ್ತಾನುವಾದಿತ್ವಾತ್। ಮುಕ್ತಸ್ಯ ಸರ್ವಾತ್ಮಭಾವೇ ಸತಿ ಯತ್ರ ಕ್ವಚಿತ್ ಯೋಗಿಷು ದೇವೇಷು ವಾ ಜಕ್ಷಣಾದಿ ಪ್ರಾಪ್ತಮ್' ತದ್ ಯಥಾಪ್ರಾಪ್ತಮೇವ ಅನೂದ್ಯತೇ, 'ತತ್ ತಸ್ಯೈವ ಸರ್ವಾತ್ಮಭಾವಾತ್' ಇತಿ ಸರ್ವಾತ್ಮಭಾವಸ್ತುತಯೇ॥ -ಬೃ. ಭಾ. ೩-೯-೨೮-೧೩೯.

೧೬೭. ಪರಬ್ರಹ್ಮವು ಪ್ರಾಪ್ಯವೆಂಬರ್ಥದಲ್ಲಿಯೇ ಉತ್ಕ್ರಾಂತಿ, ಗತಿ, ಐಶ್ವರ್ಯ -ಮುಂತಾದವುಗಳನ್ನು ಶ್ರುತಿಯಲ್ಲಿ ಹೇಳಿಲ್ಲವೆಂಬುದಕ್ಕೆ ಮೋಕ್ಷಾವಸ್ಥೆಯೆಂದರೆ ನಮ್ಮ ಆತ್ಮನಾದ ಬ್ರಹ್ಮವೇ ಎಂಬ ಯುಕ್ತಿ (೧೬೧, ೧೬೩), ಬ್ರಹ್ಮವು ಸರ್ವಗತವೆಂಬ ಯುಕ್ತಿ (೧೬೩), ಬ್ರಹ್ಮವು ನಿರ್ವಿಶೇಷವೆಂಬ ಯುಕ್ತಿ (೧೬೪), ಸಾಧನದಿಂದ ಪಡೆದದ್ದು ಕೃತಕವಾಗಿ ಅನಿತ್ಯವಾಗಿರುವದೆಂಬ ಯುಕ್ತಿ (೧೬೫) -ಇವೇ ಮುಂತಾದ ಅನುಭವ ಸಮ್ಮತವಾದ ಯುಕ್ತಿಗಳನ್ನು ಹೇಳಿರುತ್ತೇವೆ. ಇದರ ಜೊತೆಗೆ ಅವನ ಪ್ರಾಣಗಳು ಉತ್ಕ್ರಾಂತಿಯಾಗುವದಿಲ್ಲ, 'ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ', 'ಇಲ್ಲಿಯೇ ಬ್ರಹ್ಮವನ್ನು ಪಡೆಯುತ್ತಾನೆ' -ಮುಂತಾದ ಶ್ರುತಿಗಳು ಸ್ಪಷ್ಟವಾಗಿಯೇ ಪ್ರಾಣೋತ್ಕ್ರಮಣನಿಷೇಧವನ್ನೂ ಇಲ್ಲಿಯೇ ಆಗುವ ಸದ್ಯೋಮುಕ್ತಿಯನ್ನೂ ಹೇಳುತ್ತಿವೆ. ಆದ್ದರಿಂದಲೂ ಉತ್ಕ್ರಾಂತ್ಯಾದಿಗಳು ಅಪರಬ್ರಹ್ಮದ ವಿಷಯವೇ.

(೧) ನಿರಸ್ತಾಶೇಷವಿಶೇಷವ್ಯಾಪಿಬ್ರಹ್ಮಾತ್ಮಪ್ರತಿಪತ್ತ್ಯಾ ಪ್ರಭಿನ್ನಸಮಸ್ತಾವಿದ್ಯಾದಿಗ್ರನ್ಥೇಃ ಜೀವತ ಏವ ಬ್ರಹ್ಮಭೂತಸ್ಯ ವಿದುಷಃ ನ ಗತಿರ್ವಿದ್ಯತೇ। ''ಅತ್ರ ಬ್ರಹ್ಮ ಸಮಶ್ನುತೇ'' (ಕ. ೨-೩-೧೬) ಇತ್ಯುಕ್ತತ್ವಾತ್ ''ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ'' (ಬೃ. ೪-೪-೬) ಇತಿ ಶ್ರುತ್ಯನ್ತರಾಚ್ಚ॥ -ಕ. ಭಾ. ೨-೩-೧೬-೧೮೩.

(೨) ನ ಚ ಬ್ರಹ್ಮವಿದಃ ಸರ್ವಗತಬ್ರಹ್ಮಾತ್ಮಭೂತಸ್ಯ ಪ್ರಕ್ಷೀಣಕಾಮಕರ್ಮಣಃ ಉತ್ಕ್ರಾನ್ತಿರ್ಗತಿರ್ವಾ ಉಪಪದ್ಯತೇ। ನಿಮಿತ್ತಾಭಾವಾತ್। ''ಅತ್ರ ಬ್ರಹ್ಮ ಸಮಶ್ನುತೇ'' (ಬೃ. ೪-೪-೭), ಇತಿ ಚೈವಂಜಾತೀಯಕಾಃ ಶ್ರುತಯೋ ಗತ್ಯುತ್ಕ್ರಾನ್ತ್ಯೋರಭಾವಂ ಸೂಚಯನ್ತಿ॥

-ಸೂ. ಭಾ. ೪-೨-೧೩-೫೫೫.

(೩) ಆಕಾಶೇ ಹೃತ್ಪುಂಡರೀಕಮಧ್ಯಸ್ಥೇ ಪ್ರತಿಷ್ಠಿತ ಇವೋಪಲಭ್ಯತೇ। ನ ಹಿ ಆಕಾಶವತ್ಸರ್ವಗತಸ್ಯ ಗತಿಃ, ಆಗತಿಃ ಪ್ರತಿಷ್ಠಾ ವಾ ಅನ್ಯಥಾ ಸಂಭವತಿ॥ -ಮುಂ. ಭಾ. ೨-೨-೭-೮೦.

೧೬೮. ಮುಕ್ತನ ಸರ್ವಾತ್ಮಭಾವವನ್ನು ಹೊಗಳುವದಕ್ಕಾಗಿ ಯೋಗಿಗಳೇ ಮುಂತಾದವರಲ್ಲಿ ಪ್ರಾಪ್ತವಾಗಿರುವ ಐಶ್ವರ್ಯವನ್ನು ವರ್ಣಿಸಿದೆ ಎನ್ನುವದಾದರೆ ಸ್ಥಾವರಾದಿಪ್ರಾಣಿಗಳಲ್ಲಿರುವ ದುಃಖವೂ ಸರ್ವಾತ್ಮನಾದ ಮುಕ್ತನಿಗೇ ಎಂದಾಗುವ ದಿಲ್ಲವೆ?- ಎಂದು ಶಂಕಿಸುವಹಾಗಿಲ್ಲ. ಏಕೆಂದರೆ ಮುಕ್ತನು ಎಲ್ಲಕ್ಕೂ ಆತ್ಮನಾಗಿರುವದ ರಿಂದ ದುಃಖಕ್ಕೂ ಆತ್ಮ ನಾಗಿರುತ್ತಾನೆ. ಜೀವರಲ್ಲಿ ಕಾಣಬರುವ ಸುಖದುಃಖಗಳೆಲ್ಲವೂ ಅವಿದ್ಯೆಯಿಂದ ಅಧ್ಯಾರೋಪಿತವಾಗಿರುತ್ತವೆ; ಜ್ಞಾನಿಗೆ ಆತ್ಮಸ್ವರೂಪದ ಜ್ಞಾನದಿಂದ ಈ ಅಧ್ಯಾರೋಪವು ಬಾಧಿತವಾಗಿರುತ್ತದೆ. ಆದ್ದರಿಂದ ಅವನಿಗೆ ಯಾವ ದುಃಖವೂ ಆಗುವಂತಿಲ್ಲ. ಆದರೂ ಲೋಕದಲ್ಲಿ ಜನರಿಗೆ ಆಗುವ ವಿಷಯಾನಂದವೆಂಬುದೆಲ್ಲ ನಿಜವಾಗಿ ಆನಂದಸ್ವರೂಪನಾದ ಆತ್ಮನದೇ ಆಗಿರುವದರಿಂದ (ತೈ.ಭಾ. ೨-೫) ಯೋಗಿಗಳು, ದೇವತೆಗಳು- ಮುಂತಾದ ಸಿದ್ಧಸಂಕಲ್ಪರಿಗೆ ಆಗುವ ಆನಂದವು ಆತ್ಮಸ್ವರೂಪದಲ್ಲಿ ನಿಂತಿರುವ ಜ್ಞಾನಿಯದೇ ಎಂದು ಮೋಕ್ಷವನ್ನು ಹೊಗಳುವದಕ್ಕಾಗಿ ಹೇಳುವದು ತಪ್ಪಾಗುವದಿಲ್ಲ.

(೧) ಯೋಗ್ಯಾದಿಷು ಯಥಾಪ್ರಾಪ್ತಜಕ್ಷಣಾದಿವತ್ ಸ್ಥಾವರಾದಿಷು(ನ್ತೇಷು?) ಯಥಾ ಪ್ರಾಪ್ತದುಃಖಿತ್ವಮಪಿ ಇತಿ ಚೇತ್। ನ। ನಾಮರೂಪಕೃತಕಾರ್ಯಕರಣೋಪಾಧಿಸಂಪರ್ಕಜನಿತ ಭ್ರಾನ್ತ್ಯಧ್ಯಾರೋಪಿತತ್ವಾತ್ ಸುಖಿತ್ವದುಃಖಿತ್ವಾದಿವಿಶೇಷಸ್ಯ ಇತಿ ಪರಿಹೃತಮೇತತ್ಸರ್ವಮ್ ॥

-ಬೃ. ಭಾ. ೩-೯-೨೮-೧೩೯.

(೨) ನನು ಸರ್ವಾತ್ಮತ್ವೇ ದುಃಖಸಂಬನ್ಧೋಽಪಿ ಸ್ಯಾತ್ ಇತಿ ಚೇತ್। ನ। ದುಃಖಸ್ಯಾಪಿ ಆತ್ಮತ್ವೋಪಗಮಾತ್ ಅವಿರೋಧಃ। ಆತ್ಮನಿ ಅವಿದ್ಯಾಕಲ್ಪನಾನಿಮಿತ್ತಾನಿ ದುಃಖಾನಿ ರಜ್ಜ್ವಾಮಿವ ಸರ್ಪಾದಿಕಲ್ಪನಾನಿಮಿತ್ತಾನಿ। ಸಾ ಚ ಅವಿದ್ಯಾ ಅಶರೀರಾತ್ಮೈಕತ್ವಸ್ವರೂಪದರ್ಶನೇನ ದುಃಖನಿಮಿತ್ತಾ ಉಚ್ಛಿನ್ನಾ ಇತಿ ದುಃಖಸಂಬನ್ಧಾಶಙ್ಕಾ ನ ಸಂಭವತಿ॥ - ಛಾಂ. ಭಾ. ೮-೧೨-೧-೬೭೦.

೧೬೯. ಪರಬ್ರಹ್ಮವನ್ನು ಅರಿತವನಿಗೆ ಒಪ್ಪದ ಉತ್ಕ್ರಾಂತಿ, ಗತಿ, ದೇಶ ವಿಶೇಷಗಮನ, ಐಶ್ವರ್ಯಪ್ರಾಪ್ತಿ- ಇವುಗಳೆಲ್ಲ ಅಪರಬ್ರಹ್ಮಕ್ಕಾದರೂ ಹೇಗೆ ಸಲ್ಲುತ್ತವೆ? ಪರಬ್ರಹ್ಮವೇ ಉಪಾಧಿಯಿಂದ ಅಪರಬ್ರಹ್ಮವೆನಿಸುವದೆಂದು ಸಿದ್ಧಾಂತಿಗಳು ಹೇಳುತ್ತಾರಲ್ಲವೆ? ಹೀಗಿರುವಲ್ಲಿ ಒಂದಕ್ಕೆ ಉತ್ಕ್ರಾಂತ್ಯಾದಿಗಳು ಹೊಂದುತ್ತವೆ ಎಂದೂ ಇನ್ನೊಂದಕ್ಕೆ ಹೊಂದುವದಿಲ್ಲವೆಂದೂ ತಾರತಮ್ಯವನ್ನು ಕಲ್ಪಿಸುವದಕ್ಕೆ ಅವಕಾಶವಾದರೂ ಎಲ್ಲಿದೆ? -ಎಂಬುದೊಂದು ಶಂಕೆಯು ಎದ್ದುಕೊಳ್ಳಬಹುದು. ಇದಕ್ಕೆ ಒಂದೇ ಸಮಾಧಾನವು: ಪರಮಾರ್ಥವಾಗಿ ಹೊಂದದೆ ಇರುವದುಕೂಡ ಅವಿದ್ಯಾದೃಷ್ಟಿಯಿಂದ ಹೊಂದಬಹುದೆಂಬುದರಲ್ಲಿ ಆಶ್ಚರ್ಯ ವೇನೂ ಇಲ್ಲ. ಜೀವನು ನಿಜವಾಗಿ ಈಶ್ವರನೇ ಆಗಿದ್ದರೂ ಅವಿದ್ಯಾದಿಗಳಿಂದ ಅವನ ಜ್ಞಾನೈಶ್ವರ್ಯವು ಮರೆಯಾಗಿರುತ್ತದೆ. ವಿದ್ಯೆಯಿಂದ ಅದು ಹೊರಬೀಳುತ್ತದೆ. ಅವಿದ್ಯಾವಿಷಯದಲ್ಲಿಯೇ ಜೀವೇಶ್ವರವಿಭಾಗವು ಉಪಾಧಿವಶದಿಂದ ಕಾಣುತ್ತಿರುತ್ತದೆ ಎಂದು ಹಿಂದೆ (೧೩೪) ತಿಳಿಸಿಕೊಟ್ಟಿರುತ್ತೇವೆ. ಇದಲ್ಲದೆ ಜೀವನೆಂದರೆ ಪ್ರಾಣಧಾರಣಮಾಡಿಕೊಂಡಿರುವವನು. ಯಾವನು ನಾನು ನಿರ್ವಿಶೇಷನಾದ ಪರಮಾತ್ಮನೇ ಎಂದು ಅರಿತುಕೊಂಡಿರುತ್ತಾನೋ ಅವನಿಗೆ ಪ್ರಾಣಗಳಾಗಲಿ, ಪ್ರಾಣಸಹಿತವಾಗಿ ಕರ್ಮಫಲವನ್ನು ಅನುಭವಿಸುವದಕ್ಕೆ ಎಲ್ಲಿಗಾದರೂ ಹೋಗುವದಾಗಲಿ ಸಂಭವಿಸುವದಿಲ್ಲ. ಪ್ರಾಣಗಳಿಲ್ಲದವನು ಜೀವನೇ ಅಲ್ಲ; ಅವಿದ್ಯೆಯಿಂದ ಪ್ರಾಣದ ಸಂಬಂಧವು ತನಗಿದೆ ಎಂದು ತಿಳಿದುಕೊಂಡಿರುವದೇ ಜೀವನ ಜೀವತ್ವವು. ಪರಮಾರ್ಥವಾಗಿ ಬ್ರಹ್ಮವು ಸರ್ವಗತವಾಗಿರುವದರಿಂದ ಪರಬ್ರಹ್ಮವನ್ನು ಪಡೆಯುವದೆಂಬುದಾಗಲಿ ಅದಕ್ಕಾಗಿ ಗತಿಯಾಗಲಿ ಹೊಂದುವದಿಲ್ಲ; ಆದರೆ ಅಪರಬ್ರಹ್ಮವೆಂಬುದು ಒಂದಾನೊಂದು ಲೋಕದಲ್ಲಿರುವ ಹಿರಣ್ಯಗರ್ಭನ ಹೆಸರು, ಆದ್ದರಿಂದ ಅದರ ವಿಷಯದಲ್ಲಿ ಗತಿಯುಂಟಾಗಬಹುದು. ಪರಬ್ರಹ್ಮವು ಜೀವನ ಆತ್ಮನೇ ಆಗಿರುವದರಿಂದ ಪರಮಾತ್ಮನ ಐಶ್ವರ್ಯವನ್ನು ಮುಖ್ಯಾರ್ಥದಲ್ಲಿ ಪಡೆದುಕೊಳ್ಳುವದೆಂಬುದು ಹೊಂದುವದಿಲ್ಲ; ಆದರೆ ಕಾರ್ಯ ಬ್ರಹ್ಮಲೋಕವನ್ನು ಪಡೆಯುವದು ಸಗುಣವಿದ್ಯೆಯ ಫಲವಾಗಿ ಸಿಕ್ಕುವ ಬೇರೊಂದು ಅವಸ್ಥೆಯಾಗಿರುವದರಿಂದ ಐಶ್ವರ್ಯಪ್ರಾಪ್ತಿಯೂ ಅದಕ್ಕೆ ಹೊಂದುತ್ತದೆ. ಹೀಗೆ ಬ್ರಹ್ಮವು ಒಂದೇ ಆದರೂ ಅವಿದ್ಯಾವಿಷಯದಲ್ಲಿರುವ ಜೀವೇಶ್ವರವಿಭಾಗವನ್ನು ಒಪ್ಪಿದಾಗ ಅದೇ ಬ್ರಹ್ಮವು ಅಪರವೆಂದಾಗಬಹುದು; ಅದರ ವಿಷಯದಲ್ಲಿ ಜೀವನಿಗೆ ಗತ್ಯಾದಿಗಳೂ ಆಗಬಹುದಾಗಿದೆ.

(೧) ಸೋಽಪಿ ತು ಜೀವಸ್ಯ ಜ್ಞಾನೈಶ್ವರ್ಯತಿರೋಭಾವೋ ದೇಹಯೋಗಾತ್ ದೇಹೇನ್ದ್ರಿಯಮನೋಬುದ್ಧಿವಿಷಯವೇದನಾದಿಯೋಗಾತ್ ಭವತಿ। ಅಸ್ತಿಚಾತ್ರ ಉಪಮಾ । ಯಥಾಗ್ನೇರ್ದಹನಪ್ರಕಾಶನಸಂಪನ್ನಸ್ಯಾಪಿ ಅರಣಿಗತಸ್ಯ ದಹನಪ್ರಕಾಶನೇ ತಿರೋಹಿತೇ ಭವತಃ।

ಯಥಾ ವಾ ಭಸ್ಮಚ್ಛನ್ನಸ್ಯ। ಏವಮವಿದ್ಯಾಪ್ರತ್ಯುಪಸ್ಥಾಪಿತನಾಮರೂಪಕೃತದೇಹಾದ್ಯುಪಾಧಿಯೋಗಾತ್ ತತ್ ಅವಿವೇಕಭ್ರಮಕೃತೋ ಜೀವಸ್ಯ ಜ್ಞಾನೈಶ್ವರ್ಯತಿರೋಭಾವಃ। ವಾಶಬ್ದಃ ಜೀವೇಶ್ವರಯೋರನ್ಯತ್ವಾಶಙ್ಕಾವ್ಯಾವೃತ್ತ್ಯರ್ಥಃ॥ -ಸೂ. ಭಾ. ೩-೨-೬-೨೬೧.

(೨) ಯೋ ಹಿ ಸುಷುಪ್ತಾವಸ್ಥಮಿವ ನಿರ್ವಿಶೇಷಮ್ ಅದ್ವೈತಮ್ ಅಲುಪ್ತಚಿದ್ರೂಪಜ್ಯೋತಿಃಸ್ವಭಾವಮ್ ಆತ್ಮಾನಂ ಪಶ್ಯತಿ, ತಸ್ಯೈವ ಅಕಾಮಯಮಾನಸ್ಯ ಕರ್ಮಾಭಾವೇ ಗಮನಕಾರಣಾಭಾವಾತ್ ಪ್ರಾಣಾ ವಾಗಾದಯಃ ನೋತ್ಕ್ರಾಮನ್ತಿ॥ -ಬೃ. ಭಾ. ೪-೪-೬-೨೭೦.

(೩) ನ ಚ ಪ್ರಾಣೈರ್ವಿಯುಕ್ತಸ್ಯ ಗತಿರುಪಪದ್ಯತೇ ಜೀವತ್ವಂ ವಾ। ಸರ್ವಗತತ್ವಾತ್ ಸದಾತ್ಮನೋ ನಿರವಯವತ್ವಾತ್। ಪ್ರಾಣಸಂಬನ್ಧಮಾತ್ರಮೇವ ಹಿ ಅಗ್ನಿವಿಸ್ಫುಲಿಙ್ಗವತ್ ಜೀವತ್ವಭೇದಕಾರಣಮ್ ಇತ್ಯತಃ ತದ್ವಿಯೋಗೇ ಜೀವತ್ವಂ ಗತಿರ್ವಾ ನ ಶಕ್ಯಾ ಪರಿಕಲ್ಪಯಿತುಂ ಶ್ರುತಯಶ್ಚೇತ್ ಪ್ರಮಾಣಮ್॥ -ಛಾಂ. ೫-೧೦-೨-೪೦೫.

(೪) ಅಸ್ಯ ಹಿ ಕಾರ್ಯಬ್ರಹ್ಮಣಃ ಗನ್ತವ್ಯತ್ವಮ್ ಉಪಪದ್ಯತೇ ಪ್ರದೇಶವತ್ತ್ವಾತ್। ನ ತು ಪರಸ್ಮಿನ್ ಬ್ರಹ್ಮಣಿ ಗನ್ತೃತ್ವಂ ಗನ್ತವ್ಯತ್ವಂ ಗತಿರ್ವಾ ಕಲ್ಪತೇ। ಸರ್ವಗತತ್ವಾತ್ ಪ್ರತ್ಯಗಾತ್ಮತ್ವಾಚ್ಚ ಗನ್ತೄಣಾಮ್॥ -ಸೂ. ಭಾ. ೪-೩-೭-೫೭೩.

(೫) ಸಗುಣವಿದ್ಯಾವಿಪಾಕಾವಸ್ಥಾನಂ ತು ಏತತ್ ಸ್ವರ್ಗಾದಿವತ್ ಅವಸ್ಥಾನ್ತರಂ ಯತ್ರೈತದೈಶ್ವರ್ಯಮ್ ಉಪವರ್ಣ್ಯತೇ। ತಸ್ಮಾದದೋಷಃ॥ -ಸೂ. ಭಾ. ೪-೪-೧೬-೬೦೬.

೧೭೦. ಉಪಾಸನೆಯಿಂದ ಆಪೇಕ್ಷಿಕಮುಕ್ತಿಯನ್ನು ಪಡೆದುಕೊಂಡವರನ್ನೂ ತತ್ತ್ವಜ್ಞಾನದಿಂದ ಬ್ರಹ್ಮಸ್ವರೂಪವನ್ನು ಪಡೆದುಕೊಂಡವರನ್ನೂ 'ಮುಕ್ತರು' ಎಂದೇ ಕರೆಯುವ ರೂಢಿಯು ಅಧ್ಯಾತ್ಮಶಾಸ್ತ್ರಗಳಲ್ಲಿರುತ್ತದೆ. ಆದರೆ ಸಗುಣವಿದ್ಯೆಯಿಂದ ಬಂದ ಮುಕ್ತಿಯೂ ಅವಿದ್ಯಾಭೂಮಿಯಲ್ಲಿಯೇ ಇರುತ್ತದೆಯಾದ್ದರಿಂದ ಅದರಲ್ಲಿ ಮುಕ್ತರಿಗೆ ಶರೀರೇಂದ್ರಿಯಗಳು ಇರುತ್ತವೆ, ಮನಸ್ಸೂ ಇರುತ್ತದೆ; ಅನೇಕಶರೀರಗಳನ್ನು ಪಡೆದುಕೊಳ್ಳುವದೇ ಮುಂತಾದ ಐಶ್ವರ್ಯವಿರುತ್ತದೆ, ಪರಮೇಶ್ವರನಿಗೆ ಸಮಾನವಾದ ಭೋಗವಿರುತ್ತದೆ. ಬ್ರಹ್ಮಲೋಕದಲ್ಲಿ ಜ್ಞಾನವನ್ನು ಪಡೆದು ಅಪುನರಾವೃತ್ತಿಯನ್ನು ಪಡೆಯುವ ಯೋಗ್ಯತೆಯು ಇರುತ್ತದೆ. ಅವರಿಗೆ ಪರಮೇಶ್ವರನಿಗಿರುವ ಜಗತ್ಸೃಷ್ಟಿಸ್ಥಿತಿಕರ್ತೃತ್ವವು ಮಾತ್ರ ಇರುವದಿಲ್ಲ. ನಿರ್ಗುಣವಿದ್ಯೆಯಿಂದಾದ ಮುಕ್ತಿಯಲ್ಲಿಯೋ ಎಂದರೆ ನಿರ್ವಿಶೇಷವಾದ ಅದ್ವೈತಬ್ರಹ್ಮತ್ವ ಪ್ರಾಪ್ತಿಯೇ ಆಗಿಬಿಟ್ಟಿರುತ್ತದೆ. ಹೀಗೆ 'ಮುಕ್ತಿ' ಎಂಬ ಒಂದೇ ಶಬ್ದವನ್ನು ಉಪಯೋಗಿಸಿದರೂ ಈ ಎರಡಕ್ಕೂ ತಾರತಮ್ಯವಿರುತ್ತದೆ.

(೧) ಜೈಮಿನಿಸ್ತು ಆಚಾರ್ಯೋ ಮನೋವತ್ ಶರೀರಸ್ಯಾಪಿ ಸೇನ್ದ್ರಿಯಸ್ಯ ಭಾವಂ ಮುಕ್ತಂ ಪ್ರತಿ ಮನ್ಯತೇ॥ -ಸೂ. ಭಾ. ೪-೪-೧೧-೬೦೦.

(೨) ಯಥಾ ಪ್ರದೀಪ ಏಕೋಽನೇಕಪ್ರದೀಪಭಾವಮಾಪದ್ಯತೇ ವಿಕಾರಶಕ್ತಿಯೋಗಾತ್ ಏವಮ್ ಏಕೋಽಪಿ ಸನ್ ವಿದ್ವಾನ್ ಐಶ್ವರ್ಯಯೋಗಾತ್ ಅನೇಕಧಾಭಾವಮ್ ಆಪದ್ಯ ಸರ್ವಾಣಿ ಶರೀರಾಣಿ ಆವಿಶತಿ। ಕುತಃ? ತಥಾ ಹಿ ದರ್ಶಯತಿ ಶಾಸ್ತ್ರಮ್, ಏಕಸ್ಯ ಅನೇಕಭಾವಮ್ 'ಸ ಏಕಧಾ ಭವತಿ ತ್ರಿಧಾ ಭವತಿ ಪಞ್ಚಧಾ ಸಪ್ತಧಾ ನವಧಾ' (ಛಾಂ. ೭-೨೬-೨) ಇತ್ಯಾದಿ॥

-ಸೂ. ಭಾ. ೪-೪-೧೫-೬೦೫.

(೩) ಆಧಿಕಾರಿಕೋ ಯಃ ಸವಿತೃಮಣ್ಡಲಾದಿಷು ವಿಶೇಷಾಯತನೇಷ್ವವಸ್ಥಿತಃ ಪರ ಈಶ್ವರಃ, ತದಾಯತ್ತೈವೇಯಂ ಸ್ವಾರಾಜ್ಯಪ್ರಾಪ್ತಿರುಚ್ಯತೇ॥ -ಸೂ. ಭಾ. ೪-೪-೧೮-೬೦೮.

(೪) ಇತಶ್ಚ ನ ನಿರಙ್ಕುಶಂ ವಿಕಾರಾಲಮ್ಬನಾನಾಮ್ ಐಶ್ವರ್ಯಮ್। ಯಸ್ಮಾದ್ ಭೋಗಮಾತ್ರಮೇವೈಷಾಮ್ ಅನಾದಿಸಿದ್ಧೇನೇಶ್ವರೇಣ ಸಮಾನಮಿತಿ ಶ್ರೂಯತೇ॥

-ಸೂ. ಭಾ. ೪-೪-೨೧-೬೧೧.

(೫) ನಾಡೀರಶ್ಮಿಸಮನ್ವಿತೇನ ಅರ್ಚಿರಾದಿಪರ್ವಣಾ ದೇವಯಾನೇನ ತಥಾ ಯೇ ಬ್ರಹ್ಮಲೋಕಂ ಶಾಸ್ತ್ರೋಕ್ತವಿಶೇಷಣಂ ಗಚ್ಛನ್ತಿ....ತೇ ತಂ ಪ್ರಾಪ್ಯ ನ ಚನ್ದ್ರಲೋಕಾದಿವದ್ ಭುಕ್ತಭೋಗಾ ಆವರ್ತನ್ತೇ।.....ಅನ್ತವತ್ತ್ವೇಪ್ಯೈಶ್ವರ್ಯಸ್ಯ ಯಥಾಽನಾವೃತ್ತಿಃ, ತಥಾ ವರ್ಣಿತಮ್ 'ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮ್' (ಬ್ರ.ಸೂ. ೪-೩-೧೦) ಇತ್ಯತ್ರ। ಸಮ್ಯಗ್ದರ್ಶನವಿಧ್ವಸ್ತತಮಸಾಂ ತು ನಿತ್ಯಸಿದ್ಧನಿರ್ವಾಣಪರಾಯಣಾನಾಂ ಸಿದ್ಧೈವಾನಾವೃತ್ತಿಃ। ತದಾಶ್ರಯೇಣೈವ ಹಿ ಸಗುಣಶರಣಾನಾಮಪಿ ಅನಾವೃತ್ತಿಸಿದ್ಧಿರಿತಿ॥ -ಸೂ. ಭಾ. ೪-೪-೨೨-೬೧೨.

(೬) ಜಗದುತ್ಪತ್ತ್ಯಾದಿವ್ಯಾಪಾರಂ ವರ್ಜಯಿತ್ವಾ ಅನ್ಯತ್ ಅಣಿಮಾದ್ಯಾತ್ಮಕಮೈಶ್ವರ್ಯಂ ಮುಕ್ತಾನಾಂ ಭವಿತುಮರ್ಹತಿ। ಜಗದ್ವ್ಯಾಪಾರಸ್ತು ನಿತ್ಯಸಿದ್ಧಸ್ಯೈವ ಈಶ್ವರಸ್ಯ॥

-ಸೂ. ಭಾ. ೪-೪-೧೭-೬೦೭.

(೭) ಕಥಂ ಪುನರ್ಮುಕ್ತಸ್ಯ ಅನೇಕಶರೀರಾವೇಶಾದಿಲಕ್ಷಣಮೈಶ್ವರ್ಯಮ್ ಅಭ್ಯುಪಗಮ್ಯತೇ ? ಯಾವತಾ 'ತತ್ಕೇನ ಕಂ ವಿಜಾನೀಯಾತ್' (ಬೃ. ೪-೫-೧೫), 'ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ವಿಜಾನೀಯಾತ್' (ಬೃ. ೪-೩-೩೦), 'ಸಲಿಲ ಏಕೋ ದ್ರಷ್ಟಾದ್ವೈತೋ ಭವತಿ' (ಬೃ ೪-೩-೩೨)-ಇತಿ ಚೈವಂಜಾತೀಯಕಾ ಶ್ರುತಿರ್ವಿಶೇಷವಿಜ್ಞಾನಂ ವಾರಯತೀತ್ಯತ ಉತ್ತರಂ ಪಠತಿ-'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' (ಬ್ರ.ಸೂ. ೪-೪-೧೬)। ಸ್ವಾಪ್ಯಯಃ ಸುಷುಪ್ತಮ್। 'ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ' (ಛಾಂ. ೬-೮-೧) ಇತಿ ಶ್ರುತೇಃ। ಸಂಪತ್ತಿಃ ಕೈವಲ್ಯಮ್ 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' (ಬೃ. ೪-೪-೬) ಇತಿ ಶ್ರುತೇಃ। ತಯೋರನ್ಯತರಾಮವಸ್ಥಾಮ್ ಅಪೇಕ್ಷ್ಯ ಏತದ್ವಿಶೇಷಸಂಜ್ಞಾಭಾವವಚನಮ್ ॥ -ಸೂ. ಭಾ. ೪-೪-೧೬-೬೦೬.

# ೨೩. ಉಪಾಸನೆ

೧೭೧. ಜ್ಞೇಯವಾದ ನಿರುಪಾಧಿಕಬ್ರಹ್ಮ, ಉಪಾಸ್ಯವಾದ ಸೋಪಾಧಿಕ ಬ್ರಹ್ಮ- ಎಂದು ಬ್ರಹ್ಮವು ಎರಡು ಪ್ರಕಾರವಾಗಿರುತ್ತದೆ ಎಂದು ಹೇಳಲಾಯಿತಷ್ಟೆ? **ಈಗ ಉಪಾಸನೆಯನ್ನು ಜ್ಞಾನಕಾಂಡದಲ್ಲಿ ಏತಕ್ಕೆ ವಿಧಿಸಿದೆ?** -ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವದು ಅವಶ್ಯವಾಗುತ್ತದೆ. ಏಕೆಂದರೆ ಉಪಾಸನೆ ಎಂದರೆ ಶಾಸ್ತ್ರದಲ್ಲಿ ಹೇಳಿರುವಂತೆ ಒಂದೇ ಶಾಸ್ತ್ರೋಕ್ತವಾದ ವಸ್ತುವನ್ನು ಕುರಿತ ಒಂದೇ ಪ್ರತ್ಯಯವನ್ನು ಭಿನ್ನವಸ್ತುವಿಷಯದ ಪ್ರತ್ಯಯವು ನಡುವೆ ಬರದಂತೆ ನಡೆಯಿಸುತ್ತಿರುವದು. ಇದೂ ಒಂದು ಕ್ರಿಯೆಯೇ ಆಗಿರುವದರಿಂದ (೭೬) ಕರ್ಮಕಾಂಡದಲ್ಲಿ ಇದನ್ನು ವಿಧಿಸತಕ್ಕದ್ದು ಯುಕ್ತವಾಗಿದೆ. ಇದಲ್ಲದೆ ಜ್ಞಾನಕಾಂಡದಲ್ಲಿ ವಿಧಿಸಿರುವದರಿಂದ ಉಪಾಸನೆಗಳು ಅವಿದ್ಯಕವಲ್ಲವೆಂದೂ ಶಂಕಿಸಬಹುದಾಗಿರುತ್ತದೆ. ಆದ್ದರಿಂದ ಕರ್ಮಕಾಂಡದಲ್ಲಿಯೇ ಉಪಾಸನೆಗಳನ್ನೇಕೆ ಹೇಳಿಲ್ಲ? -ಎಂಬ ಪ್ರಶ್ನೆ ಎದ್ದುಕೊಳ್ಳುವದು ಸ್ವಾಭಾವಿಕವಾಗಿದೆ.

ಉಪಾಸಕ, ಉಪಾಸ್ಯ -ಎಂಬ ದ್ವೈತವಿಲ್ಲದೆ ಉಪಾಸನೆಯು ಆಗುವಂತಿಲ್ಲವಾದ್ದರಿಂದಲೂ ನಿರ್ವಿಶೇಷವಾದ ಅದ್ವೈತಬ್ರಹ್ಮದಲ್ಲಿ ಅವಿದ್ಯೆಯಿಂದಲೇ ದ್ವೈತವು ತೋರುತ್ತದೆಯಾದ್ದರಿಂದಲೂ ಉಪಾಸನಾವ್ಯವಹಾರವು ಅವಿದ್ಯಕವೆಂದು ತಾನೇ ಏರ್ಪಡುತ್ತದೆ. ಆದರೂ ಉಪಾಸನೆಯೂ ಜ್ಞಾನದಂತೆ ಮನೋವೃತ್ತಿಯಾಗಿರುವದರಿಂದಲೂ ಮುಖ್ಯಕೈವಲ್ಯಕ್ಕೆ ಸಮೀಪವಾಗಿರುವ ಆಪೇಕ್ಷಿಕಾಮೃತತ್ವವೆಂಬ ಫಲವನ್ನು ಕೊಡುವದಾದ್ದರಿಂದಲೂ ಉಪಾಸ್ಯವಾದ ಬ್ರಹ್ಮವು ಜ್ಞೇಯಬ್ರಹ್ಮಕ್ಕೆ ತೀರ ಹತ್ತಿರುವಿರುವ ಕಾರ್ಯವಾಗಿರುವದರಿಂದಲೂ ಜ್ಞಾನಕಾಂಡದಲ್ಲಿಯೇ ಈ ಉಪಾಸನೆಗಳನ್ನು ಹೇಳಿರುತ್ತದೆ- ಎಂಬುದು ಪ್ರಶ್ನೆಗೆ ಉತ್ತರವು.

(೧) ಉಪಾಸನಂ ಚ ಯಥಾಶಾಸ್ತ್ರಂ ತುಲ್ಯಪ್ರತ್ಯಯಸನ್ತತಿಃ, ಅಸಙ್ಕೀರ್ಣಾ ಚ ಅತತ್ಪ್ರತ್ಯಯೈಃ ಶಾಸ್ತ್ರೋಕ್ತಾಲಮ್ಬನವಿಷಯಾ ಚ॥ -ತೈ.ಭಾ. ೧-೩-೨೦.

(೨) ತತ್ರ ಅವಿದ್ಯಾವಸ್ಥಾಯಾಂ ಬ್ರಹ್ಮಣಿ ಉಪಾಸ್ಯೋಪಾಸಕಾದಿಲಕ್ಷಣಃ ಸರ್ವೋ ವ್ಯವಹಾರಃ॥ -ಸೂ.ಭಾ. ೧-೧-೧೨-೯೧.

(೩) ತತ್ರ ಏತಸ್ಮಿನ್ ಅದ್ವೈತವಿದ್ಯಾಪ್ರಕರಣೇ ಅಭ್ಯುದಯಸಾಧನಾನಿ ಉಪಾಸನಾನಿ ಉಚ್ಯನ್ತೇ। ಕೈವಲ್ಯಸನ್ನಿಕೃಷ್ಟಫಲಾನಿ ಚ ಅದ್ವೈತಾತ್ ಈಷದ್ವಿಕೃತಬ್ರಹ್ಮವಿಷಯಾಣಿ "ಮನೋಮಯಃ ಪ್ರಾಣಶರೀರಃ" (ಛಾಂ. ೩-೪-೧೨) ಇತ್ಯಾದೀನಿ। ಕರ್ಮಸಮೃದ್ಧಿಫಲಾನಿ ಚ ಕರ್ಮಾಙ್ಗಸಂಬನ್ಧೀನಿ। ರಹಸ್ಯಸಮಾನ್ಯಾತ್, ಮನೋವೃತ್ತಿಸಾಮಾನ್ಯಾಚ್ಚ। ಯಥಾ ಅದ್ವೈತಜ್ಞಾನಂ ಮನೋವೃತ್ತಿಮಾತ್ರಮ್ ತಥಾ ಅನ್ಯಾನ್ಯಪಿ ಉಪಾಸನಾನಿ ಮನೋವೃತ್ತಿರೂಪಾಣಿ ಇತಿ ಅಸ್ತಿ ಹಿ ಸಾಮಾನ್ಯಮ್॥ -ಛಾಂ.ಭಾ. ಅವ-೫.

೧೭೨. ಉಪಾಸನೆಗಳಲ್ಲಿ ಕರ್ಮಾಂಗವಾದ ಉಪಾಸನೆಗಳು, ಪ್ರತೀಕೋಪಾಸನೆಗಳು, ಪ್ರಾಣಾದ್ಯುಪಾಸನೆಗಳು, ಸಗುಣಬ್ರಹ್ಮೋಪಾಸನೆಗಳು- ಮುಂತಾಗಿ ಹಲವು ವಿಧಗಳುಂಟು. ಇವುಗಳೆಲ್ಲ ಶಾಸ್ತ್ರೋಕ್ತವಾದ ಯಾವದಾದರೊಂದು ವಸ್ತುವನ್ನು ಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಒಂದೇ ಚಿತ್ತವೃತ್ತಿಯನ್ನು ಸತತವಾಗಿ ಭಾವಿಸುತ್ತಿರುವ ರೂಪದವೇ ಆಗಿರುತ್ತವೆ. ಅವು ಅದ್ವೈತಜ್ಞಾನದಂತೆ ಅಧ್ಯಾರೋಪಿತ ಕ್ರಿಯಾಕಾರಕಫಲಭೇದವನ್ನು ತೊಲಗಿಸುವದಿಲ್ಲ. ಆದರೂ ಚಿತ್ತೈಕಾಗ್ರ್ಯದ ಮೂಲಕವಾಗಿ ಅದ್ವೈತಜ್ಞಾನಕ್ಕೆ ಉಪಕಾರಕವಾಗಿರುವದರಿಂದ ಇವುಗಳನ್ನು ಜ್ಞಾನಪ್ರಕರಣದಲ್ಲಿಯೇ ಪ್ರಸ್ತಾಪಿಸಿರುತ್ತದೆ. ಅದರಲ್ಲಿಯೂ ಕರ್ಮಾಭ್ಯಾಸದಿಂದ ವಾಸಿತವಾಗಿರುವ ಚಿತ್ತಕ್ಕೆ ತಟ್ಟನೆ ಬರಿಯ ಉಪಾಸನೆಯಲ್ಲಿ ಪ್ರವೇಶವಾಗಲಾರದೆಂಬ ಕಾರಣದಿಂದ ಮೊದಲು ಕರ್ಮಾಂಗೋಪಾಸನೆಗಳನ್ನು ಹೇಳಿದೆ; ಬಳಿಕ ನಾಲಂಬನವಾದ ಪ್ರತೀಕಾದ್ಯುಪಾಸನೆಗಳನ್ನು ಹೇಳಿದೆ; ಆಮೇಲೆ ಸಗುಣಬ್ರಹ್ಮೋಪಾಸನೆಗಳನ್ನು ತಿಳಿಸಿದೆ. ಆಮೇಲೆಯೇ ಜ್ಞಾನವನ್ನು ಹೇಳಿರುತ್ತದೆ.

(೧) ಕಸ್ತರ್ಹಿ ಅದ್ವೈತಜ್ಞಾನಸ್ಯ ಉಪಾಸನಾನಾಂ ಚ ವಿಶೇಷಃ? ಉಚ್ಯತೇ। ಸ್ವಾಭಾವಿಕಸ್ಯ, ಆತ್ಮನ್ಯವಿಕ್ರಿಯೇ ಅಧ್ಯಾರೋಪಿತಸ್ಯ ಕರ್ತ್ರಾದಿಕಾರಕಕ್ರಿಯಾಫಲಭೇದವಿಜ್ಞಾನಸ್ಯ ನಿವರ್ತಕಮ್ ಅದ್ವೈತವಿಜ್ಞಾನಮ್। ರಜ್ಜ್ವಾದಾವಿವ ಸರ್ಪಾದ್ಯಧ್ಯಾರೋಪಲಕ್ಷಣಜ್ಞಾನಸ್ಯ ರಜ್ಜ್ವಾದಿಸ್ವರೂಪ-ನಿಶ್ಚಯಃ ಪ್ರಕಾಶನಿಮಿತ್ತಃ। ಉಪಾಸನಂ ತು ಯಥಾಶಾಸ್ತ್ರಸಮರ್ಪಿತಂ ಕಿಂಚಿದ್ ಆಲಮ್ಬನಮ್ ಉಪಾದಾಯ ತಸ್ಮಿನ್ ಸಮಾನಚಿತ್ತವೃತ್ತಿಸನ್ತಾನಕರಣಂ ತದ್ವಿಲಕ್ಷಣಪ್ರತ್ಯಯಾನನ್ತರಿತಮ್ ಇತಿ ವಿಶೇಷಃ। ತಾನ್ಯೇತಾನಿ ಉಪಾಸನಾನಿ ಸತ್ತ್ವಶುದ್ಧಿಕರತ್ವೇನ ವಸ್ತುತತ್ತ್ವಾವಭಾಸಕತ್ವಾತ್ ಅದ್ವೈತಜ್ಞಾನೋಪಕಾರಕಾಣಿ ಆಲಮ್ಬನವಿಷಯತ್ವಾತ್ ಸುಸಾಧ್ಯಾನಿ ಚ ಇತಿ ಪೂರ್ವಮ್ ಉಪನ್ಯಸ್ಯನ್ತೇ। ತತ್ರ ಕರ್ಮಾಭ್ಯಾಸಸ್ಯ ದೃಢೀಕೃತತ್ವಾತ್ ಕರ್ಮಪರಿತ್ಯಾಗೇನ ಉಪಾಸನೇ ಏವ ದುಃಖಂ ಚೇತಃಸಮರ್ಪಣಂ ಕರ್ತುಮ್ ಇತಿ ಕರ್ಮಾಙ್ಗವಿಷಯಮೇವ ತಾವತ್ ಆದೌ ಉಪಾಸನಮ್ ಉಪನ್ಯಸ್ಯತೇ॥ - ಛಾಂ. ಭಾ. ಅವ-೫,೬.

೧೭೩. ಉಪಾಸನೆಗಳು ಅಭ್ಯಾಸಮಾಡತಕ್ಕ ಮನೋವೃತ್ತಿರೂಪಗಳಿಂದ ಕೂಡಿರುವದರಿಂದಲೂ ಕರ್ಮದಂತೆಯೇ ಪುರುಷತಂತ್ರವೂ ಚೋದನಾತಂತ್ರವೂ ಆಗಿರುವದರಿಂದಲೂ (೭೬) ಜ್ಞಾನಕ್ಕಿಂತ ವಿಲಕ್ಷಣವಾಗಿರುವವಲ್ಲದೆ ಫಲದಿಂದಲೂ ಅವು ಜ್ಞಾನಕ್ಕಿಂತ ವಿಲಕ್ಷಣವೆಂದು ಏರ್ಪಡುತ್ತದೆ. ಹೇಗೆಂದರೆ, **ಕರ್ಮಾಂಗೋಪಾಸನೆಗಳನ್ನು ಮಾಡುವವರಿಗೆ ಆಯಾ ಕರ್ಮದ ಸಮೃದ್ಧಿಯೂ ಮುಮುಕ್ಷುಗಳಾದವರಿಗೆ ಜ್ಞಾನೋತ್ಪತ್ತಿಯೂ ಫಲವು. ಪ್ರತೀಕೋಪಾಸಕರಿಗೆ ಆಯಾ ಪ್ರತೀಕಗಳಿಗನುಗುಣವಾಗಿ ದೃಷ್ಟಾದೃಷ್ಟಫಲಗಳು ಆಗುವವು. ಸಗುಣಬ್ರಹ್ಮೋಪಾಸಕರಿಗೆ ಬ್ರಹ್ಮಪ್ರಾಪ್ತಿಯೂ ಕ್ರಮಮುಕ್ತಿಯೂ ಫಲವು; ಜ್ಞಾನಕ್ಕಾದರೆ**

**ಯಾವಾಗಲೂ ಜ್ಞಾನಸಮಕಾಲದಲ್ಲಿಯೇ ಮುಕ್ತಿ ಎಂಬ ಒಂದೇ ವಿಧವಾದ ಫಲವಾಗುತ್ತದೆ.** ಎಲ್ಲಾ ಉಪಾಸನೆಗಳಿಗೂ ಉಪಾಸ್ಯನಾದ ಪರಮಾತ್ಮನು ಒಬ್ಬನೇ ಆದರೂ ಯಾವಯಾವ ಗುಣಗಳಿಂದ ಕೂಡಿರುವನೆಂದು ಉಪಾಸನೆಮಾಡುವರೋ ಅದದಕ್ಕೆ ತಕ್ಕಂತೆಯೇ ಉಪಾಸಕರಿಗೆ ಫಲವಾಗುವದು.

(೧) ತತ್ರ ಕಾನಿಚಿತ್ ಬ್ರಹ್ಮಣ ಉಪಾಸನಾನಿ ಅಭ್ಯುದಯಾರ್ಥಾನಿ, ಕಾನಿಚಿತ್ ಕ್ರಮಮುಕ್ತ್ಯರ್ಥಾನಿ, ಕಾನಿಚಿತ್ ಕರ್ಮಸಮೃದ್ಧ್ಯರ್ಥಾನಿ। ತೇಷಾಂ ಗುಣವಿಶೇಷೋಪಾಧಿ ಭೇದೇನ ಭೇದಃ। ಏಕ ಏವ ತು ಪರಮಾತ್ಮಾ ಈಶ್ವರಃ ತೈಸ್ತೈರ್ಗುಣವಿಶೇಷೈರ್ವಿಶಿಷ್ಟಃ ಉಪಾಸ್ಯೋ ಯದ್ಯಪಿ ಭವತಿ, ತಥಾಪಿ ಯಥಾಗುಣೋಪಾಸನಮೇವ ಫಲಾನಿ ಭಿದ್ಯನ್ತೇ॥

-ಸೂ. ಭಾ. ೧-೧-೧೨-೯೧.

(೨) ನಾಮಾದಿಷು ಪ್ರತೀಕೋಪಾಸನೇಷು ಪೂರ್ವಸ್ಮಾತ್ ಪೂರ್ವಸ್ಮಾತ್ ಫಲ ವಿಶೇಷಮ್ ಉತ್ತರಸ್ಮಿನ್ ಉತ್ತರಸ್ಮಿನ್ ಉಪಾಸನೇ ದರ್ಶಯತಿ।.......ಸ ಚಾಯಂ ಫಲವಿಶೇಷಃ ಪ್ರತೀಕತನ್ತ್ರತ್ವಾತ್ ಉಪಾಸನಾನಾಮ್ ಉಪಪದ್ಯತೇ॥ -ಸೂ. ಭಾ. ೪-೩-೧೬-೫೯೦.

(೩) ಅತ್ರ ಹಿ ಕರ್ಮವತ್ ಉಪಾಸನಾನಾಂ ಭೇದಾಭೇದೌ ಸಂಭವತಃ। ಕರ್ಮವದೇವ ಚ ಉಪಾಸನಾನಿ ದೃಷ್ಟಫಲಾನಿ ಅದೃಷ್ಟಫಲಾನಿ ಚೋಚ್ಯನ್ತೇ । ಕ್ರಮಮುಕ್ತಿಫಲಾನಿ ಚ ಕಾನಿಚಿತ್ ಸಮ್ಯಗ್ಜ್ಞಾನೋತ್ಪತ್ತಿದ್ವಾರೇಣ॥ -ಸೂ. ಭಾ. ೩-೩-೧-೩೧೮.

೧೭೪. ಉಪಾಸನೆಯಲ್ಲಿ ಉಪಾಸ್ಯ, ಉಪಾಸಕ- ಎಂಬ ಭೇದವಿರುವದ ರಿಂದಲೂ ಉಪಾಸ್ಯಬ್ರಹ್ಮವು ವಿಷಯವಾಗಿರುವದರಿಂದಲೂ ಅದು ಚೋದನಾತಂತ್ರ ವಾಗಿರುವದರಿಂದಲೂ ಉಪಾಸನೆಯ ಫಲವು ಕಾಲಾಂತರದಲ್ಲಿ ಆಗುವದಾದ್ದ ರಿಂದಲೂ ತಾರತಮ್ಯಯುಕ್ತವಾಗಿರುವದರಿಂದಲೂ ಜ್ಞಾನಕ್ಕಿಂತ ಅದು ವಿಲಕ್ಷಣ ವಾಗಿರುವದೆಂದು ಮೇಲೆ ತಿಳಿಸಿರುತ್ತೇವಷ್ಟೆ? ಈ ಕಾರಣದಿಂದಲೇ ಇದು ಅವಿದ್ಯಾ ವಿಷಯವಾದದ್ದೆಂದು ಏರ್ಪಡುತ್ತದೆ. ಶ್ರುತಿಯಲ್ಲಿ ಉಪಾಸನೆಗೆ ವಿಷಯವಾದದ್ದು ಪರಮಾರ್ಥವಾದ ಬ್ರಹ್ಮವಲ್ಲವೆಂದು ಹೇಳಿರುವದರಿಂದಲೂ ಉಪಾಸನೆಯು ಅವಿದ್ಯಾವಿಷಯವಾದದ್ದೆಂದು ಸ್ಪಷ್ಟವಾಗಿಯೇ ನಿಂದಿಸಿರುವದರಿಂದಲೂ ಉಪಾಸನೆ ಗಿಂತ ವಿಲಕ್ಷಣವಾದ ಜ್ಞಾನವೊಂದಿದೆ ಎಂತಲೂ ಆ ಜ್ಞಾನದಿಂದಲೇ ಮುಖ್ಯ ಮುಕ್ತಿಯೂ ದೊರೆಯುವದೆಂತಲೂ ಸಿದ್ಧವಾಗುತ್ತದೆ. ಇದನ್ನು ನಾವು ಹಿಂದೆ (೬೫) ವೇದಾಂತ ವಾಕ್ಯವಿಚಾರದಲ್ಲಿ ಸಿದ್ಧಪಡಿಸಿಯೂ ಇರುತ್ತೇವೆ.

(೧) ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ॥ -ಕೇ.೧-೫.

ತದೇವ ಆತ್ಮಸ್ವರೂಪಂ ಬ್ರಹ್ಮ ನಿರತಿಶಯಂ ಭೂಮಾಖ್ಯಂ ಬೃಹತ್ತ್ವಾತ್ ಬ್ರಹ್ಮ ಇತಿ ವಿದ್ಧಿ ವಿಜಾನೀಹಿ ತ್ವಮ್ । ಯೈರ್ವಾಗಾದ್ಯುಪಾಧಿಭಿಃ ''ವಾಚೋ ಹ ವಾಕ್ಚಕ್ಷುಷಶ್ಚಕ್ಷುಃ, ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನಃ'', 'ಕರ್ತಾ', 'ಭೋಕ್ತಾ', 'ವಿಜ್ಞಾತಾ', 'ನಿಯನ್ತಾ', 'ಪ್ರಶಾಸಿತಾ',

'ವಿಜ್ಞಾನಮಾನನ್ದಂ ಬ್ರಹ್ಮ' -ಇತ್ಯೇವಮಾದಯಃ ಸಂವ್ಯವಹಾರಾಃ ಅಸಂವ್ಯವಹಾರ್ಯೇ ನಿರ್ವಿಶೇಷೇ ಪರೇ ಸಾಮ್ಯೇ ಬ್ರಹ್ಮಣಿ ಪ್ರವರ್ತನ್ತೇ ತಾನ್ ವ್ಯುದಸ್ಯ ಆತ್ಮಾನಮೇವ ನಿರ್ವಿಶೇಷಂ ಬ್ರಹ್ಮ ವಿದ್ಧಿ-ಇತಿ ಏವಶಬ್ದಾರ್ಥಃ। ನೇದಂ ಬ್ರಹ್ಮ ಯತ್ 'ಇದಮ್' ಇತಿ ಉಪಾಧಿಭೇದವಿಶಿಷ್ಟಮ್ ಅನಾತ್ಮೇಶ್ವರಾದಿ ಉಪಾಸತೇ ಧ್ಯಾಯನ್ತಿ। 'ತದೇವ ಬ್ರಹ್ಮ ತ್ವಂ ವಿದ್ಧಿ' ಇತ್ಯುಕ್ತೇಽಪಿ 'ನೇದಂ ಬ್ರಹ್ಮ'- ಇತಿ ಅನಾತ್ಮನೋಽಬ್ರಹ್ಮತ್ವಂ ಪುನರುಚ್ಯತೇ ನಿಯಮಾರ್ಥಮ್, ಅನ್ಯದ್ಬ್ರಹ್ಮಬುದ್ಧಿ ಪರಿಸಙ್ಖ್ಯಾನಾರ್ಥಂ ವಾ॥ -ಕೇ. ಭಾ. ೧-೫-೩.

(೨) ಅಥ ಯೋಽನ್ಯಾಂ ದೇವತಾಮ್ ಉಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ॥ -ಬೃ. ೧-೪-೧೦.

ಅಥ ಯಃ ಕಶ್ಚಿತ್ ಅಬ್ರಹ್ಮವಿತ್ ಅನ್ಯಾಮ್ ಆತ್ಮನೋ ವ್ಯತಿರಿಕ್ತಾಂ ಯಾಂ ಕಾಂಚಿದ್ ದೇವತಾಮ್ ಉಪಾಸ್ತೇ ಸ್ತುತಿನಮಸ್ಕಾರಯಾಗಬಲ್ಯುಪಹಾರಪ್ರಣಿಧಾನಧ್ಯಾನಾದಿನಾ ಉಪಾಸ್ತೇ ತಸ್ಯಾ ಗುಣಭಾವಮುಪಗಮ್ಯ ಆಸ್ತೇ। ಅನ್ಯೋಽಸೌ ಅನಾತ್ಮಾ ಮತ್ತಃ ಪೃಥಕ್ ಅನ್ಯೋಽಹಮಸ್ಮಿ ಅಧಿಕೃತಃ । ಮಯಾ ಅಸ್ಮೈ ಋಣಿವತ್ ಪ್ರತಿಕರ್ತವ್ಯಮ್ ಇತ್ಯೇವಂಪ್ರತ್ಯಯಃ, ಸನ್ ಉಪಾಸ್ತೇ ನ ಸ ಇತ್ಥಂಪ್ರತ್ಯಯಃ ವೇದ ವಿಜಾನಾತಿ ತತ್ತ್ವಮ್॥ -ಬೃ. ಭಾ. ೧-೪-೧೦-೧೭೬.

(೩) ನ ಚಾತ್ಮಾನಮ್ ಈಶ್ವರಂ ಪ್ರಮಾಣತೋ ಬುದ್ಧ್ವಾ ಕಸ್ಯಚಿತ್ ಗುಣಭಾವಂ ಜಿಗಮಿಷತಿ ಕಶ್ಚಿತ್। ವಿರೋಧಾತ್॥ -ಗೀ. ಭಾ. ೧೨-೧೩-೭೪೩.

೧೭೫. ''ಇದು ಎಂದು ಉಪಾಸನೆಮಾಡುತ್ತಾರಲ್ಲ, ಅದು ಬ್ರಹ್ಮವಲ್ಲ'' (ಕೇ.೧-೫ರಿಂದ ೧-೯) ಎಂಬ ಶ್ರುತಿವಚನದಿಂದ ಸಗುಣಬ್ರಹ್ಮವು ನಿಜವಾದ ಬ್ರಹ್ಮ ವಲ್ಲ ಎಂದು ಭಾವಿಸಬಾರದು. ಉಪಾಸನಾವಿಷಯತ್ವವು ಬ್ರಹ್ಮದ ಪರಮಾರ್ಥರೂಪ ವಲ್ಲ ಎಂದಿಷ್ಟೇ ಆ ವಾಕ್ಯಕ್ಕೆ ಅರ್ಥ. ಪರಬ್ರಹ್ಮವನ್ನೇ ಕೆಲವು ಕಾರ್ಯಧರ್ಮಗಳಿಂದ ವಿಶಿಷ್ಟವಾಗಿ ಉಪಾಸನೆಗೆ ವಿಷಯವಾಗಿರುವಂತೆ ಶ್ರುತಿಯಲ್ಲಿ ಹೇಳಿದೆ ಎಂದು ಹಿಂದೆ (೧೬೪) ತಿಳಿಸಿರುತ್ತೇವೆ. ಉಪಾಸನಾವಾಕ್ಯಗಳಲ್ಲಿಯೂ ಪರಬ್ರಹ್ಮವನ್ನೇ ಹೇಳಿರುತ್ತದೆ ಎಂಬಿದು ಆತ್ಮತ್ವ, ಪಾಪರಹಿತತ್ವ, ಸರ್ವಕಾರಣತ್ವ-ಮುಂತಾದ ವಿಶೇಷಣಗಳಿಂದ ವ್ಯಕ್ತವಾಗುತ್ತದೆ. ಆದರೆ ಅಲ್ಲಿ ಹೇಳಿರುವ ಸವಿಶೇಷಲಿಂಗಗಳು ಉಪಾಧಿಗೆ ಸಂಬಂಧ ಪಟ್ಟವುಗಳೇ ಹೊರತು ಬ್ರಹ್ಮಸ್ವರೂಪಕ್ಕೆ ಸಂಬಂಧಪಟ್ಟವುಗಳಲ್ಲ. ಸ್ಫಟಿಕವು ಉಪಾಧಿ ಗಳಿಂದಲೂ ನಿಜವಾಗಿ ರಕ್ತಾದಿವರ್ಣಯುತವಾಗಿರುವದಿಲ್ಲವಷ್ಟೆ? ಆ ಉಪಾಧಿಗಳೂ ಅವಿದ್ಯಾಕಲ್ಪಿತವಾಗಿರುತ್ತವೆ; ಅವಿದ್ಯೆಯಿಂದಲೇ ಉಪಾಸ್ಯೋಪಾಸಕವ್ಯವಹಾರವುಂಟಾ ಗಿರುತ್ತದೆ ಎಂದು ಹಿಂದೆ (೧೭೧) ಹೇಳಿಯೂ ಇರುತ್ತೇವೆ. ನಿರ್ಗುಣವಾಕ್ಯಗಳಂತೂ ಬ್ರಹ್ಮಸ್ವರೂಪವನ್ನೇ ತಾತ್ಪರ್ಯದಿಂದ ತಿಳಿಸುತ್ತವೆ. ಆದ್ದರಿಂದ ಶ್ರುತ್ಯುಕ್ತಬ್ರಹ್ಮವು ಎರಡೆಂದು ತಿಳಿಯುವದಕ್ಕೆ ಸ್ವಲ್ಪವೂ ಅವಕಾಶವಿಲ್ಲ. ನಿರ್ವಿಶೇಷಬ್ರಹ್ಮವೊಂದೇ ಶ್ರುತಿಗೆ ತಾತ್ಪರ್ಯದಿಂದ ಅಭಿಪ್ರೇತವಾಗಿರುತ್ತದೆ.

(೧) ನ ತಾವತ್ ಸ್ವತ ಏವ ಪರಸ್ಯಬ್ರಹ್ಮಣಃ ಉಭಯಲಿಙ್ಗತ್ವಮ್ ಉಪಪದ್ಯತೇ। ನ ಹಿ ಏಕಂ ವಸ್ತು ಸ್ವತ ಏವ ರೂಪಾದಿವಿಶೇಷೋಪೇತಮ್ ತದ್ವಿಪರೀತಂ ಚ ಇತಿ ಅವಧಾರಯಿತುಂ ಶಕ್ಯಮ್। ವಿರೋಧಾತ್। ಅಸ್ತು ತರ್ಹಿ ಸ್ಥಾನತಃ ಪೃಥಿವ್ಯಾದ್ಯುಪಾಧಿಯೋಗಾತ್ ಇತಿ। ತದಪಿ ನೋಪಪದ್ಯತೇ। ನ ಹಿ ಉಪಾಧಿಯೋಗಾದಪಿ ಅನ್ಯಾದೃಶಸ್ಯ ವಸ್ತುನೋಽನ್ಯಾದೃಶಃ ಸ್ವಭಾವಃ ಸಂಭವತಿ। ನ ಹಿ ಸ್ವಚ್ಛಃ ಸನ್ ಸ್ಫಟಿಕಃ, ಅಲಕ್ತಕಾದ್ಯುಪಾಧಿಯೋಗಾತ್ ಅಸ್ವಚ್ಛೋ ಭವತಿ। ಭ್ರಮಮಾತ್ರತ್ವಾತ್ ಅಸ್ವಚ್ಛತಾಭಿನಿವೇಶಸ್ಯ। ಉಪಾಧೀನಾಂ ಚ ಅವಿದ್ಯಾಪ್ರತ್ಯುಪಸ್ಥಾಪಿತತ್ವಾತ್ ಅತಶ್ಚ ಅನ್ಯತರಲಿಙ್ಗಪರಿಗ್ರಹೇಽಪಿ ಸಮಸ್ತವಿಶೇಷರಹಿತಂ ನಿರ್ವಿಕಲ್ಪಕಮೇವ ಬ್ರಹ್ಮ ಪ್ರತಿಪತ್ತವ್ಯಮ್। ನ ತದ್ವಿಪರೀತಮ್॥ -ಸೂ. ಭಾ. ೩-೨-೧೧-೨೭೭.

(೨) ರೂಪಾದ್ಯಾಕಾರರಹಿತಮೇವ ಬ್ರಹ್ಮ ಅವಧಾರಯಿತವ್ಯಮ್, ನ ರೂಪಾದಿಮತ್। ಕಸ್ಮಾತ್? ತತ್ಪ್ರಧಾನತ್ವಾತ್। ''ಅಸ್ಥೂಲಮನಣ್ವಹ್ರಸ್ವಮದೀರ್ಘಮ್'' (ಬೃ. ೩-೮-೮), ''ಅಶಬ್ದಮಸ್ಪರ್ಶಮರೂಪ - ಮವ್ಯಯಮ್'' (ಕ.೧-೩-೧೫), ''ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ'' (ಛಾಂ. ೮-೧೪-೧), ''ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯನ್ತರೋ ಹ್ಯಜಃ'' (ಮುಂ. ೨-೧-೨), ''ತದೇತದ್ಬ್ರಹ್ಮಾ-ಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ'' (ಬೃ. ೨-೫-೧೯)-ಇತ್ಯೇವಮಾದೀನಿ ವಾಕ್ಯಾನಿ ನಿಷ್ಪ್ರಪಞ್ಚಬ್ರಹ್ಮಾತ್ಮತತ್ತ್ವಪ್ರಧಾನಾನಿ ನಾರ್ಥಾನ್ತರಪ್ರಧಾನಾನಿ ಇತ್ಯೇತತ್ ಪ್ರತಿಷ್ಠಾಪಿತಂ. ''ತತ್ತು ಸಮನ್ವಯಾತ್'' (ಸೂ.ಭಾ. ೧-೧-೪) ಇತ್ಯತ್ರ। ತಸ್ಮಾತ್ ಏವಂ ಜಾತೀಯಕೇಷು ವಾಕ್ಯೇಷು ಯಥಾಶ್ರುತಂ ನಿರಾಕಾರಮೇವ ಬ್ರಹ್ಮ ಅವಧಾರಯಿತವ್ಯಮ್॥

-ಸೂ. ಭಾ. ೩-೨-೧೪-೨೮೧.

೧೭೬. ಉಪಾಸ್ಯೋಪಾಸಕಭಾವವು ಅವಿದ್ಯಾಕಲ್ಪಿತವಾದದ್ದಾದರೂ ಶಾಸ್ತ್ರದಲ್ಲಿ ಉಪಾಸ್ಯದ ಸ್ವರೂಪವನ್ನು ಹೇಗೆ ವರ್ಣಿಸಿರುತ್ತದೆಯೋ ಹಾಗೆಯೇ ಅದು ನಿಜವಾಗಿಯೂ ಇರುತ್ತದೆ ಎಂದೇ ಸಾಮಾನ್ಯವಾಗಿ ಭಾವಿಸಬೇಕು. ಹಾಗೆಂದು ತಿಳಿಯದಿದ್ದರೆ ವೇದವನ್ನು ನಿಷ್ಕಾರಣವಾಗಿ ಅಪ್ರಮಾಣವೆಂದು ಕಲ್ಪಿಸಿದ ದೋಷವು ಉಂಟಾಗುತ್ತದೆ. ಆದ್ದರಿಂದ ಉಪಾಸನಾವಾಕ್ಯಗಳಲ್ಲಿ ಬ್ರಹ್ಮಸ್ವರೂಪವನ್ನು ವರ್ಣಿಸುವ ವಾಕ್ಯಗಳು ತತ್ತ್ವಬೋಧಕವಾಕ್ಯಗಳಿಗೆ ವಿರೋಧವಲ್ಲದಿರುವಾಗ ನಿಜವಾಗಿರುವ ಬ್ರಹ್ಮರೂಪವನ್ನು ವರ್ಣಿಸುವವೆಂದೇ ಇಟ್ಟುಕೊಳ್ಳಬೇಕು. ಇಷ್ಟೇ ಅಲ್ಲ, ಅಬ್ರಹ್ಮವಾಗಿರುವ ಪದಾರ್ಥಗಳ ಉಪಾಸನೆಯನ್ನು ಹೇಳುವ ವಾಕ್ಯಗಳಲ್ಲಿಯೂ ಪ್ರಮಾಣಾಂತರಕ್ಕೆ ವಿರೋಧವಿಲ್ಲದಿರುವಾಗ ಯಥಾರ್ಥಬೋಧಕಗಳೆಂದೇ ಎಣಿಸಬೇಕು. ಉಪಾಸನಾ ವಾಕ್ಯಗಳಲ್ಲಿ ಬ್ರಹ್ಮಸ್ವರೂಪಪ್ರತಿಪಾದಕವಾಕ್ಯಗಳಿಗೆ ವಿರುದ್ಧವಾಗಿ ಕಾಣುವ ಧರ್ಮಗಳನ್ನು ಮಾತ್ರ ಉಪಾಸನೆಗಾಗಿಯೇ ಹಾಗೆಂದು ತಿಳಿಸಿದೆ ಎಂದು ಹಿಡಿಯಬೇಕೇ ಹೊರತು ಅವೂ ಬ್ರಹ್ಮದ ಪರಮಾರ್ಥಧರ್ಮಗಳೇ ಎಂದು ಕಲ್ಪಿಸಬಾರದು. ಏಕೆಂದರೆ ತತ್ಪರವಾಕ್ಯಗಳು ಅತತ್ಪರವಾಕ್ಯಗಳಿಗಿಂತ ಪ್ರಬಲವಾಗಿರುತ್ತವೆ; ಬ್ರಹ್ಮವಾಕ್ಯ

ಗಳು ಬ್ರಹ್ಮಸ್ವರೂಪವನ್ನು ತಿಳಿಸುವದಕ್ಕೇ ಬಂದಿವೆಯಾದ್ದರಿಂದ ಆಯಾ ಬ್ರಹ್ಮಸ್ವರೂಪದಲ್ಲಿಯೇ ತಾತ್ಪರ್ಯವಿರುತ್ತದೆ; ಉಪಾಸನಾವಾಕ್ಯಗಳು ಉಪಾಸನಾಪ್ರಧಾನವಾಗಿರುವದರಿಂದ ಅವುಗಳಲ್ಲಿರುವ ಬ್ರಹ್ಮಸ್ವರೂಪವರ್ಣನೆಯಲ್ಲಿ ಯಾವಾಗಲೂ ತಾತ್ಪರ್ಯವಿರುವದಿಲ್ಲ. ಈ ಕಾರಣದಿಂದಲೇ ನಿರ್ಗುಣವಾಕ್ಯಗಳಲ್ಲಿ ಸಗುಣರೂಪಕ್ಕೊಪ್ಪುವ ವಿಶೇಷಣಗಳು ಕಂಡುಬಂದರೆ ಅವುಗಳನ್ನು ಬ್ರಹ್ಮದ ವಿಭೂತಿಯನ್ನು ತಿಳಿಸಿ ಅದನ್ನು ಹೊಗಳುವದಕ್ಕೆ ಬಂದಿವೆ ಎಂದು ತಿಳಿಯಬೇಕು. ಏಕೆಂದರೆ ಪರಮಾರ್ಥವಾಗಿಯೂ ಬ್ರಹ್ಮವು ಸಗುಣವೂ ನಿರ್ಗುಣವೂ ಆಗಿದೆ ಎಂಬುದು ಒಪ್ಪತಕ್ಕದಲ್ಲ. ಆದ್ದರಿಂದಲೇ ಛಾಂದೋಗ್ಯದಲ್ಲಿ ಬ್ರಹ್ಮಸ್ವರೂಪವನ್ನು ತಿಳಿಸುವ (ಛಾಂ. ೮-೧-೧) ದಹರವಾಕ್ಯವೂ, ಬೃಹದಾರಣ್ಯಕದಲ್ಲಿ (ಬೃ. ೪-೪-೨೨) ವಿಜ್ಞಾನಾತ್ಮನಿಗೂ ನಿರ್ಗುಣಬ್ರಹ್ಮಕ್ಕೂ ಐಕ್ಯವನ್ನು ತಿಳಿಸುವ ವಾಕ್ಯವೂ ಒಂದೇ ವಿದ್ಯೆ ಎಂದು ಸೂತ್ರಕಾರರು ಹೇಳಿದ್ದರೂ ಭಾಷ್ಯಕಾರರು ಛಾಂದೋಗ್ಯದ ಸಗುಣವಾಕ್ಯದಲ್ಲಿ ನಿರ್ಗುಣವಾಕ್ಯದ ವಿಶೇಷಣಗಳನ್ನು ಸೇರಿಸಿಕೊಂಡು ಉಪಾಸನೆಮಾಡಬೇಕೆಂದೂ ಬೃಹದಾರಣ್ಯಕದಲ್ಲಿ ಸಗುಣವಿಶೇಷಣಗಳನ್ನು ನಿರ್ಗುಣಬ್ರಹ್ಮದ ವಿಭೂತಿಯನ್ನು ತಿಳಿಸುತ್ತವೆಯೆಂದು ಭಾವಿಸಬೇಕೆಂದೂ ವರ್ಣಿಸಿರುತ್ತಾರೆ. ಈ ಎರಡು ಕಡೆಗಳಲ್ಲಿಯೂ ಹೇಳಿರುವ ಬ್ರಹ್ಮವೂ ಒಂದೇ ಆಗಿದ್ದರೂ ಛಾಂದೋಗ್ಯದಲ್ಲಿ ಅದರ ಉಪಾಸ್ಯರೂಪವನ್ನು ಹೇಳಿದೆ; ಬೃಹದಾರಣ್ಯಕದಲ್ಲಿ ಅದರ ಪರಮಾರ್ಥವಾದ ಜ್ಞೇಯರೂಪವನ್ನು ಹೇಳಿರುತದೆ.

(೧) ನ ಚ ಉಪಾಸನಾರ್ಥಶ್ರುತಶಬ್ದೋತ್ಥವಿಜ್ಞಾನವಿಷಯಸ್ಯ ಅಯಥಾರ್ಥತ್ವೇ ಪ್ರಮಾಣಮಸ್ತಿ। ನ ಚ ತದ್ವಿಜ್ಞಾನಸ್ಯ ಅಪವಾದಃ ಶ್ರೂಯತೇ । ತತಃ ಶ್ರೇಯಃಪ್ರಾಪ್ತಿದರ್ಶನಾತ್ ಯಥಾರ್ಥತಾಂ ಪ್ರತಿಪದ್ಯಾಮಹೇ। ವಿಪರ್ಯಯೇ ಚ ಅನರ್ಥಪ್ರಾಪ್ತಿದರ್ಶನಾತ್। ಯೋ ಹಿ ವಿಪರ್ಯಯೇಣ ಅರ್ಥಂ ಪ್ರತಿಪದ್ಯತೇ ಲೋಕೇ ಪುರುಷಂ ಸ್ಥಾಣುರಿತಿ, ಅಮಿತ್ರಂ ಮಿತ್ರಮಿತಿ ವಾ, ಸೋಽನರ್ಥಂ ಪ್ರಾಪ್ನುವನ್ ದೃಶ್ಯತೇ । ಆತ್ಮೇಶ್ವರದೇವತಾದೀನಾಮಪಿ ಅಯಥಾರ್ಥಾನಾಮೇವ ಚೇತ್ ಗ್ರಹಣಂ ಶ್ರುತಿತಃ, ಅನರ್ಥಪ್ರಾಪ್ತ್ಯರ್ಥಂ ಶಾಸ್ತ್ರಮ್ ಇತಿ ಧ್ರುವಂ ಪ್ರಾಪ್ನುಯಾತ್ ಲೋಕವದೇವ । ನ ಚೈತದಿಷ್ಟಮ್ । ತಸ್ಮಾತ್ ಯಥಾಭೂತಾನೇವ ಆತ್ಮೇಶ್ವರದೇವತಾದೀನ್ ಗ್ರಾಹಯತಿ ಉಪಾಸನಾರ್ಥಂ ಶಾಸ್ತ್ರಮ್॥ -ಬೃ.ಭಾ. ೧-೩-೧-೪೯.

(೨) ಇತರಾಣಿ ತು ಆಕಾರವದ್ಬ್ರಹ್ಮವಿಷಯಾಣಿ ವಾಕ್ಯಾನಿ ನ ತತ್ಪ್ರಧಾನಾನಿ। ಉಪಾಸನಾದಿವಿಧಿಪ್ರಧಾನಾನಿ ಹಿ ತಾನಿ । ತೇಷು ಅಸತಿ ವಿರೋಧೇ ಯಥಾಶ್ರುತಮ್ ಆಶ್ರಯಿತವ್ಯಮ್, ಸತಿ ತು ವಿರೋಧೇ ತತ್ಪ್ರಧಾನಾನಿ ಅತತ್ಪ್ರಧಾನೇಭ್ಯೋ ಬಲೀಯಾಂಸಿ ಭವನ್ತಿ ಇತ್ಯೇಷ ವಿನಿಗಮನಾಯಾಂ ಹೇತುಃ, ಯೇನ ಉಭಯೀಷ್ವಪಿ ಶ್ರುತಿಷು ಸತೀಷು ಅನಾಕಾರಮೇವ ಬ್ರಹ್ಮ ಅವಧಾರ್ಯತೇ ನ ಪುನರ್ವಿಪರೀತಮ್ ಇತಿ ॥ -ಸೂ.ಭಾ. ೩-೨-೧೪-೨೮೧.

(೩) ಯದೇತಚ್ಛಾನ್ದೋಗ್ಯೇ ಹೃದಯಾಕಾಶಸ್ಯ ಸತ್ಯಕಾಮತ್ವಾದಿಗುಣಜಾತಮ್ ಉಪಲಭ್ಯತೇ । ತದಿತರತ್ರ ವಾಜಸನೇಯಕೇ " ಸ ವಾ ಏಷ ಮಹಾನಜ ಆತ್ಮಾ" ಇತ್ಯತ್ರ ಸಂಬಧ್ಯತೇ। ಯಚ್ಚ ವಾಜಸನೇಯಕೇ ವಶಿತ್ವಾದ್ಯುಪಲಭ್ಯತೇ ತದಪಿ ಇತರತ್ರ ಛಾನ್ದೋಗ್ಯೇ "ಏಷ ಆತ್ಮಾ ಅಪಹತಪಾಪ್ಮಾ" (ಛಾಂ. ೮-೧-೫) ಇತ್ಯತ್ರ ಸಂಬಧ್ಯತೇ। ಕುತಃ? ಆಯತನಾದಿಸಾಮಾನ್ಯಾತ್। ಸಮಾನಂ ಹಿ ಉಭಯತ್ರಾಪಿ ಹೃದಯಮ್ ಆಯತನಮ್, ಸಮಾನಶ್ಚ ವೇದ್ಯ ಈಶ್ವರಃ । ಸಮಾನಂ ಚ ತಸ್ಯ ಸೇತುತ್ವಂ ಲೋಕಾಸಂಭೇದಪ್ರಯೋಜನಮ್-ಇತ್ಯೇವಮಾದಿಬಹುಸಾಮಾನ್ಯಂ ದೃಶ್ಯತೇ। .....ಸಗುಣಾ ಹಿ ಬ್ರಹ್ಮವಿದ್ಯಾ ಛಾನ್ದೋಗ್ಯೇ ಉಪದಿಶ್ಯತೇ- "ಅಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್" (ಛಾಂ. ೮-೧-೬) ಇತ್ಯಾತ್ಮವತ್ ಕಾಮಾನಾಮಪಿ ವೇದ್ಯತ್ವಶ್ರವಣಾತ್। ವಾಜಸನೇಯಕೇ ತು ನಿರ್ಗುಣಮೇವ ಪರಂ ಬ್ರಹ್ಮ ಉಪದಿಶ್ಯಮಾನಂ ದೃಶ್ಯತೇ "ಅತ ಊರ್ಧ್ವಂ ವಿಮೋಕ್ಷಾಯ ಬ್ರೂಹಿ" (ಬೃ. ೪-೩-೧೪), "ಅಸಙ್ಗೋ ಹ್ಯಯಂ ಪುರುಷಃ" (ಬೃ. ೪-೩-೧೫)- ಇತ್ಯಾದಿ ಪ್ರಶ್ನಪ್ರತಿವಚನಸಮನ್ವಯಾತ್ । ವಶಿತ್ವಾದಿ ತು ತತ್ಸ್ತುತ್ಯರ್ಥಮೇವ ಗುಣಜಾತಂ ವಾಜಸನೇಯಕೇ ಸಂಕೀರ್ತ್ಯತೇ। ತಥಾ ಚ ಉಪರಿಷ್ಟಾತ್ "ಸ ಏಷ ನೇತಿನೇತ್ಯಾತ್ಮಾ" (ಬೃ. ೩-೯-೨೬) ಇತ್ಯಾದಿನಾ ನಿರ್ಗುಣಮೇವ ಬ್ರಹ್ಮ ಉಪಸಂಹರತಿ। ಗುಣವತಸ್ತು ಬ್ರಹ್ಮಣ ಏಕತ್ವಾತ್ ವಿಭೂತಿಪ್ರದರ್ಶನಾಯ ಅಯಂ ಗುಣೋಪಸಂಹಾರಃ ಸೂತ್ರಿತೋ ನೋಪಾಸನಾಯ ಇತಿ ದ್ರಷ್ಟವ್ಯಮ್॥ -ಸೂ.ಭಾ. ೩-೩-೩೯-೩೯೪, ೩೯೫.

# ೨೪. ಆತ್ಮವಿಜ್ಞಾನಕ್ಕೆ ಸಾಧನಗಳು

೧೭೭. ಆತ್ಮನು ನಮ್ಮ ಸ್ವರೂಪವೇ ಆದರೂ ಜನರು ಅಜ್ಞಾನದಿಂದ ಅವನನ್ನು ಅರಿಯದೆ ಇರುತ್ತಾರೆ. ಆದ್ದರಿಂದ ಆತ್ಮಸ್ವರೂಪವನ್ನು ಅರಿತುಕೊಳ್ಳಬೇಕಾದ ಆವಶ್ಯಕತೆ ಇರುತ್ತದೆ. ಈ ಅರಿವನ್ನು ಶ್ರುತಿಯಲ್ಲಿ **ದರ್ಶನ, ವಿಜ್ಞಾನ, ಲಾಭ**-ಮುಂತಾದ ಶಬ್ದಗಳಿಂದ ಕರೆಯುತ್ತಾರೆ. ಭಾವನಾರೂಪವಾದ ಉಪಾಸನೆಯಿಂದ ಪಡೆಯುವ ವಿಜ್ಞಾನವನ್ನೂ ವಸ್ತುವಿನ ತಿಳಿವಳಿಕೆಯ ರೂಪವಾದ ಜ್ಞಾನದಿಂದ ಪಡೆಯುವ ವಿಜ್ಞಾನವನ್ನೂ ಒಂದೇ ಶಬ್ದದಿಂದ ಕರೆಯುತ್ತಾರಾದರೂ ಅವೆರಡಕ್ಕೂ ತಾರತಮ್ಯವಿರುತ್ತದೆ. ಶ್ರುತಿಯಲ್ಲಿ ಜ್ಞಾನ, ವೇದನ, ಉಪಾಸನಾ, ವಿದ್ಯಾ -ಈ ಶಬ್ದಗಳನ್ನೆಲ್ಲ ಪರ್ಯಾಯವಾಗಿ ಉಪಯೋಗಿಸಿರುತ್ತದೆಯಾದರೂ ಈ ಶಬ್ದಗಳಿಗೆ ಭಾವನೆ, ವಸ್ತುತಂತ್ರಜ್ಞಾನ-ಎಂಬ ಎರಡರ್ಥವೂ ಇರುತ್ತದೆ. **ಈಚಿನ ವೇದಾಂತಗ್ರಂಥಕಾರರ ರೂಢಿಯನ್ನು ಅನುಸರಿಸಿ ನಾವು ವಸ್ತುತಂತ್ರಜ್ಞಾನವನ್ನೇ ಜ್ಞಾನವೆಂದೂ ಭಾವನಾರೂಪವಾದ ಧ್ಯಾನವನ್ನೇ ಉಪಾಸನೆಯೆಂದೂ ಕರೆಯುವೆವು.**

(೧)ಕಥಂ ತರ್ಹಿ 'ಆತ್ಮಾ ಅನ್ವೇಷ್ಟವ್ಯಃ' (ಛಾಂ. ೮-೭-೧), 'ಆತ್ಮಲಾಭಾತ್ ನ ಪರಂ ವಿದ್ಯತೇ' (ಆ.ಧ. ೧-೮-೨೨-೧)- ಇತಿ ಶ್ರುತಿಸ್ಮೃತೀ ? ಯಾವತಾ ನ ಲಬ್ಧೈವ ಲಬ್ಧವ್ಯೋ ಭವತಿ

ಇತ್ಯುಕ್ತಮ್ । ಬಾಢಮ್। ತಥಾಪಿ ಆತ್ಮನಃ ಅಪ್ರಚ್ಯುತಾತ್ಮಭಾವಸ್ಯೈವ ಸತಃ, ತತ್ತ್ವಾನವಬೋಧ-ನಿಮಿತ್ತೋ ದೇಹಾದಿಷು ಅನಾತ್ಮಸು ಆತ್ಮತ್ವನಿಶ್ಚಯೋ ಲೌಕಿಕೋ ದೃಷ್ಟಃ। ತೇನ ದೇಹಾದಿಭೂತಸ್ಯ ಆತ್ಮನೋಽಪಿ ಆತ್ಮಾ ಅನನ್ವಿಷ್ಟಃ ಅನ್ವೇಷ್ಟವ್ಯಃ, ಅಲಬ್ಧೋ ಲಬ್ಧವ್ಯಃ, ಅಶ್ರುತಃ ಶ್ರೋತವ್ಯಃ, ಅಮತೋ ಮನ್ತವ್ಯಃ, ಅವಿಜ್ಞಾತೋ ವಿಜ್ಞಾತವ್ಯಃ ಇತ್ಯಾದಿಭೇದವ್ಯಪದೇಶಃ ಉಪಪದ್ಯತೇ ॥

-ಸೂ. ಭಾ. ೧-೧-೧೭-೧೦೪.

(೨) ವಿದ್ಯುಪಾಸ್ತ್ಯೋಶ್ಚ ವೇದಾನ್ತೇಷು ಅವ್ಯತಿರೇಕೇಣ ಪ್ರಯೋಗೋ ದೃಶ್ಯತೇ॥

-ಸೂ. ಭಾ. ೪-೧-೧-೫೦೩.

**(೩) ಓಮಿತ್ಯೇತದಕ್ಷರಮುದ್ಗೀಥಮುಪಾಸೀತ॥** -ಛಾಂ. ೧-೧-೧.

ತದೇತದಕ್ಷರಂ ವರ್ಣಾತ್ಮಕಮ್ ಉದ್ಗೀಥಭಕ್ತ್ಯವಯವತ್ವಾತ್ ಉದ್ಗೀಥಶಬ್ದವಾಚ್ಯಮ್ ಉಪಾಸೀತ। ಕರ್ಮಾಙ್ಗಾವಯವಭೂತೇ ಓಂಕಾರೇ ಪರಮಾತ್ಮಪ್ರತೀಕೇ ದೃಢಾಮ್ ಐಕಾಗ್ರ್ಯಲಕ್ಷಣಾಂ ಮತಿಂ ಸನ್ತನುಯಾತ್॥ -ಛಾಂ. ಭಾ.೧-೧-೧-೭.

ಇಲ್ಲಿ 'ಉಪಾಸನೆ' ಎಂಬ ಶಬ್ದವನ್ನು ಭಾವನಾರೂಪವಾದ ಮತಿಸಂತಾನ ಎಂಬರ್ಥದಲ್ಲಿ ಉಪಯೋಗಿಸಿದೆ.

(೪) ಅಕೃತ್ಸ್ನೋ ಹಿ ಸಃ ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ ವಾಕ್ಪಶ್ಯಂಶ್ಚಕ್ಷುಃ ಶೃಣ್ವಞ್ಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ । ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷೋಽತೋ ಏಕೈಕೇನ ಭವತ್ಯಾತ್ಮೇತ್ಯೇವೋಪಾಸೀ-ತಾತ್ರ ಹ್ಯೇತೇ ಸರ್ವ ಏಕಂ ಭವನ್ತಿ। ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾಽನೇನ ಹ್ಯೇತತ್ಸರ್ವಂ ವೇದ॥ -ಬೃ.೧-೪-೭.

ಕಥಂ ಪುನಃ ಪಶ್ಯನ್ ವೇದ ಇತಿ? ಆಹ- ಆತ್ಮೇತ್ಯೇವ। ಆತ್ಮಾ ಇತಿ ಪ್ರಾಣಾದೀನಿ ವಿಶೇಷಣಾನಿ ಯಾನ್ಯುಕ್ತಾನಿ ತಾನಿ ಯಸ್ಯ ಸ ಆಪ್ನುವನ್ ತಾನಿ ಆತ್ಮಾ ಇತ್ಯುಚ್ಯತೇ। ಸ ತಥಾ ಕೃತ್ಸ್ನವಿಶೇಷೋಪಸಂಹಾರೀ ಸನ್ ಕೃತ್ಸ್ನೋ ಭವತಿ । ವಸ್ತುಮಾತ್ರರೂಪೇಣ ಹಿ ಪ್ರಾಣಾದ್ಯುಪಾಧಿವಿಶೇಷಕ್ರಿಯಾಜನಿತಾನಿ ವಿಶೇಷಣಾನಿ ವ್ಯಾಪ್ನೋತಿ। ತಥಾ ಚ ವಕ್ಷ್ಯತಿ ''ಧ್ಯಾಯತೀವ ಲೇಲಾಯತೀವ'' ಇತಿ। ತಸ್ಮಾತ್ ಆತ್ಮೇತ್ಯೇವ ಉಪಾಸೀತ। ಏವಂ ಕೃತ್ಸ್ನೋ ಹಿ ಅಸೌ ಸ್ವೇನ ವಸ್ತುರೂಪೇಣ ಗೃಹ್ಯಮಾಣೋ ಭವತಿ॥ -ಬೃ. ಭಾ. ೧-೪-೭-೧೩೩.

ಇಲ್ಲಿ 'ಉಪಾಸನೆ' ಎಂಬ ಶಬ್ದವನ್ನು ಇದ್ದದ್ದನ್ನು ಅರಿತುಕೊಳ್ಳುವದು ಎಂಬರ್ಥದಲ್ಲಿ ಉಪಯೋಗಿಸಿರುತ್ತದೆ. ಇದೇ ಮಂತ್ರದಲ್ಲಿ 'ವೇದನ' ಶಬ್ದವೂ ಇದೇ ಅರ್ಥದಲ್ಲಿ ಉಪಯುಕ್ತವಾಗಿದೆ.

(೫) ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತ ರಾಕಾಶಸ್ತಸ್ಮಿನ್ ಯದನ್ತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ॥

-ಛಾಂ. ೮-೧-೧.

ಅನ್ತರಾಕಾಶಃ ಆಕಾಶಾಖ್ಯಂ ಬ್ರಹ್ಮ । 'ಆಕಾಶೋ ವೈ ನಾಮ' (ಛಾಂ.೮-೧೪-೧) ಇತಿ ಹಿ ವಕ್ಷ್ಯತಿ । ಆಕಾಶ ಇವ ಅಶರೀರತ್ವಾತ್, ಸೂಕ್ಷ್ಮತ್ವಸರ್ವಗತತ್ವಸಾಮಾನ್ಯಾಚ್ಚ । ತಸ್ಮಿನ್ ಆಕಾಶಾಖ್ಯೇ ಯದನ್ತರ್ಮಧ್ಯೇ ತದನ್ವೇಷ್ಟವ್ಯಮ್। ತದ್ವಾವ ತದೇವ ಚ ವಿಶೇಷೇಣ ಜಿಜ್ಞಾಸಿತವ್ಯಮ್। ಗುರ್ವಾಶ್ರಯಣಶ್ರವಣಾದ್ಯುಪಾಯೈಃ ಅನ್ವಿಷ್ಯ ಚ ಸಾಕ್ಷಾತ್ಕರಣೀಯಮಿತ್ಯರ್ಥ ॥

-ಛಾಂ. ಭಾ. ೮-೧-೧-೬೦೭.

**ಇಲ್ಲಿ 'ವಿಜ್ಞಾನ' ಎಂಬ ಮಾತನ್ನು ಉಪಾಸನೆಯಿಂದಾಗುವ ಸಾಕ್ಷಾತ್ಕಾರ ಎಂಬರ್ಥದಲ್ಲಿ ಪ್ರಯೋಗಿಸಿದೆ.**

(೬)ಯ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಙ್ಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ॥ -ಛಾಂ. ೮-೭-೧.

ಸೋಽನ್ವೇಷ್ಟವ್ಯಃ ಶಾಸ್ತ್ರಾಚಾರ್ಯೋಪದೇಶೈಃ ಜ್ಞಾತವ್ಯಃ। ಸ ವಿಶೇಷೇಣ ಜ್ಞಾತುಮ್ ಏಷ್ಟವ್ಯಃ ವಿಜಿಜ್ಞಾಸಿತವ್ಯಃ। ಸ್ವಸಂವೇದ್ಯತಾಮ್ ಆಪಾದಯಿತವ್ಯಃ ॥ -ಛಾಂ. ಭಾ. ೮-೭-೧-೬೪೬.

ಇಲ್ಲಿ 'ವಿಜ್ಞಾನ' ಎಂಬ ಮಾತನ್ನು ನೇರಾಗಿ ಅರಿತು ಅನುಭವಕ್ಕೆ ತಂದುಕೊಳ್ಳುವದು- ಎಂಬ ಅರ್ಥದಲ್ಲಿ ಪ್ರಯೋಗಿಸಿದೆ.

೧೭೮. ಆತ್ಮನು ಇದ್ದಂತೆ ಅರಿತುಕೊಳ್ಳುವ **ವಸ್ತುತಂತ್ರವಾದ ವಿಜ್ಞಾನವುಂಟಾಗುವದಕ್ಕೆ** ಶ್ರವಣಮನನನಿದಿಧ್ಯಾಸನಗಳು ನೇರಾದ ಸಾಧನಗಳು. ಉಪಾಸನೆಯಿಂದಾಗುವ ಆಯಾ ದೇವತೆಯೇ ತಾನೆಂಬ **ಅಭಿಮಾನರೂಪವಾದ ವಿಜ್ಞಾನವುಂಟಾಗುವದಕ್ಕೆ** ಉಪಾಸ್ಯವಿಷಯವಾದ ಪ್ರತ್ಯಯವನ್ನೇ ನಡುವೆ ಮತ್ತೊಂದರ ಭಾವನೆಯು ಬರದಂತೆ, ಎಡೆಬಿಡದೆ ಸಾಗಿಸಿಕೊಂಡು ಹೋಗಬೇಕಾದದ್ದು ಅವಶ್ಯವು.

(೧) ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ ॥

-ಬೃ. ೪-೫-೬.

(೨) ಸಾಕ್ಷಾದೇವ ಚ ಕಾರಣತ್ವಾತ್ ಶ್ರವಣಮನನನಿದಿಧ್ಯಾಸನಾನಾಮ್ ॥

- ತೈ. ಭಾ. ೧-೧೨-೮೫.

(೩) ಉಪಾಸನಂ ನಾಮ ಉಪಾಸ್ಯಾರ್ಥವಾದೇ ಯಥಾ ದೇವತಾದಿಸ್ವರೂಪಂ ಶ್ರುತ್ಯಾ ಜ್ಞಾಪ್ಯತೇ ತಥಾ ಮನಸಾ ಉಪಗಮ್ಯ ಆಸನಂ ಚಿನ್ತನಮ್, ಲೌಕಿಕಪ್ರತ್ಯಯಾವ್ಯವಧಾನೇನ ಯಾವತ್ ತದ್ದೇವತಾದಿಸ್ವರೂಪಾತ್ಮಾಭಿಮಾನಾಭಿವ್ಯಕ್ತಿಃ (ಇತಿ) । ಲೌಕಿಕಾತ್ಮಾಭಿಮಾನವತ್ । 'ದೇವೋ ಭೂತ್ವಾ ದೇವಾನಪ್ಯೇತಿ ' (ಬೃ.೪-೧-೨), 'ಕಿಂ ದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸಿ ' (ಬೃ. ೩-೯-೨೦) ಇತ್ಯೇವಮಾದಿಶ್ರುತಿಭ್ಯಃ ॥ -ಬೃ. ಭಾ. ೧-೩-೯-೬೭.

೧೭೯. **ಆತ್ಮನ** ದರ್ಶನವೆಂದರೆ ದೃಷ್ಟಿಗೆ ವಿಷಯವಾಗಿಸಿಕೊಳ್ಳುವದಲ್ಲ, ಅವನೇ ತಾನೆಂಬ ಅರಿವಿನಲ್ಲಿ ನೆಲೆನಿಲ್ಲುವದು. ಆಗ ಆತ್ಮನನ್ನು ಅರಿಯಬೇಕೆಂಬ ಆಕಾಂಕ್ಷೆ ಮತ್ತೆ ಉಳಿಯುವದಿಲ್ಲ. **ಶ್ರವಣ**ವೆಂದರೆ ಶಾಸ್ತ್ರವಾಕ್ಯಗಳನ್ನೂ ಆಚಾರ್ಯ

ವಾಕ್ಯಗಳನ್ನೂ ಕೇಳಿ ಅರ್ಥವನ್ನು ತಿಳಿದುಕೊಳ್ಳುವದು; **ಮನನ**ವೆಂದರೆ ಶ್ರವಣಮಾಡಿದ್ದನ್ನು ಯುಕ್ತಿಗೆ ಹೊಂದಿಸಿ ಆಲೋಚಿಸುವದು; **ನಿದಿಧ್ಯಾಸನ**ವೆಂದರೆ ಅರಿವು ಮನಸ್ಸಿಗೆ ತಟ್ಟಿ ನಿಶ್ಚಯವಾಗುವಂತೆ ವಸ್ತುವನ್ನು ಲಕ್ಷ್ಯವಿಟ್ಟು ಚಿಂತಿಸುವದು. ಈ ಮೂರೂ ಹೊಂದುಗಡೆಯಾದರೇ ಬ್ರಹ್ಮೈಕತ್ವದ ಸಮ್ಯಗ್ದರ್ಶನವಾಗುವದೇ ಹೊರತು ಬರಿಯ ಶ್ರವಣಮಾತ್ರದಿಂದ ಎಲ್ಲರಿಗೂ ದರ್ಶನವಾಗುವದಿಲ್ಲ. (**ಭಾಮತೀವ್ಯಾಖ್ಯಾನ**ದಲ್ಲಿ ಶ್ರವಣಮನನನಿದಿಧ್ಯಾಸನಗಳನ್ನು ಧ್ಯಾನ-ಧಾರಣಾರೂಪವಾದ ಸಾಧನಗಳೆಂದೂ ದರ್ಶನವನ್ನು ಸಮಾಧಿಯೆಂದೂ ಭಾಷ್ಯವಿರುದ್ಧವಾಗಿ ವರ್ಣಿಸಿರುತ್ತದೆ)

(೧) ಶ್ರೋತವ್ಯಃ, ಪೂರ್ವಮಾಚಾರ್ಯತಃ ಆಗಮತಶ್ಚ। ಪಶ್ಚಾತ್ ಮನ್ತವ್ಯಃ, ತರ್ಕತಃ। ತತೋ ನಿದಿಧ್ಯಾಸಿತವ್ಯಃ, ನಿಶ್ಚಯೇನ ಧ್ಯಾತವ್ಯಃ। ಏವಂ ಹಿ ಅಸೌ ದೃಷ್ಟೋ ಭವತಿ ಶ್ರವಣಮನನ ನಿದಿಧ್ಯಾಸನಸಾಧನೈರ್ನಿರ್ವರ್ತಿತೈಃ । ಯದಾ ಏಕತ್ವಮ್ ಏತಾನಿ ಉಪಗತಾನಿ, ತದಾ ಸಮ್ಯಗ್ದರ್ಶನಂ ಬ್ರಹ್ಮೈಕತ್ವ ವಿಷಯಂ ಪ್ರಸೀದತಿ, ನಾನ್ಯಥಾ ಶ್ರವಣಮಾತ್ರೇಣ॥

-ಬೃ. ಭಾ. ೨-೪-೫-೩೫೯.

(೨) ಆತ್ಮನಿ ಖಲು ಅರೇ ಮೈತ್ರೇಯಿ, ದೃಷ್ಟೇ। ಕಥಂ ದೃಷ್ಟೇ ಆತ್ಮನಿ ಇತಿ? ಉಚ್ಯತೇ- ಪೂರ್ವಮ್ ಆಚಾರ್ಯಾಗಮಾಭ್ಯಾಂ ಶ್ರುತೇ, ಪುನಸ್ತರ್ಕೇಣ ಉಪಪತ್ತ್ಯಾ ಮತೇ ವಿಚಾರಿತೇ। ಶ್ರವಣಂ ತು ಆಗಮಮಾತ್ರೇಣ। ಮತೇ ಉಪಪತ್ತ್ಯಾ। ಪಶ್ಚಾದ್ ವಿಜ್ಞಾತೇ ಏವಮೇತತ್ ನಾನ್ಯಥಾ ಇತಿ। ಕಿಂ ಭವತೀತಿ? ಉಚ್ಯತೇ ಇದಂ ವಿದಿತಂ ಭವತಿ ॥ -ಬೃ. ಭಾ. ೪-೫-೬-೩೨೭.

(೩) ನನು ವಿಪ್ರತಿಷಿದ್ಧಂ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ ಇತಿ ಶ್ರುತೇಃ ವಿಜ್ಞಾತುರ್ವಿಜ್ಞಾನಮ್ । ನ । ಏವಂವಿಜ್ಞಾನಾತ್ ನ ವಿಪ್ರತಿಷೇಧಃ ಏವಂ ದೃಷ್ಟೇರ್ದ್ರಷ್ಟಾ ಇತಿ ವಿಜ್ಞಾಯತ ಏವ । ಅನ್ಯಜ್ಞಾನಾನಪೇಕ್ಷತ್ವಾಚ್ಚ । ನ ಚ ದ್ರಷ್ಟುರ್ನಿತ್ಯೈವ ದೃಷ್ಟಿಃ ಇತ್ಯೇವಂ ವಿಜ್ಞಾತೇ ದ್ರಷ್ಟೃವಿಷಯಾಂ ದೃಷ್ಟಿಮನ್ಯಾಮ್ ಆಕಾಙ್ಕ್ಷತೇ। ತದಸಂಭವಾದೇವ । .....ನಹ್ಯವಿದ್ಯಮಾನೇ ವಿಷಯೇ ಆಕಾಙ್ಕ್ಷಾ ಕಸ್ಯಚಿದುಪಜಾಯತೇ। ನ ಚ ದೃಶ್ಯಾ ದೃಷ್ಟಿರ್ದ್ರಷ್ಟಾರಂ ವಿಷಯೀಕರ್ತುಮುತ್ಸಹತೇ ಯತಸ್ತಾಮ್ ಆಕಾಙ್ಕ್ಷೇತ । ನ ಚ ಸ್ವರೂಪವಿಷಯಾಕಾಙ್ಕ್ಷಾ ಸ್ವಸ್ಯೈವ ॥ -ಬೃ. ಭಾ. ೧-೪-೧೦-೧೬೨.

೧೮೦. ಆತ್ಮನ ದರ್ಶನಕ್ಕಾಗಿ ಹೇಳಿರುವ ಶ್ರವಣಾದಿಗಳು ಸಾಧನವಾದ್ದರಿಂದ ಅವು ವಿಹಿತವಾಗಿರುತ್ತವೆ ಎಂದು ಕೆಲವರು ಭಾವಿಸಬಹುದು. ದ್ರಷ್ಟವ್ಯಃ, ಶ್ರೋತವ್ಯಃ- ಮುಂತಾದ ಶಬ್ದಗಳಲ್ಲಿ ವಿಧಿಯನ್ನು ತೋರಿಸುವ 'ತವ್ಯ' ಪ್ರತ್ಯಯವೂ ಕಂಡುಬರುತ್ತದೆ ಯಾದರೂ ಇವು ವಿಧಿಗಳೇ ಎಂದು ಭಾವಿಸುವದಕ್ಕಿಲ್ಲ. ಏಕೆಂದರೆ ಇವು ಅನಾತ್ಮದ ಕಡೆಯಿಂದ ಹಿಂತಿರುಗಿಸಿ ಆತ್ಮನ ಕಡೆಗೆ ಅವಧಾನವನ್ನು ಮಾಡಬೇಕೆಂದು ಹೇಳುವಷ್ಟು ಮಟ್ಟಿಗೆ ಪ್ರವರ್ತಕವಾಕ್ಯಗಳೆಂದು ಹಿಂದೆ (೬೫) ತಿಳಿಸಿರುತ್ತೇವೆ. ಪರಮಾರ್ಥವಾಗಿ ಶ್ರವಣಾದಿಜ್ಞಾನಗಳನ್ನು ವಿಧಾನಮಾಡುವದು ಲೋಕದಲ್ಲಿಯೂ ಯಾರಿಗೂ ಆಗುವದಿಲ್ಲ; ಇದನ್ನು ನೋಡು, ಇದನ್ನು ಕೇಳು- ಎಂದು ಹೇಳಿದರೆ ಅತ್ತಕಡೆಗೆ

ಲಕ್ಷ್ಯವಿಡು ಎಂದರ್ಥವೇ ಹೊರತು ದರ್ಶನಜ್ಞಾನವನ್ನು ಮಾಡಿಕೊ, ಶ್ರವಣಜ್ಞಾನವನ್ನು ಮಾಡಿಕೊ-ಎಂದೇನೂ ಅರ್ಥವಲ್ಲ; ಏಕೆಂದರೆ ಜ್ಞಾನವು ಪ್ರಮಾಣಕ್ಕೂ ವಸ್ತುವಿಗೂ ಅನುಗುಣವಾಗಿ ಆಗತಕ್ಕದ್ದೇ ಹೊರತು ಮನುಷ್ಯಪ್ರಯತ್ನದಿಂದ ಆಗತಕ್ಕದ್ದಲ್ಲ. ಇದನ್ನು ಹಿಂದೆ (೭೬) ತಿಳಿಸಿರುತ್ತೇವೆ. ಶ್ರವಣಾದಿಪ್ರಯತ್ನವನ್ನು ಎಷ್ಟುಸಲ ಮಾಡಬೇಕು?- ಎಂಬುದನ್ನು ಶಾಸ್ತ್ರದಿಂದ ತಿಳಿದುಕೊಳ್ಳಬೇಕಾದ ಅವಶ್ಯವಿಲ್ಲವೆಂಬುದೂ ಇದರಿಂದ ವ್ಯಕ್ತವಾಗುತ್ತದೆ; 'ಭತ್ತವನ್ನು ಕುಟ್ಟು' ಎಂದರೆ ಅಕ್ಕಿಯಾಗುವವರೆಗೆ- ಎಂದು ಹೇಗೆ ತಾನೇ ಸಿದ್ಧವಾಗಿರುವದೋ ಹಾಗೆ ಶ್ರವಣಮನನನಿದಿಧ್ಯಾಸನ ಪ್ರಯತ್ನಗಳನ್ನು ಎಲ್ಲಿಯವರೆಗೆ ಮಾಡಬೇಕೆಂದರೆ ಆತ್ಮಸ್ವರೂಪವಿಜ್ಞಾನರೂಪವಾದ ದರ್ಶನವಾಗುವವರೆಗೆ ಎಂದು ತಾನೇ ಏರ್ಪಡುತ್ತದೆ. ಶ್ರವಣಾದಿಗಳು ಶಾಸ್ತ್ರೋಕ್ತ ಕರ್ಮಗಳಂತೆ ಅದೃಷ್ಟಫಲಕ್ಕಾಗಿ ವಿಧಿಸಿರುವ ಸಾಧನಗಳಲ್ಲ, ದೃಷ್ಟಪ್ರಯೋಜನಕ್ಕಾಗಿ ಮಾಡಿರುವ ಉಪದೇಶಗಳು. ಆದ್ದರಿಂದ ಹೀಗೆ ಹೀಗೆ ಶ್ರವಣಾದಿಗಳನ್ನು ಮಾಡಬೇಕು ಎಂದು ನಿಯಮಿಸುವದಕ್ಕಾಗಿ ಇಲ್ಲಿ ವಿಧಿಶಬ್ದಗಳು ಬಂದಿರುತ್ತವೆ.

(೧) ದ್ರಷ್ಟವ್ಯಾದಿಶಬ್ದಾ ಅಪಿ ಪರವಿದ್ಯಾಧಿಕಾರಪಠಿತಾಃ ತತ್ತ್ವಾಭಿಮುಖೀಕರಣಪ್ರಧಾನಾಃ ; ನ ತತ್ತ್ವಾವಬೋಧವಿಧಿಪ್ರಧಾನಾ ಭವನ್ತಿ । ಲೋಕೇಽಪಿ 'ಇದಂ ಪಶ್ಯ', 'ಇದಮ್ ಆಕರ್ಣಯ' ಇತಿ ಚೈವಂಜಾತೀಯಕೇಷು ನಿರ್ದೇಶೇಷು 'ಪ್ರಣಿಧಾನಮಾತ್ರಂ ಕುರು' ಇತ್ಯುಚ್ಯತೇ ನ ಸಾಕ್ಷಾತ್ ಜ್ಞಾನಮೇವ ಕುರು ಇತಿ । ಜ್ಞೇಯಾಭಿಮುಖಸ್ಯಾಪಿ ಜ್ಞಾನಂ ಕದಾಚಿತ್ ಜಾಯತೇ, ಕದಾಚಿತ್ ನ ಜಾಯತೇ । ತಸ್ಮಾತ್ ತಂ ಪ್ರತಿ ಜ್ಞಾನವಿಷಯ ಏವ ದರ್ಶಯಿತವ್ಯೋ ಜ್ಞಾಪಯಿತುಕಾಮೇನ । ತಸ್ಮಿನ್ ದರ್ಶಿತೇ ಸ್ವಯಮೇವ ಯಥಾವಿಷಯಂ ಯಥಾಪ್ರಮಾಣಂ ಚ ಜ್ಞಾನಮುತ್ಪದ್ಯತೇ ॥ -ಸೂ. ಭಾ. ೩-೨-೨೧-೨೯೧.

(೨) ಜ್ಞಾನಂ ತು ಪ್ರಮಾಣಜನ್ಯಂ ಯಥಾಭೂತವಿಷಯಂ ಚ । ನ ತನ್ನಿಯೋಗಶತೇನಾಪಿ ಕಾರಯಿತುಂ ಶಕ್ಯತೇ । ನ ಚ ಪ್ರತಿಷೇಧಶತೇನಾಪಿ ವಾರಯಿತುಂ ಶಕ್ಯತೇ। ನ ಹಿ ತತ್ ಪುರುಷತನ್ತ್ರಮ್, ವಸ್ತುತನ್ತ್ರಮೇವ ಹಿ ತತ್ । ಅತೋಽಪಿ ನಿಯೋಗಾಭಾವಃ ॥

-ಸೂ. ಭಾ. ೩-೨-೨೧-೨೯೧.

(೩) ದರ್ಶನಪರ್ಯವಸಾನಾನಿ ಹಿ ಶ್ರವಣಾದೀನಿ ಆವರ್ತ್ಯಮಾನಾನಿ ದೃಷ್ಟಾರ್ಥಾನಿ ಭವನ್ತಿ । ಯಥಾವಘಾತಾದೀನಿ ತಣ್ಡುಲಾದಿನಿಷ್ಪತ್ತಿಪರ್ಯವಸಾನಾನಿ, ತದ್ವತ್ ॥

-ಸೂ. ಭಾ. ೪-೧-೧-೫೦೩.

(೪) ಸ ಸರ್ವಾಂಶ್ಚ ಲೋಕಾನಾಪ್ನೋತಿ ಕಾಮಾನ್ ಯಸ್ತಮಾತ್ಮಾನಂ ಯಥೋಕ್ತೇನ ಪ್ರಕಾರೇಣ ಶಾಸ್ತ್ರಾಚಾರ್ಯೋಪದೇಶೇನ ಅನ್ವಿಷ್ಯ ವಿಜಾನಾತಿ ಸ್ವಸಂವೇದ್ಯತಾಮ್ ಆಪಾದಯತಿ। ತಸ್ಯ ಏತತ್ ಸರ್ವಲೋಕಕಾಮಾವಾಪ್ತಿಃ ಸರ್ವಾತ್ಮತಾ ಫಲಂ ಭವತಿ ಇತಿ ಹ ಕಿಲ ಪ್ರಜಾಪತಿರುವಾಚ। ಅನ್ವೇಷ್ಟವ್ಯೋ ವಿಜಿಜ್ಞಾಸಿತವ್ಯಃ ಇತಿ ಚ ಏಷ ನಿಯಮವಿಧಿರೇವ ನಾಪೂರ್ವ ವಿಧಿಃ । ಏವಮನ್ವೇಷ್ಟವ್ಯೋ ವಿಜಿಜ್ಞಾಸಿತವ್ಯಃ ಇತ್ಯರ್ಥಃ। ದೃಷ್ಟಾರ್ಥತ್ವಾತ್ ಅನ್ವೇಷಣವಿಜಿಜ್ಞಾಸ-

ನಯೋಃ। ದೃಷ್ಟಾರ್ಥತ್ವಂ ಚ ದರ್ಶಯಿಷ್ಯತಿ- ''ನಾಽಹಮತ್ರ ಭೋಗ್ಯಂ ಪಶ್ಯಾಮಿ'' ಇತ್ಯನೇನ ಅಸಕೃತ್। ಪರರೂಪೇಣ ಚ ದೇಹಾದಿ ಧರ್ಮೈಃ ಅವಗಮ್ಯಮಾನಸ್ಯ ಆತ್ಮನಃ ಸ್ವರೂಪಾಧಿಗಮೇ ವಿಪರೀತಾಧಿಗಮಾ ನಿವೃತ್ತಿಃ ದೃಷ್ಟಂ ಫಲಮ್ ಇತಿ ನಿಯಮಾರ್ಥತೈವ ಅಸ್ಯ ವಿಧೇಯರ್ಯುಕ್ತಾ, ನ ತು ಅಗ್ನಿಹೋತ್ರಾದೀನಾಮಿವ ಅಪೂರ್ವವಿಧಿತ್ವಮ್ ಇಹ ಸಂಭವತಿ॥

-ಛಾಂ. ಭಾ. ೮-೭-೧-೬೪೭,೬೪೮.

೧೫೧. 'ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನ ಮಾಡಬೇಕು' ಎಂದು ಅನೇಕ ಸಲ ಹೇಳಿರುವದರಿಂದಲೇ ಸಾಧನವನ್ನು ಆವೃತ್ತಿ ಮಾಡಬೇಕೆಂದು ಸಿದ್ಧವಾಗುತ್ತದೆ; ಇದಲ್ಲದೆ ಉಪಾಸನೆ, ನಿದಿಧ್ಯಾಸನ- ಎಂಬ ಮಾತುಗಳಿಗೆ ಬಿಡದೆಮಾಡುವ ಸೇವೆಯೇ, ಬಿಡದೆ ಮಾಡುವ ಧ್ಯಾನವೇ ಅರ್ಥ. 'ಗುರುವನ್ನು ಉಪಾಸನೆಮಾಡುತ್ತಿದ್ದಾನೆ', 'ರಾಜನನ್ನು ಉಪಾಸನೆಮಾಡುತ್ತಿದ್ದಾನೆ', 'ಬೇರೊಂದು ದೇಶಕ್ಕೆ ಹೋಗಿರುವ ಪತಿಯನ್ನು ಧ್ಯಾನಿಸುತ್ತಿದ್ದಾಳೆ'- ಎಂಬಿವೇ ಮುಂತಾದ ಪ್ರಯೋಗಗಳಲ್ಲಿ ತಾತ್ಪರ್ಯದಿಂದ ನಿರಂತರವಾಗಿ ಮಾಡುವ ಸೇವೆಯನ್ನೂ ಸ್ಮರಣೆಯನ್ನೂ ಈ ಉಪಾಸನೆ, ಧ್ಯಾಸ- ಎಂಬ ಶಬ್ದಗಳು ತಿಳಿಸುತ್ತವೆ. ಕಾಲಾಂತರದಲ್ಲಿ ಪಡೆಯಬೇಕಾದ ಫಲಕ್ಕಾಗಿ ಮಾಡುವ ಉಪಾಸನೆಗಳು ಎಷ್ಟು ಮಾಡಿದರೆ ಅಷ್ಟು ಬಲವಾಗುವದರಿಂದ ಅವುಗಳಿಗೆ ಆವೃತ್ತಿಯು ಬೇಕೇಬೇಕು. ಆದರೆ ಬ್ರಹ್ಮಾತ್ಮತ್ವದರ್ಶನಕ್ಕಾಗಿ ಮಾಡುವ ಶ್ರವಣಮನನನಿದಿಧ್ಯಾಸನಗಳನ್ನೇಕೆ ಆವೃತ್ತಿಮಾಡ ಬೇಕು?- ಎಂಬ ಶಂಕೆಯು ಬರಬಹುದು. ಇದಕ್ಕೆ ಪರಿಹಾರವೇನೆಂದರೆ: ಶ್ರವಣಾದಿ ಗಳು ದೃಷ್ಟಫಲವುಳ್ಳ ಸಾಧನಗಳಾದ್ದರಿಂದ ಎಲ್ಲಿಯವರೆಗೆ ದರ್ಶನವಾಗಿಲ್ಲವೋ ಅಲ್ಲಿಯವರೆಗೆ ಅವನ್ನು ಅಭ್ಯಾಸಮಾಡಬೇಕು. ಒಂದು ಸಲ ಶ್ರವಣಮಾತ್ರದಿಂದಲೇ ದರ್ಶನವಾದರೆ ಅಂಥ ಉತ್ತಮಾಧಿಕಾರಿಗೆ ಮತ್ತೆ ಮಾಡಬೇಕಾದದ್ದು ಏನೂ ಇಲ್ಲ ; ಆದರೆ ಯಾರಿಗೆ ಅಷ್ಟರಿಂದಲೇ ಆಗುವದಿಲ್ಲವೋ ಅವರು ಶ್ರವಣಾದಿಗಳನ್ನು ಆವೃತ್ತಿ ಮಾಡಬೇಕು. ಒಂದು ಸಲಕ್ಕೆ ವಾಕ್ಯಾರ್ಥವು ಸ್ವಲ್ಪಮಟ್ಟಿಗೆ ತಿಳಿದದ್ದು ಶ್ರವಣವನ್ನು ಆವೃತ್ತಿಮಾಡಿದರೆ ಚೆನ್ನಾಗಿ ತಿಳಿಯುವದು ಅನುಭವದಲ್ಲಿದೆ. ಪದಾರ್ಥಜ್ಞಾನಪೂರ್ವಕ ವಾಗಿಯೇ ವಾಕ್ಯಾರ್ಥಜ್ಞಾನವಾಗುವದರಿಂದ ಪದಾರ್ಥವಿವೇಕಕ್ಕಾಗಿ ಶ್ರವಣಮನನ ಗಳನ್ನು ಆವೃತ್ತಿಮಾಡಬೇಕಾಗುತ್ತದೆ. ಆತ್ಮನಲ್ಲಿ ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ವಿಷಯವೇದನೆ-ಮುಂತಾದ ಅನೇಕಾಂಶಗಳು ಅಧ್ಯಾರೋಪಿತವಾಗಿರುವದರಿಂದ ಒಂದೊಂದು ಸಲಕ್ಕೆ ಒಂದೊಂದರ ಅವಧಾನದಿಂದ ಒಂದೊಂದು ಆರೋಪವನ್ನು ಕಳೆದುಕೊಳ್ಳುವದೆಂಬ ಪ್ರಯೋಜನವೂ ಆಗಬಹುದಾಗಿದೆ. ಆದ್ದರಿಂದ ಯಾರಿಗೆ ಒಂದೇ ಸಲಕ್ಕೆ ವಾಕ್ಯಶ್ರವಣದಿಂದ ಜ್ಞಾನವಾಗುತ್ತದೆಯೋ ಅವರಿಗೆ ಕೂಡಲೆ ಅವಿದ್ಯೆಯು ಹೋಗಿಬಿಡುವದರಿಂದ ಅವರು ಮತ್ತೆ ಏನೂ ಮಾಡತಕ್ಕದ್ದಿಲ್ಲ. ಆದರೆ

ಯಾರಿಗೆ ಹಾಗೆ ಜ್ಞಾನವುಂಟಾಗದೆ ಇರುವದೋ ಅವರು ಜ್ಞಾನವುಂಟಾಗುವ ಮುಂಚೆ ಶ್ರವಣಾದಿಗಳನ್ನು ಅಭ್ಯಾಸಮಾಡಬೇಕು. ಜ್ಞಾನವಾದಬಳಿಕವೂ ಅಭ್ಯಾಸವನ್ನು ಮಾಡಬೇಕೆಂಬ ಪ್ರಸಂಖ್ಯಾನವಾದವೇ ಮುಂತಾದ ವಾದಗಳನ್ನು ಹಿಂದೆ (೭೪) ಖಂಡಿಸಿರುತ್ತೇವೆ.

(೧) ಅಪಿ ಚ ಉಪಾಸನಂ ನಿದಿಧ್ಯಾಸನಂ ಚ ಇತಿ ಅನ್ತರ್ಣೀತಾವೃತ್ತಿಗುಣೈವ ಕ್ರಿಯಾ ಅಭಿಧೀಯತೇ। ತಥಾ ಹಿ ಲೋಕೇ 'ಗುರುಮ್ ಉಪಾಸ್ತೇ'. 'ರಾಜಾನಮ್ ಉಪಾಸ್ತೇ' ಇತಿ ಚ । ಯಸ್ತಾತ್ಪರ್ಯೇಣ ಗುರ್ವಾದೀನ್ ಅನುವರ್ತತೇ ಸ ಏವಮುಚ್ಯತೇ। ತಥಾ 'ಧ್ಯಾಯತಿ ಪ್ರೋಷಿತನಾಥಾ ಪತಿಮ್' ಇತಿ ಯಾ ನಿರನ್ತರಸ್ಮರಣಾ ಪತಿಂ ಪ್ರತಿ ಸೋತ್ಕಣ್ಠಾ ಸಾ ಏವಮಭಿಧೀಯತೇ।....ತಸ್ಮಾತ್ ಸಕೃದುಪದೇಶೇಷ್ವಪಿ ಆವೃತ್ತಿಸಿದ್ಧಿಃ। ಅಸಕೃದುಪದೇಶಸ್ತು ಆವೃತ್ತೇಃ ಸೂಚಕಃ॥ -ಸೂ. ಭಾ. ೪-೧-೧-೩

(೨) ಭವೇತ್ ಆವೃತ್ತ್ಯಾನರ್ಥಕ್ಯಂ ತಂ ಪ್ರತಿ ಯಃ 'ತತ್ತ್ವಮಸಿ' ಇತಿ ಸಕೃದುಕ್ತಮೇವ ಬ್ರಹ್ಮಾತ್ಮತ್ವಮ್ ಅನುಭವಿತುಂ ಶಕ್ನುಯಾತ್। ಯಸ್ತು ನ ಶಕ್ನೋತಿ ತಂ ಪ್ರತ್ಯುಪಯುಜ್ಯತ ಏವ ಆವೃತ್ತಿಃ॥

-ಸೂ ಭಾ ೪-೧-೨-೬೦೬

(೩) ನನು ಉಕ್ತಂ ಸಕೃತ್ ಶ್ರುತಂ ಚೇತ್ ತತ್ತ್ವಮಸಿವಾಕ್ಯಂ ಸ್ವಮರ್ಥಮ್ ಅನುಭಾವಯಿತುಂ ನ ಶಕ್ನೋತಿ, ತತ ಆವರ್ತ್ಯಮಾನಮಪಿ ನೈವ ಶಕ್ಷ್ಯತಿ ಇತಿ। ನೈಷ ದೋಷಃ। ನ ಹಿ ದೃಷ್ಟೇ ಅನುಪಪನ್ನಂ ನಾಮ। ದೃಶ್ಯನ್ತೇ ಹಿ ಸಕೃಚ್ಛ್ರುತಾತ್ ವಾಕ್ಯಾತ್ ಮನ್ದಪ್ರತೀತಂ ವಾಕ್ಯಾರ್ಥಮ್ ಆವರ್ತಯನ್ತಃ, ತದಾಭಾಸವ್ಯುದಾಸೇನ ಸಮ್ಯಕ್ಪ್ರತಿಪದ್ಯಮಾನಾಃ॥ -ಸೂ. ಭಾ ೪-೧-೨-೫೦೬.

(೪) ತತ್ರ ಯೇಷಾಮೇತೌ ಪದಾರ್ಥೌ ಅಜ್ಞಾನಸಂಶಯವಿಪರ್ಯಯಪ್ರತಿಬದ್ಧೌ ತೇಷಾಂ 'ತತ್ತ್ವಮಸಿ' ಇತ್ಯೇತದ್ ವಾಕ್ಯಂ ಸ್ವಾರ್ಥೇ ಪ್ರಮಾಂ ನೋತ್ಪಾದಯಿತುಂ ಶಕ್ನೋತಿ ಪದಾರ್ಥಜ್ಞಾನಪೂರ್ವಕತ್ವಾತ್ ವಾಕ್ಯಾರ್ಥಸ್ಯ । ಇತ್ಯತಃ ತಾನ್ ಪ್ರತಿ ಏಷ್ಟವ್ಯಃ ಪದಾರ್ಥವಿವೇಕಪ್ರಯೋಜನಃ ಶಾಸ್ತ್ರಯುಕ್ತ್ಯಭ್ಯಾಸಃ। ಯದ್ಯಪಿ ಚ ಪ್ರತಿಪತ್ತವ್ಯಃ ಆತ್ಮಾ ನಿರಂಶಃ, ತಥಾಪಿ ಅಧ್ಯಾರೋಪಿತಂ ತಸ್ಮಿನ್ ಬಹ್ವಂಶತ್ವಂ ದೇಹೇನ್ದ್ರಿಯಮನೋಬುದ್ಧಿವಿಷಯ-ವೇದನಾದಿಲಕ್ಷಣಮ್। ತತ್ರ ಏಕೇನ ಅವಧಾನೇನ ಏಕಮ್ ಅಂಶಮ್ ಅಪೋಹತಿ, ಅಪರೇಣ ಅಪರಮ್ ಇತಿ ಯುಜ್ಯತೇ ತತ್ರ ಕ್ರಮವತೀ ಪ್ರತಿಪತ್ತಿಃ। ತತ್ತು ಪೂರ್ವರೂಪಮೇವ ಆತ್ಮಪ್ರತಿಪತ್ತೇಃ। ಯೇಷಾಂ ಪುನರ್ನಿಪುಣಮತೀನಾಂ ನಾಜ್ಞಾನಸಂಶಯವಿಪರ್ಯಯಲಕ್ಷಣಃ ಪದಾರ್ಥವಿಷಯಃ ಪ್ರತಿಬನ್ಧೋಽಸ್ತಿ, ತೇ ಶಕ್ನುವನ್ತಿ ಸಕೃದುಕ್ತಮೇವ ತತ್ತ್ವಮಸಿವಾಕ್ಯಾರ್ಥಮ್ ಅನುಭವಿತುಮ್ ಇತಿ ತಾನ್ ಪ್ರತಿ ಆವೃತ್ತ್ಯಾನರ್ಥಕ್ಯಮ್ ಇಷ್ಟಮೇವ॥

-ಸೂ. ಭಾ. ೪-೧-೨-೫೦೬.

೧೮೨. ವೇದಾಂತವಾಕ್ಯವು ಬ್ರಹ್ಮವನ್ನು ತಿಳಿಸಿದ ಬಳಿಕವೂ ಅದರ ವಿಜ್ಞಾನಕ್ಕಾಗಿಯೂ ದ್ವೈತಪ್ರಪಂಚವನ್ನು ಪ್ರವಿಲಯಮಾಡಿಕೊಳ್ಳುವದಕ್ಕಾಗಿಯೂ ಸಾಧಕನನ್ನು ಶಾಸ್ತ್ರವು ಕಟ್ಟು ಮಾಡಬಹುದು- ಎಂದು ಕೆಲವರು ವಾದಿಗಳು ವಾದಿಸುತ್ತಿದ್ದರು. ಆದರೆ ಈ ವಾದವು ಯುಕ್ತಿಯುಕ್ತವಲ್ಲವೆಂದು ಆಚಾರ್ಯರು ತಿಳಿಸಿಕೊಟ್ಟಿರುತ್ತಾರೆ.

ಏಕೆಂದರೆ ಪ್ರಪಂಚವು ನಿಜವಾಗಿದ್ದು ಅದನ್ನು ಪ್ರವಿಲಯಮಾಡಬೇಕೆಂದು ಶಾಸ್ತ್ರವು ಕಟ್ಟುಮಾಡುತ್ತದೆ ಎನ್ನುವದಾದರೆ ಇರುವದನ್ನು ನಾಶಗೊಳಿಸುವದು ಯಾವನಿಂದಲೂ ಆಗಲಾರದಾದ್ದರಿಂದ ಶಾಸ್ತ್ರವು ಅಪ್ರಮಾಣವೆಂದಾಗುವದು. ಮೊದಲೇ ಮುಕ್ತನಾಗಿರುವ ಒಬ್ಬನಿಂದ ಪ್ರವಿಲಯಮಾಡಿದ ಪ್ರಪಂಚವು ಮತ್ತೆ ಉಳಿಯುವದಕ್ಕೂ ಅವಕಾಶವಿಲ್ಲದ್ದರಿಂದ ಈಗ ಪೃಥಿವ್ಯಾದಿಗಳಾಗಲಿ ದೇಹಾದಿಗಳಾಗಲಿ ಇರಬಾರದಾಗುವದು. ಹಾಗಲ್ಲದೆ ಪ್ರಪಂಚವು ಅವಿದ್ಯಾಕೃತವೆಂದಾದರೆ ಬ್ರಹ್ಮೋಪದೇಶದಿಂದಲೇ ಬ್ರಹ್ಮವಿಜ್ಞಾನವೂ ಅವಿದ್ಯಾಕಲ್ಪಿತವಾದ ಪ್ರಪಂಚದ ನಾಶವೂ ಆಗಿಬಿಡುವದರಿಂದ ಉಪದೇಶವಾದ ಬಳಿಕ ಮಾಡಿಕೊಳ್ಳತಕ್ಕದ್ದು ಏನೂ ಉಳಿಯುವದೇ ಇಲ್ಲ. ನಿಯೋಜ್ಯನಾದ ಜೀವನು ಪ್ರಪಂಚದೊಳಗೇ ಸೇರಿರುವನೆಂಬ ಪಕ್ಷದಲ್ಲಿ ಅವನೂ ಪ್ರಪಂಚದೊಡನೆ ನಾಶವಾಗಿಬಿಡುವದರಿಂದ ಮುಕ್ತಿಯು ಯಾರಿಗೂ ಇಲ್ಲವೆಂದಾಗುವದು. ಬ್ರಹ್ಮವೇ ನೀನೆಂಬ ಉಪದೇಶದಿಂದಲೇ ಅವಿದ್ಯಾಕಲ್ಪಿತಜೀವತ್ವವು ಹೋಗಿಬಿಡುವದರಿಂದ, ಮತ್ತೆ ಪ್ರಪಂಚ ಪ್ರವಿಲಯದ ನಿಯೋಗವು ಬರುವದಕ್ಕೆ ಅವಕಾಶವೇ ಇರುವದಿಲ್ಲ. ಜ್ಞಾನವು ಪ್ರಮಾಣಜನ್ಯವಾಗಿ ವಸ್ತುತಂತ್ರವಾಗಿರುವದರಿಂದ ನೂರುಗಟ್ಟಲೆಯ ನಿಯೋಗದಿಂದಲೂ ಅದು ಆಗತಕ್ಕದ್ದಲ್ಲ, ನೂರುಗಟ್ಟಲೆಯ ನಿಷೇಧದಿಂದಲೂ ಅದು ಹೋಗತಕ್ಕದ್ದಲ್ಲ. ಆದ್ದರಿಂದ ಇಲ್ಲಿ ಪ್ರಪಂಚಪ್ರವಿಲಯದ ನಿಯೋಗಕ್ಕೆ ಎಡೆಯಿಲ್ಲ. ಇದೂ ಅಲ್ಲದೆ ನಿಯೋಗನಿಷ್ಠವಾಗಿಯೇ ಶಾಸ್ತ್ರವಿದ್ದರೆ ಜೀವನು ಅನಿಯೋಜ್ಯಬ್ರಹ್ಮವು ಎಂಬ ಮತವೇ ಹಾರಿಹೋಗುವದು. ಶಾಸ್ತ್ರವೇ 'ಅನಿಯೋಜ್ಯಬ್ರಹ್ಮವು ನೀನು' ಎಂದು ಉಪದೇಶವನ್ನೂ ಮಾಡಿ ಬ್ರಹ್ಮವಿಜ್ಞಾನವನ್ನು ಮಾಡಿಕೊ-ಎಂದು ನಿಯೋಗವನ್ನೂ ಮಾಡುವದಾದರೆ ವಾಕ್ಯವು ಎರಡು ಬೇರೆಬೇರೆಯ ವಿರುದ್ಧಾರ್ಥಗಳನ್ನು ತಾತ್ಪರ್ಯದಿಂದ ಹೇಳುವದೆಂದಾಗಿ ಅದು ಅಪ್ರಮಾಣವಾಗುವದು. ಇದೂ ಅಲ್ಲದೆ ಶ್ರುತಿಯಲ್ಲಿ ಕಾಣುವ ವಸ್ತೂಪದೇಶವನ್ನು ಬಿಡುವದು, ನಿಯೋಗವನ್ನು ಕಲ್ಪಿಸುವದು-ಎಂಬ ದೋಷವೂ ಕಾಣದಿರುವ ಮೋಕ್ಷವು ಅದೃಷ್ಟಫಲವೆಂದೂ ಅನಿತ್ಯವೆಂದೂ ಕಲ್ಪಿಸಿದ ದೋಷವೂ, ಪ್ರಪಂಚವಿಲಯವಾದಿಗಳಿಗೆ ಗಂಟುಬೀಳುವವು, ಆದ್ದರಿಂದ ಪ್ರಪಂಚ ಪ್ರವಿಲಯವನ್ನು ಮಾಡಿಕೊಳ್ಳಲೆಂದು ಜೀವನು ಶ್ರುತಿಯಿಂದ ನಿಯುಕ್ತನಾಗಿರುವನೆಂಬುದು ಸರ್ವಥಾ ಒಪ್ಪತಕ್ಕದ್ದಲ್ಲ. ಆದ್ದರಿಂದ ಕ್ರಿಯೆಯನ್ನು ವಿಧಿಸುವದೇ ಶಾಸ್ತ್ರದ ಕೃತ್ಯವೆಂಬ ವಾದದಂತೆ ಯಾವದಾದರೊಂದು ಕರ್ಮದಲ್ಲಿ ಪ್ರವೃತ್ತಿಯನ್ನೋ ಅಥವಾ ಯಾವದಾದರೊಂದು ಕರ್ಮದಿಂದ ನಿವೃತ್ತಿಯನ್ನೋ ಮಾಡುವದೇ ಶಾಸ್ತ್ರಕೃತ್ಯ ಎಂಬ ನಿಯೋಗವಾದಿಗಳ ಮಾತುಗಳೂ ಅವೈದಿಕವಾಗಿರುತ್ತವೆ. ಇದು ಹಗ್ಗ,

ಹಾವಲ್ಲ-ಎಂಬಂತೆ ವಸ್ತುನಿರ್ದೇಶಮಾತ್ರದಿಂದ ಜ್ಞಾನವಾಗುವದೂ ಅದರಿಂದ ಇಷ್ಟಾರ್ಥವಾಗುವದೂ ಲೋಕದಲ್ಲಿ ಕಂಡಿದೆ.

(೧) ತತ್ರ ಯದಿ ತಾವತ್ ವಿದ್ಯಮಾನೋಽಯಂ ಪ್ರಪಞ್ಚಃ ದೇಹಾದಿಲಕ್ಷಣಃ ಆಧ್ಯಾತ್ಮಿಕಃ, ಬಾಹ್ಯಶ್ಚ ಪೃಥಿವ್ಯಾದಿಲಕ್ಷಣಃ ಪ್ರವಿಲಾಪಯಿತವ್ಯಃ ಇತ್ಯುಚ್ಯೇತ, ನ ಪುರುಷಮಾತ್ರೇಣ ಅಶಕ್ಯಃ ಪ್ರವಿಲಾಪಯಿತುಮಿತಿ ತತ್ಪ್ರವಿಲಯೋಪದೇಶಃ ಅಶಕ್ಯವಿಷಯ ಏವ ಸ್ಯಾತ್। ಏಕೇನ ಚ ಆದಿಮುಕ್ತೇನ ಪೃಥಿವ್ಯಾದಿಪ್ರವಿಲಯಃ ಕೃತಃ ಇತಿ ಇದಾನೀಂ ಪೃಥಿವ್ಯಾದಿಶೂನ್ಯಂ ಜಗತ್ ಅಭವಿಷ್ಯತ್। ಅಥ ಅವಿದ್ಯಾಧ್ಯಸ್ತಃ ಬ್ರಹ್ಮಣಿ ಏಕಸ್ಮಿನ್ ಅಯಂ ಪ್ರಪಞ್ಚಃ ವಿದ್ಯಯಾ ಪ್ರವಿಲಾಪ್ಯತೇ ಇತಿ ಬ್ರೂಯಾತ್, ತತೋ ಬ್ರಹ್ಮೈವ ಅವಿದ್ಯಾಧ್ಯಸ್ತಪ್ರಪಞ್ಚಪ್ರತ್ಯಾಖ್ಯಾನೇನ ಆವೇದಯಿತವ್ಯಮ್ 'ಏಕಮೇವಾದ್ವಿತೀಯಂ ಬ್ರಹ್ಮ', 'ತತ್ಸತ್ಯಂ ಸ ಆತ್ಮಾ ತತ್ತ್ವಮಸಿ' ಇತಿ। ತಸ್ಮಿನ್ ಆವೇದಿತೇ ವಿದ್ಯಾ ಸ್ವಯಮೇವ ಉತ್ಪದ್ಯತೇ। ತಯಾ ಚ ಅವಿದ್ಯಾ ಬಾಧ್ಯತೇ, ತತಶ್ಚ ಅವಿದ್ಯಾಧ್ಯಸ್ತಃ ಸಕಲೋಽಯಂ ನಾಮರೂಪಪ್ರಪಞ್ಚಃ ಸ್ವಪ್ನಪ್ರಪಞ್ಚವತ್ ಪ್ರವಿಲೀಯತೇ॥ -ಸೂ. ಭಾ. ೩-೨-೨೧-೨೯೧.

(೨) ನನ್ವಾವೇದಿತೇ ಬ್ರಹ್ಮಣಿ ತದ್ವಿಜ್ಞಾನವಿಷಯಃ, ಪ್ರಪಞ್ಚಪ್ರವಿಲಯವಿಷಯೋ ವಾ ನಿಯೋಗಃ ಸ್ಯಾತ್। ನ। ನಿಷ್ಪ್ರಪಞ್ಚಬ್ರಹ್ಮಾತ್ಮತ್ವಾವೇದನೇನೈವ ಉಭಯಪ್ರಸಿದ್ಧೇಃ। ರಜ್ಜುಸ್ವರೂಪ-ಪ್ರಕಾಶನೇನೈವ ಹಿ ತತ್ಸ್ವರೂಪವಿಜ್ಞಾನಮ್ ಅವಿದ್ಯಾಧ್ಯಸ್ತಸರ್ಪಾದಿಪ್ರಪಞ್ಚಪ್ರವಿಲಯಶ್ಚ ಭವತಿ। ನ ಚ ಕೃತಮೇವ ಪುನಃ ಕ್ರಿಯತೇ॥ -ಸೂ. ಭಾ. ೩-೨-೨೧-೨೯೧.

(೩) ನಿಯೋಜ್ಯೋಽಪಿ ಚ ಪ್ರಪಞ್ಚಾವಸ್ಥಾಯಾಂ ಯೋಽವಗಮ್ಯತೇ ಜೀವೋ ನಾಮ, ಸ ಪ್ರಪಞ್ಚಪಕ್ಷಸ್ಯೈವ ವಾ ಸ್ಯಾತ್ ಬ್ರಹ್ಮಪಕ್ಷಸ್ಯೈವ ವಾ। ಪ್ರಥಮೇ ವಿಕಲ್ಪೇ ನಿಷ್ಪ್ರಪಞ್ಚಬ್ರಹ್ಮತತ್ತ್ವ ಪ್ರತಿಪಾದನೇನ ಪೃಥಿವ್ಯಾದಿವತ್ ಜೀವಸ್ಯಾಪಿ ಪ್ರವಿಲಾಪಿತತ್ವಾತ್ ಕಸ್ಯ ಪ್ರಪಞ್ಚವಿಲಯೇ ನಿಯೋಗ ಉಚ್ಯೇತ, ಕಸ್ಯ ವಾ ನಿಯೋಗನಿಷ್ಠತಯಾ ಮೋಕ್ಷೋಽವಾಪ್ತವ್ಯ ಉಚ್ಯೇತ? ದ್ವಿತೀಯೇಽಪಿ ಬ್ರಹ್ಮೈವ ಅನಿಯೋಜ್ಯಸ್ವಭಾವಂ ಜೀವಸ್ಯ ಸ್ವರೂಪಂ ಜೀವತ್ವಂ ತು ಅವಿದ್ಯಾಕೃತಮೇವ ಇತಿ ಪ್ರತಿಪಾದಿತೇ ಬ್ರಹ್ಮಣಿ ನಿಯೋಜ್ಯಾಭಾವಾತ್ ನಿಯೋಗಾಭಾವ ಏವ॥

-ಸೂ. ಭಾ. ೩-೨-೨೧-೨೯೧.

(೪) ಕಿಂ ಚ ಅನ್ಯತ್ ನಿಯೋಗನಿಷ್ಠತಯೈವ ಪರ್ಯವಸ್ಯತಿ ಆಮ್ನಾಯೇ ಯತ್ ಅಭ್ಯುಪಗತಮ್ ಅನಿಯೋಜ್ಯಬ್ರಹ್ಮಾತ್ಮತ್ವಂ ಜೀವಸ್ಯ ತತ್ ಅಪ್ರಮಾಣಕಮೇವ ಸ್ಯಾತ್। ಅಥ ಶಾಸ್ತ್ರಮೇವ ಅನಿಯೋಜ್ಯಬ್ರಹ್ಮಾತ್ಮತ್ವಮಪಿ ಆಚಕ್ಷೀತ, ತದವಬೋಧೇ ಚ ಪುರುಷಂ ನಿಯುಞ್ಜೀತ, ತತೋ ಬ್ರಹ್ಮಶಾಸ್ತ್ರಸ್ಯ ಏಕಸ್ಯ ದ್ವ್ಯರ್ಥಪರತಾ ವಿರುದ್ಧಾರ್ಥಪರತಾ ಚ ಪ್ರಸಜ್ಯೇಯಾತಾಮ್॥ -ಸೂ. ಭಾ. ೩-೨-೨೧-೨೯೧.

(೫) ನಿಯೋಗಪರತಾಯಾಂ ಚ ಶ್ರುತಹಾನಿಃ, ಅಶ್ರುತಕಲ್ಪನಾ, ಕರ್ಮಫಲವತ್ ಮೋಕ್ಷಫಲಸ್ಯ ಅದೃಷ್ಟಫಲತ್ವಮ್ ಅನಿತ್ಯತ್ವಂ ಚ ಇತ್ಯೇವಮಾದಯೋ ದೋಷಾಃ ನ ಕೇನಚಿತ್ ಪರಿಹರ್ತುಂ ಶಕ್ಯಾಃ॥ -ಸೂ. ಭಾ. ೩-೨-೨೧-೨೯೧.

(೬) ತತ್ರೈವಂ ಸತಿ ಯಥಾಭೂತಬ್ರಹ್ಮಾತ್ಮವಿಷಯಮಪಿ ಜ್ಞಾನಂ ನ ಚೋದನಾತನ್ತ್ರಮ್। ತದ್ವಿಷಯೇ ಲಿಙಾದಯಃ ಶ್ರೂಯಮಾಣಾ ಅಪಿ ಅನಿಯೋಜ್ಯವಿಷಯತ್ವಾತ್ ಕುಣ್ಠೀಭವನ್ತಿ

ಉಪಲಾದಿಷು ಪ್ರಯುಕ್ತಕ್ಷುರತೈಕ್ಷ್ಣ್ಯಾದಿವತ್। ಅಹೇಯಾನುಪಾದೇಯವಸ್ತುವಿಷಯತ್ವಾತ್॥

-ಸೂ ಭಾ ೧-೧-೪-೫೧

(೭) ಯದಪ್ಯುಕ್ತಂ ಕರ್ತವ್ಯವಿಧ್ಯನುಪ್ರವೇಶಮನ್ತರೇಣ ವಸ್ತುಮಾತ್ರಮ್ ಉಚ್ಯಮಾನಮ್ ಅನರ್ಥಕಂ ಸ್ಯಾತ್ 'ಸಪ್ತದ್ವೀಪಾ ವಸುಮತೀ' ಇತ್ಯಾದಿವದಿತಿ, ತತ್ ಪರಿಹೃತಮ್। 'ರಜ್ಜುರಿಯಂ ನಾಯಂ ಸರ್ಪಃ' ಇತಿ ವಸ್ತುಮಾತ್ರ ಕಥನೇಽಪಿ ಪ್ರಯೋಜನಸ್ಯ ದೃಷ್ಟತ್ವಾತ್। ನನು ಶ್ರುತಬ್ರಹ್ಮಣೋಽಪಿ ಯಥಾಪೂರ್ವಂ ಸಂಸಾರಿತ್ವದರ್ಶನಾತ್ ನ ರಜ್ಜುಸ್ವರೂಪಕಥನವತ್ ಅರ್ಥವತ್ತ್ವಮ್ ಇತ್ಯುಕ್ತಮ್। ಅತ್ರೋಚ್ಯತೇ। ನಾವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಂ ಶಕ್ಯಂ ದರ್ಶಯಿತುಮ್। ವೇದಪ್ರಮಾಣಜನಿತಬ್ರಹ್ಮಾತ್ಮಭಾವವಿರೋಧಾತ್॥

-ಸೂ. ಭಾ. ೧-೧-೪-೫೭.

೧೮೩. ಶ್ರವಣವಾದಬಳಿಕವೂ ಮನನನಿದಿಧ್ಯಾಸನಗಳನ್ನು ವಿಧಿಸಿರುವದರಿಂದ ಬ್ರಹ್ಮಜ್ಞಾನವು ವಿಹಿತವಾದದ್ದೇ, ಅಥವಾ ಬ್ರಹ್ಮಜ್ಞಾನದಲ್ಲಿ ಜೀವನು ನಿಯುಕ್ತನಾಗು ತ್ತಾನೆಯೇ ಹೊರತು ಬ್ರಹ್ಮಸ್ವರೂಪವನ್ನು ತಿಳಿಸಿದ ಮಾತ್ರದಿಂದ ವೇದವು ಕೃತಕೃತ್ಯ ವಾಗುವದಿಲ್ಲ- ಎಂಬ ವಾದದಲ್ಲಿ ಹುರುಳಿಲ್ಲವೆಂಬುದು ಈಗ ಸ್ಪಷ್ಟವಾಗುತ್ತದೆ. ಏಕೆಂದರೆ ಶ್ರವಣ, ಮನನ, ನಿದಿಧ್ಯಾಸನ- ಇವುಗಳಲ್ಲಿ ಬ್ರಹ್ಮದ ಕಡೆಗೆ ಲಕ್ಷ್ಯವನ್ನು ಎಳೆಯಬೇಕೆಂದು ಹೇಳಿದೆಯೇ ಹೊರತು ಜ್ಞಾನವನ್ನೇ ವಿಧಿಸಿಲ್ಲ ಎಂದು ಆಗಲೆ (೧೮೦) ತಿಳಿಸಿಕೊಟ್ಟಿರುತ್ತೇವೆ. ಶ್ರವಣದಂತೆ ಮನನನಿದಿಧ್ಯಾಸನಗಳೂ ಬ್ರಹ್ಮವಿಜ್ಞಾನ ವಾಗುವದಕ್ಕೇ ಹೊರತು, ಬ್ರಹ್ಮವಿಜ್ಞಾನವಾದ ಬಳಿಕ ಕರ್ತವ್ಯಾಂತರವನ್ನು ಉಪದೇಶಿ ಸುವದಕ್ಕಲ್ಲ ಎಂದೂ ಮೇಲೆ (೧೮೧-೧೮೨) ತಿಳಿಸಿರುತ್ತೇವೆ. ಆದ್ದರಿಂದ ಬ್ರಹ್ಮವಿಜ್ಞಾನ ವುಂಟಾದ ಬಳಿಕ ಸಾಧಕನಿಗೆ ಯಾವ ಕರ್ತವ್ಯವೂ ಉಳಿಯುವದಿಲ್ಲ; ಶಾಸ್ತ್ರಕ್ಕೆ ಯಾವ ಕೃತ್ಯವೂ ಉಳಿದಿರುವದಿಲ್ಲ.

(೧) ಯತ್ಪುನರುಕ್ತಂ ಶ್ರವಣಾತ್ಪರಾಚೀನಯೋರ್ಮನನನಿದಿಧ್ಯಾಸನಯೋ (ರ್ವಿಧಿ) ದರ್ಶನಾತ್ ವಿಧಿಶೇಷತ್ವಂ ಬ್ರಹ್ಮಣಃ, ನ ಸ್ವರೂಪಪರ್ಯವಸಾಯಿತ್ವಮ್ ಇತಿ। ನ। ಅವಗತ್ಯರ್ಥತ್ವಾತ್ ಮನನನಿದಿಧ್ಯಾಸನಯೋಃ। ಯದಿ ಹಿ ಅವಗತಂ ಬ್ರಹ್ಮ ಅನ್ಯತ್ರ ವಿನಿಯುಜ್ಯೇತ, ಭವೇತ್ ತದಾ ವಿಧಿಶೇಷತ್ವಮ್। ನ ತು ತದಸ್ತಿ। ಮನನನಿದಿಧ್ಯಾಸನಯೋರಪಿ ಶ್ರವಣವತ್ ಅವಗತ್ಯರ್ಥತ್ವಾತ್॥ -ಸೂ. ಭಾ. ೧-೧-೪-೬೧.

(೨) ತಸ್ಮಾತ್ 'ಅಹಂ ಬ್ರಹ್ಮಾಸ್ಮಿ' ಇತ್ಯೇತದವಸಾನಾ ಏವ ಸರ್ವೇ ವಿಧಯಃ ಸರ್ವಾಣಿ ಚ ಇತರಾಣಿ ಪ್ರಮಾಣಾನಿ॥ -ಸೂ. ಭಾ. ೧-೧-೪-೬೩.

೧೮೪. ಸಮ್ಯಗ್ದರ್ಶನಕ್ಕಾಗಿ ಹೇಳಿರುವ ನಿದಿಧ್ಯಾಸನವೂ ಧ್ಯಾನವೇ ಆದರೂ ಭಾವನಾರೂಪವಾದ ಉಪಾಸನೆಗೂ ಅದಕ್ಕೂ ತಾರತಮ್ಯವಿದೆ. ಸ್ವರೂಪದಿಂದ ನೋಡಿದರೆ ನಿದಿಧ್ಯಾಸನವು ವಸ್ತುವಿಗನುಗುಣವಾಗಿ ಚಿಂತಿಸಿ ಜ್ಞಾನವನ್ನು ಪಡೆದು

ಕೊಳ್ಳುವ ಪ್ರಯತ್ನವು; ಆದರೆ ಉಪಾಸನೆಯು ಶಾಸ್ತ್ರದಲ್ಲಿ ಹೇಳಿರುವಂತೆ ಮಾಡುವ ಭಾವನಾರೂಪವಾಗಿರುತ್ತದೆ. ನಿದಿಧ್ಯಾಸನಕ್ಕೆ ಇಲ್ಲಿಯೇ ಜ್ಞಾನಪ್ರಾಪ್ತಿಯಾಗಿ ಬ್ರಹ್ಮ ಸ್ವರೂಪದಲ್ಲಿ ನೆಲೆನಿಲ್ಲುವ ಕೈವಲ್ಯವೂ ದೊರಕಿಬಿಡುತ್ತದೆ. ಇದನ್ನೇ ಧ್ಯಾನಯೋಗ ವೆಂದು ಭಗವದ್ಗೀತೆಯಲ್ಲಿ ಕರೆದಿರುವದು. ಕಠೋಪನಿಷತ್ತಿನಲ್ಲಿ ಅಧ್ಯಾತ್ಮಯೋಗ ವೆಂದು ಕರೆದಿರುವದೂ ಇದನ್ನೇ. ಉಪಾಸನೆಗೆ ಸತ್ತ ಬಳಿಕ ಅಪರಬ್ರಹ್ಮಪ್ರಾಪ್ತಿ ರೂಪವಾದ ಫಲವೂ ಜಗದೈಶ್ವರ್ಯವೂ ಫಲವಾಗುತ್ತದೆ; ಅದೂ ಸಂಸಾರ ಕ್ಷೇತ್ರದಲ್ಲಿಯೇ ದೊರಕುತ್ತದೆ. ಜ್ಞಾನದಿಂದ ಮುಕ್ತನಾದವನಿಗೆ ವ್ಯವಹಾರ ದೃಷ್ಟಿಯಿಂದ ದೊರಕುವ ಐಶ್ವರ್ಯವು ನಿರಂಕುಶವಾಗಿರುತ್ತದೆ; ಏಕೆಂದರೆ ಬ್ರಹ್ಮ ಜ್ಞಾನಿಯು ಬ್ರಹ್ಮವೇ ಆಗಿಬಿಟ್ಟಿರುತ್ತಾನೆ. ಆದರೆ ಉಪಾಸಕರಿಗೆ ದೊರಕುವ ಐಶ್ವರ್ಯವು ಪರಿಮಿತವಾದದ್ದು. ಪರಮೇಶ್ವರನಿಗೆ ಅಧೀನವಾಗಿಯೇ ಅವರು ಐಶ್ವರ್ಯವನ್ನು ಪಡೆಯುತ್ತಾರೆ; ಅವರಿಗೆ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಐಶ್ವರ್ಯವು ದೊರಕುವದಿಲ್ಲ, ಅದು ಪರಮೇಶ್ವರನಿಗೇ ಸೇರಿರುತ್ತದೆ. ಜ್ಞಾನದ್ವಾರ ವಾಗಿ ಮುಕ್ತನಾದವನು ಅಶರೀರನಾಗಿರುತ್ತಾನೆ; ಏಕೆಂದರೆ ಸಶರೀರತ್ವವು ಮಿಥ್ಯಾಜ್ಞಾನಕೃತವಾಗಿರುತ್ತದೆ. ಆದರೆ ಅವನಿಗೆ ಮನಸ್ಸು ಬೇರೆಯಾಗಿರುವದೂ ಇಲ್ಲ; ಅವನು ಜ್ಞಾನದಿಂದ ಅಮನಸ್ತೆಯನ್ನು ಪಡೆದಿರುತ್ತಾನೆ. ಆದರೆ ಉಪಾಸನೆಯಿಂದ ಮುಕ್ತನಾದವನಿಗೆ ಇಚ್ಛಾನಿರ್ಮಿತವಾದ ಶರೀರವುಂಟು, ಮನಸ್ಸೂ ಉಂಟು. ಇದೆಲ್ಲ ಫಲದ್ವಾರಕವಾದ ತಾರತಮ್ಯವು. ನಿದಿಧ್ಯಾಸನವು ಸ್ವಾನುಭವದಲ್ಲಿ ಪರ್ಯವಸಾನ ವಾಗತಕ್ಕದ್ದು.

(೧) ಇದಾನೀಂ ಯೋಗಸ್ಯ ಯತ್ಫಲಂ ಬ್ರಹ್ಮೈಕತ್ವದರ್ಶನಂ ಸರ್ವಸಂಸಾರವಿಚ್ಛೇದಕಾರಣಂ ತತ್ಪ್ರದರ್ಶ್ಯತೇ- ಸರ್ವಭೂತಸ್ಥಂ ಸರ್ವೇಷು ಭೂತೇಷು ಸ್ಥಿತಂ ಸ್ವಮ್ ಆತ್ಮಾನಂ ಸರ್ವಭೂತಾನಿ ಚ ಆತ್ಮನಿ ಬ್ರಹ್ಮಾದೀನಿ ಸ್ತಂಬಪರ್ಯನ್ತಾನಿ ಚ ಸರ್ವಭೂತಾನಿ ಏಕತಾಂ ಗತಾನಿ ಈಕ್ಷತೇ ಪಶ್ಯತಿ ಯೋಗಯುಕ್ತಾತ್ಮಾ ಸಮಾಹಿತಾನ್ತಃಕರಣಃ ಸರ್ವತ್ರ ಸಮದರ್ಶನಃ ಸರ್ವೇಷು ಬ್ರಹ್ಮಾದಿಸ್ಥಾವರಾನ್ತೇಷು ವಿಷಮೇಷು ಸರ್ವಭೂತೇಷು ಸಮಂ ನಿರ್ವಿಶೇಷಂ ಬ್ರಹ್ಮಾತ್ಮೈಕತ್ವವಿಷಯಂ ದರ್ಶನಂ ಜ್ಞಾನಂ ಯಸ್ಯ ನ ಸರ್ವತ್ರ ಸಮದರ್ಶನಃ॥

-ಗೀ. ಭಾ. ೬-೨೯-೪೨೫.

(೨) ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮ್ ಅಧ್ಯಾತಯೋಗಃ। ......ತೇನ ಮತ್ವಾ ದೇವಮಾತ್ಮಾನಂ ಧೀರೋ ಧೀಮಾನ್ ಹರ್ಷಶೋಕೌ ಆತ್ಮನ ಉತ್ಕರ್ಷಾಪಕರ್ಷಯೋರಭಾವಾತ್ ಜಹಾತಿ॥ -ಕ. ಭಾ. ೧-೨-೧೨-೫೮೭.

(೩) ತಸ್ಯ ಚ ಅಪರಬ್ರಹ್ಮೋಪಾಸನಸ್ಯ ತತ್ಸನ್ನಿಧೌ ಶ್ರೂಯಮಾಣಮ್ ''ಸ ಯದಿ ಪಿತೃಲೋಕಕಾಮೋ ಭವತಿ'' (ಛಾಂ.೮-೨-೧)ಇತ್ಯಾದಿ ಜಗದೈಶ್ವರ್ಯಲಕ್ಷಣಂ ಸಂಸಾರಗೋಚರ

ಮೇವ ಫಲಂ ಭವತಿ। ಅನಿವರ್ತಿತತ್ವಾತ್ ಅವಿದ್ಯಾಯಾಃ। ತಸ್ಯ ಚ ದೇಶವಿಶೇಷಾವಬದ್ಧತ್ವಾತ್ ತತ್ಪ್ರಾಪ್ತ್ಯರ್ಥಂ ಗಮನಮ್ ಅವಿರುದ್ಧಮ್॥ -ಸೂ. ಭಾ. ೪-೩-೧೪-೬೪.

(೪) ಶರೀರೇ ಪತಿತೇ ಅಶರೀರತ್ವಂ ಸ್ಯಾತ್ ನ ಜೀವತಃ ಇತಿ ಚೇತ್। ನ। ಸಶರೀರತ್ವಸ್ಯ ಮಿಥ್ಯಾಜ್ಞಾನನಿಮಿತ್ತತ್ವಾತ್। ನ ಹಿ ಆತ್ಮನಃ ಶರೀರಾತ್ಮಾಭಿಮಾನಲಕ್ಷಣಂ ಮಿಥ್ಯಾಜ್ಞಾನಂ ಮುಕ್ತ್ವಾ ಅನ್ಯತಃ ಸಶರೀರತ್ವಂ ಶಕ್ಯಂ ಕಲ್ಪಯಿತುಮ್॥ -ಸೂ. ಭಾ. ೧-೧-೪-೫೮.

(೫) ಅಥಾಯಮಶರೀರೋಽಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ।

-ಬೃ. ೪-೪-೭.

(೬) ಆತ್ಮಸತ್ಯಾನುಬೋಧೇನ ನ ಸಙ್ಕಲ್ಪಯತೇ ಯದಾ।

ಅಮನಸ್ತಾಂ ತದಾ ಯಾತಿ ಗ್ರಾಹ್ಯಾಭಾವೇ ತದಗ್ರಹಮ್॥ - ಮಾಂ.ಕಾ.೩-೩೨.

ಇದರ ಭಾಷ್ಯವನ್ನು ನೋಡತಕ್ಕದ್ದು.

(೭) 'ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠನ್ತಿ' (ಛಾಂ. ೮-೨-೧) ಇತ್ಯಾದಿ ಶ್ರುತೇರ್ಮನಸ್ತಾವತ್ ಸಂಕಲ್ಪಸಾಧನಂ ಸಿದ್ಧಮ್। ಶರೀರೇನ್ದ್ರಿಯಾಣಿ ಪುನಃ ಪ್ರಾಪ್ತೈಶ್ವರ್ಯಸ್ಯ ವಿದುಷಃ ಸನ್ತಿ ನ ವಾ ಸನ್ತಿ ಇತಿ ಸಮೀಕ್ಷ್ಯತೇ॥ -ಸೂ. ಭಾ. ೪-೪-೧೦-೬೦೦.

(೮) ಬಾದರಾಯಣಃ ಪುನರಾಚಾರ್ಯೋಽತ ಏವ ಉಭಯಲಿಙ್ಗಶ್ರುತಿದರ್ಶನಾತ್ ಉಭಯವಿಧತ್ವಂ ಸಾಧು ಮನ್ಯತೇ। ಯದಾ ಸಶರೀರತಾಂ ಸಙ್ಕಲ್ಪಯತಿ ತದಾ ಸಶರೀರೋ ಭವತಿ। ಯದಾ ತು ಅಶರೀರತಾಂ ತದಾ ಅಶರೀರಃ ಇತಿ ॥ -ಸೂ. ಭಾ. ೪-೪-೧೨-೬೦೨.

(೯) (ಅ) ಸ್ಥಿತಮೇತತ್ ''ಸ್ವೇನ ರೂಪೇಣ'' (ಛಾಂ. ೮-೩-೪) ಇತ್ಯತ್ರ ಆತ್ಮಮಾತ್ರರೂಪೇಣ ಅಭಿನಿಷ್ಪದ್ಯತೇ ನಾಗನ್ತುಕೇನ ಅಪರರೂಪೇಣ ಇತಿ। ಅಧುನಾ ತು ತದ್ವಿಶೇಷಬುಭುತ್ಸಾಯಾಮ್ ಅಭಿಧೀಯತೇ । ಸ್ವಮಸ್ಯ ರೂಪಮ್ ಬ್ರಾಹ್ಮಮ್ ಅಪಹತಪಾಪ್ಮತ್ವಾದಿಸತ್ಯಸಂಕಲ್ಪತ್ವಾವಸಾನಮ್, ತಥಾ ಸರ್ವಜ್ಞತ್ವಮ್, ಸರ್ವೇಶ್ವರತ್ವಂ ಚ ತೇನ ಸ್ವರೂಪೇಣ ಅಭಿನಿಷ್ಪದ್ಯತೇ ಇತಿ ಜೈಮಿನಿರಾಚಾರ್ಯೋ ಮನ್ಯತೇ॥ -ಸೂ. ಭಾ. ೪-೪-೫-೫೯೫.

(ಆ) ಚೈತನ್ಯಮೇವ ತು ಅಸ್ಯ ಆತ್ಮನಃ ಸ್ವರೂಪಮ್ ಇತಿ ತನ್ಮಾತ್ರೇಣ ಸ್ವರೂಪೇಣ ಅಭಿನಿಷ್ಪತ್ತಿರ್ಯುಕ್ತಾ।....ತಸ್ಮಾತ್ ನಿರಸ್ತಾಶೇಷಪ್ರಪಞ್ಚೇನ ಪ್ರಸನ್ನೇನ ಅವ್ಯಪದೇಶ್ಯೇನ ಬೋಧಾತ್ಮನಾ ಅಭಿನಿಷ್ಪದ್ಯತೇ ಇತ್ಯೌಡುಲೋಮಿರಾಚಾರ್ಯೋ ಮನ್ಯತೇ॥

-ಸೂ. ಭಾ. ೪-೪-೬-೫೯೬.

(ಇ) ಏವಮಪಿ ಪಾರಮಾರ್ಥಿಕಚೈತನ್ಯಮಾತ್ರಸ್ವರೂಪಾಭ್ಯುಪಗಮೇಽಪಿ ವ್ಯವಹಾರಾಪೇಕ್ಷಯಾ ಪೂರ್ವಸ್ಯಾಪಿ ಉಪನ್ಯಾಸಾದಿಭ್ಯೋ ಅವಗತಸ್ಯ ಬ್ರಾಹ್ಮಸ್ಯ ಐಶ್ವರ್ಯರೂಪಸ್ಯ ಅಪ್ರತ್ಯಾಖ್ಯಾನಾತ್ ಅವಿರೋಧಂ ಬಾದರಾಯಣ ಆಚಾರ್ಯೋ ಮನ್ಯತೇ॥

-ಸೂ. ಭಾ. ೪-೪-೭-೫೯೭.

(೧೦) ಜೈಮಿನಿಸ್ತ್ವಾಚಾರ್ಯೋ ಮನೋವಚ್ಛರೀರಸ್ಯಾಪಿ ಸೇನ್ದ್ರಿಯಸ್ಯ ಭಾವಂ ಮುಕ್ತಂ ಪ್ರತಿ ಮನ್ಯತೇ॥ -ಸೂ. ಭಾ. ೪-೪-೧೧-೬೦೧.

(೧೧) ಯೇ ಸಗುಣಬ್ರಹ್ಮೋಪಾಸನಾತ್ ಸಹೈವ ಮನಸಾ ಈಶ್ವರಸಾಯುಜ್ಯಂ ವ್ರಜನ್ತಿ, ಕಿಂ ತೇಷಾಂ ನಿರವಗ್ರಹಮ್ ಐಶ್ವರ್ಯಂ ಭವತಿ ಆಹೋಸ್ವಿತ್ ಸಾವಗ್ರಹಮ್ ಇತಿ ಸಂಶಯಃ।...ಜಗದುತ್ಪತ್ತ್ಯಾದಿವ್ಯಾಪಾರಂ ವರ್ಜಯಿತ್ವಾ ಅನ್ಯತ್ ಅಣಿಮಾದ್ಯಾತ್ಮಕಂ ಐಶ್ವರ್ಯಂ ಮುಕ್ತಾನಾಂ ಭವಿತುಮರ್ಹತಿ । ಜಗದ್ವ್ಯಾಪಾರಸ್ತು ನಿತ್ಯಸಿದ್ಧಸ್ಯೈವ ಈಶ್ವರಸ್ಯ॥

-ಸೂ. ಭಾ. ೪-೪-೧೭-೬೦೭.

(೧೨) ಆಧಿಕಾರಿಕೋ ಯೋ ಸವಿತೃಮಣ್ಡಲಾದಿಷು ವಿಶೇಷಾಯತನೇಷು ಅವಸ್ಥಿತಃ ಪರ ಈಶ್ವರಃ, ತದಾಯತ್ತೈವೇಯಂ ಸ್ವಾರಾಜ್ಯಪ್ರಾಪ್ತಿರುಚ್ಯತೇ॥ -ಸೂ. ಭಾ. ೪-೪-೧೮-೬೦೮.

(೧೩) ಅತಶ್ಚ ಯಥೈವ ದ್ವಿರೂಪೇ ಪಾರಮೇಶ್ವರೇ ನಿರ್ಗುಣಂ ರೂಪಮ್ ಅನವಾಪ್ಯ ಸಗುಣೇ ಏವ ಅವತಿಷ್ಠನ್ತೇ, ಏವಂ ಸಗುಣೇಽಪಿ ನಿರವಗ್ರಹಮ್ ಐಶ್ವರ್ಯಮ್ ಅನವಾಪ್ಯ ಸಾವಗ್ರಹ ಏವ ಅವತಿಷ್ಠನ್ತೇ ಇತಿ ದ್ರಷ್ಟವ್ಯಮ್॥ -ಸೂ. ಭಾ. ೪-೪-೧೯-೬೦೯.

೧೮೫. ಬ್ರಹ್ಮವೂ ಒಂದೇ, ಅದರ ಜ್ಞಾನವೂ ಒಂದೇ; ಏಕೆಂದರೆ ಅನೇಕ ಜ್ಞಾನಗಳಾದರೆ ಒಂದನ್ನು ಬಿಟ್ಟರೆ ಮಿಕ್ಕದ್ದೆಲ್ಲ ಭ್ರಾಂತಿ ಎಂದಾಗುವದು. ಆದ್ದರಿಂದ ವಿಜ್ಞಾನವಾಗುವವರೆಗೆ ಉಪನಿಷತ್ತುಗಳಲ್ಲಿ ಹೇಳಿರುವ ಬೇರೆಬೇರೆಯ ವಾಕ್ಯಗಳಿಂದ ಬ್ರಹ್ಮಸ್ವರೂಪವನ್ನು ಕುರಿತು ವಿಚಾರಮಾಡುತ್ತಿರಬೇಕು. ಆನಂದತ್ವ, ವಿಜ್ಞಾನಘನತ್ವ, ಸರ್ವಗತತ್ವ, ಸರ್ವಾತ್ಮತ್ವ-ಮುಂತಾದ ವಿಧಿರೂಪಧರ್ಮಗಳಾಗಿರಲಿ, ಅಸ್ಥೂಲತ್ವ, ಅನಣುತ್ವ, ಅಹ್ರಸ್ವತ್ವ, ಅದೀರ್ಘತ್ವ-ಮುಂತಾದ ನಿಷೇಧಮುಖವಾದ ಧರ್ಮಗಳಾಗಿರಲಿ- ಎಲ್ಲವನ್ನೂ ಬ್ರಹ್ಮಕ್ಕೆ ಹೊಂದಿಸಿಕೊಳ್ಳಬೇಕು. ಹೀಗೆ ಒಟ್ಟುಗೂಡಿಸಿ ಮಾಡಿದ ಶ್ರವಣಾದಿಗಳೇ ಅನುಭವಕ್ಕೆ ಕಾರಣವು. ಉಪಾಸನೆಗಳ ವಿಷಯದಲ್ಲಾದರೆ ಒಂದೇ ಜಾತಿಯ ಉಪಾಸನೆಯನ್ನು ವರ್ಣಿಸಿರುವ ಎಲ್ಲಾ ಉಪನಿಷತ್ತುಗಳಿಂದಲೂ ಆರಿಸಿಕೊಂಡು ಚಿಂತಿಸಬೇಕು.

(೧) ನ, ಹಿ ಕರ್ಮಬಹುತ್ವವತ್ ಬ್ರಹ್ಮಬಹುತ್ವಮಪಿ ವೇದಾನ್ತೇಷು ಪ್ರತಿಪಿಪಾದಯಿಷಿತಮ್ ಇತಿ ಶಕ್ಯಂ ವಕ್ತುಮ್। ಬ್ರಹ್ಮಣಃ ಏಕತ್ವಾತ್ ಏಕರೂಪತ್ವಾಚ್ಚ । ನ ಚೈಕರೂಪೇ ಬ್ರಹ್ಮಣಿ ಅನೇಕರೂಪಾಣಿ ವಿಜ್ಞಾನಾನಿ ಸಂಭವನ್ತಿ। ನ ಹ್ಯನ್ಯಥಾರ್ಥಃ, ಅನ್ಯಥಾ ಚ ಜ್ಞಾನಮ್ ಇತಿ ಅಭ್ರಾನ್ತಂ ಭವತಿ। ಯದಿ ಪುನಃ ಏಕಸ್ಮಿನ್ ಬ್ರಹ್ಮಣಿ, ಬಹೂನಿ ವಿಜ್ಞಾನಾನಿ ವೇದಾನ್ತಾನ್ತರೇಷು ಪ್ರತಿಪಿಪಾದಯಿಷಿತಾನಿ ತೇಷಾಮ್ ಏಕಮಭ್ರಾನ್ತಮ್ ಭ್ರಾನ್ತಾನಿ ಇತರಾಣಿ ಇತ್ಯನಾಶ್ವಾಸ ಪ್ರಸಙ್ಗೋ ವೇದಾನ್ತೇಷು॥ -ಸೂ. ಭಾ. ೩-೩-೧-೩೧೮.

(೨) ಆನನ್ದಾದಯಃ ಪ್ರಧಾನಸ್ಯ ಬ್ರಹ್ಮಣಃ ಧರ್ಮಾಃ ಸರ್ವೇ ಸರ್ವತ್ರ ಪ್ರತಿಪತ್ತವ್ಯಾಃ। ಕಸ್ಮಾತ್? ಸರ್ವಾಭೇದಾದೇವ। ಸರ್ವತ್ರ ಹಿ ತದೇವ ಏಕಂ ಪ್ರಧಾನಂ ವಿಶೇಷ್ಯಂ ಬ್ರಹ್ಮ ನ ಭಿದ್ಯತೇ॥ -ಸೂ. ಭಾ. ೩-೩-೧೧-೩೩೬.

(೩) ಅಕ್ಷರಪವಿಯಾಸ್ತು ವಿಶೇಷಪ್ರತಿಷೇಧಶ್ರುತಯಃ ಸರ್ವಾಃ ಸರ್ವತ್ರ ಅವರೋದ್ಧವ್ಯಾಃ। ಸಾಮಾನ್ಯತದ್ಭಾವಾಭ್ಯಾಮ್। ಸಮಾನೋ ಹಿ ಸರ್ವತ್ರ ವಿಶೇಷನಿರಾಕರಣರೂಪೋ ಬ್ರಹ್ಮಪ್ರತಿಪಾದನಪ್ರಕಾರಃ। ತದೇವ ಚ ಸರ್ವತ್ರ ಪ್ರತಿಪಾದ್ಯಂ ಬ್ರಹ್ಮ ಅಭಿನ್ನಂ ಪ್ರತ್ಯಭಿಜ್ಞಾಯತೇ। ತತ್ರ ಕಿಮಿತಿ ಅನ್ಯತ್ರ ಕೃತಾ ಬುದ್ಧಯೋಽನ್ಯತ್ರ ನ ಸ್ಯುಃ? ತಥಾ ಚ "ಆನನ್ದಾದಯಃ ಪ್ರಧಾನಸ್ಯ" (ಸೂ. ಭಾ. ೩-೩-೧೧)ಇತ್ಯತ್ರ ವ್ಯಾಖ್ಯಾತಮ್। ತತ್ರ ವಿಧಿರೂಪಾಣಿ ವಿಶೇಷಣಾನಿ ಚಿನ್ತಿತಾನಿ, ಇಹ ಪ್ರತಿಷೇಧರೂಪಾಣಿ ಇತಿ ವಿಶೇಷಃ। ಪ್ರಪಞ್ಚಾರ್ಥಶ್ಚಾಯಂ ಚಿನ್ತಾಭೇದಃ॥ -ಸೂ. ಭಾ. ೩-೩-೩೩-೩೮೨.

(೪) ಸ್ಥಿತೇ ಚೈವಂ ಸರ್ವವೇದಾನ್ತಪ್ರತ್ಯಯತ್ವೇ ಸರ್ವವಿಜ್ಞಾನಾನಾಮ್ ಅನ್ಯತ್ರೋದಿತಾನಾಮ್ ವಿಜ್ಞಾನಗುಣಾನಾಮ್ ಅನ್ಯತ್ರಾಪಿ ಸಮಾನೇ ವಿಜ್ಞಾನೇ ಉಪಸಂಹಾರೋ ಭವತಿ। ಅರ್ಥಾಭೇದಾತ್। ಯ ಏವ ಹಿ ತೇಷಾಂ ಗುಣಾನಾಮ್ ಏಕತ್ರಾರ್ಥೋ ವಿಶಿಷ್ಟವಿಜ್ಞಾನೋಪಕಾರಕಃ, ಸ ಏವಾನ್ಯತ್ರಾಪಿ। ಉಭಯತ್ರಾಪಿ ಹಿ ತದೇವೈಕಂ ವಿಜ್ಞಾನಮ್। ತಸ್ಮಾದುಪಸಂಹಾರಃ॥ - ಸೂ. ಭಾ. ೩-೩-೫-೩೨೫.

೧೮೬. ಉಪಾಸ್ಯಬ್ರಹ್ಮವು ಒಂದೇ ಎಂಬ ಕಾರಣದಿಂದ ಎಲ್ಲಾ ಬ್ರಹ್ಮೋಪಾಸನೆಗಳನ್ನೂ ಒಟ್ಟುಸೇರಿಸಿ ಚಿಂತಿಸುವದಕ್ಕೆ ಆಗುವದಿಲ್ಲ. ಏಕೆಂದರೆ ಬೇರೆಬೇರೆಯ ಉಪಾಸನೆಗಳಲ್ಲಿ ಬೇರೆಬೇರೆಯ ಧರ್ಮಗಳನ್ನು ಹೇಳಿರುವದರಿಂದ ಅವುಗಳ ಮೂಲಕ ವೇದ್ಯವಾದ ಬ್ರಹ್ಮವೂ ಬೇರೆಯಾಗಿರುತ್ತದೆ. ಇದಲ್ಲದೆ ಈ ಉಪಾಸನೆಗಳನ್ನು ಸೇರಿಸಿ ಚಿಂತಿಸುವದು ವ್ಯರ್ಥವೂ ಆಗಿದೆ. ಒಂದೊಂದು ಉಪಾಸನೆಗೂ ಬ್ರಹ್ಮಸಾಕ್ಷಾತ್ಕಾರವೇ ಫಲ ; ಒಂದರಿಂದ ಸಾಕ್ಷಾತ್ಕಾರವಾಗುವಾಗ ಮತ್ತೊಂದೇಕೆ? ಹೀಗೆ ಸೇರಿಸಿಕೊಂಡು ಉಪಾಸನೆಮಾಡುವದು ಆಗುವ ಹಾಗೂ ಇಲ್ಲ. ಏಕೆಂದರೆ ಸಾಕ್ಷಾತ್ಕಾರಕ್ಕೆ ಒಂದೇ ಬಗೆಯ ಪ್ರತ್ಯಯದಿಂದ ಐಕಾಗ್ರ್ಯವಾಗುವದು ಅವಶ್ಯ; ಆದರೆ ಎಲ್ಲಾ ಉಪಾಸನೆಗಳನ್ನೂ ಮಾಡಿದರೆ ಚಿತ್ತವಿಕ್ಷೇಪವೂ ಆಗುತ್ತದೆ. ಆದ್ದರಿಂದ ಯಾವದಾದರೂ ಒಂದು ಉಪಾಸನೆಯನ್ನು ಆರಿಸಿಕೊಂಡು ಅದೇ ಉಪಾಸನೆಗೆ ಶ್ರುತಿಗಳಲ್ಲಿ ಹೇಳಿರುವ ಧರ್ಮಗಳನ್ನೆಲ್ಲ ಸೇರಿಸಿಕೊಂಡು ಸಾಕ್ಷಾತ್ಕಾರವಾಗುವವರೆಗೂ ಉಪಾಸನೆಮಾಡಬೇಕು.

(೧) ಮನೋವೃತ್ತ್ಯರ್ಥತ್ವಾಭೇದೇಽಪಿ ಅನುಬನ್ಧಭೇದಾತ್ ವೇದ್ಯಭೇದೇ ಸತಿ ವಿದ್ಯಾಭೇದೋಪಪತ್ತೇಃ। ಏಕಸ್ಯಾಪಿ ಈಶ್ವರಸ್ಯ ಉಪಾಸ್ಯಸ್ಯ ಪ್ರತಿಪ್ರಕರಣಂ ವ್ಯಾವೃತ್ತಾ ಗುಣಾಃ ಶಿಷ್ಯನ್ತೇ॥ -ಸೂ. ಭಾ. ೩-೩-೫೮-೪೨೭.

(೨) ವಿಕಲ್ಪ ಏವ ಆಸಾಂ ಭವಿತುಮರ್ಹತಿ, ನ ಸಮುಚ್ಚಯಃ। ಕಸ್ಮಾತ್? ಅವಿಶಿಷ್ಟಫಲತ್ವಾತ್। ಅವಿಶಿಷ್ಟಂ ಹಿ ಆಸಾಂ ಫಲಮ್ ಉಪಾಸ್ಯವಿಷಯಸಾಕ್ಷಾತ್ಕರಣಮ್। ಏಕೇನ ಚ ಉಪಾಸನೇನ ಸಾಕ್ಷಾತ್ಕೃತೇ ಉಪಾಸ್ಯೇ ವಿಷಯೇ ಈಶ್ವರಾದೌ ದ್ವಿತೀಯಮ್ ಅನರ್ಥಕಮ್। ಅಪಿ ಚ ಅಸಂಭವಃ। ಸಾಕ್ಷಾತ್ಕರಣಸ್ಯ ಸಮುಚ್ಚಯಪಕ್ಷೇ ಚಿತ್ತವಿಕ್ಷೇಪಹೇತುತ್ವಾತ್। ಸಾಕ್ಷಾತ್ಕರಣಸಾಧ್ಯಂ

ಚ ವಿದ್ಯಾಫಲಂ ದರ್ಶಯನ್ತಿ ಶ್ರುತಯಃ ''ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ'' (ಛಾಂ.೩-೧೪-೪) ಇತಿ, ''ದೇವೋ ಭೂತ್ವಾ ದೇವಾನಪ್ಯೇತಿ''(ಬೃ. ೪-೧-೨) ಇತಿ ಚೈವಮಾದ್ಯಾಃ। ಸ್ಮೃತಯಶ್ಚ ''ಸದಾ ತದ್ಭಾವಭಾವಿತಃ'' (ಗೀ.೮-೬) ಇತ್ಯೇವಮಾದ್ಯಾಃ। ತಸ್ಮಾತ್ ಅವಿಶಿಷ್ಟಫಲಾನಾಂ ವಿದ್ಯಾನಾಮ್ ಅನ್ಯತಮಾಮ್ ಆದಾಯ ತತ್ಪರಂ ಸ್ಯಾತ್ ಯಾವದುಪಾಸ್ಯವಿಷಯಸಾಕ್ಷಾತ್ಕರಣೇನ ತತ್ಫಲಂ ಪ್ರಾಪ್ತಮ್ ಇತಿ॥ -ಸೂ.ಭಾ. ೩-೩-೫೯-೪೨೯.

೧೮೭. ಬ್ರಹ್ಮವಸ್ತುವಿನ ಜ್ಞಾನವು ಯಾವಾಗ ಯಾವ ದೇಶದಲ್ಲಿ ಯಾವ ದಿಕ್ಕಿಗೆ ಮುಖವನ್ನು ಮಾಡಿಕೊಂಡು ಕುಳಿತವನಿಗೆ ಆಗುವದು? -ಎಂಬ ನಿಯಮವಿಲ್ಲ. ಏಕೆಂದರೆ ಅದು ವಸ್ತುತಂತ್ರವಾಗಿರುತ್ತದೆ. ಕರ್ಮಾಂಗೋಪಾಸನೆಗಳು ಕರ್ಮವಿಧಿಗೆ ಒಳಪಟ್ಟೇ ಆಗುತ್ತವೆಯಾದ್ದರಿಂದ ಅವಕ್ಕಾಗಿ ಆಸನಾದಿವಿಚಾರವನ್ನು ಬೇರೆಯಾಗಿ ಮಾಡಬೇಕಾದದ್ದಿರುವದಿಲ್ಲ. ಉಳಿದ ಉಪಾಸನೆಗಳನ್ನು- ಜ್ಞಾನಕ್ಕಾಗಿ ಮಾಡುವ ನಿದಿಧ್ಯಾಸನವಾಗಿರಲಿ, ಸಾಕ್ಷಾತ್ಕಾರಕ್ಕಾಗಿ ಮಾಡುವ ಪುರುಷತಂತ್ರವಾದ ಉಪಾಸನೆಯಾಗಿರಲಿ- ಎರಡನ್ನೂ ಕುಳಿತುಕೊಂಡೇ ಮಾಡಬೇಕು. ಏಕೆಂದರೆ ಓಡಾಡುತ್ತಿರುವವನಿಗೆ ಚಿತ್ತವಿಕ್ಷೇಪವಾಗುತ್ತದೆ; ನಿಂತುಕೊಂಡಿದ್ದರೆ ಮನಸ್ಸು ಸೂಕ್ಷ್ಮವಸ್ತುವನ್ನು ನಿರೀಕ್ಷಣೆಮಾಡುವದಕ್ಕೆ ಆಗುವದಿಲ್ಲ; ಮಲಗಿಕೊಂಡಿದ್ದರೆ ನಿದ್ರೆ ಬರಬಹುದು. ಆದ್ದರಿಂದಲೇ ಸ್ಮೃತಿಗಳಲ್ಲಿ ಉಪಾಸನೆಗೆ ಸ್ಥಿರವಾದ ಆಸನವನ್ನು ಅಳವಡಿಸಿಕೊಂಡಿರಬೇಕೆಂದು ಹೇಳಿದೆ. ದಿಗ್ದೇಶಕಾಲಗಳ ನಿಯಮವೇನೂ ಇರುವದಿಲ್ಲ; ಮನಸ್ಸಿಗೆ ಹೇಗಿದ್ದರೆ ಏಕಾಗ್ರತೆ ಬರುವದೋ ಹಾಗೆ ಇದ್ದರಾಯಿತು. ಏಕೆಂದರೆ ಉಪಾಸನೆಗೆ ಏಕಾಗ್ರತೆಯೇ ಬೇಕಾಗಿರುತ್ತದೆ.

(೧) ಕರ್ಮಾಙ್ಗಸಂಬದ್ಧೇಷು ತಾವದುಪಾಸನೇಷು ಕರ್ಮತನ್ತ್ರತ್ವಾತ್ ನಾಸನಾದಿಚಿನ್ತಾ। ನಾಪಿ ಸಮ್ಯಗ್ದರ್ಶನೇ, ವಸ್ತುತನ್ತ್ರತ್ವಾದ್ವಿಜ್ಞಾನಸ್ಯ। ಇತರೇಷು ತು ಉಪಾಸನೇಷು ಕಿಮ್ ಅನಿಯಮೇನ ತಿಷ್ಠನ್ ಆಸೀನಃ ಶಯಾನೋ ವಾ ಪ್ರವರ್ತೇತ, ಉತ ನಿಯಮೇನ ಆಸೀನ ಏವ ? ಇತಿ ಚಿನ್ತಯತಿ। ತತ್ರ ಮಾನಸತ್ವಾತ್ ಉಪಾಸನಸ್ಯ ಅನಿಯಮಃ ಶರೀರಸ್ಥಿತೇಃ ಇತ್ಯೇವಂ ಪ್ರಾಪ್ತೇ ಬ್ರವೀತಿ-ಆಸೀನ ಏವ ಉಪಾಸೀತ ಇತಿ। ಕುತಃ? ಸಂಭವಾತ್। ಉಪಾಸನಂ ನಾಮ ಸಮಾನಪ್ರತ್ಯಯಪ್ರವಾಹಕರಣಮ್। ನ ಚ ತದ್ ಗಚ್ಛತೋ ಧಾವತೋ ವಾ ಸಂಭವತಿ। ಗತ್ಯಾದೀನಾಂ ಚಿತ್ತವಿಕ್ಷೇಪಕತ್ವಾತ್। ತಿಷ್ಠತೋಽಪಿ ದೇಹಧಾರಣೇ ವ್ಯಾಪೃತಂ ಮನಃ ನ ಸೂಕ್ಷ್ಮವಸ್ತುನಿರೀಕ್ಷಣಕ್ಷಮಂ ಭವತಿ। ಶಯಾನಸ್ಯಾಪಿ ಅಕಸ್ಮಾದೇವ ನಿದ್ರಯಾ ಅಭಿಭೂಯೇತ। ಆಸೀನಸ್ಯ ತು ಏವಂಜಾತೀಯಕೋ ಭೂಯಾನ್ ದೋಷಃ ಸುಪರಿಹರ ಇತಿ ಸಂಭವತಿ ತಸ್ಯ ಉಪಾಸನಮ್॥ -ಸೂ.ಭಾ.೪-೧-೭-೫೨೦.

(೨) ಸ್ಮರನ್ತ್ಯಪಿ ಚ ಶಿಷ್ಟಾ ಉಪಾಸನಾಙ್ಗತ್ವೇನ ಆಸನಮ್- ''ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ'' (ಗೀ. ೬-೧೧) ಇತ್ಯಾದಿನಾ। ಅತ ಏವ ಪದ್ಮಕಾದೀನಾಮ್ ಆಸನವಿಶೇಷಾಣಾಮ್ ಉಪದೇಶೋ ಯೋಗಶಾಸ್ತ್ರೇ॥ -ಸೂ.ಭಾ.೪-೧-೧೦-೫೨೩.

(೩) ದಿಗ್ದೇಶಕಾಲೇಷು ಅರ್ಥಲಕ್ಷಣ ಏವ ನಿಯಮಃ-ಯತ್ರೈವ ಅಸ್ಯ ದಿಶಿ, ದೇಶೇ ಕಾಲೇ ವಾ ಮನಸಃ ಸೌಕರ್ಯೇಣ ಏಕಾಗ್ರತಾ ಭವತಿ ತತ್ರೈವ ಉಪಾಸೀತ। ಪ್ರಾಚೀದಿಕ್ ಪೂರ್ವಾಹ್ಣಪ್ರಾಚೀನಪ್ರವಣಾದಿವದ್ವಿಶೇಷಾಶ್ರವಣಾತ್, ಏಕಾಗ್ರತಾಯಾಃ ಇಷ್ಟಾಯಾಃ ಸರ್ವತ್ರ ಅವಿಶೇಷಾತ್॥ -ಸೂ. ಭಾ. ೪-೧-೧೧-೫೨೪.

೧೮೮. ನಿದಿಧ್ಯಾಸನ, ಉಪಾಸನ-ಎಂಬ ಶಬ್ದಗಳೇ ಮನೋವೃತ್ತಿಯ ಆವೃತ್ತಿಯನ್ನು ಸೂಚಿಸುತ್ತವೆ ಎಂದು ಹಿಂದೆ (೧೮೧) ತಿಳಿಸಿರುತ್ತೇವಷ್ಟೆ? ನಿದಿಧ್ಯಾಸನವು ಸಮ್ಯಗ್ದರ್ಶನಕ್ಕಾಗಿ ಮಾಡತಕ್ಕದ್ದಾದ್ದರಿಂದ ದರ್ಶನವುಂಟಾಗುತ್ತಲೂ ಅದನ್ನು ಬಿಟ್ಟುಬಿಡಬಹುದು. ಇನ್ನು ಅಭ್ಯುದಯರೂಪವಾದ ಕಾಲಾಂತರದಲ್ಲಾಗುವ ಪರಬ್ರಹ್ಮಪ್ರಾಪ್ತಿಯೇ ಮುಂತಾದ ಫಲವನ್ನು ಕೊಡುವ ಭಾವನಾರೂಪವಾದ ಉಪಾಸನೆಗಳನ್ನು ಮಾತ್ರ ಸಾಯುವವರೆಗೂ ಮಾಡುತ್ತಲೇ ಇರಬೇಕು. ಏಕೆಂದರೆ ಅಂತ್ಯಪ್ರತ್ಯಯದಿಂದಲೇ ಅದೃಷ್ಟಫಲವುಂಟಾಗುತ್ತದೆ. ಕರ್ಮಗಳಿಗೆ ಕೂಡ ಮುಂದೆ ಫಲವನ್ನು ಕೊಡುವದಕ್ಕೆ ಸಾಯುವಕಾಲದಲ್ಲಿ ಅನುಗುಣವಾದ ಭಾವನಾವಿಜ್ಞಾನವು ಬೇಕಾಗುವದು; ಆದ್ದರಿಂದ ಉಪಾಸನೆಗಳಿಗೂ ಆವೃತ್ತಿರೂಪವಾದ ಭಾವನೆಯು ಬೇಕಾಗುತ್ತದೆ.

(೧) ತತ್ರ ಯಾನಿ ತಾವತ್ ಸಮ್ಯಗ್ದರ್ಶನಾರ್ಥಾನ್ಯುಪಾಸನಾನಿ ತಾನಿ ಅವಘಾತಾದಿವತ್ ಕಾರ್ಯಪರ್ಯವಸಾನಾನಿ ಇತಿ ಜ್ಞಾತಮೇವೈಷಾಮ್ ಆವೃತ್ತಿಪರಿಮಾಣಮ್। ನ ಹಿ ಸಮ್ಯಗ್ದರ್ಶನೇ ಕಾರ್ಯೇ ನಿಷ್ಪನ್ನೇ ಯತ್ನಾನ್ತರಂ ಕಿಂಚಿತ್ ಶಾಸಿತುಂ ಶಕ್ಯಮ್। ಅನಿಯೋಜ್ಯಬ್ರಹ್ಮಾತ್ಮತ್ವಪ್ರತಿಪತ್ತೇಃ ಶಾಸ್ತ್ರಸ್ಯ ಅವಿಷಯತ್ವಾತ್॥ -ಸೂ. ಭಾ. ೪-೧-೧೨-೫೨೫.

(೨) ಯಾನಿ ಪುನರಭ್ಯುದಯಫಲಾನಿ ತೇಷ್ವೇಷಾ ಚಿನ್ತಾ ಕಿಂ ಕಿಯನ್ತಮಿಚ್ಚಿತ್ ಕಾಲಂ ಪ್ರತ್ಯಯಮಾವರ್ತ್ಯ ಉಪರಮೇತ್, ಉತ ಯಾವಜ್ಜೀವಮ್ ಆವರ್ತಯೇತ್ ಇತಿ। ಕಿಂ ತಾವತ್ ಪ್ರಾಪ್ತಮ್? ಕಿಯನ್ತಮಿಚ್ಚಿತ್ ಕಾಲಂ ಪ್ರತ್ಯಯಮ್ ಅಭ್ಯಸ್ಯ ಉತ್ಸೃಜೇತ್ । ಆವೃತ್ತಿವಿಶಿಷ್ಟಸ್ಯ ಉಪಾಸನಾಶಬ್ದಾರ್ಥಸ್ಯ ಕೃತತ್ವಾತ್ ಇತಿ। ಏವಂ ಪ್ರಾಪ್ತೇ ಬ್ರೂಮಃ- ಆಪ್ರಾಯಣಾದೇವ ಆವರ್ತಯೇತ್ ಪ್ರತ್ಯಯಮ್। ಅನ್ತ್ಯಪ್ರತ್ಯಯವಶಾತ್ ಅದೃಷ್ಟಫಲಪ್ರಾಪ್ತೇಃ। ಕರ್ಮಾಣ್ಯಪಿ ಹಿ ಜನ್ಮಾನ್ತರೋಪಭೋಗ್ಯಂ ಫಲಮಾರಭಮಾಣಾನಿ ತದನುರೂಪಂ ಭಾವನಾವಿಜ್ಞಾನಂ ಪ್ರಾಯಣಕಾಲೇ ಆಕ್ಷಿಪನ್ತಿ "ಸವಿಜ್ಞಾನೋ ಭವತಿ ಸವಿಜ್ಞಾನಮೇವಾನ್ವವಕ್ರಾಮತಿ" (ಬೃ ೪-೪-೨), "ಯಚ್ಚಿತ್ತಸ್ತೇನೈವ ಪ್ರಾಣಮಾಯಾತಿ ಪ್ರಾಣಸ್ತೇಜಸಾ ಯುಕ್ತಃ ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ" (ಪ್ರ.೩-೧೦) ಇತಿ ಚೈವಮಾದಿಶ್ರುತಿಭ್ಯಃ। ತೃಣಜಲೂಕಾ ನಿದರ್ಶನಾಚ್ಚ ಪ್ರತ್ಯಯಾಸ್ತ್ವೇತೇ ಸ್ವರೂಪಾನುವೃತ್ತಿಂ ಮುಕ್ತ್ವಾ ಕಿಮನ್ಯತ್ ಪ್ರಾಯಣಕಾಲಭಾವಿ ಭಾವನಾವಿಜ್ಞಾನಮ್ ಅಪೇಕ್ಷೇರನ್। ತಸ್ಮಾತ್ ಯೇ ಪ್ರತಿಪತ್ತವ್ಯಫಲಭಾವನಾತ್ಮಕಾಃ ಪ್ರತ್ಯಯಾಸ್ತೇಷು ಆಪ್ರಾಯಣಾತ್ ಆವೃತ್ತಿಃ॥ -ಸೂ. ಭಾ. ೪-೧-೧೨-೫೨೬.

೧೪೯. ಉಪಾಸನೆಯನ್ನು ಸಾಯುವವರೆಗೂ ಅನುಷ್ಠಾನಮಾಡುವದರಿಂದ ಅಂತ್ಯಪ್ರತ್ಯಯರೂಪವಾದ ಭಾವನಾವಿಜ್ಞಾನದಿಂದಲೇ ಅದೃಷ್ಟಫಲವಾಗುವಂತೆ ಜ್ಞಾನ ವುಂಟಾದಮೇಲೂ ಆತ್ಮಪ್ರತ್ಯಯಸಂತಾನವನ್ನು ಮಾಡುತ್ತಲೇ ಇರಬೇಕೆಂದು ವಿಧಿಸುವದಕ್ಕೆ ಬರುವದಿಲ್ಲ. ಏಕೆಂದರೆ ಆತ್ಮಪ್ರತ್ಯಯದಿಂದ ಆತ್ಮವಿಷಯಕವಾದ ಮಿಥ್ಯಾಜ್ಞಾನವು ಬಾಧಿತವಾಗಲು, ಅನಾತ್ಮಪ್ರತ್ಯಯವಾಗಲಿ ಅದರ ಸ್ಮೃತಿಗಳಾಗಲಿ ಇರುವದಕ್ಕೆ ಕಾರಣವಿಲ್ಲ; ಇದೆಲ್ಲವೂ ಅನಾತ್ಮವೆಲ್ಲವೂ ಅನಿತ್ಯವು, ದುಃಖಮಯವು, ಅಶುದ್ಧವು. ಆತ್ಮನು ಇದಕ್ಕಿಂತ ವಿಲಕ್ಷಣಸ್ವರೂಪನು ಎಂಬ ಅರಿವೂ ಉಂಟಾಗಿರುವದ ರಿಂದಲೂ ಅನಾತ್ಮಸ್ಮೃತಿಯುಂಟಾಗುವದಕ್ಕೂ ಕಾರಣವಿಲ್ಲ, ಆದ್ದರಿಂದ ಆತ್ಮೈಕತ್ವ ವಿಜ್ಞಾನದ ಸ್ಮೃತಿಯೇ ಸಂತತವಾಗಿ ಜ್ಞಾನಿಗೆ ಉಂಟಾಗುತ್ತಿರುವದು. ಆದರಿಂದ ಅದನ್ನು ಮತ್ತೆ ವಿಧಿಸಬೇಕಾದ ಅವಶ್ಯಕತೆಯಿಲ್ಲ. ಯಾವನಿಗೆ ಆತ್ಮಪ್ರತ್ಯಯಸಂತಾನ ವುಂಟಾಗಿರುವದೋ ಅವನಿಗೇ ಅಂತ್ಯಪ್ರತ್ಯಯದಿಂದ ಅವಿದ್ಯೆಯು ಹೋಗುತ್ತದೆ ಯಾದ್ದರಿಂದ ಆತ್ಮಜ್ಞಾನವನ್ನು ಸಂತತವಾಗಿ ನಡೆಸುತ್ತಿರಬೇಕು- ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಅದು ಸರಿಯಲ್ಲ; ಏಕೆಂದರೆ ಮೊದಲನೆಯ ಜ್ಞಾನದಿಂದ ಅಜ್ಞಾನವು ಹೋಗದೆ ಇದ್ದರೆ ಅದು ನಿಜವಾದ ಜ್ಞಾನವೇ ಅಲ್ಲ; ಹೋಗಿದ್ದರೆ ಎರಡನೆಯ ಜ್ಞಾನದಿಂದ ಆಗಬೇಕಾದ ಪ್ರಯೋಜನವೇನೂ ಇರುವದಿಲ್ಲ. ಆದ್ದರಿಂದ ಯಾವ ಆತ್ಮಪ್ರತ್ಯಯವು-ಅದು ಮೊದಲನೆಯ ಜ್ಞಾನವಾಗಲಿ, ಕೊನೆಯದಾಗಲಿ, ಸಂತತವಾಗಲಿ, ಅಸಂತತವಾಗಲಿ- ಅವಿದ್ಯೆಯನ್ನು ಕಳೆಯುತ್ತದೆಯೋ ಅದೇ ನಿಜವಾದ ಜ್ಞಾನವು. ಆ ಜ್ಞಾನವಾದಬಳಿಕ ಮಾಡಬೇಕಾದದ್ದು ಜ್ಞಾನಿಗೆ ಏನೂ ಉಳಿದಿರುವದಿಲ್ಲ. ಉಪಾಸನೆಯ ವಿಷಯದಲ್ಲಿ ಅಂತ್ಯಪ್ರತ್ಯಯವು ಉಪಾಸನೆಯ ಫಲಕ್ಕೆ ಅವಶ್ಯವೆಂದು ಶಾಸ್ತ್ರವೇ ಹೇಳುತ್ತದೆ. ಮರಣ ಕಾಲದಲ್ಲಿ ಉಪಾಸಕನಿಗೆ ಇರುವ ಭಾವನೆಯೂ ಅದೃಷ್ಟಫಲಪ್ರಾಪ್ತಿಗೆ ಆವಶ್ಯಕ ವಾಗಿರುವದರಿಂದ ಅಲ್ಲಿ ಇಂತಿಷ್ಟು ದಿನ ಉಪಾಸನೆಮಾಡಿ ಕೈ ಬಿಟ್ಟರೆ ಸಾಕೆಂದು ಕಲ್ಪಿಸುವದಕ್ಕೆ ಬರುವದಿಲ್ಲ.

(೧) ಯದೈವ ಆತ್ಮಪ್ರತಿಪಾದಕವಾಕ್ಯಶ್ರವಣಾತ್ ಆತ್ಮವಿಷಯಂ ವಿಜ್ಞಾನಮ್ ಉತ್ಪದ್ಯತೇ, ತದೈವ ತತ್ ಉತ್ಪದ್ಯಮಾನಂ ತದ್ವಿಷಯಂ ಮಿಥ್ಯಾಜ್ಞಾನಂ ನಿವರ್ತಯದೇವ ಉತ್ಪದ್ಯತೇ। ಆತ್ಮವಿಷಯಮಿಥ್ಯಾಜ್ಞಾನನಿವೃತ್ತೌ ಚ ತತ್ಪ್ರಭವಾಃ ಸ್ಮೃತಯೋ ನ ಭವನ್ತಿ ಸ್ವಾಭಾವಿಕ್ಯೋಽನಾತ್ಮ ವಸ್ತುಭೇದವಿಷಯಾಃ। ಅನರ್ಥತ್ವಾವಗತೇಶ್ಚ। ಆತ್ಮಾವಗತೌ ಹಿ ಸತ್ಯಾಮ್ ಅನ್ಯದ್ ವಸ್ತು ಅನರ್ಥತ್ವೇನ ಅವಗಮ್ಯತೇ। ಅನಿತ್ಯದುಃಖಾಶುದ್ಧ್ಯಾದಿಬಹುದೋಷವತ್ತ್ವಾತ್। ಆತ್ಮವಸ್ತುನಶ್ಚ ತದ್ವಿಲಕ್ಷಣತ್ವಾತ್। ತಸ್ಮಾತ್ ಅನಾತ್ಮವಿಜ್ಞಾನಸ್ಮೃತೀನಾಮ್ ಆತ್ಮಾವಗತೇರಭಾವಪ್ರಾಪ್ತಿಃ। ಪಾರಿಶೇಷ್ಯಾತ್ ಆತ್ಮೈಕತ್ವವಿಜ್ಞಾನಸ್ಮೃತಿಸನ್ತತೇಃ ಅರ್ಥತ ಏವ ಭಾವಾತ್ ನ ವಿಧೇಯತ್ವಮ್। ಶೋಕಮೋಹಭಯಾಯಾಸಾದಿದುಃಖದೋಷನಿವರ್ತಕತ್ವಾಚ್ಚ ತತ್ಸ್ಮೃತೇಃ॥

-ಬೃ. ಭಾ. ೧-೪-೭-೧೩೪.

(೨) ಏವಂ ತರ್ಹಿ ವಿದ್ಯಾಪ್ರತ್ಯಯಸನ್ತತ್ಯಭಾವಾತ್ ವಿಪರೀತಪ್ರತ್ಯಯತತ್ಕಾರ್ಯಯೋಶ್ಚ ದರ್ಶನಾತ್ ಅನ್ತ್ಯ ಏವ ಆತ್ಮಪ್ರತ್ಯಯೋಽವಿದ್ಯಾನಿವರ್ತಕೋ ನ ತು ಪೂರ್ವಃ ಇತಿ। ನ। ಪ್ರಥಮೇನ ಅನೈಕಾನ್ತಿಕತ್ವಾತ್। ಯದಿ ಹಿ ಪ್ರಥಮಃ ಆತ್ಮವಿಷಯಃ ಪ್ರತ್ಯಯಃ ಅವಿದ್ಯಾಂ ನ ನಿವರ್ತಯತಿ ತಥಾ ಅನ್ತ್ಯೋಽಪಿ। ತುಲ್ಯವಿಷಯತ್ವಾತ್। ಏವಂ ತರ್ಹಿ ಸನ್ತತೋಽವಿದ್ಯಾನಿವರ್ತಕೋ ನ ವಿಚ್ಛಿನ್ನಃ ಇತಿ। ನ। ಜೀವನಾದೌ ಸತಿ ಸನ್ತತ್ಯನುಪಪತ್ತೇಃ। ನ ಹಿ ಜೀವನಾದಿಹೇತುಕೇ ಪ್ರತ್ಯಯೇ ಸತಿ ವಿದ್ಯಾಪ್ರತ್ಯಯಸನ್ತತಿರುಪಪದ್ಯತೇ। ವಿರೋಧಾತ್। ಅಥ ಜೀವನಾದಿಪ್ರತ್ಯಯತಿರಸ್ಕರಣೇನೈವ ಆಮರಣಾನ್ತಾತ್ ವಿದ್ಯಾಸನ್ತತಿಃ ಇತಿ ಚೇತ್। ನ। ಪ್ರತ್ಯಯೇಯತ್ತಾಸನ್ತಾನಾನವಧಾರಣಾತ್ ಶಾಸ್ತ್ರಾರ್ಥಾನವಧಾರಣದೋಷಾತ್। ಇಯತಾಂ ಪ್ರತ್ಯಯಾನಾಂ ಸನ್ತತಿಃ ಅವಿದ್ಯಾಯಾ ನಿವರ್ತಿಕಾ ಇತ್ಯನವಧಾರಣಾತ್ ಶಾಸ್ತ್ರಾರ್ಥೋ ನಾವಧ್ರಿಯೇತ। ತಚ್ಚ ಅನಿಷ್ಟಮ್। ಸನ್ತತಿಮಾತ್ರತ್ವೇ ಅವಧಾರಿತ ಏವೇತಿ ಚೇತ್। ನ। ಆದ್ಯನ್ತಯೋರವಿಶೇಷಾತ್। ಪ್ರಥಮಾ ವಿದ್ಯಾಪ್ರತ್ಯಯಸನ್ತತಿಃ ಮರಣಕಾಲಾನ್ತಾ ವಾ ಇತಿ ವಿಶೇಷಾಭಾವಾತ್ ಆದ್ಯನ್ತಯೋಃ ಪ್ರತ್ಯಯಯೋಃ ಪೂರ್ವೋಕ್ತೌ ದೋಷೌ ಪ್ರಸಜ್ಯೇಯಾತಾಮ್॥ -ಬೃ.ಭಾ. ೧-೪-೧೦-೧೭೧.

(೩) ತಸ್ಮಾತ್ ಯೇ ಪ್ರತಿಪತ್ತವ್ಯಫಲಭಾವನಾತ್ಮಕಾಃ ಪ್ರತ್ಯಯಾಃ, ತೇಷು ಆಪ್ರಾಯಣಾತ್ ಆವೃತ್ತಿಃ। ತಥಾ ಚ ಶ್ರುತಿಃ- ''ಸ ಯಾವತ್ಕ್ರತುರಯಮಸ್ಮಾಲ್ಲೋಕಾತ್ ಪ್ರೈತಿ'' (ಶತ.ಬ್ರಾ. ೧೦-೬-೩-೧) ಇತಿ ಪ್ರಾಯಣಕಾಲೇಽಪಿ ಪ್ರತ್ಯಯಾನುವೃತ್ತಿಂ ದರ್ಶಯತಿ। ಸ್ಮೃತಿರಪಿ ''ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್। ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ'' (ಗೀ. ೮-೬) ಇತಿ। 'ಪ್ರಯಾಣಕಾಲೇ ಮನಸಾಽಚಲೇನ' (ಗೀ. ೮-೧೦) ಇತಿ ಚ। ''ಸೋಽನ್ತವೇಲಾಯಾಮೇತತ್ತ್ರಯಂ ಪ್ರತಿಪದ್ಯೇತ'' (ಛಾಂ. ೩-೧೭-೬) ಇತಿ ಚ ಮರಣವೇಲಾಯಾಮಪಿ ಕರ್ತವ್ಯಶೇಷಂ ಶ್ರಾವಯತಿ ॥ -ಸೂ.ಭಾ.೪-೧-೧೨-೫೨೬.

(೪) ಅನ್ಯಪ್ರತ್ಯಯವಶಾತ್ ಅದೃಷ್ಟಫಲಪ್ರಾಪ್ತೇಃ॥ -ಸೂ.ಭಾ. ೪-೧-೧೨-೫೨೬.

೧೯೦. ಬ್ರಹ್ಮಜ್ಞಾನಿಗೆ ಜ್ಞಾನಸಮಕಾಲದಲ್ಲಿಯೇ ಬ್ರಹ್ಮಪ್ರಾಪ್ತಿಯಾಗಿ ಬಿಡುವದರಿಂದ ಅದಕ್ಕಾಗಿ ಗತ್ಯುತ್ಕ್ರಾಂತಿಗಳು ಆಗುವದಿಲ್ಲ ಎಂದು ಹಿಂದೆ (೧೬೭) ತಿಳಿಸಿದ್ದಾಗಿದೆ. ಆದರೆ ಉಪಾಸಕನಿಗೆ ದೇಶವಿಶೇಷದಲ್ಲಿರುವ ಕಾರ್ಯಬ್ರಹ್ಮ ಪ್ರಾಪ್ತಿಯೇ ಫಲವಾಗಿರುವದರಿಂದ ಅವನಿಗೆ ಗತ್ಯುತ್ಕ್ರಾಂತಿಗಳು ಆಗುತ್ತವೆ. ಸಾಯುವ ಕಾಲಕ್ಕೆ ಮೂರ್ಧಪ್ರದೇಶದಲ್ಲಿರುವ ಸುಷುಮ್ನಾ ನಾಡಿಯಿಂದಲೇ ಅವನು ದೇಹವನ್ನು ಬಿಟ್ಟು ಹೊರಡುತ್ತಾನೆ. ಉಪಾಸನೆಗೆ ಅಂಗವಾಗಿ ನಾಡೀದ್ವಾರದಿಂದ ಹೋಗುವ ಮಾರ್ಗವನ್ನು ಉಪಾಸಕನು ಚಿಂತಿಸುತ್ತಿರಬೇಕೆಂದು ಆಯಾ ಉಪಾಸನೆಗಳಲ್ಲಿ ವಿಹಿತವಾಗಿರುತ್ತದೆ. ಆದ್ದರಿಂದ ಆ ಗತಿಯ ಚಿಂತೆಯನ್ನು ಅಭ್ಯಾಸಮಾಡುತ್ತಿದ್ದು ನಾಡಿಯ ಮೂಲಕ, ಶಾಸ್ತ್ರೋಕ್ತವಾದ ದೇವಯಾನವೆಂಬ ಮಾರ್ಗದಿಂದಲೇ ಹೋಗಿ ಬ್ರಹ್ಮವನ್ನು ಪಡೆಯುತ್ತಾನೆ.

(೧) ತಚ್ಛೇಷಗತ್ಯನುಸ್ಮೃತಿಯೋಗಾಚ್ಚ। ವಿದ್ಯಾಶೇಷಭೂತಾ ಚ ಮೂರ್ಧನ್ಯ ನಾಡೀಸಂಬದ್ಧಾ ಗತಿಃ ಅನುಶೀಲಯಿತವ್ಯಾ ವಿದ್ಯಾವಿಶೇಷೇಷು ವಿಹಿತಾ। ತಾಮ್ ಅಭ್ಯಸ್ಯನ್ ತಯೈವ ಪ್ರತಿಷ್ಠತ ಇತಿ ಯುಕ್ತಮ್। ತಸ್ಮಾತ್ ಹೃದಯಾಲಯೇನ ಬ್ರಹ್ಮಣಾ ಸೂಪಾಸಿತೇನ ಅನುಗೃಹೀತಃ ತದ್ಭಾವಂ ಸಮಾಪನ್ನೋ ವಿದ್ವಾನ್ ಮೂರ್ಧನ್ಯಯೈವ ಶತಾಧಿಕಯಾ ಶತಾದತಿರಿಕ್ತಯಾ ಏಕಶತತಮ್ಯಾ ನಾಡ್ಯಾ ನಿಷ್ಕ್ರಾಮತಿ । ಇತರಾಭಿರಿತರೇ॥

-ಸೂ. ಭಾ. ೪-೨-೧೭-೫೬೦.

## ೨೫. ಮುಕ್ತಿಸಾಧನಗಳು

೧೯೧. ಕರ್ಮವನ್ನು ಬದುಕಿರುವವರೆಗೂ ಮಾಡುತ್ತಿರಬೇಕೆಂದು ಶ್ರುತಿಯಿದೆ. ಕರ್ಮವನ್ನು ಎಂದಿಗೂ ಬಿಡಬಾರದೆಂದು ಸ್ಮೃತಿಯಿದೆ. ಆದ್ದರಿಂದ ಕರ್ಮದಿಂದ ಮೋಕ್ಷವೆಂಬ ಫಲವು ಸಿಕ್ಕದಿದ್ದರೆ ಶಾಸ್ತ್ರದಲ್ಲಿ ಕರ್ಮವನ್ನು ವಿಧಿಸಿರುವದು ವ್ಯರ್ಥವಾಗುತ್ತದೆ. ಈ ಕಾರಣಗಳಿಂದ ಕರ್ಮವೇ ಮೋಕ್ಷಕ್ಕೆ ಕಾರಣವೆಂದು ಕೆಲವರು ಭಾವಿಸಿದ್ದರು. ಇದು ಶ್ರುತಿಗೂ ಯುಕ್ತಿಗೂ ವಿರುದ್ಧವಾದ ವಾದವು. ''ಮೋಕ್ಷವು ಅಕೃತಕವಾದ್ದರಿಂದ ಕರ್ಮದ ಕಾರ್ಯವಲ್ಲ'' (ಮುಂ. ೧-೨-೧೨), ''ಪುಣ್ಯದಿಂದ ಗೆದ್ದುಕೊಂಡ ಲೋಕವು ಕ್ಷಯವಾಗುತ್ತದೆ'' (ಛಾಂ. ೮-೧-೬), ''ಕರ್ಮಗಳ ಫಲವು ಕೊನೆಯಾಗಲು ಈ ಲೋಕದಲ್ಲಿ ಮತ್ತೆ ಕರ್ಮವನ್ನು ಮಾಡುವದಕ್ಕೆ ಬರುತ್ತಾನೆ'' (ಮುಂ. ೧-೨-೭, ಬೃ. ೪-೪-೬)- ಎಂದು ಮುಂತಾಗಿ ಕರ್ಮಗಳಿಂದ ನಿತ್ಯವಾದ ಮುಕ್ತಿಯು ದೊರಕಲಾರದೆಂದು ಶ್ರುತಿಯು ಹೇಳುತ್ತದೆ. **ಕರ್ಮದ ಕಾರ್ಯವು ಉತ್ಪಾದ್ಯ, ವಿಕಾರ್ಯ, ಸಂಸ್ಕಾರ್ಯ, ಆಪ್ಯ- ಎಂಬ ನಾಲ್ಕರಲ್ಲಿ ಒಂದಾಗಿರುತ್ತದೆ; ಮೋಕ್ಷವು ಈ ನಾಲ್ಕರಲ್ಲಿ ಒಂದೂ ಅಲ್ಲ.** ಆದ್ದರಿಂದಲೂ ಕರ್ಮದಿಂದ ಮೋಕ್ಷವುಂಟಾಗಲಾರದು ಎಂದು ಹಿಂದೆ (೧೫೮) ತಿಳಿಸಿದೆ. ಬ್ರಹ್ಮಜ್ಞಾನದಿಂದ ಪರಮಪುರುಷಾರ್ಥವಾದ ಅಮೃತತ್ವವು ಸಿಕ್ಕುತ್ತದೆ ಎಂದು ಶ್ರುತಿಗಳು (ತೈ.೨-೧) ಮತ್ತೆಮತ್ತೆ ಹೇಳುತ್ತವೆ. ಆದ್ದರಿಂದ ಜ್ಞಾನಮಾತ್ರದಿಂದಲೇ ಮೋಕ್ಷವು ಸಿಕ್ಕುತ್ತದೆ ಎಂಬುದೇ ವೈದಿಕಸಿದ್ಧಾಂತವು.

(೧) ''ನಾಸ್ತ್ಯಕೃತಃ ಕೃತೇನ'' -ಮುಂ.೧-೨-೧೨.

ಇಹ ಸಂಸಾರೇ ನಾಸ್ತಿ ಕಶ್ಚಿದಪಿ ಅಕೃತಃ ಪದಾರ್ಥಃ। ಸರ್ವೇ ಏವ ಹಿ ಲೋಕಾಃ ಕರ್ಮಚಿತಾಃ, ಕರ್ಮಕೃತತ್ವಾಚ್ಚ ಅನಿತ್ಯಾಃ। ನ ನಿತ್ಯಂ ಕಿಂಚಿದಸ್ತಿ ಇತ್ಯಭಿಪ್ರಾಯಃ॥

-ಮುಂ. ಭಾ. ೧-೨-೧೨-೪೬.

(೨) ಯಸ್ಮಾದ್ವೇದ ಏವ ಅಗ್ನಿಹೋತ್ರಾದೀನಾಂ ಶ್ರೇಯಃಸಾಧನಾನಾಮ್ ಅನಿತ್ಯಫಲತಾಂ ದರ್ಶಯತಿ- ''ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ'' (ಛಾಂ. ೮-೧-೬) ಇತ್ಯಾದಿಃ। ತಥಾ ಬ್ರಹ್ಮವಿಜ್ಞಾನಾದಪಿ ಪರಂ ಪುರುಷಾರ್ಥಂ ದರ್ಶಯತಿ ''ಬ್ರಹ್ಮವಿದಾಪ್ನೋತಿ ಪರಮ್'' (ತೈ. ೨-೧) ಇತ್ಯಾದಿಃ ॥

-ಸೂ. ಭಾ. ೧-೧-೧-೧೪.

(೩) ತದೇವ ಸಕ್ತಃ ಸಹ ಕರ್ಮಣೈತಿ ಲಿಙ್ಗಂ ಮನೋ ಯತ್ರ ನಿಷಕ್ತಮಸ್ಯ। ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಞ್ಚೇಹ ಕರೋತ್ಯಯಮ್। ತಸ್ಮಾಲ್ಲೋಕಾತ್ ಪುನರೈತ್ಯಸ್ಮೈ ಲೋಕಾಯ ಕರ್ಮಣೇ॥ -ಬೃ. ೪-೪-೬.

ತಸ್ಯ ಯತ್ಕಿಂಚ ಕರ್ಮ ಇಹ ಅಸ್ಮಿಲ್ಲೋಕೇ ಕರೋತಿ ನಿರ್ವರ್ತಯತಿ ಅಯಮ್, ತಸ್ಯ ಕರ್ಮಣಃ ಫಲಂ ಭುಕ್ತ್ವಾ ಅನ್ತಂ ಪ್ರಾಪ್ಯ ತಸ್ಮಾಲ್ಲೋಕಾತ್ ಪುನರೇತಿ ಆಗಚ್ಛತಿ ಅಸ್ಮೈ ಲೋಕಾಯ ಕರ್ಮಣೇ। ಅಯಂ ಹಿ ಲೋಕಃ ಕರ್ಮಪ್ರಧಾನಃ । ತೇನಾಹ ಕರ್ಮಣೇ ಇತಿ, ಪುನಃ ಕರ್ಮಕರಣಾಯ॥ -ಬೃ. ಭಾ. ೪-೪-೬-೨೬೭.

(೪) ಕರ್ಮಕಾರ್ಯಸ್ಯ ಚ ಅನಿತ್ಯತ್ವಂ ಪ್ರಸಿದ್ಧಂ ಲೋಕೇ। ಕರ್ಮಭ್ಯಶ್ಚೇತ್ ಶ್ರೇಯಃ, ಅನಿತ್ಯಂ ಸ್ಯಾತ್। ತಚ್ಚ ಅನಿಷ್ಟಮ್॥ -ತೈ. ಭಾ. ಶೀ. ಉಪಸಂಹಾರ -೭೧.

(೫) ಉತ್ಪತ್ತಿಸಂಸ್ಕಾರವಿಕಾರಾಪ್ತಯೋ ಹಿ ಫಲಂ ಕರ್ಮಣೋ ದೃಶ್ಯತೇ। ಉತ್ಪತ್ತ್ಯಾದಿಫಲವಿಪರೀತಶ್ಚ ಮೋಕ್ಷಃ॥ -ತೈ. ಭಾ. ಶೀ. ಉಪಸಂಹಾರ -೭೪.

೧೯೨. ಕರ್ಮದಿಂದಲೇ ಮೋಕ್ಷವು ದೊರಕದಿದ್ದರೆ ಕರ್ಮವನ್ನು ಅಷ್ಟು ಬಗೆಯಾಗಿ ಹೇಳಿರುವದೇಕೆ? -ಎಂದು ಕೆಲವರು ಕೇಳಬಹುದು. ಕರ್ಮಕ್ಕೆ ಫಲವೇ ಗುರಿ; ಕಾಮವಿಲ್ಲದವರಿಗೆ ಫಲವು ಬೇಕಿರುವದಿಲ್ಲ. ಆದ್ದರಿಂದ ಕಾಮಿಗಳಿಗೆ ಬೇಕಾದ ಬೇರೆಬೇರೆಯ ಫಲಗಳ ಸಾಧನಗಳನ್ನು ತಿಳಿಸುವದಕ್ಕೆ ವೇದದಲ್ಲಿ ಕರ್ಮಗಳನ್ನು ಹೇಳಿರುತ್ತದೆ. ಲೋಕದಲ್ಲಿ ಕಾಮಿಗಳೇ ಹೆಚ್ಚು, ಮುಮುಕ್ಷುಗಳು ಕಡಿಮೆ. ನಿತ್ಯಕರ್ಮಕ್ಕೆ ಫಲವನ್ನು ಹೇಳಿಲ್ಲವಾದ್ದರಿಂದ ಅದಕ್ಕೆ ಮೋಕ್ಷವು ಫಲವಾಗಬಹುದಲ್ಲವೆ?- ಎಂದು ಶಂಕಿಸಬಾರದು. ಫಲವನ್ನು ಹೇಳದೆ ಇದ್ದರೆ ಮೋಕ್ಷವನ್ನೇ ಫಲವೆಂದು ಹೇಳುವದಕ್ಕೆ ಆಧಾರವಿಲ್ಲ. ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ನಿತ್ಯಕರ್ಮಕ್ಕೂ ಪುಣ್ಯಲೋಕವುಂಟೆಂದು ಹೇಳಿರುತ್ತದೆ; ಮೋಕ್ಷವು ನಿತ್ಯಸಿದ್ಧವಾದದ್ದರಿಂದ ಕರ್ಮದಿಂದ ಪಡೆಯುವ ಫಲವಲ್ಲ ಎಂದು ಹಿಂದೆ (೧೫೮) ತಿಳಿಸಿಯೂ ಇರುತ್ತೇವೆ.

(೧) ಪುತ್ರಸ್ವರ್ಗಬ್ರಹ್ಮವರ್ಚಸಾದಿಲಕ್ಷಣಸ್ಯ ಕರ್ಮಫಲಸ್ಯ ಅಸಙ್ಖ್ಯೇಯತ್ವಾತ್ ತತ್ಪ್ರತಿ ಚ ಪುರುಷಾಣಾಂ ಕಾಮಬಾಹುಲ್ಯಾತ್ ತದರ್ಥಃ ಶ್ರುತೇರಧಿಕೋ ಯತ್ನಃ ಕರ್ಮಸು ಉಪಪದ್ಯತೇ। ಆಶಿಷಾಂ ಬಾಹುಲ್ಯದರ್ಶನಾತ್ 'ಇದಂ ಮೇ ಸ್ಯಾತ್, ಇದಂ ಮೇ ಸ್ಯಾತ್' ಇತಿ ॥

-ತೈ೧ ಉಪಸಂಹಾರ-೮೪

(೨) ಕರ್ಮಾವಿರುದ್ಧವಿಷಯ ಏವ ಶ್ರುತಾರ್ಥಾಪತ್ತೇಃ ಕ್ಷೀಣತ್ವಾತ್ ನಿತ್ಯೋ ಮೋಕ್ಷಃ ಫಲಂ ಕಲ್ಪಯಿತುಂ ನ ಶಕ್ಯಃ...। ಪಾರಿಶೇಷ್ಯನ್ಯಾಯಾತ್ ಮೋಕ್ಷ ಏವ ಕಲ್ಪಯಿತವ್ಯಃ ಇತಿ ಚೇತ್। ಸರ್ವೇಷಾಂ ಹಿ ಕರ್ಮಣಾಂ ಸರ್ವಂ ಫಲಮ್। ನ ಚ ಅನ್ಯತ್ ಇತರಕರ್ಮಫಲವ್ಯತಿರೇಕೇಣ ಫಲಂ ಕಲ್ಪನಾಯೋಗ್ಯಮಸ್ತಿ। ಪರಿಶಿಷ್ಟಶ್ಚ ಮೋಕ್ಷಃ। ಸ ಚ ಇಷ್ಟೋ ವೇದವಿದಾಂ ಫಲಮ್। ತಸ್ಮಾತ್ ಸ ಏವ ಕಲ್ಪಯಿತವ್ಯಃ ಇತಿ ಚೇತ್। ನ। ಕರ್ಮಫಲವ್ಯಕ್ತೀನಾಮ್ ಆನನ್ತ್ಯಾತ್ ಪಾರಿಶೇಷ್ಯನ್ಯಾಯಾನುಪಪತ್ತೇಃ । ..... ಕರ್ಮಫಲಜಾತಿಪಾರಿಶೇಷ್ಯಮ್ ಇತಿ ಚೇತ್ । ಸತ್ಯಪಿ ಇಚ್ಛಾವಿಷಯಾಣಾಂ ತತ್ಸಾಧನಾನಾಂ ಚ ಆನನ್ತ್ಯೇ ಕರ್ಮಫಲಜಾತಿತ್ವಂ ನಾಮ ಸರ್ವೇಷಾಂ ತುಲ್ಯಮ್। ಮೋಕ್ಷಸ್ತು ಅಕರ್ಮಫಲತ್ವಾತ್ ಪರಿಶಿಷ್ಟಃ ಸ್ಯಾತ್। ತಸ್ಮಾತ್ ಪರಿಶೇಷಾತ್ ಸ ಏವ ಯುಕ್ತಃ ಕಲ್ಪಯಿತುಮ್ ಇತಿ ಚೇತ್। ನ। ತಸ್ಯಾಪಿ ನಿತ್ಯಕರ್ಮಫಲತ್ವಾಭ್ಯುಪಗಮೇ ಕರ್ಮಫಲಸಮಾನಜಾತೀಯತ್ವೋಪಪತ್ತೇಃ ಪರಿಶೇಷಾನುಪಪತ್ತಿಃ॥ -ಬೃ.ಭಾ. ೩-೩-೧-೩೩.

(೩) ನಿತ್ಯಾನಾಂ ಚ ಕರ್ಮಣಾಂ ಪುಣ್ಯಲೋಕಫಲತ್ವಶ್ರುತೇಃ॥

-ಗೀ.ಭಾ. ೧೮-೬೬-೧೧೩೦.

(೪) ಏತೇಷಾಂ ಜಾತಿವಿಹಿತಾನಾಂ ಕರ್ಮಣಾಂ ಸಮ್ಯಗನುಷ್ಠಿತಾನಾಂ ಸ್ವರ್ಗಪ್ರಾಪ್ತಿಃ ಫಲಂ ಸ್ವಭಾವತಃ । "ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮ್ ಅನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲಧರ್ಮಾಯುಃ ಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯನ್ತೇ" (ಗೌ. ಧ. ೨-೨-೨-೯೩) ಇತ್ಯಾದಿಸ್ಮೃತಿಭ್ಯಃ। ಪುರಾಣೇ ಚ ವರ್ಣಿನಾಮ್ ಆಶ್ರಮಿಣಾಂ ಚ ಲೋಕಫಲಭೇದವಿಶೇಷಸ್ಮರಣಾತ್॥ -ಗೀ.ಭಾ. ೧೮-೪೫-೧೦೭೬.

೧೯೩. ಮೋಕ್ಷವೆಂದರೆ ಆತ್ಮಸ್ವರೂಪದಲ್ಲಿ ನೆಲೆನಿಲ್ಲುವದು ಎಂದು ವೇದಾಂತಿಗಳು ಹೇಳುವದರ ಅರ್ಥವನ್ನು ತಿಳಿದುಕೊಳ್ಳಲಾರದೆ ಕೆಲವರು ಮೀಮಾಂಸಕರು ನಿತ್ಯಕರ್ಮದಿಂದಲೇ ಈ ಫಲವು ದೊರೆಯುವದೆಂದು ವಾದಿಸಿದ್ದರು. ಕಾಮ್ಯನಿಷಿದ್ಧಗಳನ್ನು ಬಿಟ್ಟರೆ ಒಳ್ಳೆಯ ಕೆಟ್ಟ ಫಲಗಳು ಹೋಗುವವು; ನಿತ್ಯಕರ್ಮವನ್ನು ಮಾಡುತ್ತಿದ್ದರೆ ಪ್ರತ್ಯವಾಯವಿಲ್ಲದೆ ಇರಬಹುದು. ಪ್ರಾರಬ್ಧಕರ್ಮವನ್ನು ಅನುಭವಿಸಿದರೆ ಮತ್ತೆ ಶರೀರಪ್ರಾಪ್ತಿಯಾಗುವದಕ್ಕೆ ಕಾರಣವಿಲ್ಲ. ಈ ರೀತಿಯಿಂದ **ಆತ್ಮಸ್ವರೂಪದಲ್ಲಿಯೇ ನೆಲೆನಿಲ್ಲುವದೆಂಬ ಮೋಕ್ಷವು ಅಯತ್ನದಿಂದ ಕರ್ಮದಿಂದಲೇ ಸಿದ್ಧವಾಗುವದು ಎಂದು ಆ ಮೀಮಾಂಸಕರು ವಾದಿಸುತ್ತಿದ್ದರು.** ಈ ವಾದವು ಅಯುಕ್ತ. ಹೇಗೆಂದರೆ ಮೊದಲನೆಯದಾಗಿ ಎಲ್ಲಾ ಕಾಮ್ಯನಿಷಿದ್ಧಗಳನ್ನೂ ಬಿಡುವದು ಯಾರಿಂದಲೂ ಶಕ್ಯವಿಲ್ಲ; ಏಕೆಂದರೆ ಅತ್ಯಂತವಿವೇಕಿಗಳೂ ಸಣ್ಣಪುಟ್ಟ ಪಾಪಗಳನ್ನು ಮಾಡುತ್ತಲೇ ಇರುವದು ಕಂಡುಬರುತ್ತದೆ. ಅವನ್ನು ಬಿಡುವದು ಶಕ್ಯವೆಂದು ಒಪ್ಪಿದರೂ ಹಿಂದೆ ಅನೇಕಜನ್ಮಗಳಲ್ಲಿ ಮಾಡಿದ ಕರ್ಮಗಳು ಉಳಿದಿರುತ್ತವೆ; ಅವುಗಳ ಫಲವಾದರೂ ಬಂದೇ ತೀರಬೇಕು. ಇದಲ್ಲದೆ ಶರೀರಗ್ರಹಣವನ್ನು ಮಾಡದೆ ಆತ್ಮನಲ್ಲಿ ನಿಲ್ಲುವದೆಂಬ ಮೋಕ್ಷವು ಕರ್ಮದಿಂದ ಸಾಧಿಸಬೇಕಾದದ್ದಲ್ಲ; ಅದು ಸ್ವಾಭಾವಿಕವಾಗಿ

ಎಲ್ಲರಿಗೂ ಇದ್ದೇ ಇರುತ್ತದೆ. ಅಜ್ಞಾನದಿಂದಲೇ ನಾವು ಶರೀರಿಗಳೆಂದು ಕರ್ಮಿಗಳೆಂದೂ ಜನರು ಭಾವಿಸಿಕೊಂಡಿರುತ್ತಾರೆ, ಅಷ್ಟೆ. ಕರ್ಮವು ತಾನೇ ಅವಿದ್ಯಾನಿಮಿತ್ತವಾದ ಕಾಮದಿಂದ ಆಗಿರುವದರಿಂದ ಎಂದಿಗೂ ಅಜ್ಞಾನವನ್ನು ಕಳೆಯಲಾರದು. ಆತ್ಮಜ್ಞಾನವಿಲ್ಲದೆ ಎಂದಿಗೂ ಕರ್ಮಕೃತವಾದ ಸಂಸಾರದ ಅಂತವು ಆಗಲಾರದು ಎಂದು ಶ್ರುತಿಯು ಸಾರುತ್ತಿದೆ. ಈ ಎಲ್ಲಾ ಕಾರಣಗಳಿಂದ ನಿತ್ಯಕರ್ಮದಿಂದ ಮೋಕ್ಷವಾಗಬಹುದೆಂಬುದು ಬರಿಯ ಕಲ್ಪನೆಯಾಗಿರುತ್ತದೆ; ಇದಕ್ಕೆ ಯಾವ ಶ್ರುತಿಯ ಆಧಾರವೂ ಇರುವದಿಲ್ಲ- ಎಂದು ಆಚಾರ್ಯರು ತೈತ್ತಿರೀಯ, ಗೀತಾ, ಸೂತ್ರಭಾಷ್ಯಗಳಲ್ಲಿ ಈ ವಾದವನ್ನು ಖಂಡಿಸಿರುತ್ತಾರೆ.

(೧) ನ ಚ ಅಸತಿ ಸಮ್ಯಗ್ದರ್ಶನೇ ಸರ್ವಾತ್ಮನಾ ಕಾಮ್ಯಪ್ರತಿಷಿದ್ಧವರ್ಜನಂ ಜನ್ಮಪ್ರಾಯಣಾನ್ತಕಾಲೇ ಕೇನಚಿತ್ ಪ್ರತಿಜ್ಞಾತುಂ ಶಕ್ಯಮ್। ಸುನಿಪುಣಾನಾಮಪಿ ಸೂಕ್ಷ್ಮಾಪರಾಧದರ್ಶನಾತ್॥ -ಸೂ. ಭಾ. ೪-೩-೧೪-೫೮೫.

(೨) ಅನೇಕಾನಿ ಹಿ ಆರಬ್ಧಫಲಾನಿ ಅನಾರಬ್ಧಫಲಾನಿ ಚ ಅನೇಕಜನ್ಮಾನ್ತರಕೃತಾನಿ ವಿರುದ್ಧಫಲಾನಿ ಕರ್ಮಾಣಿ ಸಂಭವನ್ತಿ। ಅತಸ್ತೇಷು ಅನಾರಬ್ಧಫಲಾನಾಮ್ ಏಕಸ್ಮಿನ್ ಜನ್ಮನಿ ಉಪಭೋಗೇನ ಕ್ಷಯಾಸಂಭವಾತ್ ಶೇಷಕರ್ಮನಿಮಿತ್ತಶರೀರಾರಮ್ಭೋಪಪತ್ತಿಃ। ಕರ್ಮಶೇಷಸದ್ಭಾವಸಿದ್ಧಿಶ್ಚ । ''ತದ್ಯ ಇಹ ರಮಣೀಯಚರಣಾಃ'' (ಛಾಂ.೫-೧೦-೭). ''ತತಃ ಶೇಷೇಣ'' (ಗೌ.ಧ. ೨-೨೯)- ಇತ್ಯಾದಿಶ್ರುತಿಸ್ಮೃತಿಶತೇಭ್ಯಃ॥ -ತೈ. ಭಾ. ಅವತರಣಿಕೆ ೪.

(೩) ಅಶರೀರತ್ವಮೇವ ಧರ್ಮಕಾರ್ಯಮ್ ಇತಿ ಚೇತ್।ನ। ತಸ್ಯ ಸ್ವಾಭಾವಿಕತ್ವಾತ್। ''ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್। ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ'' (ಕ. ೧-೨-೨೨), ''ಅಪ್ರಾಣೋ ಹ್ಯಮನಾಃ ಶುಭ್ರಃ'' (ಮುಂ. ೨-೧-೨), ''ಅಸಙ್ಗೋಹ್ಯಯಂ ಪುರುಷಃ'' (ಬೃ. ೪-೩-೧೫) ಇತ್ಯಾದಿಶ್ರುತಿಭ್ಯಃ ॥

-ಸೂ. ಭಾ. ೧-೧-೪-೪೨.

(೪) ಅಜ್ಞಾನಮೇವ ನಿವರ್ತಯತಿ ಇತಿ ಚೇತ್।ನ। ವಿಲಕ್ಷಣತ್ವಾತ್। ಅನಭಿವ್ಯಕ್ತಿರಜ್ಞಾನಮ್, ಅಭಿವ್ಯಕ್ತಿಲಕ್ಷಣೇನ ಜ್ಞಾನೇನ ವಿರುಧ್ಯತೇ। ಕರ್ಮ ತು ನಾಜ್ಞಾನೇನ ವಿರುಧ್ಯತೇ। ತೇನ ಜ್ಞಾನವಿಲಕ್ಷಣಂ ಕರ್ಮ। ಯದಿ ಜ್ಞಾನಾಭಾವಃ, ಯದಿ ಸಂಶಯಜ್ಞಾನಮ್, ಯದಿ ವಿಪರೀತಜ್ಞಾನಂ ವಾ ಉಚ್ಯತೇ ಅಜ್ಞಾನಮಿತಿ, ಸರ್ವಂ ಹಿ ತತ್ ಜ್ಞಾನೇನೈವ ನಿವರ್ತ್ಯತೇ। ನ ತು ಕರ್ಮಣಾ ಅನ್ಯತಮೇನಾಪಿ ವಿರೋಧಾಭಾವಾತ್॥ -ಬೃ. ಭಾ. ೩-೩-೧-೩೨.

(೫) ನ। ''ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ'' (ಶ್ವೇ.೩-೮) ಇತಿ ವಿದ್ಯಾಯಾ ಅನ್ಯಃ ಪನ್ಥಾ ಮೋಕ್ಷಾಯ ನ ವಿದ್ಯತೇ ಇತಿ ಶ್ರುತೇಃ। ಚರ್ಮವದಾಕಾಶವೇಷ್ಟನಾಸಂಭವವತ್ ಅವಿದುಷೋ ಮೋಕ್ಷಾಸಂಭವಶ್ರುತೇಃ ॥

-ಗೀ. ಭಾ. ೧೮.೬೬-೧೧೩೦.

(೬) ನ ಹಿ ಏತತ್ ಶಾಸ್ತ್ರೇಣ ಕೇನಚಿತ್ ಪ್ರತಿಪಾದಿತಮ್ ''ಮೋಕ್ಷಾರ್ಥೀ ಇತ್ಥಂ ಸಮಾಚರೇತ್'' ಇತಿ। ಸ್ವಮನೀಷಯಾ ತ್ವೇತತ್ ತರ್ಕಿತಮ್ ಯಸ್ಮಾತ್ ಕರ್ಮನಿಮಿತ್ತಃ ಸಂಸಾರಃ ತಸ್ಮಾತ್ ನಿಮಿತ್ತಾಭಾವಾತ್ ನ ಭವಿಷ್ಯತಿ ಇತಿ। ನ ಚೈತತ್ ತರ್ಕಯಿತುಮಪಿ ಶಕ್ಯತೇ। ನಿಮಿತ್ತಾಭಾವಸ್ಯ ದುರ್ಜ್ಞಾನತ್ವಾತ್ ॥ -ಸೂ.ಭಾ. ೪-೩-೧೪-೫೮೫.

೧೯೪. ನಿತ್ಯಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವು ಜ್ಞಾನಿಗೂ ತಪ್ಪಿದ್ದಲ್ಲ. ಕರ್ಮಗಳು ಹೇಗೂ ಮೋಕ್ಷಕ್ಕೆ ಕಾರಣವಲ್ಲದೆಹೋದರೆ ಜ್ಞಾನಶಾಸ್ತ್ರದಲ್ಲಿ ಅದನ್ನು ವಿಧಿಸಿರುವದು ವ್ಯರ್ಥವಾಗುವದು-ಎಂದೂ ಶಂಕಿಸುವ ಹಾಗಿಲ್ಲ. ಜ್ಞಾನೋತ್ಪತ್ತಿಗೆ ಅಡ್ಡಿಯಾಗುವ ದುರಿತದ ನಿವಾರಣೆಗಾಗಿ ಕರ್ಮವನ್ನು ವಿಧಿಸಿದೆ ಎಂದು ಕಲ್ಪಿಸುವದು ಯುಕ್ತವಾಗುತ್ತದೆ **ಈಶ್ವರಾರ್ಪಣಬುದ್ಧಿಯಿಂದ ಮಾಡಿದ ಕರ್ಮಗಳಿಂದ ಚಿತ್ತಶುದ್ಧಿಯ ಮೂಲಕವಾಗಿ ಜ್ಞಾನನಿಷ್ಠೆಗೆ ಯೋಗ್ಯತೆಯೂ ಜ್ಞಾನವೂ ಉಂಟಾಗುವವು. ಉಪಾಸನಾಸಮುಚ್ಚಿತವಾಗಿ ಇಂಥ ಕರ್ಮಗಳನ್ನು ಮಾಡಿದರೆ ಕರ್ಮವು ವೀರ್ಯವತ್ತರವಾಗುವದು.** ಆದ್ದರಿಂದ ಜ್ಞಾನಪ್ರಕರಣದಲ್ಲಿ ಕರ್ಮೋಪಾಸನೆಗಳನ್ನು ವಿಧಿಸಿರುವದು ಆಯಾ ಫಲಗಳನ್ನೇ ಅಲ್ಲದೆ ಜ್ಞಾನವನ್ನು ಅವು ಪರಂಪರೆಯಿಂದ ಕೊಡುವವೆಂದು ತಿಳಿಸುವದಕ್ಕೆ. ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವು ಬರುತ್ತದೆ ಎಂಬುದು ಅಭಾವದಿಂದ ಭಾವೋತ್ಪತ್ತಿಯಾಗಲಾರದೆಂಬ ನ್ಯಾಯಕ್ಕೆ ವಿರುದ್ಧ ವಾಗಿರುವದರಿಂದ ಒಪ್ಪತಕ್ಕದ್ದಲ್ಲ. ''ಕರ್ಮವನ್ನು ಮಾಡದೆ ಇರುವವನು ಪತಿತನಾಗು ತ್ತಾನೆ'' (ಮನು.೧೧-೪೪) ಎಂಬ ಸ್ಮೃತಿಯು ಕರ್ಮವನ್ನು ಮಾಡದೆ ಇರುವವನಿಗೆ ದುರಿತಕ್ಷಯವಾಗುವದಿಲ್ಲ ಎಂಬದಿಷ್ಟನ್ನೇ ಸೂಚಿಸುತ್ತದೆ. ಜ್ಞಾನೋತ್ಪತ್ತಿಗೆ ಕರ್ಮವು ಕಾರಣವೆಂಬುದನ್ನು ಶ್ರುತಿಸ್ಮೃತಿಗಳಲ್ಲಿ ಹೇಳಿಯೂ ಇರುತ್ತದೆ.

(೧) ವಿರೋಧಾದೇವ ಚ ವಿದ್ಯಾ ಮೋಕ್ಷಂ ಪ್ರತಿ ನ ಕರ್ಮಾಣ್ಯಪೇಕ್ಷತೇ। ಸ್ವಾತ್ಮಲಾಭೇ ತು ಪೂರ್ವೋಪಚಿತದುರಿತಪ್ರತಿಬನ್ಧಾಪನಯನ ದ್ವಾರೇಣ ವಿದ್ಯಾಹೇತುತ್ವಂ ಪ್ರತಿಪದ್ಯನ್ತೇ ಕರ್ಮಾಣಿ ನಿತ್ಯಾನಿ ಇತಿ ಅತ ಏವ ಅಸ್ಮಿನ್ ಪ್ರಕರಣೇ ಉಪನ್ಯಸ್ತಾನಿ ಕರ್ಮಾಣಿ ಇತ್ಯವೋಚಾಮ॥

-ತೈ.ಭಾ. ೧ ಉಪಸಂಹಾರ-೮೦.

(೨) ಅಭ್ಯುದಯಾರ್ಥೋಽಪಿ ಯಃ ಪ್ರವೃತ್ತಿಲಕ್ಷಣೋ ಧರ್ಮಃ ವರ್ಣಾನ್ ಆಶ್ರಮಾಂಶ್ಚ ಉದ್ದಿಶ್ಯ ವಿಹಿತಃ ಸ ದೇವಾದಿಸ್ಥಾನಪ್ರಾಪ್ತಿಹೇತುರಪಿ ಸನ್ ಈಶ್ವರಾರ್ಪಣ ಬುದ್ಧ್ಯಾ ಅನುಷ್ಠೀಯಮಾನಃ ಸತ್ತ್ವಶುದ್ಧಯೇ ಭವತಿ ಫಲಾಭಿಸನ್ಧಿವರ್ಜಿತಃ। ಶುದ್ಧಸತ್ತ್ವಸ್ಯ ಜ್ಞಾನನಿಷ್ಠಾಯೋಗ್ಯತಾಪ್ರಾಪ್ತಿದ್ವಾರೇಣ ಚ ಜ್ಞಾನೋತ್ಪತ್ತಿಹೇತುತ್ವೇನ ಚ ನಿಃಶ್ರೇಯಸಹೇತುತ್ವಮಪಿ ಪ್ರತಿಪದ್ಯತೇ॥ - ಗೀ.ಭಾ. ಅವತರಣಿಕೆ-೫.

(೩) ಅಪೇಕ್ಷತೇ ಚ ವಿದ್ಯಾ ಸರ್ವಾಣಿ ಆಶ್ರಮಕರ್ಮಾಣಿ ನಾತ್ಯನ್ತಮನಪೇಕ್ಷೈವ। ನನು ವಿರುದ್ಧಮಿದಂ ವಚನಮ್ ಅಪೇಕ್ಷತೇ ಚ ಆಶ್ರಮಕರ್ಮಾಣಿ ವಿದ್ಯಾ ನಾಪೇಕ್ಷತೇ ಚ ಇತಿ। ನೇತಿ

ಬ್ರೂಮಃ। ಉತ್ಪನ್ನಾ ಹಿ ವಿದ್ಯಾ ಫಲಸಿದ್ಧಿಂ ಪ್ರತಿ ನ ಕಿಂಚಿತ್ ಅನ್ಯತ್ ಅಪೇಕ್ಷತೇ। ಉತ್ಪತ್ತಿಂ ಪ್ರತಿ ತು ಅಪೇಕ್ಷತೇ। ಕುತಃ? ಯಜ್ಞಾದಿಶ್ರುತೇಃ। ತಥಾ ಹಿ ಶ್ರುತಿಃ- ''ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ''(ಬೃ.೪-೪-೨೨) ಇತಿ ಯಜ್ಞಾದೀನಾಂ ವಿದ್ಯಾಸಾಧನಭಾವಂ ದರ್ಶಯತಿ। ವಿವಿದಿಷಾಸಂಯೋಗಾಚ್ಚ ಏಷಾಮ್ ಉತ್ಪತ್ತಿಸಾಧನಭಾವೋಽವಸೀಯತೇ॥ -ಸೂ. ಭಾ. ೩-೪-೨೬-೪೬೯.

(೪) ಸ್ಮೃತಿರಪಿ ''ಕಷಾಯಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾಗತಿಃ। ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ'' (ಮೋ. ಧ. ೨೭೦-೩೮) ಇತ್ಯೇವಮಾದ್ಯಾ॥

-ಸೂ. ಭಾ. ೩-೪-೨೬-೪೬೯.

(೫) ವಿದ್ಯಾಸಹಾಯಸ್ಯ ಅಗ್ನಿಹೋತ್ರಾದೇಃ ವಿದ್ಯಾನಿಮಿತ್ತೇನ ಸಾಮರ್ಥ್ಯಾತಿಶಯೇನ ಯೋಗಾತ್ ಆತ್ಮಜ್ಞಾನಂ ಪ್ರತಿ ಕಶ್ಚಿತ್ ಕಾರಣತ್ವಾತಿಶಯೋ ಭವಿಷ್ಯತಿ। ನ ತಥಾ ವಿದ್ಯಾವಿಹೀನಸ್ಯ ಇತಿ ಯುಕ್ತಂ ಕಲ್ಪಯಿತುಮ್॥ -ಸೂ. ಭಾ. ೪-೧-೧೮-೫೩೭.

(೬) ನಿತ್ಯಾನಾಂ ಚ ಅಕರಣಮ್ ಅಭಾವಃ । ತತಃ ಪ್ರತ್ಯವಾಯಾನುಪಪತ್ತಿರಿತ್ಯತಃ ಪೂರ್ವೋಪಚಿತದುರಿತೇಭ್ಯಃ ಪ್ರಾಪ್ಯಮಾಣಾಯಾಃ ಪ್ರತ್ಯವಾಯಕ್ರಿಯಾಯಾಃ ನಿತ್ಯಾಕರಣಂ ಲಕ್ಷಣಮ್॥ -ತೈ. ಭಾ. ಅವತರಣಿಕೆ -೭.

೧೯೫. ಕರ್ಮವೊಂದೇ ಮುಕ್ತಿಗೆ ಸಾಧನವಾಗದಿದ್ದರೂ ಜ್ಞಾನಸಹಿತವಾದ ಕರ್ಮವು ಸಾಧನವಾಗಬಹುದು. ಮೊಸರು ಜ್ವರಕ್ಕೆ ವಿರೋಧಿಯಾದರೂ ಸಕ್ಕರೆಯೊಡನೆ ಬೆರೆತರೆ ಪಥ್ಯವಾಗುತ್ತದೆ. **ವಿಷವೂ ಮಂತ್ರದೊಡನೆ ಸೇರಿದಾಗ ಮರಣವನ್ನುಂಟುಮಾಡುವದಿಲ್ಲ ; ಇದರಂತೆ ಜ್ಞಾನದೊಡನೆ ಬೆರೆತ ಕರ್ಮವು ನಿತ್ಯವಾದ ಮೋಕ್ಷವನ್ನು ಕೊಡಬಹುದಾಗಿದೆ- ಎಂದು ಕೆಲವರು ವಾದಿಸುತ್ತಿದ್ದರು.** ಇದೂ ಸರಿಯಲ್ಲವೆಂದು ಆಚಾರ್ಯರು ತೋರಿಸಿಕೊಟ್ಟಿರುತ್ತಾರೆ. ಯಾವದು ಕಾರ್ಯವೋ ಅದು ಅನಿತ್ಯವು ಎಂಬ ಯುಕ್ತಿಯು ಈ ವಾದಕ್ಕೂ ಹೊಂದುತ್ತದೆ. ಸಮುಚ್ಚಯವಾದಿಗಳು ಜ್ಞಾನವೆಂದರೇನೆಂಬುದನ್ನು ಸ್ಪಷ್ಟಪಡಿಸಿರುವದಿಲ್ಲ. ಉಪಾಸನೆಯೇ ಜ್ಞಾನವಾದರೆ **ಕರ್ಮಕ್ಕೆ ಉಪಾಸನೆಯಿಂದ ಬೇರೊಂದು ಫಲವನ್ನು ಕೊಡುವದಕ್ಕೆ ಶಕ್ತಿ ಬಂದೀತೇ ಹೊರತು ಅದಕ್ಕೆ ನಿತ್ಯವಾದ ಫಲಾಂತರವನ್ನು ಕೊಡುವ ಸಾಮರ್ಥ್ಯವು ಬರುವದೆಂಬುದಕ್ಕೆ ಪ್ರಮಾಣವಿಲ್ಲ.** ಉಪಾಸನೆಯ ಕಾರ್ಯವೂ ಆಪೇಕ್ಷಿಕವಾದ ಅಮೃತತ್ವವೇ ಎಂಬುದನ್ನು ಹಿಂದೆ (೧೬೫) ತೋರಿಸಿಕೊಟ್ಟಿರುವದರಿಂದ ಕರ್ಮದೊಡನೆ ಸೇರಿದ ಉಪಾಸನೆಯು ತನ್ನ ಫಲವಾದ ಅಮೃತತ್ವವನ್ನೇ ಬೇಗ ಕೊಟ್ಟೀತೇ ಹೊರತು ಕಾರ್ಯವಾದದ್ದು ಅನಿತ್ಯವೆಂಬ ನ್ಯಾಯವನ್ನು ಬಾಧಿಸಲಾರದು. ಯಾವ ವಾಕ್ಯಬಲದಿಂದಲೂ ಈ ನ್ಯಾಯಕ್ಕೆ ವಿರುದ್ಧವಾಗಿ ನಿತ್ಯವಾದದ್ದನ್ನು ಕರ್ಮವು ಉಂಟುಮಾಡುವದೆಂದು ಸಾಧಿಸುವದಕ್ಕಾಗಲಾರದು. **ಇನ್ನು ವಸ್ತುತಂತ್ರಜ್ಞಾನವೇ**

**ಜ್ಞಾನವೆಂದರೆ ಅದರೊಡನೆ ಕ್ರಿಯಾಕಾರಕಫಲಬುದ್ಧಿಯು ಇರಲಾರದಾದ್ದರಿಂದ ಜ್ಞಾನಕರ್ಮಸಮುಚ್ಚಯವೇ ಹೊಂದಲಾರದು.** ಜ್ಞಾನದಿಂದ ಕ್ರಿಯಾಕಾರಕಫಲವು ನಾಶವಾಗುವದೆಂದು ಶ್ರುತಿಯೂ ಹೇಳುತ್ತದೆ. ಇದು ಅಸತ್ಯವೆಂಬ ಜ್ಞಾನವಾದಮೇಲೂ ''ಇದು ಸತ್ಯವು, ನಾನು ಕರ್ಮವನ್ನು ಮಾಡಬೇಕು''- ಎಂಬ ಬುದ್ಧಿಯುಂಟಾಗುವದೆಂಬುದು ಪ್ರತ್ಯಕ್ಷಕ್ಕೂ ಶ್ರುತಿವಾಕ್ಯಕ್ಕೂ ವಿರುದ್ಧವು. ಮೋಕ್ಷವು ನಿತ್ಯವಾದರೂ ಜ್ಞಾನಕರ್ಮಗಳು ಅದಕ್ಕಿರುವ ಪ್ರತಿಬಂಧವನ್ನು ಕಳೆಯುತ್ತವೆ ಎನ್ನಬಹುದು- ಎಂದು ಯಾರಾದರೂ ವಾದಿಸಬಹುದು; ಆದರೆ ಅದೂ ಸರಿಯಾಗುವದಿಲ್ಲ. ಏಕೆಂದರೆ ಕರ್ಮಕ್ಕೂ ವಿದ್ಯೆಗೂ ಬೇರೆ ಬೇರೆಯ ಫಲವನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ; ಮೋಕ್ಷಪ್ರತಿಬಂಧನಿವೃತ್ತಿಯೇ ಅವುಗಳ ಫಲವೆಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಸಮುಚ್ಚಯವಾದವೂ ಸರಿಯಲ್ಲ.

(೧) ವಿದ್ಯಾಸಹಿತಾನಾಂ ಚ ಕರ್ಮಣಾಂ ಭವೇತ್ ಕಾರ್ಯಾನ್ತರಾರಮ್ಭಸಾಮರ್ಥ್ಯಮ್। ಯಥಾ ಸ್ವತೋ ಮರಣಜ್ವರಾದಿಕಾರ್ಯಾರಮ್ಭಸಾಮರ್ಥ್ಯಾನಾಮಪಿ ವಿಷದಧ್ಯಾದೀನಾಂ ಮನ್ತ್ರಶರ್ಕರಾದಿಸಂಯುಕ್ತಾನಾಂ ಕಾರ್ಯಾನ್ತರಾರಮ್ಭಸಾಮರ್ಥ್ಯಮ್। ಏವಂ ವಿದ್ಯಾಸಹಿತೈಃ ಕರ್ಮಭಿರ್ಮೋಕ್ಷಃ ಆರಭ್ಯತೇ ಇತಿ ಚೇತ್ । ಆರಭ್ಯಸ್ಯ ಅನಿತ್ಯತ್ವಾದ್ ಇತ್ಯುಕ್ತೋ ದೋಷಃ। ವಚನಾತ್ ಆರಭ್ಯೋಽಪಿ ನಿತ್ಯ ಏವ ಇತಿ ಚೇತ್ । ನ । ಜ್ಞಾಪಕತ್ವಾತ್ ವಚನಸ್ಯ। ವಚನಂ ನಾಮ ಯಥಾಭೂತಸ್ಯ ಅರ್ಥಸ್ಯ ಜ್ಞಾಪಕಂ ನ ಅವಿದ್ಯಮಾನಸ್ಯ ಕರ್ತೃ । ನ ಹಿ ವಚನಶತೇನಾಪಿ ನಿತ್ಯಮ್ ಆರಭ್ಯತೇ ಆರಬ್ಧಂ ವಾ ಅವಿನಾಶಿ ಭವೇತ್। ಏತೇನ ವಿದ್ಯಾಕರ್ಮಣೋಃ ಸಂಹತಯೋರ್ಮೋಕ್ಷಾರಮ್ಭಕತ್ವಂ ಪ್ರತ್ಯುಕ್ತಮ್॥ -ತೈ. ೧ ಉಪಸಂಹಾರ -೭೩.

(೨) ತತ್ರ ಹಿ ಕರ್ಮಣಃ ಉಕ್ತವಿಷಯವ್ಯತಿರೇಕೇಣ ವಿಷಯಾನ್ತರೇ ಸಾಮರ್ಥ್ಯಾಸ್ತಿತ್ವೇ ಪ್ರಮಾಣಂ ನ ಪ್ರತ್ಯಕ್ಷಮ್, ನಾನುಮಾನಮ್, ನೋಪಮಾನಮ್, ನಾರ್ಥಾಪತ್ತಿಃ, ನ ಶಬ್ದೋಽಸ್ತಿ॥ -ಬೃ.ಭಾ. ೩-೩-೧-೩೧.

(೩) ಯನ್ನಿತ್ಯಂ ಕರ್ಮ ವೈದಿಕಮ್ ಅಗ್ನಿಹೋತ್ರಾದಿ ತತ್ತತ್ಕಾರ್ಯಾಯೈವ ಭವತಿ, ಜ್ಞಾನಸ್ಯ ಯತ್ಕಾರ್ಯಂ ತದೇವ ಅಸ್ಯಾಪಿ ಕಾರ್ಯಮ್ ಇತ್ಯರ್ಥಃ॥ -ಸೂ.ಭಾ. ೪-೧-೧೬-೫೩೩.

(೪) ಸತ್ಯಮೇತತ್ ವಿದ್ಯಾಸಂಯುಕ್ತಂ ಕರ್ಮ ಅಗ್ನಿಹೋತ್ರಾದಿಕಂ ವಿದ್ಯಾವಿಹೀನಾತ್ ಕರ್ಮಣಃ ಅಗ್ನಿಹೋತ್ರಾತ್ ವಿಶಿಷ್ಟಮ್ ವಿದ್ವಾನಿವ ಬ್ರಾಹ್ಮಣಃ ವಿದ್ಯಾವಿಹೀನಾತ್ ಬ್ರಾಹ್ಮಣಾತ್॥

-ಸೂ.ಭಾ.೪-೧-೧೮-೫೩೭.

(೫) ವಿರೋಧಾಚ್ಚ ವಿದ್ಯಾಕರ್ಮಣೋಃ ಸಮುಚ್ಚಯಾನುಪಪತ್ತಿಃ। ಪ್ರವಿಲೀನ ಕರ್ತ್ರಾದಿಕಾರಕವಿಶೇಷತತ್ತ್ವವಿಷಯಾ ಹಿ ವಿದ್ಯಾ ತದ್ವಿಪರೀತಕಾರಕಸಾಧ್ಯೇನ ಕರ್ಮಣಾ ವಿರುಧ್ಯತೇ। ನ ಹ್ಯೇಕಂ ವಸ್ತು ಪರಮಾರ್ಥತಃ ಕರ್ತ್ರಾದಿವಿಶೇಷವತ್ ತಚ್ಛೂನ್ಯಂ ಚ ಇತ್ಯುಭಯಥಾ ದ್ರಷ್ಟುಂ ಶಕ್ಯತೇ। ಅವಶ್ಯಂ ಹಿ ಅನ್ಯತರತ್ ಮಿಥ್ಯಾ ಸ್ಯಾತ್। ಅನ್ಯತರಸ್ಯ ಚ ಮಿಥ್ಯಾತ್ವಪ್ರಸಙ್ಗೇ

ಯುಕ್ತಂ ಯತ್ ಸ್ವಾಭಾವಿಕಾಜ್ಞಾನವಿಷಯಸ್ಯ ದ್ವೈತಸ್ಯ ಮಿಥ್ಯಾತ್ವಮ್॥

-ತೈ.ಭಾ. ಶೀ. ಉಪಸಂಹಾರ-೭೭.

(೬) ಅಪಿ ಚ ಕರ್ಮಾಧಿಕಾರಹೇತೋಃ ಕ್ರಿಯಾಕಾರಕಫಲಲಕ್ಷಣಸ್ಯ ಸಮಸ್ತಸ್ಯ ಪ್ರಪಞ್ಚಸ್ಯ ಅವಿದ್ಯಾಕೃತಸ್ಯ ವಿದ್ಯಾಸಾಮರ್ಥ್ಯಾತ್ ಸ್ವರೂಪೋಪಮರ್ದಮ್ ಆಮನನ್ತಿ ''ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ತತ್ಕೇನ ಕಂ ಜಿಘ್ರೇತ್'' (ಬೃ. ೨-೪-೧೪) ಇತ್ಯಾದಿನಾ॥

-ಸೂ.ಭಾ. ೩-೪-೧೬-೪೫೩.

(೭) ನ ಚ ಅಸತ್ಯಮ್ ಇತಿ ಉಪಮರ್ದಿತೇ ಭೇದಪ್ರತ್ಯಯೇ 'ಸತ್ಯಮಿದಮ್ ಅನೇನ ಕರ್ತವ್ಯಂ ಮಯಾ' ಇತಿ ಪ್ರಮಾಣಪ್ರಮೇಯಬುದ್ಧಿರುಪಪದ್ಯತೇ । ಆಕಾಶೇ ಇವ ತಲಮಲಬುದ್ಧಿರ್ವಿವೇಕಿನಃ। ಉಪಮರ್ದಿತೇಽಪಿ ಭೇದಪ್ರತ್ಯಯೇ ಕರ್ಮಭ್ಯೋ ನ ನಿವರ್ತತೇ ಚೇತ್ ಪ್ರಾಗಿವ ಭೇದಪ್ರತ್ಯಯಾನುಪಮರ್ದನಾತ್ ಏಕತ್ವಪ್ರತ್ಯಯವಿಧಾಯಕಂ ವಾಕ್ಯಮ್ ಅಪ್ರಮಾಣೀಕೃತಂ ಸ್ಯಾತ್॥

- ಛಾಂ. ಭಾ. ೨-೨೩-೧-೧೭೯.

(೮) ವಿದ್ಯಾಕರ್ಮಣೀ ಮೋಕ್ಷಪ್ರತಿಬನ್ಧಹೇತುನಿವರ್ತಕೇ ಇತಿ ಚೇತ್। ನ। ಕರ್ಮಣಃ ಫಲಾನ್ತರದರ್ಶನಾತ್। ಉತ್ಪತ್ತಿಸಂಸ್ಕಾರವಿಕಾರಾಪ್ತಯೋ ಹಿ ಫಲಂ ಕರ್ಮಣೋ ದೃಶ್ಯತೇ। ಉತ್ಪತ್ತ್ಯಾದಿಫಲವಿಪರೀತಶ್ಚ ಮೋಕ್ಷಃ॥

- ತೈ.ಭಾ.ಶೀ. ೧, ಉಪಸಂಹಾರ-೭೪.

(೯) (ಅ) ಅನ್ಯತ್ ಪೃಥಗೇವ ವಿದ್ಯಯಾ ಕ್ರಿಯತೇ ಫಲಮ್ ಇತಿ ಆಹುಃ ವದನ್ತಿ 'ವಿದ್ಯಯಾ ದೇವಲೋಕಃ', 'ವಿದ್ಯಯಾ ತದಾರೋಹನ್ತಿ' ಇತಿ ಶ್ರುತೇಃ। ಅನ್ಯದಾಹುರವಿದ್ಯಯಾ ಕರ್ಮಣಾ ಕ್ರಿಯತೇ ಫಲಮಿತಿ 'ಕರ್ಮಣಾ ಪಿತೃಲೋಕಃ' ಇತಿ ಶ್ರುತೇಃ, ಇತ್ಯೇವಂ ಶುಶ್ರುಮ ಶ್ರುತವನ್ತೋ ವಯಂ ಧೀರಾಣಾಂ ಧೀಮತಾಂ ವಚನಮ್॥

-ಈ.ಭಾ.೧೦-೨೪.

(ಆ) ವಿದ್ಯಾಂ ಚ ಅವಿದ್ಯಾಂ ಚ ದೇವತಾಜ್ಞಾನಂ ಕರ್ಮ ಚ ಇತ್ಯರ್ಥಃ। ಯಸ್ತದೇತದುಭಯಂ ಸಹೈಕೇನ ಪುರುಷೇಣ ಅನುಷ್ಠೇಯಂ ವೇದ, ತಸ್ಯ ಏವಂ ಸಮುಚ್ಚಯಕಾರಿಣ ಏವ ಏಕಪುರುಷಾರ್ಥಸಂಬಂಧಃ ಕ್ರಮೇಣ ಸ್ಯಾತ್ ಇತ್ಯುಚ್ಯತೇ। ಅವಿದ್ಯಯಾ ಕರ್ಮಣಾ ಅಗ್ನಿಹೋತ್ರಾದಿನಾ ಮೃತ್ಯುಂ ಸ್ವಾಭಾವಿಕಂ ಕರ್ಮ ಜ್ಞಾನಂ ಚ ಮೃತ್ಯುಶಬ್ದವಾಚ್ಯಮ್ ಉಭಯಂ ತೀರ್ತ್ವಾ ಅತಿಕ್ರಮ್ಯ, ವಿದ್ಯಯಾ ದೇವತಾಜ್ಞಾನೇನ ಅಮೃತಂ ದೇವತಾತ್ಮಭಾವಮ್ ಅಶ್ನುತೇ ಪ್ರಾಪ್ನೋತಿ। ತದ್ಧಿ ಅಮೃತತ್ವಮುಚ್ಯತೇ ಯದ್ ದೇವತಾತ್ಮಗಮನಮ್॥

-ಈ.ಭಾ ೧೧-೨೬.

## ೨೬. ಜ್ಞಾನಸಾಧನಗಳ ವಿನಿಯೋಗ

೧೯೬. ಶ್ರುತಿಯಲ್ಲಿ ಬರಿಯ ಆತ್ಮಜ್ಞಾನದಿಂದಲೇ ಮುಕ್ತಿಯನ್ನು ಹೇಳಿರುವದಲ್ಲದೆ, ಜ್ಞಾನವಿಲ್ಲದೆ ಮತ್ತೇತರಿಂದಲೂ ಬ್ರಹ್ಮಪ್ರಾಪ್ತಿಯಿಲ್ಲವೆಂದೂ ಸ್ಪಷ್ಟವಾಗಿ

ಹೇಳಿರುತ್ತದೆ. ಆದರೆ ಕರ್ಮ, ಉಪಾಸನ, ಯೋಗ- ಮುಂತಾದವುಗಳನ್ನು ಮುಕ್ತಿಸಾಧನವಾಗಿ ತಿಳಿಸುವ ವಾಕ್ಯಗಳೂ ಅಲ್ಲಲ್ಲಿ ಶ್ರುತಿಯಲ್ಲಿರುವಂತೆ ತೋರುತ್ತದೆ. ಆದ್ದರಿಂದ ಅವುಗಳು ಒಂದರಲ್ಲೊಂದು ಬೆರೆಯದಂತೆ ಆಯಾ ಸಾಧನಕ್ಕೆ ಸ್ಥಾನ ವೇನೆಂಬುದನ್ನು ಸ್ಪಷ್ಟೀಕರಿಸಿ ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ಮಿಕ್ಕಸಾಧನ ಗಳೆಲ್ಲ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ಜ್ಞಾನಕ್ಕೆ ಸಾಧನವಾಗಿರುವದರಿಂದಲೂ ಜ್ಞಾನವು ಮೋಕ್ಷಕ್ಕೆ ನೇರಾದ ಸಾಧನವಾಗಿರುವದರಿಂದಲೂ ಆ ಸಾಧನಗಳನ್ನು ಮೋಕ್ಷಸಾಧನಗಳೆಂದು ವ್ಯವಹರಿಸಿದೆ ಎಂಬುದನ್ನು ನಾವು ಮೊದಲು ತಿಳಿದುಕೊಂಡರೆ ವಾಕ್ಯಗಳ ಪರಸ್ಪರವಿರೋಧವು ಬಹುಮಟ್ಟಿಗೆ ಮಾಯವಾಗುತ್ತದೆ.

(೧) ''ತರತಿ ಶೋಕಮಾತ್ಮವಿತ್'' (ಛಾಂ. ೭-೧-೩), ''ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ'' (ಮುಂ, ೩-೨-೯), ''ಬ್ರಹ್ಮವಿದಾಪ್ನೋತಿ ಪರಮ್'' (ತೈ.೨-೧), ''ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ'' (ಛಾಂ.೬-೧೪-೨)ಇತಿ। ''ಯ ಆತ್ಮಾಽಪಹತಪಾಪ್ಮಾ'' (ಛಾಂ. ೮-೭-೧) ಇತ್ಯುಪಕ್ರಮ್ಯ ''ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಯಸ್ತಮಾತ್ಮಾನ ಮನುವಿದ್ಯ ವಿಜಾನಾತಿ'' (ಛಾಂ. ೮-೭-೧), ''ಆತ್ಮಾ ವಾ ಅರೇ ದ್ರಷ್ಟವ್ಯಃ'' (ಬೃ.೪-೫-೬) ಇತ್ಯುಪಕ್ರಮ್ಯ, ''ಏತಾವದರೇ ಖಲ್ವಮೃತತ್ವಮ್'' (ಬೃ. ೪-೫-೧೫) ಇತ್ಯೇವಂಜಾತೀಯಕಾ ಶ್ರುತಿಃ ಕೇವಲಾಯಾ ವಿದ್ಯಾಯಾಃ ಪುರುಷಾರ್ಥಹೇತುತ್ವಂ ಶ್ರಾವಯತಿ ॥

ಸೂ. ಭಾ. ೩-೪-೧-೪೩೭.

(೨) ಶ್ರುತಿರ್ಹಿ ವೈದಿಕಾತ್ ಆತ್ಮೈಕತ್ವವಿಜ್ಞಾನಾತ್ ಅನ್ಯತ್ ನಿಃಶ್ರೇಯಸಸಾಧನಂ ವಾರಯತಿ ''ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ'' (ಶ್ವೇ. ೩-೮) ಇತಿ॥ -ಸೂ. ಭಾ. ೨-೧-೩-೪೦೭.

(೩) ಜ್ಞಾನಸ್ಯೈವ ಹಿ ಪ್ರಾಪಕಂ ಸತ್ ಕರ್ಮ ಪ್ರಣಾಡ್ಯಾ ಮೋಕ್ಷಕಾರಣಮ್ ಇತ್ಯುಪಚರ್ಯತೇ॥ - ಸೂ. ಭಾ. ೪-೧-೧೬-೩

೧೯೭. ಕರ್ಮವನ್ನು ಕರ್ಮಕಾಂಡದಲ್ಲಿ ವಿಧಿಸಿರುವದು ಆಶ್ರಮಕರ್ಮವನ್ನು ಮಾಡಲೇಬೇಕೆಂದು; ಉಪಾಸನಾಪ್ರಕರಣದಲ್ಲಿ ವಿಧಿಸಿರುವದು ಉಪಾಸನೆಯ ಜೊತೆಗೆ ಮಾಡಿದ ಕರ್ಮವು ಉಪಾಸನಾಕಾರ್ಯವಾದ ಬ್ರಹ್ಮಪ್ರಾಪ್ತಿಗೆ ಸಹಾಯಕವಾಗಿ; ಜ್ಞಾನಪ್ರಕರಣದ ಆರಂಭದಲ್ಲಿ ವಿಧಿಸಿರುವದು ಜ್ಞಾನೋತ್ಪತ್ತಿಗಾಗಿ. ಒಂದೇಕರ್ಮವನ್ನು ಆಶ್ರಮಕರ್ಮವಾಗಿಯೂ ಜ್ಞಾನೋತ್ಪತ್ತಿಗೂ ವಿಧಿಸಿರುವದು ವಿರುದ್ಧವಲ್ಲ; ಏಕೆಂದರೆ ಬದುಕಿರುವವರೆಗೂ ಕರ್ಮವನ್ನು ಮಾಡಬೇಕು ಎಂದು ಸಾಮಾನ್ಯವಾಗಿ ಆಶ್ರಮಕರ್ಮವನ್ನು ವಿಧಿಸಿದೆ; ಆದರೆ ಮುಮುಕ್ಷುಗಳಾದವರಿಗೆ ಅದೇ ಯಜ್ಞಾದಿಗಳು ಜ್ಞಾನಕ್ಕೆ ಉತ್ಪತ್ತಿಕಾರಣವಾಗುವವೆಂದು ಮತ್ತೊಂದು

ವಿಧಿಯಿದೆ ಕರ್ಮವು ಹೀಗೆ ಜ್ಞಾನೋತ್ಪತ್ತಿಗೆ ಕಾರಣವಾಗಿರುವದೆಂಬುದೂ ಹಿಂದೆ ಮಾಡಿರುವ ಪಾಪವನ್ನು ನಾಶಗೊಳಿಸುವದರ ಮೂಲಕವೇ ಹೊರತು ಸಾಕ್ಷಾತ್ತಾಗಿ ಅಲ್ಲವೆಂದು ಹಿಂದೆ (೧೯೪) ತಿಳಿಸಿರುವದನ್ನು ನೆನಪಿನಲ್ಲಿಟ್ಟರೆ ಮೋಕ್ಷಸಾಧನಗಳಲ್ಲಿ ಕರ್ಮದ ಸ್ಥಾನವು ಯಾವದೆಂಬುದು ಸ್ಪಷ್ಟವಾಗುತ್ತದೆ.

(೧) ಆಶ್ರಮಮಾತ್ರನಿಷ್ಠಸ್ಯಾಪಿ ಅಮುಮುಕ್ಷೋಃ ಕರ್ತವ್ಯಾನ್ಯೇವ ನಿತ್ಯಾನಿ ಕರ್ಮಾಣಿ 'ಯಾವಜ್ಜೀವಮಗ್ನಿಹೋತ್ರಂ ಜುಹೋತಿ' (?) ಇತ್ಯಾದಿನಾ ವಿಹಿತತ್ವಾತ್। ನ ಹಿ ವಚನಸ್ಯ ಅತಿಭಾರೋ ನಾಮ ಕಶ್ಚಿದಸ್ತಿ॥ -ಸೂ. ಭಾ. ೩-೪-೩೨-೪೭೬.

(೨) ವಿಜ್ಞಾನಾದೇವ ಆಪ್ನೋತಿ ಸ್ವಾರಾಜ್ಯಮ್ ಇತ್ಯುಕ್ತತ್ವಾತ್ ಶ್ರೌತಸ್ಮಾರ್ತಾನಾಂ ಕರ್ಮಣಾಮ್ ಆನರ್ಥಕ್ಯಂ ಪ್ರಾಪ್ತಮ್ ಇತ್ಯೇತತ್ ಮಾ ಪ್ರಾಪತ್ ಇತಿ ಕರ್ಮಣಾಂ ಪುರುಷಾರ್ಥಂ ಪ್ರತಿ ಸಾಧನತ್ವಪ್ರದರ್ಶನಾರ್ಥಮ್ ಇಹೋಪನ್ಯಾಸಃ॥ -ತೈ. ಭಾ. ೧-೯-೫೩.

(೩) ಸಗುಣಾಸು ತು ವಿದ್ಯಾಸು ಕರ್ತೃತ್ವಾನತಿವೃತ್ತೇಃ ಸಂಭವತಿ ಆಗಾಮ್ಯಪಿ ಅಗ್ನಿಹೋತ್ರಾದಿ। ತಸ್ಯಾಪಿ ನಿರಭಿಸನ್ಧಿನಃ ಕಾರ್ಯಾನ್ತರಾಭಾವಾತ್ ವಿದ್ಯಾ ಸಂಗತ್ಯುಪಪತ್ತಿಃ॥ -ಸೂ. ಭಾ. ೪-೧-೧೬-೫೩೩.

(೪) 'ವೇದಮನೂಚ್ಯ' ಇತ್ಯೇವಮಾದಿಕರ್ತವ್ಯತೋಪದೇಶಾರಮ್ಭಃ ಪ್ರಾಗ್ಬ್ರಹ್ಮ ವಿಜ್ಞಾನಾತ್ ನಿಯಮೇನ ಕರ್ತವ್ಯಾನಿ ಶ್ರೌತಸ್ಮಾರ್ತಕರ್ಮಾಣಿ ಇತ್ಯೇವಮರ್ಥಃ। ಅನುಶಾಸನಶ್ರುತೇಃ ಪುರುಷಸಂಸ್ಕಾರಾರ್ಥತ್ವಾತ್। ಸಂಸ್ಕೃತಸ್ಯ ಹಿ ವಿಶುದ್ಧಸತ್ತ್ವಸ್ಯ ಆತ್ಮಜ್ಞಾನಮ್ ಅಞ್ಜಸೈವ ಉತ್ಪದ್ಯತೇ।''ತಪಸಾ ಕಲ್ಮಷಂ ಹನ್ತಿ ವಿದ್ಯಯಾಽಮೃತಮಶ್ನುತೇ'' ಇತಿ ಹಿ ಸ್ಮೃತಿಃ। ವಕ್ಷ್ಯತಿ ಚ ''ತಪಸಾ ಬ್ರಹ್ಮ ವಿಜಿಜ್ಞಾಸಸ್ವ'' (ತೈ.೩-೧) ಇತಿ । ಅತಃ ವಿದ್ಯೋತ್ಪತ್ತ್ಯರ್ಥಮ್ ಅನುಷ್ಠೇಯಾನಿ ಕರ್ಮಾಣಿ। 'ಅನುಶಾಸ್ತಿ' ಇತಿ ಅನುಶಾಸನಶಬ್ದಾತ್ ಅನುಶಾಸನಾತಿಕ್ರಮೇ ಹಿ ದೋಷೋತ್ಪತ್ತಿಃ। ಪ್ರಾಗುಪನ್ಯಾಸಾಚ್ಚ ಕರ್ಮಣಾಮ್। ಕೇವಲಬ್ರಹ್ಮವಿದ್ಯಾರಮ್ಭಾಚ್ಚ ಪೂರ್ವಂ ಕರ್ಮಾಣಿ ಉಪನ್ಯಸ್ತಾನಿ। ಉದಿತಾಯಾಂ ಚ ಬ್ರಹ್ಮವಿದ್ಯಾಯಾಮ್ ''ಅಭಯಂ ಪ್ರತಿಷ್ಠಾಂ ವಿನ್ದತೇ'' (ತೈ. ೨-೭), ''ನ ಬಿಭೇತಿ ಕುತಶ್ಚನ'' (ತೈ. ೨-೯), ''ಕಿಮಹಂ ಸಾಧು ನಾಕರವಮ್'' (ತೈ. ೨-೯)-ಇತ್ಯೇವಮಾದಿನಾ ಕರ್ಮನೈಷ್ಕಿಞ್ಚನ್ಯಂ ದರ್ಶಯಿಷ್ಯತಿ । ಅತೋಽವಗಮ್ಯತೇ ಪೂರ್ವೋಪಚಿತದುರಿತಕ್ಷಯದ್ವಾರೇಣ ವಿದ್ಯೋತ್ಪತ್ತ್ಯರ್ಥಾನಿ ಕರ್ಮಾಣಿ ಇತಿ॥

-ತೈ. ಭಾ. ೧-೧೧-೫೯.

(೫) ನ ಚ ಅತ್ರ ನಿತ್ಯಾನಿತ್ಯಸಂಯೋಗವಿರೋಧ ಆಶಙ್ಕ್ಯಃ। ಕರ್ಮಾಭೇದೇಽಪಿ ಸಂಯೋಗಭೇದಾತ್। ನಿತ್ಯೋ ಹಿ ಏಕಃ ಸಂಯೋಗಃ ಯಾವಜ್ಜೀವಾದಿವಾಕ್ಯಕಲ್ಪಿತಃ, ನ ತಸ್ಯ ವಿದ್ಯಾಫಲತ್ವಮ್। ಅನಿತ್ಯಸ್ತು ಅಪರಃ ಸಂಯೋಗಃ''ತಮೇತಂ ವೇದಾನುವಚನೇನ'' (ಬೃ. ೪-೪-೨೨) ಇತ್ಯಾದಿವಾಕ್ಯಕಲ್ಪಿತಃ। ತಸ್ಯ ವಿದ್ಯಾಫಲತ್ವಮ್॥ -ಸೂ. ಭಾ. ೩-೪-೩೩-೪೭೭.

(೬) ಸ್ವೇ ಸ್ವೇ ಯಥೋಕ್ತಲಕ್ಷಣಭೇದೇ ಕರ್ಮಣ್ಯಭಿರತಃ ತತ್ಪರಃ ಸಂಸಿದ್ಧಿಂ ಸ್ವಕರ್ಮಾನುಷ್ಠಾನಾತ್ ಅಶುದ್ಧಿಕ್ಷಯೇ ಸತಿ ಕಾಯೇನ್ದ್ರಿಯಾಣಾಂ ಜ್ಞಾನನಿಷ್ಠಾಯೋಗ್ಯತಾ

ಲಕ್ಷಣಾಂ ಸಂಸಿದ್ಧಿಂ ಲಭತೇ ಪ್ರಾಪ್ನೋತಿ ನರಃ, ಅಧಿಕೃತಃ ಪುರುಷಃ॥

-ಗೀ. ಭಾ. ೧೮-೪೫-೧೦೭೭.

೧೯೮. ಕರ್ಮದಿಂದಲೇ ದುರಿತಪ್ರತಿಬಂಧವು ಹೋಗಬೇಕಾಗಿರುವದರಿಂದಲೂ ಪ್ರತಿಬಂಧವು ಕಳೆದಲ್ಲದೆ ಯಾರಿಗೂ ಚಿತ್ತಶುದ್ಧಿಯಾಗಿ ಜ್ಞಾನೋತ್ಪತ್ತಿಯಾಗುವಂತಿಲ್ಲವಾದ್ದರಿಂದಲೂ ಕರ್ಮವೊಂದೇ ಮೋಕ್ಷಸಾಧನವು ಎಂದು ಭ್ರಾಂತರಾಗಬಾರದು. ಏಕೆಂದರೆ ಪ್ರತಿಬಂಧಕ್ಷಯದ ಮೂಲಕವೇ ಜ್ಞಾನವುಂಟಾಗುತ್ತದೆ ಎಂಬ ನಿಯಮವಿಲ್ಲ; ಈಶ್ವರಪ್ರಸಾದ, ತಪಸ್ಸು, ಧ್ಯಾನ- ಮುಂತಾದವುಗಳ ಅನುಷ್ಠಾನ- ಮುಂತಾದದ್ದರಿಂದಲೂ ಅದು ಉಂಟಾಗಬಹುದು. ಇದಲ್ಲದೆ ಹಿಂದಿನ ಜನ್ಮದಲ್ಲಿ ಮಾಡಿರುವ ಕರ್ಮಗಳಿಂದಲೇ ಚಿತ್ತಶುದ್ಧಿಯಾಗಿ ಪ್ರತಿಬಂಧಕ್ಷಯವಾಗಿರಬಹುದು. ಆದ್ದರಿಂದಲೇ ಆಶ್ರಮಕರ್ಮಗಳನ್ನು ಮಾಡದವರೂ ವೇದಾಂತಜ್ಞಾನಕ್ಕೆ ಅಧಿಕಾರಿಗಳಾಗಬಹುದೆಂದು ಹಿಂದೆ (೧೩)ನಾವು ಹೇಳಿರುವದು. ಇದಲ್ಲದೆ ಕರ್ಮಸಂಬಂಧವಿಲ್ಲದ ಸಂನ್ಯಾಸಿಯೇ ಮುಂತಾದವರಿಗೂ ಜ್ಞಾನವನ್ನು ಹೇಳಿರುವದರಿಂದ ಕರ್ಮವು ಜ್ಞಾನಕ್ಕೆ ಅತ್ಯಂತವಾಗಿ ಅವಶ್ಯವಲ್ಲವೆಂದು ಹೇಳಬೇಕಾಗಿರುತ್ತದೆ. ಆ ಆಶ್ರಮಗಳಲ್ಲಿರುವ ಅಹಿಂಸೆ, ಬ್ರಹ್ಮಚರ್ಯ, ಸತ್ಯ-ಮುಂತಾದವುಗಳು ಜ್ಞಾನಕ್ಕೆ ಉಪಕಾರಕವಾಗಿರುತ್ತವೆ. ಶ್ರವಣಮನನನಿದಿಧ್ಯಾಸನಗಳಂತೂ ನೇರಾಗಿಯೇ ಜ್ಞಾನಕ್ಕೆ ಕಾರಣವೆಂದು ಹಿಂದೆ (೧೭೮) ತಿಳಿಸಿಕೊಟ್ಟಿರುತ್ತೇವೆ.

(೧) ನ ಹಿ ಪ್ರತಿಬಂಧಕ್ಷಯಾದೇವ ವಿದ್ಯಾ ಉತ್ಪದ್ಯತೇ, ನ ತು ಈಶ್ವರಪ್ರಸಾದತಪೋಧ್ಯಾನಾದ್ಯನುಷ್ಠಾನಾತ್ ಇತಿ ನಿಯಮೋಽಸ್ತಿ। ಅಹಿಂಸಾಬ್ರಹ್ಮಚರ್ಯಾದೀನಾಂ ಚ ವಿದ್ಯಾಂ ಪ್ರತ್ಯುಪಕಾರಕತ್ವಾತ್। ಸಾಕ್ಷಾದೇವ ಚ ಕಾರಣತ್ವಾತ್ ಶ್ರವಣಮನನನಿದಿ-ಧ್ಯಾಸನಾದೀನಾಮ್॥ -ತೈ.೧, ಉಪಸಂಹಾರ-೮೫.

(೨) ತಸ್ಮಾದ್ವಿದ್ಯಾಸಂಯುಕ್ತಂ ನಿತ್ಯಮಗ್ನಿಹೋತ್ರಾದಿ ವಿದ್ಯಾವಿಹೀನಂ ಚ ಉಭಯಮಪಿ ಮುಮುಕ್ಷುಣಾ ಮೋಕ್ಷಪ್ರಯೋಜನೋದ್ದೇಶೇನ ಇಹ ಜನ್ಮನಿ ಜನ್ಮಾನ್ತರೇ ಚ ಪ್ರಾಗ್ಜ್ಞಾನೋತ್ಪತ್ತೇಃ ಕೃತಂ ಯತ್ ತದ್ಯಥಾಸಾಮರ್ಥ್ಯಂ ಬ್ರಹ್ಮಾಧಿಗಮಪ್ರತಿಬನ್ಧಕಾರಣೋ-ಪಾತ್ತದುರಿತಕ್ಷಯಹೇತುತ್ವದ್ವಾರೇಣ ಬ್ರಹ್ಮಾಧಿಗಮಕಾರಣತ್ವಂ ಪ್ರತಿಪದ್ಯಮಾನಂ ಶ್ರವಣ-ಮನನಶ್ರದ್ಧಾತಾತ್ಪರ್ಯಾದ್ಯನ್ತರಙ್ಗಕಾರಣಾಪೇಕ್ಷಂ ಬ್ರಹ್ಮವಿದ್ಯಯಾ ಸಹೈಕಕಾರ್ಯಂ ಭವತೀತಿ ಸ್ಥಿತಮ್॥ -ಸೂ. ಭಾ. ೪-೧-೧೮-೫೩೭.

(೩) ಊರ್ಧ್ವರೇತಃಸು ಚ ಆಶ್ರಮೇಷು ವಿದ್ಯಾ ಶ್ರೂಯತೇ। ನ ಚ ತತ್ರ ಕರ್ಮಾಙ್ಗತ್ವಂ ವಿದ್ಯಾಯಾ ಉಪಪದ್ಯತೇ। ಕರ್ಮಾಭಾವಾತ್। ನ ಹಿ ಅಗ್ನಿಹೋತ್ರಾದೀನಿ ವೈದಿಕಾನಿ ಕರ್ಮಾಣಿ ತೇಷಾಂ ಸನ್ತಿ॥ -ಸೂ. ಭಾ. ೩-೪-೧೭-೪೫೪.

೧೯೯. ಜ್ಞಾನಕ್ಕೆ ಅನೇಕ ಸಾಧನಗಳಿರುವದರಿಂದ ಯಾವನು ಬೇಕಾದರೂ ಇವುಗಳಲ್ಲಿ ಯಾವದಾದರೊಂದು ಸಾಧನವನ್ನು ಕೈಕೊಳ್ಳಬಹುದೆಂದು ತಿಳಿಯಬಾರದು. ಏಕೆಂದರೆ ಅಧಿಕಾರಿಭೇದದಿಂದ ಸಾಧನಗಳೂ ಬೇರೆಬೇರೆಯಾಗುತ್ತವೆ. **ಹೇಗೆಂದರೆ ಬಹಿರ್ಮುಖನಾದವನು ಕರ್ಮಯೋಗವನ್ನು ಮಾಡಬೇಕು. ಚಿತ್ತಶುದ್ಧಿಯಾಗಿದ್ದು ಚಿತ್ತಚಾಂಚಲ್ಯವನ್ನು ಕಳೆದುಕೊಳ್ಳಬೇಕೆನ್ನುವವನು ಉಪಾಸನಾಯುಕ್ತ ಕರ್ಮಗಳನ್ನು ಮಾಡಬೇಕು, ಅಥವಾ ಕರ್ಮಸಂನ್ಯಾಸವನ್ನು ಮಾಡಿ ಶಮಾದ್ಯುಪಾಯಗಳನ್ನು ಕೈಕೊಳ್ಳಬೇಕು. ಚಿತ್ತಶುದ್ಧಿಯೂ ಚಿತ್ತೈಕಾಗ್ರತೆಯೂ ಇದ್ದವನು ವೇದಾಂತಶ್ರವಣವನ್ನು ಮಾಡಬೇಕು. ಶ್ರವಣಮಾತ್ರದಿಂದ ಕೃತಕೃತ್ಯನಾಗದವನು ಮನನನಿದಿಧ್ಯಾಸನಗಳನ್ನು ಮಾಡಬೇಕು.**

(೧) ಸಮ್ಯಗ್ದರ್ಶನನಿಷ್ಠಾನಾಂ ಸಂನ್ಯಾಸಿನಾಂ ಸದ್ಯೋಮುಕ್ತಿರುಕ್ತಾ। ಕರ್ಮಯೋಗಶ್ಚ ಈಶ್ವರಾರ್ಪಿತಸರ್ವಭಾವೇನ ಈಶ್ವರೇ ಬ್ರಹ್ಮಣಿ ಆಧಾಯ ಕ್ರಿಯಮಾಣಃ ಸತ್ತ್ವಶುದ್ಧಿಜ್ಞಾನಪ್ರಾಪ್ತಿಸರ್ವಕರ್ಮಸಂನ್ಯಾಸಕ್ರಮೇಣ ಮೋಕ್ಷಾಯ ಇತಿ ಭಗವಾನ್ ಪದೇ ಪದೇ ಅಬ್ರವೀತ್ ವಕ್ಷ್ಯತಿ ಚ। ಅಥೇದಾನೀಂ ಧ್ಯಾನಯೋಗಂ ಸಮ್ಯಗ್ದರ್ಶನಸ್ಯ ಅನ್ತರಙ್ಗಂ ವಿಸ್ತರೇಣ ವಕ್ಷ್ಯಾಮಿ ಇತಿ ತಸ್ಯ ಸೂತ್ರಸ್ಥಾನೀಯಾನ್ ಶ್ಲೋಕಾನ್ ಉಪದಿಶತಿ ಸ್ಮ॥ -ಗೀ.ಭಾ. ೫-೨೭-೩೭೨.

(೨) ಸ್ಮೃತಿಷ್ವಪಿ ಭಗವದ್ಗೀತಾದ್ಯಾಸು ಅನಭಿಸನ್ಧಾಯ ಫಲಮ್ ಅನುಷ್ಠಿತಾನಿ ಯಜ್ಞಾದೀನಿ ಮುಮುಕ್ಷೋರ್ಜ್ಞಾನಸಾಧನಾನಿ ಭವನ್ತಿ ಇತಿ ಪ್ರಪಞ್ಚಿತಮ್। ತಸ್ಮಾತ್ ಯಜ್ಞಾದೀನಿ ಶಮದಮಾದೀನಿ ಚ ಯಥಾಶ್ರಮಂ ಸರ್ವಾಣ್ಯೇವ ಆಶ್ರಮಕರ್ಮಾಣಿ ವಿದ್ಯೋತ್ಪತ್ತೌ ಅಪೇಕ್ಷಿತವ್ಯಾನಿ। ತತ್ರಾಪಿ 'ಏವಂವಿತ್' ಇತಿ ವಿದ್ಯಾಸಂಯೋಗಾತ್ ಪ್ರತ್ಯಾಸನ್ನಾನಿ ವಿದ್ಯಾಸಾಧನಾನಿ ಶಮಾದೀನಿ। ವಿವಿದಿಷಾಸಂಯೋಗಾತ್ ತು ಬಾಹ್ಯತರಾಣಿ ಯಜ್ಞಾದೀನಿ ಇತಿ ವಿವೇಕ್ತವ್ಯಮ್॥

-ಸೂ. ಭಾ ೩-೪-೨೭-೪೭೧.

(೩) ಯಸ್ತು ಪರಮಾತ್ಮದರ್ಶನವಿಷಯೇ ಮನುನೋಕ್ತಃ ಆತ್ಮಯಾಜಿಶಬ್ದಃ "ಸಮಂ ಪಶ್ಯನ್ನಾತ್ಮಯಾಜೀ" ಇತ್ಯತ್ರ, ಸಮಂ ಪಶ್ಯನ್ ಆತ್ಮಯಾಜೀ ಭವತಿ ಇತ್ಯರ್ಥಃ। ಅಥವಾ ಭೂತಪೂರ್ವಗತ್ಯಾ। ಆತ್ಮಯಾಜೀ ಆತ್ಮಸಂಸ್ಕಾರಾರ್ಥಂ ನಿತ್ಯಾನಿ ಕರ್ಮಾಣಿ ಕರೋತಿ "ಇದಂ ಮೇಽನೇನಾಙ್ಗಂ ಸಂಸ್ಕ್ರಿಯತೇ" ಇತಿ ಶ್ರುತೇಃ। ತಥಾ 'ಗಾರ್ಭೈರ್ಹೋಮೈಃ' ಇತ್ಯಾದಿಪ್ರಕರಣೇ ಕಾರ್ಯಕರಣಸಂಸ್ಕಾರಾರ್ಥತ್ವಂ ನಿತ್ಯಾನಾಂ ಕರ್ಮಣಾಂ ದರ್ಶಯತಿ। ಸಂಸ್ಕೃತಶ್ಚ ಯ ಆತ್ಮಯಾಜೀ ತೈಃ ಕರ್ಮಭಿಃ ಸಮಂ ದ್ರಷ್ಟುಂ ಸಮರ್ಥೋ ಭವತಿ। ತಸ್ಯ ಇಹ ವಾ ಜನ್ಮಾನ್ತರೇ ವಾ ಸಮಮ್ ಆತ್ಮದರ್ಶನಮ್ ಉತ್ಪದ್ಯತೇ। ಸಮಂ ಪಶ್ಯನ್ ಸ್ವಾರಾಜ್ಯಮ್ ಅಧಿಗಚ್ಛತಿ ಇತ್ಯೇಷೋಽರ್ಥಃ। ಆತ್ಮಯಾಜಿಶಬ್ದಸ್ತು ಭೂತಪೂರ್ವಗತ್ಯಾ ಪ್ರಯುಜ್ಯತೇ। ಜ್ಞಾನಯುಕ್ತಾನಾಂ ನಿತ್ಯಾನಾಂ ಕರ್ಮಣಾಂ ಜ್ಞಾನೋತ್ಪತ್ತಿಸಾಧನತ್ವಪ್ರದರ್ಶನಾರ್ಥಮ್॥ -ಬೃ.ಭಾ. ೩-೩-೧-೩೬.

(೪) ಭವೇತ್ ಆವೃತ್ತ್ಯಾನರ್ಥಕ್ಯಂ ತಂ ಪ್ರತಿ ಯಸ್ತತ್ತ್ವಮಸಿ ಇತಿ ಸಕೃದುಕ್ತಮೇವ ಬ್ರಹ್ಮಾತ್ಮತ್ವಮ್ ಅನುಭವಿತುಂ ಶಕ್ನುಯಾತ್। ಯಸ್ತು ನ ಶಕ್ನೋತಿ ತಂ ಪ್ರತಿ ಉಪಯುಜ್ಯತ ಏವ ಆವೃತ್ತಿಃ ॥ - ಸೂ. ಭಾ. ೪-೧-೨-೫೦೬.

೨೦೦. ಶಾಸ್ತ್ರಶ್ರವಣಾದಿಗಳೂ ಇಲ್ಲದೆ ಸ್ವತಃ ತತ್ತ್ವವನ್ನು ತಿಳಿಯುವ ಯೋಗ್ಯತೆಯೂ ಯಾವನಿಗಾದರೂ ಇರಬಾರದೇಕೆ ?- ಎಂಬ ಶಂಕೆಯು ಯಾರಿಗಾದರೂ ಉಂಟಾಗಬಹುದು. ಇದ್ದರೆ ಶಾಸ್ತ್ರದಲ್ಲಿ ವಿಧಿಸಿರುವ ಜ್ಞಾನಸಾಧನಗಳು ವ್ಯರ್ಥವಲ್ಲವೆ ?- ಎಂದೂ ಅವರು ಕೇಳಬಹುದು. ಇದಕ್ಕೆ ಉತ್ತರವೂ ಮೇಲಿನ ವಿವರಣೆಯಿಂದಲೇ ಸ್ಪಷ್ಟವಾಗಿರುತ್ತದೆ. ಅತ್ಯಂತ ಪುಣ್ಯಶಾಲಿಯಾದವನು ತಾನು ಹಿಂದೆ ಮಾಡಿದ ಜ್ಞಾನಕರ್ಮಗಳ ಬಲದಿಂದ ಮತ್ತೆಯಾವ ಸಾಧನವೂ ಇಲ್ಲದೆಯೇ ಜ್ಞಾನವನ್ನು ಪಡೆದುಕೊಳ್ಳಬಹುದು. ಆದರೂ ಇಷ್ಟುಮಾತ್ರದಿಂದ ಜ್ಞಾನಸಾಧನಗಳು ವ್ಯರ್ಥವಾಗುವದಿಲ್ಲ. ನೈಮಿತ್ತಿಕಕಾರ್ಯಗಳಿಗೆ ನಿಮಿತ್ತವಾದ ಸಾಧನಗಳು ಒಂದೊಂದು ಅಥವಾ ಒಂದಕ್ಕಿಂತ ಹೆಚ್ಚು ಸಾಧನವಾಗಬಹುದು ; ಸಾಮಾನ್ಯ ಸಾಧನಗಳೇ ಕೆಲವರಿಗೆ ಸಾಕಾಗಬಹುದು, ಇನ್ನು ಕೆಲವರಿಗೆ ಸಗುಣವಾದ ಸಾಧನಗಳೇ ಬೇಕಾಗಬಹುದು. ಮನುಷ್ಯರಿಗೆ ಬೆಳಕಿನ ಸಹಾಯದ ಕಣ್ಣು ರೂಪವನ್ನು ನೋಡುವದಕ್ಕೆ ಬೇಕಾದರೂ ಬೆಕ್ಕು, ಗೂಬೆ- ಮುಂತಾದವುಗಳಿಗೆ ಬರಿಯ ಕಣ್ಣೇ ಸಾಕಾಗುತ್ತದೆ; ಯೋಗಿಗಳಿಗೆ ಮನಸ್ಸೊಂದೇ ಸಾಕು. ಹೀಗೆಯೇ ಪ್ರಜಾಪತಿಯಂಥವನಿಗೆ ಜನ್ಮಾಂತರಕೃತಜ್ಞಾನಕರ್ಮಗಳು ಸಾಕಾಗಬಹುದು. ಮಿಕ್ಕವರಿಗೆ ತಪಸ್ಸು, ಗುರ್ವನುಗ್ರಹ, ಶ್ರದ್ಧೆ, ಆಚಾರ್ಯಸೇವೆ, ಶಮಾದಿಗಳು, ಶ್ರವಣಾದಿಗಳು-ಇವುಗಳಲ್ಲಿ ಒಂದು ಅಥವಾ ಹೆಚ್ಚು ಬೇಕಾಗಬಹುದು. **ಇವುಗಳಲ್ಲಿ ಶ್ರವಣಾದಿಗಳು ನೇರಾಗಿಯೂ ಮಿಕ್ಕವು ಪ್ರತಿಬಂಧನಿವೃತ್ತಿಯ ಮೂಲಕವೂ ಜ್ಞಾನಕ್ಕೆ ಕಾರಣವಾಗುವವು.**

(೧) ಸ್ಯಾನ್ಮತಮ್ '' ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ'' (ಗೀ. ೪-೩೯),''ತದ್ವಿದ್ಧಿ ಪ್ರಣಿಪಾತೇನ '' (ಗೀ. ೪-೩೪) ಇತ್ಯೇವಮಾದೀನಾಂ ಶ್ರುತಿಸ್ಮೃತಿವಿಹಿತಾನಾಂ ಜ್ಞಾನಹೇತೂನಾಮ್ ಅಹೇತುತ್ವಂ ಪ್ರಜಾಪತೇರಿವ ಜನ್ಮಾನ್ತರಕೃತಧರ್ಮಹೇತುತ್ವೇ ಜ್ಞಾನಸ್ಯ ಇತಿ ಚೇತ್ । ನ । ನಿಮಿತ್ತವಿಕಲ್ಪಸಮುಚ್ಚಯಗುಣವದಗುಣವತ್ತ್ವಭೇದೋಪಪತ್ತೇಃ । ಲೋಕೇ ಹಿ ನೈಮಿತ್ತಿಕಾನಾಂ ಕಾರ್ಯಾಣಾಂ ನಿಮಿತ್ತಭೇದಃ ಅನೇಕಧಾ ವಿಕಲ್ಪ್ಯತೇ । ತಥಾ ನಿಮಿತ್ತಸಮುಚ್ಚಯಃ । ತೇಷಾಂ ಚ ವಿಕಲ್ಪಿತಾನಾಂ ಸಮುಚ್ಚಿತಾನಾಂ ಚ ಪುನರ್ಗುಣವದಗುಣವತ್ತ್ವ-ಕೃತೋ ಭೇದೋ ಭವತಿ । ತದ್ಯಥಾ ರೂಪಜ್ಞಾನೇ ಏವ ತಾವತ್ ನೈಮಿತ್ತಿಕೇ ಕಾರ್ಯೇ ತಮಸಿ ವಿನಾಽಽಲೋಕೇನ ಚಕ್ಷೂರೂಪಸಂನಿಕರ್ಷೋ ನಕ್ತಂಚರಾಣಾಂ ರೂಪಜ್ಞಾನೇ ನಿಮಿತ್ತಂ ಭವತಿ। ಮನ ಏವ ಕೇವಲಂ ರೂಪಜ್ಞಾನನಿಮಿತ್ತಂ ಯೋಗಿನಾಮ್ । ಅಸ್ಮಾಕಂ ತು ಸಂನಿಕರ್ಷಾಲೋಕಾಭ್ಯಾಂ ಸಹ। ತಥಾ ಆದಿತ್ಯಚನ್ದ್ರಾದ್ಯಾಲೋಕಭೇದೈಃ ಸಮುಚ್ಚಿತಾ ನಿಮಿತ್ತಭೇದಾ ಭವನ್ತಿ । ತಥಾ ಆಲೋಕವಿಶೇಷಗುಣವದಗುಣವತ್ತ್ವೇನ ಭೇದಾಃ ಸ್ಯುಃ । ಏವಮೇವ ಆತ್ಮೈಕತ್ವಜ್ಞಾನೇಽಪಿ ಕ್ವಚಿತ್ ಜನ್ಮಾನ್ತರಕೃತಂ ಕರ್ಮ ನಿಮಿತ್ತಂ ಭವತಿ । ಯಥಾ ಪ್ರಜಾಪತೇಃ । ಕ್ವಚಿತ್ ತಪೋನಿಮಿತ್ತಮ್ । 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಇತಿ ಶ್ರುತೇಃ । ಕ್ವಚಿತ್ 'ಆಚಾರ್ಯವಾನ್ ಪುರುಷೋ ವೇದ', 'ಶ್ರದ್ಧಾವಾನ್ ಲಭತೇ ಜ್ಞಾನಮ್, 'ತದ್ವಿದ್ಧಿ

ಪ್ರಣಿಪಾತೇನ', 'ಆಚಾರ್ಯಾದ್ಧೈವ', 'ದ್ರಷ್ಟವ್ಯಃ ಶ್ರೋತವ್ಯಃ'- ಇತ್ಯಾದಿಶ್ರುತಿಸ್ಮೃತಿಭ್ಯಃ ಏಕಾನ್ತಜ್ಞಾನಲಾಭನಿಮಿತ್ತತ್ವಮ್ । ಶ್ರದ್ಧಾ ಪ್ರಭೃತೀನಾಂ ಅಧರ್ಮಾದಿನಿಮಿತ್ತ ವಿಯೋಗಹೇತುತ್ವಾತ್ । ವೇದಾನ್ತಶ್ರವಣಮನನನಿದಿಧ್ಯಾಸನಾನಾಂ ಚ ಸಾಕ್ಷಾತ್ ಜ್ಞೇಯವಿಷಯತ್ವಾತ್ । ಪಾಪಾದಿಪ್ರತಿಬನ್ಧಕ್ಷಯೇ ಚ ಆತ್ಮಮನಸೋಃ ಭೂತಾರ್ಥಜ್ಞಾನ ನಿಮಿತ್ತಸ್ವಾಭಾವ್ಯಾತ್ । ತಸ್ಮಾತ್ ಅಹೇತುತ್ವಂ ನ ಜಾತು ಜ್ಞಾನಸ್ಯ ಶ್ರದ್ಧಾಪ್ರಣಿಪಾತಾದೀನಾಮ್ ಇತಿ॥ -ಬೃ. ಭಾ. ೧-೪-೨-೧೦೫.

೨೦೧. ಮೇಲೆ ಹೇಳಿದ ಸಾಧನವಿನಿಯೋಗದ ಮರ್ಮವನ್ನು ಅರಿಯದವರು ಕರ್ಮದೊಡನೆ ಮಿಕ್ಕ ಸಾಧನಗಳನ್ನು ಮಾಡಿದರೆ ಜ್ಞಾನವು ಮತ್ತಷ್ಟು ಬೇಗನೆ ಸಿದ್ಧವಾಗಬಹುದು ಎಂದು ಭಾವಿಸುವದಕ್ಕೆ ಅವಕಾಶವಿದೆ. ಬದುಕಿರುವವರೆಗೂ ಕರ್ಮವನ್ನು ಮಾಡಬೇಕೆಂಬ ಶ್ರುತಿಗೂ ಈ ಪಕ್ಷವು ಅನುಕೂಲವಾಗುತ್ತದೆ ; ಗಾರ್ಹಸ್ಥ್ಯವೊಂದೇ ನಿಜವಾದ ಅಶ್ರಮವೆಂದು ಹೇಳುವ ಸ್ಮೃತಿವಾಕ್ಯವೂ ಇದಕ್ಕೆ ಹೊಂದುತ್ತದೆ ; ಕರ್ಮದಿಂದಲೇ ಜನಕಾದಿಗಳು ಸಂಸಿದ್ಧಿಯನ್ನು ಹೊಂದಿದರು ಎಂಬ ಗೀತಾವಾಕ್ಯಕ್ಕೂ ಅನುಗುಣವಾಗಿದೆ ಎಂದು ಅವರು ಎಣಿಸಬಹುದು.

ಆದರೆ ಈ ಕಲ್ಪನೆಯು ಶ್ರುತಿವಿರುದ್ಧ, ಸ್ಮೃತಿವಿರುದ್ಧ ಮತ್ತು ಯುಕ್ತಿವಿರುದ್ಧ. ಹೇಗೆಂದರೆ ಕರ್ಮವು ಧ್ಯಾನಯೋಗಕ್ಕೆ ಅರ್ಹತೆಯುಂಟಾಗುವವರೆಗೆ ಮಾತ್ರ ; ಆ ಬಳಿಕ ಶಮವನ್ನೇ ಅಭ್ಯಾಸಮಾಡಬೇಕು- ಎಂದು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಬ್ರಹ್ಮಸಂಸ್ಥನಿಗೇ ಅಮೃತತ್ವವು ದೊರೆಯುತ್ತದೆ. ಮಿಕ್ಕ ಆಶ್ರಮಿಗಳಿಗೆ ಪುಣ್ಯಲೋಕವು ದೊರೆಯುತ್ತದೆ- ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಉಪನಿಷತ್ತುಗಳಲ್ಲಿಯೂ ಇತಿಹಾಸಪುರಾಣಾದಿಗಳಲ್ಲಿಯೂ ಜ್ಞಾನಾಂಗವಾಗಿ ಸರ್ವಕರ್ಮಸಂನ್ಯಾಸವನ್ನು ವಿಧಿಸಿದೆ. ಆದ್ದರಿಂದ **ಬಹಿರಂಗವಾದ ಕರ್ಮದೊಡನೆ ಅಂತರಂಗವಾದ ಧ್ಯಾನಾದಿಗಳನ್ನು ಮಾಡುವದು ಸಾಧ್ಯವಿಲ್ಲ**. ಏಕಾಶ್ರಮಸ್ಮೃತಿಯು ಶ್ರುತಿವಿರುದ್ಧವಾಗಿರುವದರಿಂದ ಅದು ಗಾರ್ಹಸ್ಥ್ಯದ ಪ್ರಶಂಸಾಪರವೆಂದು ಹೇಳಬೇಕು. ಕರ್ಮದಿಂದಲೇ ಸಿದ್ಧಿಯನ್ನು ಪಡೆದರು ಎಂಬ ಗೀತಾವಾಕ್ಯಕ್ಕೆ ಜ್ಞಾನಯೋಗ್ಯತಾರೂಪವಾದ ಸಿದ್ಧಿಯನ್ನು ಪಡೆದರು ಎಂದೋ, ಕರ್ಮಸಹಿತವಾಗಿದ್ದರೂ ಕ್ರಿಯಾಕಾರಕಫಲಭೇದಬುದ್ಧಿಯು ಜ್ಞಾನದಿಂದ ಬಾಧಿತವಾಗಿದ್ದದ್ದರಿಂದ ಅವರಿಗೆ ಕರ್ಮವು ಬಂಧಕವಾಗಲಿಲ್ಲ ಎಂದು ಜ್ಞಾನದ ಸ್ತುತಿಪರವೆಂದೋ ಭಾವಿಸಬೇಕು. ಜ್ಞಾನದೊಡನೆ ಕರ್ಮವಿರುವ ಸಂಭವವೇ ಇಲ್ಲವೆಂದು ಹಿಂದೆಯೇ (೧೯೫) ತಿಳಿಸಿಕೊಟ್ಟಿರುತ್ತೇವೆ. ಆದ್ದರಿಂದ ಕರ್ಮವನ್ನು ಮಾಡುತ್ತಲೇ ಇರಬೇಕು ಎಂಬ ಶ್ರುತಿಗೆ ಕರ್ಮವನ್ನು ಮಾಡುತ್ತಿದ್ದರೂ ಜ್ಞಾನಿಗೆ ಅಕರ್ತ್ರಾತ್ಮಬುದ್ಧಿಯಿರುವದರಿಂದ ಲೇಪವಿಲ್ಲ ಎಂದು ಸ್ತುತಿಪರವೆಂದೂ ಅರ್ಥಮಾಡಬಹುದು.

ಆದ್ದರಿಂದ ಸಾಧನಗಳ ವಿಷಯಕ್ಕೆ ಈ ಮಥಿತಾರ್ಥವು ಸಿದ್ಧವಾಗುತ್ತದೆ : ಕೇವಲ ಕರ್ಮವನ್ನೇ ಆಗಲಿ, ಉಪಾಸನಾಸಹಿತವಾದ ಕರ್ಮವನ್ನಾಗಲಿ, ಮುಮುಕ್ಷುವಾದವನು ಮೋಕ್ಷವಾಗಬೇಕೆಂಬ ಇಚ್ಛೆಯಿಂದ, ಈ ಜನ್ಮದಲ್ಲಿಯೋ ಹಿಂದಿನ ಜನ್ಮದಲ್ಲಿಯೋ ಜ್ಞಾನೋತ್ಪತ್ತಿಗಿಂತ ಮೊದಲೇ ಮಾಡಿದ್ದದ್ದು ತನ್ನ ಶಕ್ತಿಗೆ ಅನುಗುಣವಾಗಿ ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಅಡ್ಡಿಯಾಗಿರುವ ಹಿಂದೆ ಮಾಡಿದ ಪಾಪವನ್ನು ಕಳೆಯುವದರ ಮೂಲಕ ಬ್ರಹ್ಮಜ್ಞಾನಕ್ಕೆ ಕಾರಣವಾಗುತ್ತದೆ ; ಆಮೇಲೆ ಶ್ರವಣ, ಮನನ, ಶ್ರದ್ಧೆ, ತಾತ್ಪರ್ಯವೇ ಮುಂತಾದ ಅಂತರಂಗಸಾಧನಗಳನ್ನು ಅನುಷ್ಠಾನಮಾಡುವದರ ಮೂಲಕ ಉಂಟಾಗುವ ಬ್ರಹ್ಮವಿದ್ಯೆಯಿಂದಾಗುವ ಮುಕ್ತಿಗೂ ಪರಂಪರೆಯಿಂದ ಕಾರಣವಾಗುತ್ತದೆ.

(೧) ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।

ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ - ಗೀ. ೬-೩.

(೨) ತತ್ರ ಆಶ್ರಮಿಣಾಂ ಕಶ್ಚಿತ್ ಯೋಗಮಾರುರುಕ್ಷುರ್ಭವತಿ ಆರೂಢಶ್ಚ ಕಶ್ಚಿತ್, ಅನ್ಯೇ- ನಾರುರುಕ್ಷವಃ ನ ಚಾರೂಢಾಃ । ತಾನಪೇಕ್ಷ್ಯ 'ಆರುರುಕ್ಷೋ', 'ಆರೂಢಸ್ಯ ಚ' - ಇತಿ ವಿಶೇಷಣಂ ವಿಭಾಗಕರಣಂ ಚೋಪಪದ್ಯತೇ ಏವ ಇತಿ ಚೇತ್। ನ । 'ತಸ್ಯೈವ' ಇತಿ ವಚನಾತ್, ಪುನರ್ಯೋಗಗ್ರಹಣಾಚ್ಚ 'ಯೋಗಾರೂಢಸ್ಯ' ಇತಿ ॥

- ಗೀ. ಭಾ. ೬-೧೮ ಅವತರಣಿಕ-೩೭೮.

(೩) ಯ ಆಸೀತ್ ಪೂರ್ವಂ ಯೋಗಮಾರುರುಕ್ಷುಃ, ತಸ್ಯೈವ ಆರೂಢಸ್ಯ ಶಮ ಏವ ಕರ್ತವ್ಯಃ ಕಾರಣಂ ಯೋಗಫಲಂ ಪ್ರತಿ ಉಚ್ಯತೇ ಇತಿ । ಅತಃ ನ ಯಾವಜ್ಜೀವಂ ಕರ್ತವ್ಯತ್ವಪ್ರಾಪ್ತಿಃ ಕಸ್ಯಚಿದಪಿ ಕರ್ಮಣಃ ॥ - ಗೀ. ಭಾ. ೬ನೆಯ ಅಧ್ಯಾಯ ಅವತರಣಿಕೆ-೩೭೮.

(೪) ಸರ್ವ ಏತೇ ಪುಣ್ಯಲೋಕಾ ಭವನ್ತಿ ಬ್ರಹ್ಮಸಂಸ್ಥೋಽಮೃತತ್ವಮೇತಿ ।
ಸರ್ವ ಏತೇ ತ್ರಯೋಽಪ್ಯಾಶ್ರಮಿಣಃ ಯಥೋಕ್ತೈರ್ಧರ್ಮೈಃ ಪುಣ್ಯಲೋಕಾ ಭವನ್ತಿ । ಪುಣ್ಯಃ ಲೋಕಃ ಯೇಷಾಂ ತ ಇಮೇ ಪುಣ್ಯಲೋಕಾಃ ಆಶ್ರಮಿಣೋ ಭವನ್ತಿ । ಅವಶಿಷ್ಟಸ್ತು ಅನುಕ್ತಃ ಪರಿವ್ರಾಟ್ ತುರೀಯಃ ಬ್ರಹ್ಮಸಂಸ್ಥಃ ಬ್ರಹ್ಮಣಿ ಸಮ್ಯಕ್ ಸ್ಥಿತಃ । ಸಃ ಅಮೃತತ್ವಂ ಪುಣ್ಯಲೋಕವಿಲಕ್ಷಣಮ್ ಅಮರಣಭಾವಮ್ ಆತ್ಯನ್ತಿಕಮ್ ಏತಿ । ನಾಪೇಕ್ಷಿಕಮ್ ॥

- ಛಾಂ. ಭಾ. ೨-೨೩-೧-೧೭೬.

(೫) ಬ್ರಹ್ಮಸಂಸ್ಥ ಇತಿ ಹಿ ಬ್ರಹ್ಮಣಿ ಪರಿಸಮಾಪ್ತಿಃ ಅನನ್ಯವ್ಯಾಪಾರತಾರೂಪಂ ತನ್ನಿಷ್ಠತ್ವಮ್ ಅಭಿಧೀಯತೇ । ತಚ್ಚ ತ್ರಯಾಣಾಮ್ ಆಶ್ರಮಾಣಾಂ ನ ಸಂಭವತಿ । ಸ್ವಾಶ್ರಮವಿಹಿತಕರ್ಮಾನನುಷ್ಠಾನೇ ಪ್ರತ್ಯವಾಯಶ್ರವಣಾತ್ ॥ -ಸೂ. ಭಾ. ೩-೪-೨೦-೪೬೦.

(೬) ಸರ್ವೋಪನಿಷತ್ಸು ಇತಿಹಾಸಪುರಾಣಯೋಗಶಾಸ್ತ್ರೇಷು ಚ ಜ್ಞಾನಾಙ್ಗತ್ವೇನ ಮುಮುಕ್ಷೋಃ ಸರ್ವಕರ್ಮಸಂನ್ಯಾಸವಿಧಾನಾತ್ । ಆಶ್ರಮವಿಕಲ್ಪಸಮುಚ್ಚಯವಿಧಾನಾಚ್ಚ ಶ್ರುತಿಸ್ಮೃತ್ಯೋಃ ॥ -ಗೀ. ಭಾ. ೩, ಅವತರಣಿಕೆ-೧೪೬.

(೭) ಯಚ್ಚ ''ಪೂರ್ವೈಃ ಪೂರ್ವತರಂ ಕೃತಮ್'' (ಗೀ. ೪-೧೫), ''ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ'' (ಗೀ. ೩-೨೦)ಇತಿ, ತತ್ತು ಪ್ರವಿಭಜ್ಯ ವಿಜ್ಞೇಯಮ್ । ತತ್ ಕಥಮ್? ಯದಿ ತಾವತ್ ಪೂರ್ವೇ ಜನಕಾದಯಃ ತತ್ತ್ವವಿದೋಽಪಿ ಪ್ರವೃತ್ತಕರ್ಮಾಣಃ ಸ್ಯುಃ, ತೇ ಲೋಕಸಙ್ಗ್ರಹಾರ್ಥಂ 'ಗುಣಾ ಗುಣೇಷು ವರ್ತನ್ತೇ' (ಗೀ. ೩-೨೮) ಇತಿ ಜ್ಞಾನೇನೈವ ಸಂಸಿದ್ಧಿಮ್ ಆಸ್ಥಿತಾಃ । ಕರ್ಮಸಂನ್ಯಾಸೇ ಪ್ರಾಪ್ತೇಽಪಿ ಕರ್ಮಣಾ ಸಹೈವ ಸಂಸಿದ್ಧಿಮ್ ಆಸ್ಥಿತಾಃ ನ ಕರ್ಮಸಂನ್ಯಾಸಂ ಕೃತವನ್ತಃ ಇತ್ಯರ್ಥಃ । ಅಥ ನ ತೇ ತತ್ತ್ವವಿದಃ ಈಶ್ವರಸಮರ್ಪಿತೇನ ಕರ್ಮಣಾ ಸಾಧನಭೂತೇನ ಸಂಸಿದ್ಧಿಂ ಸತ್ತ್ವಶುದ್ಧಿಂ ಜ್ಞಾನೋತ್ಪತ್ತಿಲಕ್ಷಣಾಂ ವಾ ಸಂಸಿದ್ಧಿಮ್ ಆಸ್ಥಿತಾಃ ಜನಕಾದಯಃ ಇತಿ ವ್ಯಾಖ್ಯೇಯಮ್॥ -ಗೀ. ಭಾ. ೨-೧೦-೧೩.

(೮) ''ಕುರ್ವನ್ನೇವೇಹ ಕರ್ಮಾಣಿ '' (ಈ.೨) ಇತ್ಯತ್ರ ಅಪರೋ ವಿಶೇಷಃ ಆಖ್ಯಾಯತೇ। ಯದ್ಯಪಿ ಅತ್ರ ಪ್ರಕರಣಸಾಮರ್ಥ್ಯಾತ್ ವಿದ್ವಾನೇವ ಕುರ್ವನ್ ಇತಿ ಸಂಬಧ್ಯೇತ ತಥಾಪಿ ವಿದ್ಯಾ ಸ್ತುತಯೇ ಕರ್ಮಾನುಜ್ಞಾನಮೇತತ್ ದ್ರಷ್ಟವ್ಯಮ್ ।'' ನ ಕರ್ಮ ಲಿಪ್ಯತೇ ನರೇ'' (ಈ.೨) ಇತಿ ಹಿ ವಕ್ಷ್ಯತಿ। ಏತದುಕ್ತಂ ಭವತಿ । ಯಾವಜ್ಜೀವಂ ಕರ್ಮ ಕುರ್ವತ್ಯಪಿ ವಿದುಷಿ ಪುರುಷೇ ನ ಕರ್ಮಲೇಪಾಯ ಭವತಿ ವಿದ್ಯಾಸಾಮರ್ಥ್ಯಾತ್ ಇತಿ । ತದೇವಂ ವಿದ್ಯಾ ಸ್ತೂಯತೇ ॥

- ಸೂ. ಭಾ. ೩-೪-೧೪-೪೫೧.

(೯) ತಸ್ಮಾದ್ವಿದ್ಯಾಸಂಯುಕ್ತಂ ನಿತ್ಯಮಗ್ನಿಹೋತ್ರಾದಿ ವಿದ್ಯಾವಿಹೀನಂ ಚ, ಉಭಯಮಪಿ ಮುಮುಕ್ಷುಣಾ ಮೋಕ್ಷಪ್ರಯೋಜನೋದ್ದೇಶೇನ ಇಹಜನ್ಮನಿ ಜನ್ಮಾನ್ತರೇ ಚ ಪ್ರಾಗ್ಜ್ಞಾನೋತ್ಪತ್ತೇಃ ಕೃತಂ ಯತ್ ತದ್ಯಥಾಸಾಮರ್ಥ್ಯಂ ಬ್ರಹ್ಮಾಧಿಗಮ ಪ್ರತಿಬನ್ಧಕಾರಣೋಪಾತ್ತದುರಿತಕ್ಷಯಹೇತುತ್ವದ್ವಾರೇಣ ಬ್ರಹ್ಮಾಧಿಗಮಕಾರಣತ್ವಂ ಪ್ರತಿಪದ್ಯ-ಮಾನಂ ಶ್ರವಣಮನನಶ್ರದ್ಧಾತಾತ್ಪರ್ಯಾದ್ಯನ್ತರಙ್ಗಕಾರಣಾ ಪೇಕ್ಷಂ ಬ್ರಹ್ಮವಿದ್ಯಯಾ ಸಹ ಏಕಕಾರ್ಯಂ ಭವತೀತಿ ಸ್ಥಿತಮ್ ॥ -ಸೂ. ಭಾ. ೪-೧-೧೮-೫೩೭.

೨೦೨. ಯಾವಜ್ಜೀವವೂ ಮಾಡಬೇಕಾಗಿರುವ ಕರ್ಮವನ್ನು ಸಂನ್ಯಾಸ ಮಾಡಿದರೆ ಪ್ರತ್ಯವಾಯವು ಬರುತ್ತದೆ; ಋಣತ್ರಯವನ್ನು ಕಳೆದುಕೊಳ್ಳದೆ ಸಂನ್ಯಾಸ ವನ್ನು ತೆಗೆದುಕೊಳ್ಳಕೂಡದೆಂದು ಸ್ಮೃತಿಯಿದೆ. ಆದ್ದರಿಂದ ಸಂನ್ಯಾಸವು ಕರ್ಮಕ್ಕೆ ಅಧಿಕಾರಿಗಳಲ್ಲದವರಿಗೆ ಹೇಳಿದ್ದು ಎಂದು ಹಿಂದೆ ಕೆಲವರು ವಾದಿಸುತ್ತಿದ್ದರು.

ಈ ವಾದವು ಶ್ರುತಿಯುಕ್ತಿಗಳಿಗೆ ವಿರುದ್ಧವಾಗಿದೆ. ಏಕೆಂದರೆ ಶ್ರುತಿಯಲ್ಲಿ ಸಂನ್ಯಾಸವನ್ನು ವಿಧಿಸಿದೆ ಗೃಹಸ್ಥಾಶ್ರಮದಂತೆಯೇ ಪರಾಮರ್ಶಿಸಿದೆ. ಬ್ರಹ್ಮಚರ್ಯ ದಿಂದಲೇ ವಿರಕ್ತನಾದವನು ಸಂನ್ಯಾಸಮಾಡಬಹುದು ಎಂದು ಶ್ರುತಿಯಿರುವದರಿಂದ ಅಂಥವನಿಗೆ ಕರ್ಮವನ್ನು ಬಿಟ್ಟ ದೋಷವು ಬರುವದಕ್ಕೆ ಕಾರಣವಿರುವದಿಲ್ಲ. ಹಾಗೆ ಬರುವದಾದರೆ ಎಲ್ಲರಿಗೂ ಮಿಕ್ಕವರ ಕರ್ಮವನ್ನು ಬಿಟ್ಟ ದೋಷವು ಬರಬೇಕಾಗು ವದು; ಏಕೆಂದರೆ ಆಗ ಎಲ್ಲರಿಗೂ ಎಲ್ಲಾ ಕರ್ಮಗಳೂ ವಿಹಿತವಾಗಿವೆ ಎಂದು ಹೇಳಿದಂತೆ ಆಗುವದು. ಬ್ರಹ್ಮಚಾರಿಗಳಿಗೆ ಗೃಹಸ್ಥಕರ್ಮವನ್ನು ಬಿಟ್ಟ ದೋಷವು

ಬರುವದೆಂದು ಯಾರೂ ಹೇಳುವದಿಲ್ಲ. ಸಂನ್ಯಾಸಿಗೆ ತನ್ನ ಧರ್ಮವಾದ ಶಮಾದಿಗಳನ್ನು ಬಿಟ್ಟರೆ ಪ್ರತ್ಯವಾಯವಾದರೂ ಆದೀತು ; ಗೃಹಸ್ಥನ ಕರ್ಮವನ್ನು ಬಿಟ್ಟರೆ ಪ್ರತ್ಯವಾಯವಾಗಲು ಕಾರಣವಿಲ್ಲ. ಹಾಗೆ ಪ್ರತ್ಯವಾಯವಾಗುವದಾದರೆ ಉಕ್ತ ದೋಷವು ಬರುವದು. ಋಣತ್ರಯಸ್ಮೃತಿಯೂ ಹೀಗೆಯೇ. ಬ್ರಹ್ಮಚಾರಿಗೆ ಋಣಿತ್ವವಿಲ್ಲ; ಆದ್ದರಿಂದ ಅವನು ಸಂನ್ಯಾಸಮಾಡಬಹುದು. ಗೃಹಸ್ಥನಿಗೂ ಸಂನ್ಯಾಸವು ವಿಹಿತವಾಗಿರುವದರಿಂದ ಅವನೂ ಮಾಡಬಹುದು. ಹೀಗಿರುವದರಿಂದ ಯಾವಜ್ಜೀವ ಶ್ರುತಿಯು ಅಜ್ಞರಾದ ಅಮುಮುಕ್ಷುಗಳಿಗೆ ಹೇಳಿದ್ದೆಂದು ತಿಳಿಯಬೇಕು.

ಸರಿಯಾಗಿ ನೋಡಿದರೆ ಯಾರಿಗೂ ಕರ್ಮವನ್ನು ಬಿಡುವದೆಂಬ ಅಭಾವದಿಂದ ಭಾವರೂಪವಾದ ಪ್ರತ್ಯವಾಯವುಂಟಾಗಲು ಕಾರಣವಿಲ್ಲ. ಗೃಹಸ್ಥನಿಗಾದರೂ ನಿತ್ಯಕರ್ಮವನ್ನು ಬಿಟ್ಟರೆ ಹಿಂದೆ ಮಾಡಿದ ದುರಿತಕ್ಷಯವಾಗುವದಿಲ್ಲವೆಂಬುದನ್ನೇ ಅಕರಣವು ಸೂಚಿಸುತ್ತದೆ ಎಂದು ಹೇಳಬಹುದು. ಇದನ್ನು ಹಿಂದೆ (೧೯೪) ತಿಳಿಸಿರುತ್ತೇವೆ ಸಂನ್ಯಾಸವು ಅನಧಿಕೃತವಿಷಯವಲ್ಲ; ಏಕೆಂದರೆ ಆತ್ಮಜ್ಞಾನಿಗಳಿಗೂ ಮುಮುಕ್ಷುಗಳಿಗೂ ಸಂನ್ಯಾಸವನ್ನು ವಿಧಿಸಿರುವ ವಾಕ್ಯಗಳಲ್ಲದೆ ಅನಧಿಕೃತರಾದವರಿಗೂ ಸಂನ್ಯಾಸವಿಧಾನವನ್ನು ಮಾಡುವ ವಾಕ್ಯಗಳೂ ಬೇರೆ ಇರುತ್ತವೆ. **ಅಜ್ಞಾನಿಗಳಿಗೆ ವಿಧಿಸಿರುವ ಸಾಧನಗಳಲ್ಲಿ ಬಲಾಬಲವಿಚಾರಮಾಡಿದರೆ ಹಿಂಸಾದಿಯುಕ್ತವಾಗಿರುವ ಗೃಹಸ್ಥಕರ್ಮಗಳಿಗಿಂತಲೂ ಯಮಪ್ರಧಾನವಾಗಿರುವ ಮತ್ತು ಕಾಮಪ್ರವೃತ್ತಿಗೆ ಎಡೆಗೊಡದೆ ಇರುವ ಸಂನ್ಯಾಸಿಯ ಅಮಾನಿತ್ವಾದಿಗಳೇ ಹೆಚ್ಚು ಉಪಕಾರಕವೆಂದು ತಾನೇ ಏರ್ಪಡುತ್ತದೆ. ಆದ್ದರಿಂದ ಮುಮುಕ್ಷುಗಳಿಗೆ ಪಾರಿವ್ರಾಜ್ಯವೇ ಪ್ರಶಸ್ತವಾಗಿರುತ್ತದೆ.**

(೧) ಏತಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ । ಏತದ್ಧ ಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ ಇತಿ ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ ॥ -ಬೃ.೪-೪-೨೨.

(೨) ಅನುಷ್ಠೇಯಮ್ ಆಶ್ರಮಾನ್ತರಂ ಬಾದರಾಯಣ ಆಚಾರ್ಯೋ ಮನ್ಯತೇ । ವೇದೇ ಶ್ರವಣಾತ್ । ಅಗ್ನಿಹೋತ್ರಾದೀನಾಂ ಚ ಅವಶ್ಯಾನುಷ್ಠೇಯತ್ವಾತ್ । ತದ್ವಿರೋಧಾತ್ ಅನಧಿಕೃತಾನುಷ್ಠೇಯಮ್ ಆಶ್ರಮಾನ್ತರಮಿತಿ ಹಿ ಇಮಾಂ ಮತಿಂ ನಿರಾಕರೋತಿ ಗಾರ್ಹಸ್ಥ್ಯವದೇವ ಆಶ್ರಮಾನ್ತರಮಪ್ಯನಿಚ್ಛತಾ ಪ್ರತಿಪತ್ತವ್ಯಮ್ ಇತಿ ಮನ್ಯಮಾನಃ । ಕುತಃ ? ಸಾಮ್ಯಶ್ರುತೇಃ । ಸಮಾ ಹಿ ಗಾರ್ಹಸ್ಥ್ಯೇನ ಆಶ್ರಮಾನ್ತರಸ್ಯ ಪರಾಮರ್ಶಶ್ರುತಿರ್ದೃಶ್ಯತೇ 'ತ್ರಯೋ ಧರ್ಮಸ್ಕನ್ಧಾಃ' (ಛಾಂ.೨-೨೩-೧) ಇತ್ಯಾದ್ಯಾ । ಯಥೇಹ ಶ್ರುತ್ಯನ್ತರವಿಹಿತಮೇವ ಗಾರ್ಹಸ್ಥ್ಯಂ ಪರಾಮೃಷ್ಟಮ್ ಏವಮ್ ಆಶ್ರಮಾನ್ತರಮಪಿ ಇತಿ ಪ್ರತಿಪತ್ತವ್ಯಮ್ ॥

-ಸೂ.ಭಾ.೩-೪-೧೯-೪೫೭

(೩) ವಿದ್ಯತ ಏವ ತು ಆಶ್ರಮಾನ್ತರವಿಧಿಶ್ರುತಿಃ ಪ್ರತ್ಯಕ್ಷಾ । "ಬ್ರಹ್ಮಚರ್ಯಂ ಪರಿಸಮಾಪ್ಯ ಗೃಹೀ ಭವೇತ್ ಗೃಹೀ ಭೂತ್ವಾ ವನೀ ಭವೇದ್ವನೀ ಭೂತ್ವಾ ಪ್ರವ್ರಜೇತ್ । ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇದ್ಗೃಹಾದ್ವಾ ವನಾದ್ವಾ" (ಜಾ.೪) ಇತಿ । ನ ಚೇಯಂ ಶ್ರುತಿಃ ಅನಧಿಕೃತವಿಷಯಾ ಶಕ್ಯಾ ವಕ್ತುಮ್ । ಅವಿಶೇಷಶ್ರವಣಾತ್ । ಪೃಥಗ್ವಿಧಾನಾಚ್ಚ ಅನಧಿಕೃತಾನಾಮ್ "ಅಥ ಪುನರೇವ ವ್ರತೀ ವಾವ್ರತೀ ವಾ ಸ್ನಾತಕೋ ವಾಽಸ್ನಾತಕೋ ವೋತ್ಸನ್ನಾಗ್ನಿರನಗ್ನಿಕೋ ವಾ" (ಜಾ.೪) ಇತ್ಯಾದಿನಾ ॥ - ಸೂ. ಭಾ. ೩-೪-೨೦-೪೬೧.

(೪) ಪರಿವ್ರಾಜಕಸ್ಯ ತು ಸರ್ವಕರ್ಮಸಂನ್ಯಾಸಾತ್ ಪ್ರತ್ಯವಾಯೋ ನ ಸಂಭವತ್ಯನನುಷ್ಠಾನನಿಮಿತ್ತಃ । ಶಮದಮಾದಿಸ್ತು ತದೀಯೋ ಧರ್ಮೋ ಬ್ರಹ್ಮಸಂಸ್ಥತಾಯಾ ಉಪೋದ್ಬಲಕೋ ನ ವಿರೋಧೀ । ಬ್ರಹ್ಮನಿಷ್ಠತ್ವಮೇವ ಹಿ ತಸ್ಯ ಶಮದಮಾದ್ಯುಪಬೃಂಹಿತಂ ಸ್ವಾಶ್ರಮವಿಹಿತಂ ಕರ್ಮ, ಯಜ್ಞಾದೀನಿ ಚ ಇತರೇಷಾಮ್ । ತದ್ವ್ಯತಿಕ್ರಮೇ ಚ ತಸ್ಯ ಪ್ರತ್ಯವಾಯಃ॥ - ಸೂ. ಭಾ. ೩-೪-೨೦-೪೬೦.

(೫) ನಿತ್ಯಾನಿ ಪ್ರತ್ಯವಾಯಪರಿಹಾರಾರ್ಥಮ್ ಅನುಷ್ಠೇಯಾನಿ ಇತಿ ಚೇತ್ । ನ । ಅಸಂನ್ಯಾಸಿವಿಷಯತ್ವಾತ್ ಪ್ರತ್ಯವಾಯಪ್ರಾಪ್ತೇಃ । ನ ಹಿ ಅಗ್ನಿಕಾರ್ಯಾದ್ಯಕರಣಾತ್ ಸಂನ್ಯಾಸಿನಃ ಪ್ರತ್ಯವಾಯಃ ಕಲ್ಪಯಿತುಂ ಶಕ್ಯಃ, ಯಥಾ ಬ್ರಹ್ಮಚಾರಿಣಾಮ್ ಅಸಂನ್ಯಾಸಿನಾಮಪಿ । ನ ತಾವತ್ ನಿತ್ಯಾನಾಂ ಕರ್ಮಣಾಮ್ ಅಭಾವಾದೇವ ಭಾವರೂಪಸ್ಯ ಪ್ರತ್ಯವಾಯಸ್ಯೋತ್ಪತ್ತಿಃ ಕಲ್ಪಯಿತುಂ ಶಕ್ಯಾಯುಕ್ತಾ ಚ । "ಕಥಮಸತಃ ಸಜ್ಜಾಯೇತ" (ಛಾಂ.೬-೨-೨) ಇತ್ಯಸತಃ ಸಜ್ಜನ್ಮಾಸಂಭವಶ್ರುತೇಃ । ಯದಿ ವಿಹಿತಾಕರಣಾತ್ ಅಸಂಭಾವ್ಯಮಪಿ ಪ್ರತ್ಯವಾಯಂ ಬ್ರೂಯಾತ್ ವೇದಃ, ತದಾ ಅನರ್ಥಕರೋ ವೇದಃ ಅಪ್ರಮಾಣಮ್ ಇತ್ಯುಕ್ತಂ ಸ್ಯಾತ್ । ವಿಹಿತಸ್ಯ ಕರಣಾಕರಣಯೋಃ ದುಃಖಮಾತ್ರಫಲತ್ವಾತ್ ॥ -ಗೀ. ಭಾ. ೩-೧ ಅವತರಣಿಕೆ-೧೪೮.

(೬) ಅವಿದುಷಸ್ತರ್ಹಿ ಋಣಾನಪಾಕರಣೇ ಪಾರಿವ್ರಾಜ್ಯಾನುಪಪತ್ತಿಃ ಇತಿ ಚೇತ್ । ನ । ಪ್ರಾಗ್ಗಾರ್ಹಸ್ಥ್ಯಪ್ರತಿಪತ್ತೇಃ ಋಣಿತ್ವಾಸಂಭವಾತ್ । ಅಧಿಕಾರಾನಾರೂಢೋಽಪಿ ಋಣೀ ಚೇತ್ ಸರ್ವಸ್ಯ ಋಣಿತ್ವಮ್ ಇತಿ ಅನಿಷ್ಟಂ ಪ್ರಸಜ್ಯೇತ ॥ - ಐ. ಭಾ. ಅವ-೨೧.

(೭) ಅಥೈವಂ ಸತಿ ಅವಿದ್ವದ್ವಿಷಯಾಣಾಮ್ ಆಶ್ರಮಕರ್ಮಣಾಂ ಬಲಾಬಲ ವಿಚಾರಣಾಯಾಮ್ ಆತ್ಮಜ್ಞಾನೋತ್ಪಾದನಂ ಪ್ರತಿ ಯಮಪ್ರಧಾನಾನಾಮ್, ಅಮಾನಿತ್ವಾದೀನಾಂ ಮಾನಸಾನಾಂ ಚ ಧ್ಯಾನಜ್ಞಾನವೈರಾಗ್ಯಾದೀನಾಂ ಸಂನಿಪತ್ಯೋಪಕಾರಕತ್ವಮ್ ಹಿಂಸಾರಾಗ ದ್ವೇಷಾದಿಬಾಹುಲ್ಯಾತ್ ಬಹುಕ್ಲಿಷ್ಟಕರ್ಮವಿಮಿಶ್ರಿತಾ ಇತರೇ - ಇತ್ಯತಃ ಪಾರಿವ್ರಾಜ್ಯಂ ಮುಮುಕ್ಷೂಣಾಂ ಪ್ರಶಂಸನ್ತಿ । "ತ್ಯಾಗ ಏವ ಹಿ ಸರ್ವೇಷಾಮುಕ್ತಾನಾಮಪಿ ಕರ್ಮಣಾಮ್ । ವೈರಾಗ್ಯಂ ಪುನರೇತಸ್ಯ ಮೋಕ್ಷಸ್ಯ ಪರಮೋಽವಧಿ" (?), "ಕಿಂ ತೇ ಧನೇನ ಕಿಮು ಬನ್ಧುಭಿಸ್ತೇ । ಕಿಂ ತೇ ದಾರೈರ್ಬ್ರಾಹ್ಮಣ ಯೋ ಮರಿಷ್ಯಸಿ ॥ ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಂ, ಪಿತಾಮಹಾಸ್ತೇ ಕ್ವ ಗತಾಃ ಪಿತಾ ಚ ।" (ಮೋ.ಧ.೧೭೫-೩೮) । ಏವಂ ಸಾಂಖ್ಯಯೋಗಶಾಸ್ತ್ರೇಷು ಚ ಸಂನ್ಯಾಸೋ ಜ್ಞಾನಂ ಪ್ರತಿ ಪ್ರತ್ಯಾಸನ್ನ ಉಚ್ಯತೇ । ಕಾಮಪ್ರವತ್ತ್ಯಭಾವಾಚ್ಚ । ಕಾಮಪ್ರವೃತ್ತೇರ್ಹಿ ಜ್ಞಾನ ಪ್ರತಿಕೂಲತಾ ಸರ್ವಶಾಸ್ತ್ರೇಷು ಪ್ರಸಿದ್ಧಾ । ತಸ್ಮಾದ್ವಿರಕ್ತಸ್ಯ ಮುಮುಕ್ಷೋಃ ವಿನಾಽಪಿ ವಿಜ್ಞಾನೇನ 'ಬ್ರಹ್ಮಚರ್ಯಾದೇವ ಪ್ರವ್ರಜೇತ್' (ಜಾ.) ಇತ್ಯಾದ್ಯುಪಪನ್ನಮ್ ॥

-ಬೃ. ಭಾ. ೪-೫-೧೫-೩೪೩.

೨೦೩. ಸಂನ್ಯಾಸಿಗಳಿಗೂ ಯಜ್ಞೋಪವೀತಾದಿಗಳುಂಟೆಂದೂ, ತ್ರಿದಂಡ ಕಮಂಡಲು ಮುಂತಾದ ಆಶ್ರಮಚಿಹ್ನೆಗಳುಂಟೆಂದೂ ಸ್ಮೃತಿಗಳಲ್ಲಿ ಹೇಳಿರುವದರಿಂದ ಸರ್ವಕರ್ಮಸಂನ್ಯಾಸವು ಶಾಸ್ತ್ರವಿರುದ್ಧವೆಂದೂ ಸಂನ್ಯಾಸಾಶ್ರಮದ ಕರ್ಮಗಳನ್ನು ಬಿಟ್ಟರೆ ಸಂನ್ಯಾಸಿಗಳಿಗೂ ಪ್ರತ್ಯವಾಯವುಂಟೆಂದೂ ಹಿಂದೆ ಕೆಲವರು ವಾದಿಸಿದ್ದರು. ಆದರೆ **ಈ ಸ್ಮಾರ್ತಸಂನ್ಯಾಸವು ಜ್ಞಾನಾಂಗವಲ್ಲ, ಇದಕ್ಕೆ ಬ್ರಹ್ಮಲೋಕಾದಿಫಲವುಂಟು; ಇದಕ್ಕಿಂತ ಬೇರೆಯಾದ ಪರಮಹಂಸಪಾರಿವ್ರಾಜ್ಯವೇ ವೇದೋಕ್ತವಾದ ಜ್ಞಾನಾಂಗ ಸಂನ್ಯಾಸವೆಂದೂ ಪರಮಹಂಸನಿಗೆ ಶಮಾದಿಗಳನ್ನು ಬಿಟ್ಟರೆ ಮತ್ತೆ ಯಾವ ಕರ್ಮಗಳೂ ಇಲ್ಲವೆಂದೂ ಆಚಾರ್ಯರು ತಿಳಿಸಿಕೊಟ್ಟಿರುತ್ತಾರೆ.** ಮುಮುಕ್ಷುವಾಗಿರುವ ಪರಮ-ಹಂಸನು ಮಿಕ್ಕ ಯಾವ ಕರ್ಮವನ್ನೂ ಮಾಡದೆ ನಿತ್ಯವೂ ಧ್ಯಾನಯೋಗ ಪರನಾಗಿರಬೇಕೆಂದು ಗೀತೆಯಲ್ಲಿ ಹೇಳಿರುತ್ತದೆ. ತ್ರಿದಂಡಾದಿಗಳನ್ನು ತ್ಯಾಗಮಾಡಿ ಪರಮಹಂಸನಾಗಬೇಕೆಂಬ ವಿಧಿಯು ಜಾಬಾಲಶ್ರುತಿಯಲ್ಲಿ ಕಂಡುಬರುತ್ತದೆ.

(೧) ಪರಿವ್ರಾಜಕಸ್ಯ ತು ಸರ್ವಕರ್ಮಸಂನ್ಯಾಸಾತ್ ಪ್ರತ್ಯವಾಯೋ ನ ಸಂಭವತಿ ಅನನುಷ್ಠಾನನಿಮಿತ್ತಃ। ಶಮದಮಾದಿಸ್ತು ತದೀಯೋ ಧರ್ಮಃ ಬ್ರಹ್ಮಸಂಸ್ಥತಾಯಾ ಉಪೋದ್ಬಲಕಃ ನ ವಿರೋಧೀ। ಬ್ರಹ್ಮನಿಷ್ಠತ್ವಮೇವ ಹಿ ತಸ್ಯ ಶಮದಮಾದ್ಯುಪಬೃಂಹಿತಂ ಸ್ವಾಶ್ರಮವಿಹಿತಂ ಕರ್ಮ, ಯಜ್ಞಾದೀನಿ ಚ ಇತರೇಷಾಮ್। ತದ್ವ್ಯತಿಕ್ರಮೇ ಚ ತಸ್ಯ ಪ್ರತ್ಯವಾಯಃ। ತಥಾ ಚ "ನ್ಯಾಸ ಇತಿ ಬ್ರಹ್ಮಾ ಬ್ರಹ್ಮಾ ಹಿ ಪರಃ ಪರೋ ಹಿ ಬ್ರಹ್ಮಾ ತಾನಿ ವಾ ಏತನ್ಯವರಾಣಿ ತಪಾಂಸಿ ನ್ಯಾಸ ಏವಾತ್ಯರೇಚಯತ್" (ತೈ. ನಾ. ೭೮), "ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ। ತೇ ಬ್ರಹ್ಮಲೋಕೇಷು ಪರಾನ್ತಕಾಲೇ" (ಮು. ೩-೨-೬) ಇತ್ಯಾದ್ಯಾಃ ಶ್ರುತಯಃ। ಸ್ಮೃತಯಶ್ಚ "ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ" (ಗೀ. ೫-೧೭) ಇತ್ಯಾದ್ಯಾ ಬ್ರಹ್ಮಸಂಸ್ಥಸ್ಯ ಕರ್ಮಾಭಾವಂ ದರ್ಶಯನ್ತಿ॥

-ಸೂ. ಭಾ. ೩-೪-೨೦-೪೬೦.

(೨) ಯೋ ಹಿ ಅಧಿಕೃತಃ ಕರ್ಮಣಿ, ತಸ್ಯ ತದಕರಣೇ ಪ್ರತ್ಯವಾಯಃ, ನ ನಿವೃತ್ತಾಧಿಕಾರಸ್ಯ। ಗೃಹಸ್ಥಸ್ಯೇವ ಬ್ರಹ್ಮಚಾರಿಣೋ ವಿಶೇಷಧರ್ಮಾನನುಷ್ಠಾನೇ॥

-ಛಾಂ. ಭಾ. ೨-೨೩-೧-೧೮೧.

(೩) ಅತಶ್ಚ ಇದಮೇವೈಕಂ ವೇದೋಕ್ತಂ ಪಾರಿವ್ರಾಜ್ಯಮ್। ನ ಯಜ್ಞೋಪವೀತತ್ರಿದಣ್ಡ ಕಮಣ್ಡಲ್ವಾದಿಪರಿಗ್ರಹಃ ಇತಿ ॥ "ಮುಣ್ಡೋಽಪರಿಗ್ರಹೋಽಸಙ್ಗಃ" ಇತಿ ಚ ಶ್ರುತಿಃ। "ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಮ್" ಇತ್ಯಾದಿ ಚ ಶ್ವೇತಾಶ್ವತರೀಯೇ। "ನಿಸ್ತುತಿರ್ನಿರ್ನಮಸ್ಕಾರಃ" ಇತ್ಯಾದಿಸ್ಮೃತಿಭ್ಯಶ್ಚ। "ತಸ್ಮಾತ್ಕರ್ಮ ನ ಕುರ್ವನ್ತಿ ಯತಯಃ ಪಾರದರ್ಶಿನಃ", "ತಸ್ಮಾದಲಿಙ್ಗೋ ಧರ್ಮಜ್ಞಃ", "ಅವ್ಯಕ್ತಲಿಙ್ಗಃ" ಇತ್ಯಾದಿ ಸ್ಮೃತಿಭ್ಯಶ್ಚ॥

-ಛಾಂ. ಭಾ. ೨-೨೩-೧-೧೮೪.

(೪) ಯದ್ಧಿ ತದೇಷಣಾಭ್ಯೋ ವ್ಯುತ್ಥಾನಲಕ್ಷಣಂ ಪಾರಿವ್ರಾಜ್ಯಮ್ ತತ್ ಆತ್ಮಜ್ಞಾನಾಙ್ಗಮ್। ಆತ್ಮಜ್ಞಾನವಿರೋಧ್ಯೇಷಣಾಪರಿತ್ಯಾಗರೂಪತ್ವಾತ್। ಅವಿದ್ಯಾವಿಷಯತ್ವಾಚ್ಚ ಏಷಣಾಯಾಃ। ತದ್ವ್ಯತಿರೇಕೇಣ ಚ ಅಸ್ತ್ಯಾಶ್ರಮರೂಪಂ ಪಾರಿವ್ರಾಜ್ಯಂ ಬ್ರಹ್ಮಲೋಕಾದಿ-ಫಲಪ್ರಾಪ್ತಿಸಾಧನಮ್। ಯದ್ವಿಷಯಂ ಯಜ್ಞೋಪವೀತಾದಿವಿಧಾನಂ ಲಿಙ್ಗವಿಧಾನಂ ಚ॥

-ಬೃ.ಭಾ. ೩-೫-೧-೬೦.

(೫) ವಿವಿಕ್ತಸೇವೀ ಅರಣ್ಯನದೀಪುಲಿನಗಿರಿಗುಹಾದೀನ್ ವಿವಿಕ್ತಾನ್ ದೇಶಾನ್ ಸೇವಿತುಂ ಶೀಲಮ್ ಅಸ್ಯ ಇತಿ ವಿವಿಕ್ತಸೇವೀ। ಲಘ್ವಾಶೀ ಲಘ್ವಶನಶೀಲಃ। ವಿವಿಕ್ತಸೇವಾಲಘ್ವಶನಯೋರ್ನಿ-ದ್ರಾದಿದೋಷನಿವರ್ತಕತ್ವೇನ ಚಿತ್ತಪ್ರಸಾದಹೇತುತ್ವಾತ್ ಗ್ರಹಣಮ್। ಯತವಾಕ್ಕಾಯಮಾನಸಃ। ವಾಕ್ಚ ಕಾಯಶ್ಚ ಮಾನಸಂ ಚ ಯತಾನಿ ಸಂಯತಾನಿ ಯಸ್ಯ ಜ್ಞಾನನಿಷ್ಠಸ್ಯ ಸಃ ಜ್ಞಾನನಿಷ್ಠೋ ಯತಿಃ ಯತವಾಕ್ಕಾಯಮಾನಸಃ ಸ್ಯಾತ್। ಏವಮ್ ಉಪರತಸರ್ವಕರಣಃ ಸನ್ ಧ್ಯಾನಯೋಗಪರಃ। ಧ್ಯಾನಮ್ ಆತ್ಮಸ್ವರೂಪಚಿನ್ತನಂ, ಯೋಗಃ ಆತ್ಮವಿಷಯೇಃ ಏವ ಏಕಾಗ್ರೀಕರಣಮ್। ತೌ ಧ್ಯಾನಯೋಗೌ ಪರತ್ವೇನ ಕರ್ತವ್ಯೌ ಯಸ್ಯ ಸಃ ಧ್ಯಾನಯೋಗಪರಃ । ನಿತ್ಯಮ್, ನಿತ್ಯಗ್ರಹಣಂ ಮನ್ತ್ರಜಪಾದ್ಯನ್ಯಕರ್ತವ್ಯಾಭಾವಪ್ರದರ್ಶನಾರ್ಥಮ್। ವೈರಾಗ್ಯಂ ವಿರಾಗಭಾವಃ ದೃಷ್ಟಾದೃಷ್ಟೇಷು ವೈತೃಷ್ಣ್ಯಂ ಸಮುಪಾಶ್ರಿತಃ ಸಮ್ಯಕ್ ಉಪಾಶ್ರಿತಃ ನಿತ್ಯಮೇವ ಇತ್ಯರ್ಥಃ ॥

- ಗೀ.ಭಾ.೧೮-೫೩-೧೧೧೨.

(೬) ತ್ರಿದಣ್ಡಕಮಣ್ಡಲುಂ ಶಿಕ್ಯಂ ಪಾತ್ರಂ ಜಲಪವಿತ್ರಂ ಶಿಖಾಂ ಯಜ್ಞೋಪವೀತಂ ಚ ಇತ್ಯೇತತ್ ಸರ್ವಂ ಭೂಃ ಸ್ವಾಹೇತ್ಯಪ್ಸು ಪರಿತ್ಯಜ್ಯ ಆತ್ಮಾನಮನ್ವಿಚ್ಛೇತ್॥ -ಜಾ.೬.

೨೦೪. ಸಂನ್ಯಾಸಿಯು ಧ್ಯಾನಯೋಗಪರನಾಗಿರುವದೊಂದು ಹೊರತು ಮತ್ತೆ ಯಾವ ಕರ್ಮವನ್ನೂ ಮಾಡಬೇಕಾದದ್ದಿಲ್ಲವೆಂದು ಗೀತಾಭಾಷ್ಯದಲ್ಲಿ (೧೮-೫೩) ಹೇಳಿರುವದನ್ನು ಕೆಲವರು ತಪ್ಪಾಗಿ ತಿಳಿದುಕೊಳ್ಳುವ ಸಂಭವವಿದೆ. ಯೋಗವೆಂಬುದನ್ನು **ಚಿತ್ತವೃತ್ತಿ**ನಿರೋಧರೂಪವಾದ ಸಾಧನವೆಂದೋ ಭಾವನಾರೂಪವಾದ ದಹರವಿದ್ಯೆಯೇ ಮುಂತಾದ ಉಪಾಸನೆಯೆಂದೋ ಅಂಥವರು ಭ್ರಾಂತರಾಗಬಹುದು. ಉಪಾಸನೆಗಳಿಗೆ ಬೇರೆಬೇರೆ ಫಲಗಳಿರುವವೆಂಬುದನ್ನೂ ಪರಂಪರೆಯಿಂದ ಅವೂ ಜ್ಞಾನಕ್ಕೆ ಸಾಧನವಾಗಬಹುದೆಂಬುದನ್ನೂ ಹಿಂದೆ (೧೭೩) ತಿಳಿಸಿರುತ್ತೇವೆ. **ಆದರೆ ಮುಮುಕ್ಷುವಾದವನು ಮತ್ತು ಸಂನ್ಯಾಸಿಯು ಅವಶ್ಯವಾಗಿ ಮಾಡಬೇಕಾಗಿರುವ ಧ್ಯಾನಯೋಗಗಳು ಆತ್ಮಚಿಂತನೆ. ಆತ್ಮಜ್ಞಾನಕ್ಕಾಗಿ ಮಾಡಬೇಕಾಗಿರುವ ಏಕಾಗ್ರತಾರೂಪವಾದ ನಿದಿಧ್ಯಾಸನ- ಇವುಗಳೇ ಹೊರತು ಉಪಾಸನೆಯಲ್ಲ.** ಉಪಾಸನಾವಿಧಿಗೆ ವಿಷಯವನ್ನು ಸಮರ್ಪಣೆಮಾಡುವದಕ್ಕೆ ಮಾತ್ರ ಜ್ಞಾನವಾಕ್ಯಗಳು ಬಂದಿವೆಯೆಂದೂ ಉಪಾಸನೆಯಿಂದಲೇ ಅವಿದ್ಯೆಯು ಹೋಗುವದೆಂದೂ ಹೇಳುತ್ತಿದ್ದ ವಾದಿಗಳ ಮತದ ಖಂಡನೆಯನ್ನು ಹಿಂದೆಯೇ (೬೫) ಬರೆದಿರುತ್ತೇವೆ. **ಚಿತ್ತವೃತ್ತಿನಿರೋಧರೂಪವಾದ ಯೋಗವಂತೂ ಇಲ್ಲಿ ಪ್ರಕೃತವೇ ಅಲ್ಲ; ಏಕೆಂದರೆ ಆ ಯೋಗವನ್ನು ವೇದದಲ್ಲಿ**

**ವಿಧಿಸಿಲ್ಲ, ಆತ್ಮಜ್ಞಾನವಾಗದೆ ಪೂರ್ಣವಾಗಿ ಚಿತ್ತವೃತ್ತಿಯ ನಿರೋಧವಾಗುವದೂ ಇಲ್ಲ. ಬರಿಯ ಯೋಗದಿಂದ ಮುಕ್ತಿಯು ದೊರೆಯುವದೂ ಇಲ್ಲ.** ಬರಿಯ ಯೋಗವೂ ಸಾಂಖ್ಯದಂತೆ ದ್ವೈತಸಿದ್ಧಾಂತವೇ ಆದ್ದರಿಂದ ಅದಕ್ಕೆ ವೇದಾಂತದಲ್ಲಿ ಅವಕಾಶವಿಲ್ಲ.

(೧) ಏವಮುಪನಿಷದಾಂ ಆತ್ಮೋಪಾಸನಪ್ರಕರಣಸ್ಯ ಆತ್ಮೋಪಾಸನವಿಧ್ಯುದ್ದೇಶತ್ವೇನೈವ ಉಪಯೋಗಃ। 'ನೇತಿ ನೇತಿ', 'ಅಸ್ಥೂಲಮ್', 'ಏಕಮೇವಾದ್ವಿತೀಯಮ್', 'ಅಶನಾಯಾದ್ಯ-ತೀತಃ' ಇತ್ಯೇವಮಾದಿವಾಕ್ಯಾನಾಮ್ ಉಪಾಸ್ಯಾತ್ಮಸ್ವರೂಪವಿಶೇಷಸಮರ್ಪಣೇನ ಉಪಯೋಗಃ ॥ ಫಲಂ ಚ ಮೋಕ್ಷಃ ಅವಿದ್ಯಾನಿವೃತ್ತಿರ್ವಾ॥ -ಪೂರ್ವಪಕ್ಷಭಾಷ್ಯ. ಬೃ.ಭಾ. ೧-೪-೭-೧೩೫.

(೨) ದ್ರಷ್ಟವ್ಯವಿಧೇಃ ವಿಷಯಸಮರ್ಪಕಾಣಿ ಏತಾನಿ ಇತಿ ಚೇತ್। ನ। ಅರ್ಥಾನ್ತರಾಭಾವಾತ್ ಇತ್ಯುಕ್ತೋತ್ತರತ್ವಾತ್। ಆತ್ಮವಸ್ತುಸ್ವರೂಪಸಮರ್ಪಕೈರೇವ ವಾಕ್ಯೈಃ 'ತತ್ತ್ವಮಸಿ' ಇತ್ಯಾದಿಭಿಃ ಶ್ರವಣಕಾಲ ಏವ ತದ್ದರ್ಶನಸ್ಯ ಕೃತತ್ವಾತ್ ದ್ರಷ್ಟವ್ಯವಿಧೇರ್ನಾನು-ಷ್ಠಾನಾನ್ತರಂ ಕರ್ತವ್ಯಮ್ ಇತ್ಯುಕ್ತೋತ್ತರಮೇತತ್॥ -ಬೃ.ಭಾ. ೧-೪-೭-೧೩೭.

(೩) ನಿರೋಧಸ್ತರ್ಹಿ ಅರ್ಥಾನ್ತರಮ್ ಇತಿ ಚೇತ್। ಅಥಾಪಿ ಸ್ಯಾತ್ ಚಿತ್ತವೃತ್ತಿನಿರೋಧಸ್ಯ ವೇದವಾಕ್ಯಜನಿತಾತ್ಮವಿಜ್ಞಾನಾತ್ ಅರ್ಥಾನ್ತರತ್ವಾತ್, ತತ್ತ್ವಾನ್ತರೇಷು ಚ ಕರ್ತವ್ಯತಯಾ ಅವಗತತ್ವಾತ್ ವಿಧೇಯತ್ವಮ್ ಇತಿ ಚೇತ್। ನ। ಮೋಕ್ಷಸಾಧನತ್ವೇನ ಅನವಗಮಾತ್। ನ ಹಿ ವೇದಾನ್ತೇಷು ಬ್ರಹ್ಮಾತ್ಮವಿಜ್ಞಾನಾತ್ ಅನ್ಯತ್ ಪರಮಪುರುಷಾರ್ಥಸಾಧನತ್ವೇನ ಅವಗಮ್ಯತೇ। 'ಆತ್ಮಾನಮೇವಾವೇತ್ ತಸ್ಮಾತ್ತತ್ಸರ್ವಮಭವತ್', 'ಬ್ರಹ್ಮವಿದಾಪ್ನೋತಿ ಪರಮ್', 'ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ', 'ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಮ್', 'ಅಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ'-ಇತ್ಯೇವಮಾದಿಶ್ರುತಿಶತೇಭ್ಯಃ। ಅನನ್ಯಸಾಧನತ್ವಾಚ್ಚ ನಿರೋಧಸ್ಯ। ನ ಹಿ ಆತ್ಮವಿಜ್ಞಾನ ತತ್ಸ್ಮೃತಿಸನ್ತಾನವ್ಯತಿರೇಕೇಣ ಚಿತ್ತವೃತ್ತಿನಿರೋಧಸ್ಯ ಸಾಧನಮಸ್ತಿ। ಅಭ್ಯುಪಗಮ್ಯೇದಮುಕ್ತಮ್। ನ ತು ಬ್ರಹ್ಮವಿಜ್ಞಾನವ್ಯತಿರೇಕೇಣ ಅನ್ಯನ್ಮೋಕ್ಷಸಾಧನಮ್ ಅವಗಮ್ಯತೇ॥

-ಬೃ.ಭಾ. ೧-೪-೭-೧೩೯.

(೪) ನಿರಾಕರಣಂ ತು ನ ಸಾಂಖ್ಯಜ್ಞಾನೇನ ವೇದನಿರಪೇಕ್ಷೇಣ ಯೋಗಮಾರ್ಗೇಣ ವಾ ನಿಃಶ್ರೇಯಸಮ್ ಅಧಿಗಮ್ಯತೇ ಇತಿ। ಶ್ರುತಿರ್ಹಿ ವೈದಿಕಾತ್ ಆತ್ಮೈಕತ್ವವಿಜ್ಞಾನಾತ್ ಅನ್ಯತ್ ನಿಃಶ್ರೇಯಸಸಾಧನಂ ವಾರಯತಿ 'ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ'' (ಶ್ವೇ.೩-೮) ಇತಿ। ದ್ವೈತಿನೋ ಹಿ ತೇ ಸಾಂಖ್ಯಾ ಯೋಗಾಶ್ಚ ನಾತ್ಮೈಕತ್ವದರ್ಶಿನಃ। ಯತ್ತು ದರ್ಶನಮುಕ್ತಂ ''ತತ್ಕಾರಣಂ ಸಾಂಖ್ಯಯೋಗಾಭಿಪನ್ನಮ್'' ಇತಿ ವೈದಿಕಮೇವ ತತ್ರ ಜ್ಞಾನಂ ಧ್ಯಾನಂ ಚ ಸಾಂಖ್ಯಯೋಗಶಬ್ದಾಭ್ಯಾಮ್ ಅಭಿಲಪ್ಯತೇ ಪ್ರತ್ಯಾಸತ್ತೇಃ ಇತಿ ಅವಗನ್ತವ್ಯಮ್॥ -ಸೂ.ಭಾ. ೨-೧-೩-೪೦೭.

(೫) ಯಾನ್ ಶುಕ್ಲಾದೀನ್ ಯೋಗಿನೋ ಮೋಕ್ಷಪಥಾನ್ ಆಹುಃ ನ ತೇ ಮೋಕ್ಷಮಾರ್ಗಾಃ। ಸಂಸಾರವಿಷಯಾ ಏವ ಹಿ ತೇ। ''ಚಕ್ಷುಷ್ಟೋ ವಾ ಮೂರ್ಧ್ನೋ

ವಾऽನ್ಯೇಭ್ಯೋ ವಾ ಶರೀರದೇಶೇಭ್ಯಃ'' ಇತಿ ಶರೀರದೇಶಾತ್ ನಿಃಸರಣಸಂಬನ್ಧಾತ್ । ಬ್ರಹ್ಮಾದಿಲೋಕಪ್ರಾಪಕಾ ಹಿ ತೇ॥ -ಬೃ. ಭಾ. ೪-೪-೯-೨೮೩.

೨೦೫. ಕರ್ಮೋಪಾಸನೆಗಳು ಪ್ರವೃತ್ತಿರೂಪವಾಗಿರುವದರಿಂದಲೂ ಜ್ಞಾನವು ನಿವೃತ್ತಿರೂಪವಾಗಿರುವದರಿಂದಲೂ ಅವೆರಡಕ್ಕೂ ಸಮುಚ್ಚಯವಿರುವಂತಿಲ್ಲವೆಂದೂ ಕರ್ಮೋಪಾಸನೆಗಳು ತಮ್ಮ ತಮ್ಮ ಫಲಗಳಿಗೆ ಕಾರಣವಾಗಿದ್ದರೂ ಪರಂಪರೆಯಿಂದ ಜ್ಞಾನೋತ್ಪತ್ತಿಗೂ ಹೇತುವಾಗಿರುವದರಿಂದ ಅವನ್ನು ಉಪನಿಷತ್ತಿನಲ್ಲಿಯೂ ಪ್ರಸ್ತಾಪಿಸಿರುವದು ಯುಕ್ತವೆಂದೂ ಹಿಂದೆ ಅಲ್ಲಲ್ಲಿ (೧೭೧,೧೯೫,೧೯೬,೧೯೭) ತಿಳಿಸಿಕೊಟ್ಟದ್ದಾಗಿದೆ. ಆದರೆ ಈ ವಿಭಾಗವನ್ನು ಅನಾದರಿಸಿ ಜ್ಞಾನವಾಕ್ಯಗಳೂ ಉಪಾಸನಾವಾಕ್ಯಗಳೇ ಎಂದು ವಿಧಿಯ ಅಧ್ಯಾಹಾರದಿಂದಲೋ ಬೇರೊಂದು ಉಪಾಸನಾವಿಧಿಗೇ ಶೇಷವಾಗಿ ಮಾಡುವದರಿಂದಲೋ ಏಕರೂಪವಾಗಿ ಮಾಡುವದಕ್ಕೆ ಕೆಲವರು ಹೊರಟಿದ್ದರು; ಇದು ಸರಿಯಲ್ಲವೆಂಬುದನ್ನು ಹಿಂದೆ (೬೫) ತೋರಿಸಿ ಕೊಟ್ಟದ್ದಾಗಿದೆ.

ಇನ್ನೂ ಕೆಲವರು ಅದ್ವೈತಿಗಳು ವೇದವೆಲ್ಲವೂ ನಿವೃತ್ತಿಪರವೇ ಎಂತಲೂ ಆದ್ದರಿಂದಲೇ ಹಿಂದುಹಿಂದಿನ ಫಲವನ್ನು ಅನುಭವಿಸಿದ ಬಳಿಕ ಅದನ್ನು ಮೃತ್ಯುವೆಂದು ತಿಳಿದು ಅದರಿಂದ ಬಿಡುಗಡೆಹೊಂದಲಿ ಎಂದೇ ಎಲ್ಲಾ ವೈದಿಕಸಾಧನಗಳನ್ನೂ ವಿಧಿಸಿದೆ ಎಂದೂ ಹಿಂದೆ ಹೇಳಿದ್ದರು. ಆದರೆ ಹೀಗೆ ಎಲ್ಲವನ್ನೂ ಕಲಬೆರಕೆ ಮಾಡಿ ವಿವರಿಸುವದು ಸರಿಯಲ್ಲ. ಏಕೆಂದರೆ ಆಯಾ ಫಲಕ್ಕಾಗಿ ವಿಧಿಸಿರುವ ಕರ್ಮಗಳನ್ನೂ ಉಪಾಸನೆಗಳನ್ನೂ ಮೋಕ್ಷಕ್ಕಾಗಿ ವಿಧಿಸಿದೆ ಎಂಬುದಕ್ಕೆ ಪ್ರಮಾಣವಿಲ್ಲ. ಹಾಗಿದ್ದರೆ ಸ್ವರ್ಗಗ್ರಾಮಪಶ್ವಾದಿ ಫಲಗಳೇ ವಾಕ್ಯಗಳಲ್ಲಿ ಕಾಣಬಾರದಿತ್ತು. ಇದಲ್ಲದೆ ಈ ಪಕ್ಷದಲ್ಲಿ ಬರಿಯ ಕರ್ಮದಿಂದಲೇ ಮೋಕ್ಷವಾಗಿಬಿಡುವದರಿಂದ ಅಥವಾ ಉಪಾಸನೆಯಿಂದಲೇ ಮೋಕ್ಷವಾಗಿಬಿಡಬಹುದಾದ್ದರಿಂದ ಜ್ಞಾನವಾಕ್ಯಗಳು ವ್ಯರ್ಥವೇ ಆಗಿಬಿಡುತ್ತಿದ್ದವು. ಆದ್ದರಿಂದ ಕಾಮ್ಯಕರ್ಮಗಳನ್ನು ಆಯಾ ಫಲವನ್ನುದ್ದೇಶಿಸಿ ವಿಧಿಸಿದೆ ಎಂಬುದೇ ಯುಕ್ತ. ನಿತ್ಯಕರ್ಮಗಳಿಗೂ ಪುಣ್ಯಲೋಕವು ಫಲವೆಂತಲೂ ಫಲಾಭಿಸಂಧಿಯಿಲ್ಲದೆ ಅನುಷ್ಠಾನಮಾಡಿದರೆ ಚಿತ್ತಶುದ್ಧಿಯೇ ಪ್ರಯೋಜನವೆಂತಲೂ (೧೯೪) ತಿಳಿಸಿದ್ದಾಗಿದೆ. ತಮ್ಮ ತಮ್ಮ ವರ್ಣಾಶ್ರಮಕರ್ಮಗಳನ್ನು ಪರಮೇಶ್ವರಾರ್ಪಣಬುದ್ಧಿಯಿಂದ ಮಾಡುತ್ತಿದ್ದರೆ ನಿಷ್ಕಾಮರಾದ ಮುಮುಕ್ಷುಗಳಿಗೆ ಆತ್ಮಜ್ಞಾನರೂಪವಾದ ಆರ್ಷದರ್ಶನವುಂಟಾಗುವದೆಂಬುದಕ್ಕೆ ತ್ರಿಶಂಕು, ವಾಮದೇವ- ಮುಂತಾದವರ ನಿದರ್ಶನಗಳು ವೇದದಲ್ಲಿ ಸಿಕ್ಕುತ್ತವೆ.

ಇನ್ನು ಉಪಾಸನಾವಾಕ್ಯಗಳಲ್ಲಿ ಬ್ರಹ್ಮಕ್ಕೆ ಕೆಲವು ಆಕಾರಗಳನ್ನು ಹೇಳಿರುತ್ತದೆ; ಅವುಗಳೂ ಪ್ರಪಂಚಪ್ರವಿಲಯದ್ವಾರದಿಂದ ಅನಾಕಾರಬ್ರಹ್ಮವನ್ನು ತಿಳಿಯುವದಕ್ಕೇ

ಬಂದಿರುವ ಜ್ಞಾನವಾಕ್ಯಗಳೇ ಹೊರತು ಅವಕ್ಕೆ ಬೇರೆಯ ತಾತ್ಪರ್ಯವಿಲ್ಲ- ಎಂದು ವಾದಿಸುತ್ತಿದ್ದ ಪ್ರಪಂಚಪ್ರವಿಲಯವಾದಿಗಳ ಮತವನ್ನು ಆಗಲೆ (೧೮೨) ಖಂಡಿಸಿದ್ದಾಗಿದೆ. ಯಾವ ವಾಕ್ಯಗಳಲ್ಲಿ ಬ್ರಹ್ಮದಲ್ಲಿ ವಿಶೇಷಗಳನ್ನು ಹೇಳಿ ಮುಂದೆ ಅವನ್ನು ಅಲ್ಲಗಳೆದಿದೆಯೋ **ಅವುಗಳು ಅಧ್ಯಾರೋಪಾಪವಾದನ್ಯಾಯದಿಂದ ಆಕಾರ ಪ್ರವಿಲಯವನ್ನುಪದೇಶಿಸುವದಕ್ಕೆ ಬಂದಿವೆ ಎನ್ನಬಹುದು. ಆದರೆ ಯಾವ ವಾಕ್ಯಗಳಲ್ಲಿ ಉಪಾಸನೆಗಾಗಿಯೇ ಬ್ರಹ್ಮದಲ್ಲಿ ವಿಶೇಷಗಳನ್ನು ಹೇಳಿದೆಯೋ ಅಲ್ಲಿ ಪ್ರವಿಲಯಾರ್ಥವನ್ನು- ಕಲ್ಪಿಸಿದರೆ ಮುಖ್ಯಾರ್ಥವನ್ನು ಬಿಟ್ಟು ಲಕ್ಷಣಾರ್ಥವನ್ನು ಕಲ್ಪಿಸಿದಂತೆ** ಆಗುವದರಿಂದ ಶ್ರುತಿವಿರೋಧವು ಬರುತ್ತದೆ. ಫಲವಿಶೇಷವನ್ನು ಹೇಳಿರುವ ಕಡೆಯಲ್ಲಂತೂ ಉಪಾಸನಾವಾಕ್ಯಗಳು ಅದ್ವೈತಬೋಧಕವಲ್ಲವೆಂಬುದು ಸ್ಪಷ್ಟವಾಗಿದೆ; ಮೋಕ್ಷವನ್ನು ಹೇಳುವ ವಾಕ್ಯಗಳೂ ಕ್ರಮಮುಕ್ತಿಯನ್ನು ತಿಳಿಸುತ್ತವೆಯಾದ್ದರಿಂದ ಉಪಾಸನಾವಾಕ್ಯಗಳನ್ನು ಬೇರೆಯ ವರ್ಗವಾಗಿ ವಿಂಗಡಿಸುವದೇ ನ್ಯಾಯವು ಎಂದು ಆಚಾರ್ಯರು ನಿರ್ಣಯಿಸಿರುತ್ತಾರೆ. **ಕರ್ಮಗಳೂ ಉಪಾಸನೆಗಳೂ ಪರಂಪರೆಯಿಂದ ಅವಿದ್ಯಾನಿವೃತ್ತಿ ಕಾರಣವಾದ ಜ್ಞಾನಕ್ಕೆ ಉಪಯೋಗವಾಗುತ್ತವೆ**-ಎಂಬ ಸಿದ್ಧಾಂತಕ್ಕೆ ಇದರಿಂದ ಯಾವ ಹಾನಿಯೂ ಇಲ್ಲವೆಂಬುದು ಸ್ಪಷ್ಟವಾಗಿರುತದೆ.

(೧) ಕೇಚಿತ್ತು ಸರ್ವಮೇವ ನಿವೃತ್ತಿಕಾರಣಂ ಮನ್ಯನ್ತೇ। ಅತಃ ಕಾರಣಾತ್ ಪೂರ್ವಸ್ಮಾತ್ ಮೃತ್ಯೋರ್ಮುಚ್ಯತೇ, ಉತ್ತರಮುತ್ತರಂ ಪ್ರತಿಪದ್ಯಮಾನಃ ವ್ಯಾವೃತ್ತ್ಯರ್ಥಮೇವ ಪ್ರತಿಪದ್ಯತೇ ನ ತು ತಾದರ್ಥ್ಯಮ್ ಇತ್ಯತಃ ಆ ದ್ವೈತಕ್ಷಯಾತ್ ಸರ್ವಂ ಮೃತ್ಯುಃ। ದ್ವೈತಕ್ಷಯೇ ತು ಪರಮಾರ್ಥತೋ ಮೃತ್ಯೋರಾಪ್ತಿಮ್ ಅತಿಮುಚ್ಯತೇ। ಅತಶ್ಚ ಆಪೇಕ್ಷಿಕೀ ಗೌಣೀ ಮುಕ್ತಿರನ್ತರಾಲೇ। ಸರ್ವಮೇತತ್ ಆಬಾರ್ಹದಾರಣ್ಯಕಮ್। ನನು ಸರ್ವೈಕತ್ವಂ ಮೋಕ್ಷಃ। 'ತಸ್ಮಾತ್ ತತ್ಸರ್ವಮಭವತ್' ಇತಿ ಶ್ರುತೇಃ। ಬಾಢಮ್, ಭವತ್ಯೇತದಪಿ। ನ ತು 'ಗ್ರಾಮಕಾಮೋ ಯಜೇತ', 'ಪಶುಕಾಮೋ ಯಜೇತ' ಇತ್ಯಾದಿಶ್ರುತೀನಾಂ ತಾದರ್ಥ್ಯಮ್। ಯದಿ ಹಿ ಅದ್ವೈತಾರ್ಥತ್ವಮೇವ ಆಸಾಮ್ ಗ್ರಾಮಪಶುಸ್ವರ್ಗಾದ್ಯರ್ಥತ್ವಂ ನಾಸ್ತಿ ಇತಿ ಗ್ರಾಮಪಶುಸ್ವರ್ಗಾದಯೋ ನ ಗೃಹ್ಯೇರನ್। ಗೃಹ್ಯನ್ತೇ ತು ಕರ್ಮಫಲವೈಚಿತ್ರ್ಯವಿಶೇಷಾಃ। ಯದಿ ಚ ವೈದಿಕಾನಾಂ ಕರ್ಮಣಾಂ ತಾದರ್ಥ್ಯಮೇವ, ಸಂಸಾರ ಏವ ನಾಭವಿಷ್ಯತ್। ಅಥ ತಾದರ್ಥ್ಯೇಽಪಿ ಅನುನಿಷ್ಪಾದಿತಪದಾರ್ಥಸ್ವಭಾವಃ ಸಂಸಾರಃ ಇತಿ ಚೇತ್। ಯಥಾ ಚ ರೂಪದರ್ಶನಾರ್ಥೇ ಆಲೋಕೇ ಸರ್ವೋಽಪಿ ತತ್ರಸ್ಥಃ ಪ್ರಕಾಶ್ಯತ ಏವ । ನ । ಪ್ರಮಾಣಾನುಪಪತ್ತೇಃ। ಅದ್ವೈತಾರ್ಥತ್ವೇ ವೈದಿಕಾನಾಂ ಕರ್ಮಣಾಂ ವಿದ್ಯಾಸಹಿತಾನಾಮ್ ಅನ್ಯಸ್ಯ ಅನುನಿಷ್ಪಾದಿತತ್ವೇ ಪ್ರಮಾಣಾನುಪಪತ್ತಿಃ। ನ ಪ್ರತ್ಯಕ್ಷಮ್, ನಾನುಮಾನಮ್, ಅತ ಏವ ನಾಗಮಃ । ಉಭಯಮ್ ಏಕೇನ ವಾಕ್ಯೇನ ಪ್ರದರ್ಶ್ಯತೇ ಇತಿ ಚೇತ್। ಕುಲ್ಯಾಪ್ರಣಯನಾಲೋಕಾದಿವತ್। ತನ್ನೈವಮ್। ವಾಕ್ಯಧರ್ಮಾನುಪಪತ್ತೇಃ । ನ ಚ ಏಕವಾಕ್ಯಗತಸ್ಯ ಅರ್ಥಸ್ಯ ಪ್ರವೃತ್ತಿನಿವೃತ್ತಿಸಾಧನತ್ವಮ್ ಅವಗನ್ತುಂ ಶಕ್ಯತೇ। ಕುಲ್ಯಾಪ್ರಣಯನಾಲೋಕಾದೌ ಅರ್ಥಸ್ಯ ಪ್ರತ್ಯಕ್ಷತ್ವಾತ್ ಅದೋಷಃ ॥

-ಬೃ.ಭಾ. ೩-೨, ಅವತರಣಿಕೆ - ೧೭.

(೨) ಇತ್ಯೇವಂ ತ್ರಿಶಙ್ಕೋಃ ಋಷೇಃ ಬ್ರಹ್ಮಭೂತಸ್ಯ ಬ್ರಹ್ಮವಿದಃ ವೇದಾನುವಚನಮ್। ವೇದಃ ವೇದನಮ್ ಆತ್ಮೈಕತ್ವವಿಜ್ಞಾನಮ್। ತಸ್ಯ ಪ್ರಾಪ್ತಿಮ್ ಅನು ವಚನಂ ವೇದಾನುವಚನಮ್। ಆತ್ಮನಃ ಕೃತಕೃತ್ಯತಾಪ್ರಖ್ಯಾಪನಾರ್ಥಮ್ ವಾಮದೇವವತ್ । ತ್ರಿಶಙ್ಕುನಾ ಆರ್ಷೇಣ ದರ್ಶನೇನ ದೃಷ್ಟೋ ಮನ್ತ್ರಾಮ್ನಾಯಃ ಆತ್ಮವಿದ್ಯಾಪ್ರಕಾಶಕಃ ಇತ್ಯರ್ಥಃ। ಅಸ್ಯ ಚ ಜಪಃ ವಿದ್ಯೋತ್ಪತ್ತ್ಯರ್ಥೋಽವಗಮ್ಯತೇ। 'ಋತಂ ಚ' ಇತ್ಯಾದಿ ಕರ್ಮೋಪನ್ಯಾಸಾತ್ ಅನನ್ತರಂ ಚ ವೇದಾನುವಚನಪಾಠಾದೇತದವಗಮ್ಯತೇ। ಏವಂ ಶ್ರೌತಸ್ಮಾರ್ತೇಷು ನಿತ್ಯೇಷು ಕರ್ಮಸು ಯುಕ್ತಸ್ಯ ನಿಷ್ಕಾಮಸ್ಯ ಪರಂ ಬ್ರಹ್ಮ ವಿವಿದಿಷೋಃ ಆರ್ಷಾಣಿ ದರ್ಶನಾನಿ ಪ್ರಾದುರ್ಭವನ್ತ್ಯಾತ್ಮಾದಿವಿಷಯಾಣಿ ಇತಿ ॥ -ತೈ. ಭಾ. ೧-೧೦-೫೮.

(೩) ಯೇ ಹಿ ಪರವಿದ್ಯಾಧಿಕಾರೇ ಕೇಚಿತ್ ಪ್ರಪಞ್ಚಾ ಉಚ್ಯನ್ತೇ ಯಥಾ "ಯುಕ್ತಾ ಹ್ಯಸ್ಯ ಹರಯಃ ಶತಾ ದಶೇತ್ಯಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಬಹೂನಿ ಚಾನನ್ತಾನಿ ಚ" (ಬೃ.೨-೫-೧೯) ಇತ್ಯೇವಮಾದಯಃ, ತೇ ಭವನ್ತಿ ಪ್ರವಿಲಯಾರ್ಥಾಃ। "ತದೇತದ್ಬ್ರಹ್ಮಾ ಪೂರ್ವಮನಪರಮನನ್ತರಮಬಾಹ್ಯಮ್" (ಬೃ.೨-೫-೧೯) ಇತ್ಯುಪಸಂಹಾರಾತ್। ಯೇ ಪುನರುಪಾಸನಾಧಿಕಾರೇ ಪ್ರಪಞ್ಚಾ ಉಚ್ಯನ್ತೇ ಯಥಾ "ಮನೋಮಯಃ ಪ್ರಾಣಶರೀರೋ ಭಾರೂಪಃ" (ಛಾಂ. ೩-೧೪-೨) ಇತ್ಯೇವಮಾದಯಃ, ನ ತೇಷಾಂ ಪ್ರವಿಲಯಾರ್ಥತ್ವಂ ನ್ಯಾಯ್ಯಮ್। "ಸ ಕ್ರತುಂ ಕುರ್ವೀತ" (ಛಾಂ. ೩-೧೪-೧) ಇತ್ಯೇವಂಜಾತೀಯಕೇನ ಪ್ರಕೃತೇನೈವ ಉಪಾಸನಾವಿಧಿನಾ ತೇಷಾಂ ಸಂಬನ್ಧಾತ್। ಶ್ರುತ್ಯಾ ಚ ಏವಂಜಾತೀಯಕಾನಾಂ ಗುಣಾನಾಮ್ ಉಪಾಸನಾರ್ಥತ್ವೇ ಅವಕಲ್ಪಮಾನೇ ನ ಲಕ್ಷಣಯಾ ಪ್ರವಿಲಯಾರ್ಥತ್ವಮ್ ಅವಕಲ್ಪತೇ। ಸರ್ವೇಷಾಂ ಚ ಸಾಧಾರಣೇ ಪ್ರವಿಲಯಾರ್ಥತ್ವೇ ಸತಿ "ಅರೂಪವದೇವ ಹಿ ತತ್ಪ್ರಧಾನತ್ವಾತ್" (ಸೂ. ೩-೨-೧೪) ಇತಿ ವಿನಿಗಮನಕಾರಣವಚನಮ್ ಅನವಕಾಶಂ ಸ್ಯಾತ್। ಫಲಮಪಿ ಏಷಾಂ ಯಥೋಪದೇಶಂ ಕ್ವಚಿತ್ ದುರಿತಕ್ಷಯಃ, ಕ್ವಚಿತ್ ಐಶ್ವರ್ಯಪ್ರಾಪ್ತಿಃ, ಕ್ವಚಿತ್ ಕ್ರಮಮುಕ್ತಿಃ ಇತ್ಯವಗಮ್ಯತ ಏವ ಇತ್ಯತಃ ಪಾರ್ಥಗರ್ಥ್ಯಮೇವ ಉಪಾಸನಾವಾಕ್ಯಾನಾಂ ಬ್ರಹ್ಮವಾಕ್ಯಾನಾಂ ಚ ನ್ಯಾಯ್ಯಮ್, ನೈಕವಾಕ್ಯತ್ವಮ್॥ -ಸೂ. ಭಾ. ೩-೨-೨೧-೨೯೦.

# ೨೭. ಜ್ಞಾನಿಯ ಕೃತಕೃತ್ಯತೆ

೨೧೬. ಕರ್ಮ, ಉಪಾಸನೆ, ಶಮಾದಿಗಳು, ಶ್ರವಣಾದಿಗಳು- ಎಲ್ಲವೂ ಆತ್ಮಜ್ಞಾನಕ್ಕೆ ಕಾರಣವೇ ಹೊರತು ಆತ್ಮಜ್ಞಾನವುಂಟಾದ ಮೇಲೆ ಮಾಡತಕ್ಕದ್ದು ಯಾವದೊಂದೂ ಇರುವದಿಲ್ಲ. **ಆತ್ಮಜ್ಞಾನವಾದಮೇಲೂ ಮಾಡತಕ್ಕ ಕರ್ತವ್ಯವಿರುವದೆಂದು ಭಾವಿಸುವದು ಶ್ರುತಿಸ್ಮೃತಿವಿರುದ್ಧವು. ಕರ್ತೃಭೋಕ್ತೃವಲ್ಲದ ನಿತ್ಯಮುಕ್ತನಾದ ಆತ್ಮನೇ ನಾನು ಎಂಬ ಅನುಭವವುಂಟಾದಮೇಲೂ ಮಾಡತಕ್ಕದ್ದು ಇರುತ್ತದೆ ಎಂಬುದು ಯುಕ್ತಿಗೂ ವಿರುದ್ಧವಾಗಿರುತ್ತದೆ.**

(೧) ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।
ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಞ್ಜ್ವರೇತ್ ॥ -ಬೃ. ೪-೪-೧೨.

(೨) ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ -ಗೀ. ೧೫-೨೦.

(೩) ನಾವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಂ ಶಕ್ಯಂ ದರ್ಶಯಿತುಂ ವೇದಪ್ರಮಾಣಜನಿತಬ್ರಹ್ಮಾತ್ಮಭಾವವಿರೋಧಾತ್ ॥ - ಸೂ. ಭಾ. ೧-೧-೪-೬೦.

(೪) ತಸ್ಮಾತ್ ಸರ್ವದುಃಖವಿನಿರ್ಮುಕ್ತೈಕಚೈತನ್ಯಾತ್ಮಕೋಽಹಮ್ ಇತ್ಯೇಷ ಆತ್ಮಾನುಭವಃ। ನ ಚೈವಮ್ ಆತ್ಮಾನಮ್ ಅನುಭವತಃ ಕಿಂಚಿತ್ ಅನ್ಯತ್ ಕೃತ್ಯಮ್ ಅವಶಿಷ್ಯತೇ। ತಥಾ ಚ ಶ್ರುತಿಃ ''ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ'' (ಬೃ. ೪-೪-೨೨) ಇತಿ ಆತ್ಮವಿದಃ ಕರ್ತವ್ಯಾಭಾವಂ ದರ್ಶಯತಿ । ಸ್ಮೃತಿರಪಿ ''ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ । ಆತ್ಮನ್ಯೇವ ಚ ಸನ್ತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ'' -(ಗೀ. ೩-೧೭) ಇತಿ ॥ - ಸೂ. ಭಾ. ೪-೧-೨-೫೦೭.

೨೦೭. ಆತ್ಮಜ್ಞಾನರೂಪವಾದ ಪಾಂಡಿತ್ಯವನ್ನು ನಿಃಶೇಷಗೊಳಿಸಿದ ಬಳಿಕವೂ ಬಾಲ್ಯ ಮೌನ- ಎಂಬ ಸಾಧನಗಳನ್ನು ಮಾಡಬೇಕೆಂದು ಬೃಹದಾರಣ್ಯಕದಲ್ಲಿ (ಬೃ.೩-೫-೧) ಹೇಳಿದೆ. ಇದಲ್ಲದೆ ಬ್ರಹ್ಮಭೂತನಾದವನು ಪರಭಕ್ತಿಯನ್ನು ಪಡೆದು ಪರಮಾತ್ಮನನ್ನು ಸರಿಯಾಗಿ ಗುರುತಿಸಿ ತಿಳಿದುಕೊಂಡು ಅವನಲ್ಲಿ ಪ್ರವೇಶಮಾಡುತ್ತಾನೆ ಎಂದು ಗೀತೆಯಲ್ಲಿ (ಗೀ. ೧೮-೫೪, ೫೫) ಹೇಳಿದೆ. ಇದನ್ನು ನೋಡಿದರೆ ಆತ್ಮಜ್ಞಾನವಾದಮೇಲೂ ಮಾಡತಕ್ಕದ್ದು ಉಳಿದಿದೆ ಎಂದು ಹೇಳಬೇಕಾಗುತ್ತದೆ.

ಆದರೆ ಈ ಅಭಿಪ್ರಾಯವು ಮೇಲೆ ಹೇಳಿದಂತೆ ಶ್ರುತಿಸ್ಮೃತಿನ್ಯಾಯವಿರುದ್ಧ ವಾಗುವದರಿಂದ ಈ ವಾಕ್ಯಗಳಿಗೆ ಬೇರೆಯ ರೀತಿಯಲ್ಲಿ ಅರ್ಥವನ್ನು ಕಲ್ಪಿಸಬೇಕು. ಹಿಂದೆ (೧೮೧) ಹೇಳಿದಂತೆ ಶ್ರವಣಮಾತ್ರದಿಂದ ಯಾರಿಗೆ ಆತ್ಮವಿಜ್ಞಾನವು ಆಗಿಬಿಡುವದಿಲ್ಲವೋ ಅಂಥವರಿಗೇ ಸಾಧನಗಳ ಆವೃತ್ತಿಯನ್ನು ಹೇಳತಕ್ಕದ್ದು. ಬೃಹದಾರಣ್ಯಕವಾಕ್ಯದಲ್ಲಿ **ಪಾಂಡಿತ್ಯ**ವೆಂದರೆ ಆಚಾರ್ಯರಿಂದಲೂ ಆಗಮದಿಂದಲೂ ಆತ್ಮವಿಜ್ಞಾನವನ್ನು ನಿಃಶೇಷವಾಗಿ ಮಾಡಿಕೊಂಡು ಸರ್ವಕರ್ಮಸಂನ್ಯಾಸವನ್ನು ಮಾಡುವದು; **ಬಾಲ್ಯ**ವೆಂದರೆ ಜ್ಞಾನಬಲದೊಡನೆ ಕೂಡಿಕೊಂಡು ಅನಾತ್ಮಪ್ರತ್ಯಯ ವನ್ನು ತಿರಸ್ಕರಿಸುತ್ತಿರುವದು ; ಅಥವಾ ಬಾಲನಂತೆ ತನ್ನ ಜ್ಞಾನ, ಅಧ್ಯಯನ, ಧಾರ್ಮಿಕತ್ವ- ಮುಂತಾದವುಗಳನ್ನು ಪ್ರದರ್ಶನಮಾಡದೆ ಅಮಾನಿತ್ವದಿಂದಿರುವದು ; **ಮೌನ**ವೆಂದರೆ ಅನಾತ್ಮಪ್ರತ್ಯಯತಿರಸ್ಕರಣದ ಫಲವಾದ ಅನುಭವದಲ್ಲಿ ನೆಲೆನಿಲ್ಲು ವದು. ಈ ಮೌನವು ಅಳವಟ್ಟರೇ ಬ್ರಹ್ಮನಿಷ್ಠನಾದನು ಎಂದು ಶ್ರುತಿಯ ಅರ್ಥ. ಇದರಂತೆ ಗೀತಾವಾಕ್ಯಕ್ಕೂ ಅರ್ಥವನ್ನು ಮಾಡಬೇಕು. ಜ್ಞಾನೋತ್ಪತ್ತಿಯು

ಪರಿಪಕ್ವವಾಗುವದಕ್ಕೆ ಬೇಕಾದ ಸರ್ವಕರ್ಮಸಂನ್ಯಾಸಪೂರ್ವಕವಾದ ಸಹಕಾರಿಕಾರಣಗಳಾದ ಅಮಾನಿತ್ವಾದಿಗಳಿಂದುಂಟಾಗಿರುವ ಅನುಭವನಿಶ್ಚಯವೇ **ಪರಭಕ್ತಿಯು, ಜ್ಞಾನನಿಷ್ಠೆಯು.** ಆ ಜ್ಞಾನನಿಷ್ಠಾರೂಪವಾದ ಭಕ್ತಿಯಿಂದಲೇ ಪರಮಾತ್ಮನನ್ನು ಸರಿಯಾಗಿ ತಿಳಿದುಕೊಳ್ಳುತ್ತಾನೆ. ಈ ವಿವೇಕವನ್ನು ತಿಳಿಸುವದಕ್ಕಾಗಿ ಪಾಂಡಿತ್ಯರೂಪವಾದ ಶಾಸ್ತ್ರಜನ್ಯವಾದ ತಿಳಿವಳಿಕೆಯನ್ನು ಜ್ಞಾನವೆಂದೂ ಕೊನೆಯಲ್ಲಿ ಉಂಟಾಗುವ ಅನುಭವವನ್ನು ವಿಜ್ಞಾನವೆಂದೂ ಕರೆಯುತ್ತಾರೆ. ಪಾಂಡಿತ್ಯಬಾಲ್ಯಗಳು ಅಳವಟ್ಟರೆ, ಮೌನವು ತಾನೇ ಅಳವಡುವದಾದರೂ ಪ್ರಾರಬ್ಧವಶದಿಂದ ಭೇದದರ್ಶನವು ಪ್ರಬಲವಾಗಲೂಬಹುದಾದ್ದರಿಂದ ಆತ್ಮಾನುಭವದಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳಬೇಕೆಂದು ಇಲ್ಲಿ ವಿಧಿಸಿರುತ್ತದೆ. **ಈ ಸಾಧನೆಗಳೆಲ್ಲ ವಿವಿದಿಷಾ (ತತ್ತ್ವವನ್ನು ಅರಿಯಬೇಕೆಂಬ) ಸಂನ್ಯಾಸಿಗೇ ಆಗಿರುವದರಿಂದ ಅವನಿಗೆ ಮಾಡತಕ್ಕ ಬೇರೆಯ ಕರ್ಮಗಳು ಯಾವವೂ ಇರುವದಿಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಜ್ಞಾನವುಂಟಾದಮೇಲಂತೂ ಈ ಸಾದನಗಳು ಮಿಥ್ಯೆಯೇ ಆಗಿಬಿಡುವವು.**

(೧) ಹೇಯಜ್ಞೇಯಾಪ್ಯಪಾಕ್ಯಾನಿ ವಿಜ್ಞೇಯಾನ್ಯಗ್ರ್ಯಾಣತಃ ।
ತೇಷಾಮನ್ಯತ್ರ ವಿಜ್ಞೇಯಾದುಪಲಮ್ಭಸ್ತ್ರಿಷು ಸ್ಮೃತಃ ॥ -ಗೌ. ಕಾ. ೪-೯೦.

ಲೌಕಿಕಾದೀನಾಂ ಕ್ರಮೇಣ ಜ್ಞೇಯತ್ವೇನ ನಿರ್ದೇಶಾತ್ ಅಸ್ತಿತ್ವಾಶಙ್ಕಾ ಪರಮಾರ್ಥತೋ ಮಾ ಭೂತ್ ಇತ್ಯಾಹ - ಹೇಯಾನಿ ಚ ಲೌಕಿಕಾದೀನಿ ತ್ರೀಣಿ ಜಾಗರಿತಸ್ವಪ್ನಸುಷುಪ್ತಾನಿ ಆತ್ಮನಿ ಅಸತ್ತ್ವೇನ ರಜ್ಜ್ವಾಂ ಸರ್ಪವತ್ ಹಾತವ್ಯಾನಿ ಇತ್ಯರ್ಥಃ । ಜ್ಞೇಯಮ್ ಇಹ ಚತುಷ್ಕೋಟಿವರ್ಜಿತಂ ಪರಮಾರ್ಥತತ್ತ್ವಮ್ । ಆಪ್ಯಾನಿ ಆಪ್ತವ್ಯಾನಿ ತ್ಯಕ್ತಬಾಹ್ಯೈಷಣಾತ್ರಯೇಣ ಭಿಕ್ಷುಣಾ ಪಾಣ್ಡಿತ್ಯಬಾಲ್ಯಮೌನಾಖ್ಯಾನಿ ಸಾಧನಾನಿ । ಪಾಕ್ಯಾನಿ ರಾಗದ್ವೇಷಮೋಹಾದಯೋ ದೋಷಾಃ ಕಷಾಯಾಖ್ಯಾನಿ ಪಕ್ತವ್ಯಾನಿ । ಸರ್ವಾಣಿ ಏತಾನಿ ಹೇಯಜ್ಞೇಯಾಪ್ಯಪಾಕ್ಯಾನಿ ವಿಜ್ಞೇಯಾನಿ ಭಿಕ್ಷುಣಾ ಉಪಾಯತ್ವೇನ ಇತ್ಯರ್ಥಃ । ಅಗ್ರ್ಯಾಣತಃ ಪ್ರಥಮತಃ । ತೇಷಾಂ ಹೇಯಾದೀನಾಮ್ ಅನ್ಯತ್ರ ವಿಜ್ಞೇಯಾತ್ ಪರಮಾರ್ಥಸತ್ಯಂ ವಿಜ್ಞೇಯಂ ಬ್ರಹ್ಮೈಕಂ ವರ್ಜಯಿತ್ವಾ ಉಪಲಮ್ಭನಮ್ ಉಪಲಮ್ಭಃ ಅವಿದ್ಯಾಕಲ್ಪನಾಮಾತ್ರಮ್ । ಹೇಯಾಪ್ಯಪಾಕ್ಯೇಷು ತ್ರಿಷ್ವಪಿ ಸ್ಮೃತಃ ಬ್ರಹ್ಮವಿದ್ಭಿಃ । ನ ಪರಮಾರ್ಥಸತ್ಯತಾ ತ್ರಯಾಣಾಮ್ ಇತ್ಯರ್ಥಃ॥

- ಮಾಂ. ಕಾ. ಭಾ. ೪-೯೦-೩೫೦.

(೨) ಅಮೌನಂ ಚ । ಆತ್ಮಜ್ಞಾನಾನಾತ್ಮಪ್ರತ್ಯಯತಿರಸ್ಕಾರೌ ಪಾಣ್ಡಿತ್ಯಬಾಲ್ಯಸಂಜ್ಞಕೌ ನಿಃಶೇಷಂ ಕೃತ್ವಾ । ಮೌನಂ ನಾಮ ಅನಾತ್ಮಪ್ರತ್ಯಯತಿರಸ್ಕರಣಸ್ಯ ಪರ್ಯವಸಾನಂ ಫಲಮ್ । ತಚ್ಚ ನಿರ್ವಿದ್ಯ । ಅಥ ಬ್ರಾಹ್ಮಣಃ ಕೃತಕೃತ್ಯೋ ಭವತಿ । 'ಬ್ರಹ್ಮೈವ ಸರ್ವಮ್' ಇತಿ ಪ್ರತ್ಯಯ ಉಪಜಾಯತೇ ॥ -ಬೃ. ಭಾ. ೩-೫-೧-೬೩.

(೩) ತಸ್ಮಾತ್ ಆನ್ತರೋ ಭಾವವಿಶೇಷಃ ಬಾಲಸ್ಯ ಅಪ್ರರೂಢೇನ್ದ್ರಿಯತ್ವಾದಿರಿಹ ಬಾಲ್ಯಮ್ ಆಶ್ರೀಯತೇ । ತದಾಹ 'ಅನಾವಿಷ್ಕುರ್ವನ್' ಇತಿ। ಜ್ಞಾನಾಧ್ಯಯನಧಾರ್ಮಿಕತ್ವಾದಿಭಿಃ ಆತ್ಮಾನಮ್ ಅವಿಖ್ಯಾಪಯನ್ ದಂಭದರ್ಪಾದಿರಹಿತೋ ಭವೇತ್ । ಯಥಾ ಬಾಲೋಽಪ್ರರೂಢೇನ್ದ್ರಿಯತಯಾ ನ ಪರೇಷಾಮ್ ಆತ್ಮಾನಮ್ ಆವಿಷ್ಕರ್ತುಮೀಹತೇ ತದ್ವತ್॥

-ಸೂ. ಭಾ. ೩-೪-೫೦-೪೯೬.

(೪) ಶಾಸ್ತ್ರಾಚಾರ್ಯೋಪದೇಶೇನ ಜ್ಞಾನೋತ್ಪತ್ತಿಪರಿಪಾಕಹೇತುಂ ಸಹಕಾರಿಕಾರಣಂ ಬುದ್ಧಿವಿಶುದ್ಧತ್ವಾದಿ ಅಮಾನಿತ್ವಾದಿ ಚ ಅಪೇಕ್ಷ್ಯ, ಜನಿತಸ್ಯ ಕ್ಷೇತ್ರಜ್ಞಪರಮಾತ್ಮೈಕತ್ವಜ್ಞಾನಸ್ಯ ಕರ್ತೃತ್ವಾದಿಕಾರಕಭೇದಬುದ್ಧಿನಿಬನ್ಧನಸರ್ವಕರ್ಮಸಂನ್ಯಾಸಸಹಿತಸ್ಯ ಸ್ವಾತ್ಮಾನುಭವನಿಶ್ಚಯರೂಪೇಣ ಯದವಸ್ಥಾನಂ ಸಾ ಪರಾ ಜ್ಞಾನನಿಷ್ಠಾ ಇತ್ಯುಚ್ಯತೇ । ಸೇಯಂ ಜ್ಞಾನನಿಷ್ಠಾ ಆರ್ತಾದಿಭಕ್ತಿತ್ರಯಾಪೇಕ್ಷಯಾ ಪರಾ ಚತುರ್ಥೀ ಭಕ್ತಿಃ ಇತ್ಯುಕ್ತಾ । ತಯಾ ಪರಯಾ ಭಕ್ತ್ಯಾ ಭಗವನ್ತಂ ಮಾಂ ತತ್ತ್ವತೋಽಭಿಜಾನಾತಿ । ಯದನನ್ತರಮೇವ ಈಶ್ವರಕ್ಷೇತ್ರಜ್ಞ ಭೇದಬುದ್ಧಿಃ ಅಶೇಷತೋ ನಿವರ್ತತೇ । ಅತಃ ಜ್ಞಾನನಿಷ್ಠಾಲಕ್ಷಣಯಾ ಭಕ್ತ್ಯಾ ಮಾಮ್ ಅಭಿಜಾನಾತಿ ಇತಿವಚನಂ ನ ವಿರುಧ್ಯತೇ॥

- ಗೀ. ಭಾ. ೧೮-೫೫-೧೧೦೭.

೨೧೮. ಪಾಂಡಿತ್ಯ, ಬಾಲ್ಯ, ಮೌನ - ಮುಂತಾದವುಗಳು ಜ್ಞಾನವಿಶೇಷಗಳೆಂದು ಶ್ರುತಿಯಲ್ಲಿ ವರ್ಣಿತವಾಗಿರುವದರಿಂದಲೂ ಜ್ಞಾನೋತ್ಪತ್ತಿ, ಜ್ಞಾನಪರಿಪಾಕ, ಜ್ಞಾನನಿಷ್ಠಾ - ಎಂಬ ಶಬ್ದಗಳನ್ನು ಅಧ್ಯಾತ್ಮಗ್ರಂಥಗಳಲ್ಲಿ ಉಪಯೋಗಿಸಿರುವದರಿಂದಲೂ ಜ್ಞಾನದಲ್ಲಿಯೂ ಅತಿಶಯತಾರತಮ್ಯವಿರುವವೆಂದು ಕೆಲವರು ಭಾವಿಸುತ್ತಾರೆ. ಬ್ರಹ್ಮವಿತ್, ಬ್ರಹ್ಮವಿದ್ವರ, ಬ್ರಹ್ಮವಿದ್ವರಿಷ್ಠ - ಎಂದು ಜ್ಞಾನಿಗಳಲ್ಲಿ ತರಗತಿಗಳನ್ನೂ ಕೆಲವರು ಕಲ್ಪಿಸಿಕೊಂಡಿರುತ್ತಾರೆ. **ಆದರೆ ಅನುಭವರೂಪವಾದ ವಿಜ್ಞಾನದಲ್ಲಿ ಯಾವ ಹೆಚ್ಚು ಕಡಿಮೆಯೂ ಇಲ್ಲ** - ಎಂದು ಮೇಲೆ ನಾವು ಕೊಟ್ಟಿರುವ ವಿವರಣೆಯಿಂದಲೇ ಸ್ಪಷ್ಟವಾಗುತ್ತದೆ.

ವರ್ಣಾಶ್ರಮಕರ್ಮ, ಉಪಾಸನೆ, ಸಂನ್ಯಾಸ, ಶಮದಮಾದಿಗಳ ಅಭ್ಯಾಸ, ಆಚಾರ್ಯೋಪದೇಶ, ಧ್ಯಾನ - ಮುಂತಾಗಿ ಜ್ಞಾನೋತ್ಪತ್ತಿಸಾಧನಗಳು ಅನೇಕವಾಗಿರುವದರಿಂದಲೂ ಕರ್ಮವು ಉಪಾಸನೆಯೊಡನೆ ಸೇರಿದರೆ ವೀರ್ಯವತ್ತರವಾಗುವದೆಂದು ಶ್ರುತಿಯಲ್ಲಿ ಹೇಳಿರುವದರಿಂದಲೂ (ಛಾ. ೧-೧-೧೦) ಜ್ಞಾನದಲ್ಲಿ ತಾರತಮ್ಯವಿರಬೇಕೆಂದು ಕೆಲವರು ಕಲ್ಪಿಸಬಹುದು ; ಜ್ಞಾನತಾರತಮ್ಯದಿಂದ ಮುಕ್ತಿಯಲ್ಲಿಯೂ ತಾರತಮ್ಯವಿರಬಹುದು ಎಂದು ಕೆಲವರು ಕಲ್ಪಿಸಬಹುದು. ಆದರೆ ಈ ಕಲ್ಪನೆಯು ನಿರಾಧಾರವಾಗಿರುತ್ತದೆ. ಏಕೆಂದರೆ ಸಾಧನವೀರ್ಯದಿಂದ ಜ್ಞಾನದಲ್ಲಿ ಅತಿಶಯವಾಗುವದೆಂದರೆ ಬೇಗನೆ ಉತ್ಪತ್ತಿಯಾಗುವದು, ತಡವಾಗಿ ಜನ್ಮಾಂತರದಲ್ಲಿ ಉತ್ಪತ್ತಿಯಾಗುವದು ಎಂಬ ವಿಶೇಷವಿದ್ದೀತೇ ಹೊರತು ಮತ್ತೆ ಯಾವ ವಿಶೇಷವು

ಇರುವದಕ್ಕೂ ಕಾರಣವಿರುವದಿಲ್ಲ. **ಜ್ಞಾನದಲ್ಲಿ ಭೇದವು ಇರುವದೆಂದು ಕಲ್ಪಿಸಿದರೂ ಪರೋಕ್ಷ, ಅಪರೋಕ್ಷ ಎಂದು ಮಾತ್ರ ಕಲ್ಪಿಸಬಹುದು, ಆದರೆ ಯಾವದು ಅಪರೋಕ್ಷವೋ, ಎಲ್ಲಕ್ಕೂ ಹೆಚ್ಚಿನದೋ, ಅದೇ ಜ್ಞಾನವೆನಿಸೀತೇ ಹೊರತು ಮಿಕ್ಕದ್ದು ಜ್ಞಾನವೆನಿಸಲಾರದು.** ಇದಲ್ಲದೆ ಕರ್ಮದಂತೆ ಜ್ಞಾನದಲ್ಲಿ ಭೇದವಿರುವದಿಲ್ಲ ಆದ್ದರಿಂದ ಜ್ಞಾನಕಾರ್ಯವಾದ ಮೋಕ್ಷದಲ್ಲಿಯೂ ಭೇದವಿರುವದಿಲ್ಲ. **ಮೋಕ್ಷವೆಂದರೆ ನಿತ್ಯಸಿದ್ಧವಾದ ಬ್ರಹ್ಮವೇ ; ಜ್ಞಾನವು ಬ್ರಹ್ಮವಿಷಯದ ಅಜ್ಞಾನವನ್ನು ಬಾಧಿಸುವದೇ ಹೊರತು ಇಲ್ಲದ ಮುಕ್ತಿಯನ್ನುಂಟು ಮಾಡಿಕೊಡುವದಿಲ್ಲ.** ಆದ್ದರಿಂದ ಜ್ಞಾನವುಂಟಾದ ಕೂಡಲೆ ಅಜ್ಞಾನವು ತೊಲಗಿ ಮುಕ್ತಿಯುಂಟಾಗುವದೇ ಹೊರತು ಅದಕ್ಕೆ ಕಾಲಾಂತರದಲ್ಲಿ ಫಲವಾಗುವದೆಂಬ ವಿಶೇಷವನ್ನು ಕಲ್ಪಿಸುವದಕ್ಕೆ ಆಗುವದಿಲ್ಲ. ಆದ್ದರಿಂದ ಜ್ಞಾನಿಗಳಿಗೆ ಆಗುವ ಮುಕ್ತಿಯಲ್ಲಿ ಮನುಷ್ಯರ ಮುಕ್ತಿ, ಋಷಿಗಳ ಮುಕ್ತಿ, ದೇವತೆಗಳ ಮುಕ್ತಿ-ಮುಂತಾಗಿ ಯಾವ ಭೇದವನ್ನೂ ಕಲ್ಪಿಸುವದಕ್ಕೆ ಆಗುವದಿಲ್ಲ. ಆದರೆ ಪ್ರತೀಕೋಪಾಸನೆಗಳಲ್ಲಿಯೂ ಸಗುಣೋಪಾಸನೆಗಳಲ್ಲಿಯೂ ಉಪಾಸ್ಯ ಬ್ರಹ್ಮದ ಗುಣಗಳ ಹೆಚ್ಚುಕಡಿಮೆಯಿರುವದರಿಂದ ವಿದ್ಯೆಗಳಲ್ಲಿಯೂ ತಾರತಮ್ಯವಿರಬಹುದಾಗಿ ಅವುಗಳ ಫಲಗಳಲ್ಲಿಯೂ ತಾರತಮ್ಯವಿರುವದಕ್ಕೆ ಅವಕಾಶವಿರುತ್ತದೆ.

(೧) ಮುಕ್ತ್ಯವಸ್ಥಾ ಹಿ ಸರ್ವವೇದಾನ್ತೇಷು ಏಕರೂಪೈವ ಅವಧಾರ್ಯತೇ । ಬ್ರಹ್ಮೈವ ಚ ಮುಕ್ತ್ಯವಸ್ಥಾ । ನ ಚ ಬ್ರಹ್ಮಣಃ ಅನೇಕಾಕಾರಯೋಗೋಽಸ್ತಿ ॥ -ಸೂ. ಭಾ. ೩-೪-೫೨-೪೯೯.

(೨) ಅಪಿ ಚ ವಿದ್ಯಾಸಾಧನಂ ಸ್ವವೀರ್ಯವಿಶೇಷಾತ್ ಸ್ವಫಲೇ ಏವ ವಿದ್ಯಾಯಾಂ ಕಞ್ಚಿತ್ ಅತಿಶಯಮ್ ಆಸಞ್ಜಯೇತ್, ನ ವಿದ್ಯಾಫಲೇ ಮುಕ್ತೌ । ತದ್ಧಿ ಅಸಾಧ್ಯಂ ನಿತ್ಯಸಿದ್ಧಸ್ವಭಾವಮೇವ ವಿದ್ಯಯಾ ಅಧಿಗಮ್ಯತೇ ಇತಿ ಅಸಕೃತ್ ಅವಾದಿಷ್ಮ । ನ ಚ ತಸ್ಯಾಮಪಿ ಉತ್ಕರ್ಷನಿಕರ್ಷಾತ್ಮಕಃ ಅತಿಶಯಃ ಉಪಪದ್ಯತೇ । ನಿಕೃಷ್ಟಾಯಾ ವಿದ್ಯಾತ್ವಾಭಾವಾತ್ । ಉತ್ಕೃಷ್ಟೈವ ಹಿ ವಿದ್ಯಾ ಭವತಿ । ತಸ್ಮಾತ್ ತಸ್ಯಾಂ ಚಿರಾಚಿರೋತ್ಪತ್ತಿರೂಪಃ ಅತಿಶಯಃ ಭವನ್ ಭವೇತ್ । ನ ತು ಮುಕ್ತೌ ಕಶ್ಚಿತ್ ಅತಿಶಯಸಂಭವೋಽಸ್ತಿ॥ - ಸೂ.ಭಾ. ೩-೪-೫೨-೪೯೯.

(೩) ವಿದ್ಯಾಭೇದಾಭಾವಾದಪಿ ತತ್ಫಲಭೇದನಿಯಮಾಭಾವಃ ಕರ್ಮಫಲವತ್ । ನ ಹಿ ಮುಕ್ತಿಸಾಧನಭೂತಾಯಾ ವಿದ್ಯಾಯಾಃ ಕರ್ಮಣಾಮಿವ ಭೇದಃ ಅಸ್ತೀತಿ । ಸಗುಣಾಸು ತು ವಿದ್ಯಾಸು ''ಮನೋಮಯಃ ಪ್ರಾಣಶರೀರಃ''(ಛಾಂ. ೩-೧೪-೨) ಇತ್ಯಾದ್ಯಾಸು ಗುಣಾವಾಪೋದ್ವಾಪವಶಾತ್ ಭೇದೋಪಪತ್ತೌ ಸತ್ಯಾಮ್ ಉಪಪದ್ಯತೇ ಯಥಾಸ್ವಂ ಫಲಭೇದನಿಯಮಃ ಕರ್ಮಫಲವತ್ । ತಥಾ ಚ ಲಿಙ್ಗದರ್ಶನಮ್ '' ತಂ ಯಥಾಯಥೋಪಾಸತೇ ತದೇವ ಭವತಿ'' ಇತಿ । ನೈವಂ ನಿರ್ಗುಣಾಯಾಂ ವಿದ್ಯಾಯಾಮ್ । ಗುಣಾಭಾವಾತ್ । ತಥಾ ಚ ಸ್ಮೃತಿಃ ''ನ ಹಿ ಗತಿರಧಿಕಾಸ್ತಿ ಕಸ್ಯಚಿತ್ ಸತಿ ಹಿ ಗುಣೇ ಪ್ರವದನ್ತ್ಯತುಲ್ಯತಾಮ್'' ಇತಿ ॥ -ಸೂ.ಭಾ. ೩-೪-೫೨-೪೯೯.

(೪) ಯತ್ರ ಹಿ ನಿರಸ್ತವಿಶೇಷಸಂಬನ್ಧಂ ಪರಂ ಬ್ರಹ್ಮ ಆತ್ಮತ್ವೇನ ಉಪದಿಶ್ಯತೇ ತತ್ರ ಏಕರೂಪಮೇವ ಫಲಂ ಮೋಕ್ಷಃ ಇತಿ ಅವಗಮ್ಯತೇ । ಯತ್ರ ತು ಗುಣ ವಿಶೇಷಸಂಬನ್ಧಂ ಪ್ರತೀಕವಿಶೇ

ಷಸಂಬನ್ಧಂ ವಾ ಬ್ರಹ್ಮ ಉಪದಿಶ್ಯತೇ, ತತ್ರ ಸಂಸಾರಗೋಚರಾಣ್ಯೇವ ಉಚ್ಚಾವಚಾನಿ ಫಲಾನಿ ದೃಶ್ಯನ್ತೇ -''ಅನ್ನಾದೋ ವಸುದಾನೋ ವಿನ್ದತೇ ವಸು ಯ ಏವಂ ವೇದ'' (ಬೃ.೪-೪-೨೪) ಇತ್ಯಾದ್ಯಾಸು ಶ್ರುತಿಷು॥ - ಸೂ.ಭಾ. ೧-೧-೨೪-೧೨೮.

೨೦೯. ಕರ್ಮಾದಿಜ್ಞಾನಸಾಧನಗಳನ್ನು ಮಾಡಿದರೆ ಈಗಲೇ ಜ್ಞಾನೋತ್ಪತ್ತಿಯಾದರೂ ಆಗಬಹುದು ; ಕಾಲಾಂತರದಲ್ಲಿ ಆದರೂ ಆಗಬಹುದು. ಆದರೆ ಜ್ಞಾನಫಲವಾದ ಮುಕ್ತಿಯು ಹಾಗಲ್ಲ. **ಬೆಳಕು ಉಂಟಾದ ಕೂಡಲೆ ಕಣ್ಣಿಗೆ ರೂಪವು ತೋರಿಕೊಂಡುಬಿಡುವಂತೆ ಜ್ಞಾನವು ಉಂಟಾದ ಕೂಡಲೆ ಅವಿದ್ಯೆಯು ನಾಶವಾಗಿಬಿಡುವದರಿಂದ, ನಿತ್ಯಸಿದ್ಧವಾಗಿರುವ ಮುಮುಕ್ಷುವಿನ ಸ್ವರೂಪವೇ ಆಗಿರುವ ಮುಕ್ತಿಯು ಅದೇ ಕಾಲದಲ್ಲಿಯೇ ತೋರಿಕೊಂಡುಬಿಡುತ್ತದೆ. ಆ ಮುಕ್ತಿಯು ಜ್ಞಾನದ ಕಾರ್ಯವಲ್ಲ ; ಅದು ಜ್ಞಾನದಿಂದ ವ್ಯಕ್ತವಾಗುವದು. ಅವಿದ್ಯಾದಿಬಂಧವು ನಿವೃತ್ತಿಯಾಗುವದರಿಂದ ಅದು ಜ್ಞಾನಕಾರ್ಯವು, ಜ್ಞಾನಫಲವು - ಎಂದು ಉಪಚಾರಕ್ಕಾಗಿ ಹೇಳಿರುತ್ತಾರೆ ; ಅಷ್ಟೆ.** ಮುಕ್ತಿಗೆ ಅಡ್ಡಿಮಾಡುವದಕ್ಕೆ ದೇವತೆಗಳೂ ಶಕ್ತರಲ್ಲ ; ಏಕೆಂದರೆ ಆಗ ಅಜ್ಞಾನವು ಸ್ವಲ್ಪವೂ ಉಳಿಯದಂತೆ ಹೋಗಿಬಿಡುವದರಿಂದ ಜ್ಞಾನಿಯು ದೇವತೆಗಳಿಗೂ ಆತ್ಮನಾಗಿಬಿಡುತ್ತಾನೆ.

(೧) ಯಥಾ ಲೋಕೇ ದ್ರಷ್ಟುಶ್ಚಕ್ಷುಷ ಆಲೋಕೇನ ಸಂಯೋಗೋ ಯತ್ಕಾಲಃ, ತತ್ಕಾಲ ಏವ ರೂಪಾಭಿವ್ಯಕ್ತಿಃ । ಏವಮ್ ಆತ್ಮವಿಷಯಂ ವಿಜ್ಞಾನಂ ಯತ್ಕಾಲಮ್ ತತ್ಕಾಲ ಏವ ತದ್ವಿಷಯಾಜ್ಞಾನತಿರೋಭಾವಃ ಸ್ಯಾತ್ । ಅತೋ ಬ್ರಹ್ಮವಿದ್ಯಾಯಾಂ ಸತ್ಯಾಮ್ ಅವಿದ್ಯಾಕಾರ್ಯಾನುಪಪತ್ತೇಃ, ಪ್ರದೀಪೇ ಇವ ತಮಃಕಾರ್ಯಸ್ಯ । ತತ್ ಕೇನ ಕಸ್ಯ ವಿಘ್ನಂ ಕುರ್ಯುರ್ದೇವಾಃ ಯತ್ರ ಆತ್ಮತ್ವಮೇವ ದೇವಾನಾಂ ಬ್ರಹ್ಮವಿದಃ ? - ಬೃ.ಭಾ.೧-೪-೧೦-೧೭೦.

(೨) ಅಜ್ಞಾನವ್ಯವಧಾನನಿವರ್ತಕತ್ವಾತ್ ಜ್ಞಾನಸ್ಯ ಮೋಕ್ಷೋ ಜ್ಞಾನಕಾರ್ಯಮ್ ಇತಿ ಉಪಚರ್ಯತೇ । ........... ನ ಚ ಅಜ್ಞಾನವ್ಯತಿರೇಕೇಣ ಮೋಕ್ಷಸ್ಯ ವ್ಯವಧಾನಾನ್ತರಂ ಕಲ್ಪಯಿತುಂ ಶಕ್ಯಮ್ । ನಿತ್ಯತ್ವಾತ್ ಮೋಕ್ಷಸ್ಯ । ಸಾಧಕಸ್ವರೂಪಾವ್ಯತಿರೇಕಾಚ್ಚ ॥

-ಬೃ.ಭಾ. ૩-૩-೧-૩૨.

೨೧೦. ಆತ್ಮದರ್ಶನದ ಅಥವಾ ಆತ್ಮಜ್ಞಾನದ ವ್ಯಾವಹಾರಿಕಫಲವು ಏನೆಂಬುದನ್ನು ಶ್ರುತಿಯಲ್ಲಿ ಹೀಗೆಂದು ಹೇಳಿರುತ್ತದೆ : ಮೊದಲು ಅವಿದ್ಯೆಯಿಂದ ಬೆಳೆದುಕೊಂಡು ಹೃದಯಕ್ಕೆ ಗಂಟುಬಿದ್ದಿದ್ದ **ಕಾಮಗಳು ತೊಲಗುವವು ; ತತ್ತ್ವವಿಷಯದಲ್ಲಿ ಸತತವಾಗಿ ಉಂಟಾಗುತ್ತಿದ್ದ ಸಂಶಯಗಳು ಕತ್ತರಿಸಿಹೋಗುವವು ; ಎಲ್ಲಾ ಕರ್ಮಗಳೂ ಕ್ಷಯವಾಗುವವು. ಆದ್ದರಿಂದ ಜ್ಞಾನಿಗೆ ಇನ್ನುಮುಂದೆ ಮಾಡತಕ್ಕದ್ದು ಏನೂ ಉಳಿಯುವದಿಲ್ಲ; ಅವನು ಯಾವಾಗಲೂ ಆತ್ಮನಿಷ್ಠನಾಗಿರುತ್ತಾನೆ.**

(೧) ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ ।

ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ -ಮುಂ. ೨-೨-೯.

ಅಸ್ಯ ಪರಮಾತ್ಮಜ್ಞಾನಸ್ಯ ಫಲಮ್ ಇದಾನೀಮ್ ಅಭಿಧೀಯತೇ । ಭಿದ್ಯತೇ ಹೃದಯಗ್ರನ್ಥಿಃ ಅವಿದ್ಯಾವಾಸನಾಪ್ರಚಯೋ, ಬುದ್ಧ್ಯಾಶ್ರಯಃ ಕಾಮಃ । ''ಕಾಮಾ ಯೇಽಸ್ಯ ಹೃದಿ ಶ್ರಿತಾಃ'' ಇತಿ ಶ್ರುತ್ಯನ್ತರಾತ್ ಹೃದಯಾಶ್ರಯೋಽಸೌ ನಾಽಽತ್ಮಾಶ್ರಯಃ । ಭಿದ್ಯತೇ ಭೇದಂ ವಿನಾಶಮ್ ಆಯಾತಿ । ಛಿದ್ಯನ್ತೇ ಸರ್ವಜ್ಞೇಯವಿಷಯಾಃ ಸಂಶಯಾಃ ಲೌಕಿಕಾನಾಮ್ ಆಮರಣಾತ್ ಗಙ್ಗಾಸ್ರೋತೋವತ್ ಪ್ರವೃತ್ತಾಃ ವಿಚ್ಛೇದಮಾಯಾನ್ತಿ । ಅಸ್ಯ ವಿಚ್ಛಿನ್ನಸಂಶಯಸ್ಯ ನಿವೃತ್ತಾವಿದ್ಯಸ್ಯ ಯಾನಿ ವಿಜ್ಞಾನೋತ್ಪತ್ತೇಃ ಪ್ರಾಕ್ತನಾನಿ ಜನ್ಮಾನ್ತರೇ ಚ ಅಪ್ರವೃತ್ತಫಲಾನಿ ಜ್ಞಾನೋತ್ಪತ್ತಿಸಹಭಾವೀನಿ ಚ ಕ್ಷೀಯನ್ತೇ ಕರ್ಮಾಣಿ । ನ ತು ಏತಜ್ಜನ್ಮಾರಮ್ಭಕಾಣಿ । ಪ್ರವೃತ್ತಫಲತ್ವಾತ್ । ತಸ್ಮಿನ್ ಸರ್ವಜ್ಞೇ ಅಸಂಸಾರಿಣಿ ಪರಾವರೇ ಪರಂ ಚ ಕಾರಣಾತ್ಮನಾ ಅಪರಂ ಚ ಕಾರ್ಯಾತ್ಮನಾ । ತಸ್ಮಿನ್ ಪರಾವರೇ ಸಾಕ್ಷಾತ್ 'ಅಹಮಸ್ಮಿ' ಇತಿ ದೃಷ್ಟೇ ಸಂಸಾರಕಾರಣೋಚ್ಛೇದಾತ್ ಮುಚ್ಯತೇ ಇತ್ಯರ್ಥಃ ॥ - ಮುಂ. ೨-೨-೯-ಭಾ.

೨೧೧. ಜ್ಞಾನದಿಂದ ಅವಿದ್ಯೆಯು ನಾಶವಾಗುವದೆಂಬುದು ನಿಜವಾದರೂ ಜ್ಞಾನವು ಯಾವ ಜನ್ಮದಲ್ಲಿ ಉಂಟಾಗುವದೋ ಆ ಜನ್ಮದ ದೇಹವು ಇರುನವರೆಗೆ ಅದಕ್ಕೆ ಬೇಕಾದಷ್ಟು ಅವಿದ್ಯಾಲೇಶವು ಇರುವದೆಂದು ಕೆಲವರು ವಾದಿಸುತ್ತಾರೆ. **ಈ ಅವಿದ್ಯಾಲೇಶವಾದವು** ಸರಿಯಲ್ಲವೆಂಬುದನ್ನು ಹಿಂದೆ (೧೬೯) ಸ್ಪಷ್ಟಪಡಿಸಿರುತ್ತೇವೆ. ಅವಿದ್ಯಾಲೇಶವಾದವನ್ನು ಹುಟ್ಟುಹಾಕಿದವರು ಅಧ್ಯಾಸೋಪಾದಾನಮೂಲಾವಿದ್ಯಾವಾದಿಗಳು. 'ಅವಿದ್ಯಾಲೇಶ', 'ಅವಿದ್ಯಾಚ್ಛಾಯೆ', 'ಅವಿದ್ಯಾಗಂಧ', 'ಅವಿದ್ಯಾವಾಸನೆ' ಅಥವಾ 'ಅವಿದ್ಯಾಸಂಸ್ಕಾರ' - ಇವೆಲ್ಲಾ ಪರ್ಯಾಯಶಬ್ದಗಳು. ಮೂಲಾವಿದ್ಯಾವಾದವು ವೇದಾಂತಸಿದ್ಧಾಂತಕ್ಕೂ ಭಾಷ್ಯಕ್ಕೂ ಲೋಕಾನುಭವಾನುಸಾರಿಯಾದ ಯುಕ್ತಿಗೂ ವಿರುದ್ಧವಾಗಿದೆ ಎಂದು ಹಿಂದೆಯೇ (೩೦) ತಿಳಿಸಿದ್ದಾಗಿರುವದಿರಂದ ಈ ಅವಿದ್ಯಾಲೇಶವೂ ಸರಿಯಲ್ಲವೆಂದು ಅದರಿಂದಲೇ ಏರ್ಪಡುತ್ತದೆ. ಆದ್ದರಿಂದಲೇ **ಆಚಾರ್ಯರು ಜ್ಞಾನಿಗೆ ವಿಪರೀತಪ್ರತ್ಯಯವಾಗಲಿ, ಸಂಸಾರಿತ್ವವಾಗಲಿ ಇರುವದಿಲ್ಲವೆಂದು ಸ್ಪಷ್ಟವಾಗಿ ಹೇಳಿ ಅವಿದ್ಯಾರಹಿತವಾದ ಜೀವನ್ಮುಕ್ತಿಯನ್ನೇ ಆದರಿಸಿರುತ್ತಾರೆ.** ವಿದ್ಯಾವಿದ್ಯೆಗಳೆರಡೂ ಒಬ್ಬನಲ್ಲಿರುವವೆಂಬುದು ಬೆಳಕುಕತ್ತಲೆಗಳು ಜೊತೆಯಲ್ಲಿರುವವೆಂಬಂತೆ ಅಪಹಾಸ್ಯವಾಗಿರುತ್ತದೆ. ಆತ್ಮಸ್ವರೂಪವನ್ನು ಸಾಮಾನ್ಯವಾಗಿ ತಿಳಿದಿದ್ದರೂ ಇಂಥವನೆಂದು ವಿಶೇಷರೂಪದಿಂದ ತಿಳಿಯದಿದ್ದವರಿಗೆ ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿಯುವಂಥ ತಪ್ಪುತಿಳಿವಳಿಕೆಯಾಗಬಹುದು ; ಆದರೆ ಆತ್ಮಸ್ವರೂಪವನ್ನೇ ತಿಳಿದವರಿಗೆ ಯಾವ ಅವಿದ್ಯೆಯೂ ಇರುವದಕ್ಕೆ ಅವಕಾಶವಿರುವದಿಲ್ಲವೆಂಬುದು ಸ್ಪಷ್ಟ.

(೧) ನ ಚ ವಿದ್ಯಾವಿದ್ಯೇ ಏಕಸ್ಯ ಪುರುಷಸ್ಯ ಸಹ ಭವತಃ । ವಿರೋಧಾತ್ ತಮಃಪ್ರಕಾಶಾವಿವ । ತಸ್ಮಾತ್ ಆತ್ಮವಿದಃ ಅವಿದ್ಯಾವಿಷಯೋಽಧಿಕಾರೋ ನ ದ್ರಷ್ಟವ್ಯಃ ಕ್ರಿಯಾಕಾರಕಫಲಭೇದರೂಪಃ ॥ -ಬೃ.ಭಾ.೩-೫-೧-೫೮.

(೨) ಕಿಂ ಚ ನ ಚ ವಿಪರೀತಪ್ರತ್ಯಯೋ ವಿದ್ಯಾವತಃ ಉತ್ಪದ್ಯತೇ । ನಿರ್ವಿಷಯತ್ವಾತ್ । ಅನವಧೃತವಿಷಯವಿಶೇಷಸ್ವರೂಪಂ ಹಿ ಸಾಮಾನ್ಯಮಾತ್ರಮ್ ಆಶ್ರಿತ್ಯ ವಿಪರೀತಪ್ರತ್ಯಯಃ ಉತ್ಪದ್ಯಮಾನ ಉತ್ಪದ್ಯತೇ । ಯಥಾ ಶುಕ್ತಿಕಾಯಾಂ ರಜತಮಿತಿ । ಸ ಚ ವಿಷಯವಿಶೇಷಾವಧಾರಣವತಃ ಅಶೇಷವಿಪರೀತಪ್ರತ್ಯಯಾಶ್ರಯಸ್ಯ ಉಪಮರ್ದಿತತ್ವಾತ್ ನ ಪೂರ್ವವತ್ ಸಂಭವತಿ । ಶುಕ್ತಿಕಾದ್ ಸಮ್ಯಕ್ಪ್ರತ್ಯಯೋತ್ಪತ್ತೌ ಪುನರದರ್ಶನಾತ್ ॥

- ಬೃ. ೧-೪-೧೦-೧೭೩.

(೩) ನಾವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಂ ಶಕ್ಯಂ ದರ್ಶಯಿತುಮ್ । ವೇದಪ್ರಮಾಣಜನಿತಬ್ರಹ್ಮಾತ್ಮಭಾವವಿರೋಧಾತ್ ॥ - ಸೂ. ಭಾ. ೧-೧-೪-೬೦.

(೪) ಗುಣಾನೇತಾನ್ ಯಥೋಕ್ತಾನ್ ಅತೀತ್ಯ ಜೀವನ್ನೇವಾತಿಕ್ರಮ್ಯ ಮಾಯೋಪಾಧಿಭೂತಾನ್ ತ್ರೀನ್ ದೇಹೀ ದೇಹಸಮುದ್ಭವಾನ್ ದೇಹೋತ್ಪತ್ತಿಬೀಜಭೂತಾನ್ ಜನ್ಮಮೃತ್ಯುಜರಾದುಃಖೈಃ ...... ಜೀವನ್ನೇವ ವಿಮುಕ್ತಃ ಸನ್ ವಿದ್ವಾನಮೃತಮಶ್ನುತೇ ॥

-ಗೀ. ಭಾ. ೧೪-೨೦-೮೭೮.

೨೧೨. ಅವಿದ್ಯಾಕಾಮಕರ್ಮಗಳು ಜ್ಞಾನದಿಂದ ಸಂಪೂರ್ಣವಾಗಿ ನಾಶವಾಗಿ ಬಿಟ್ಟರೆ ಶರೀರವು ಉಳಿದಿರುವದು ಹೇಗೆ ? ಜ್ಞಾನಿಯು ಶರೀರವಂತನಾಗಿ ಉಳಿದು ಕೊಳ್ಳದೆ ಇದ್ದರೆ ಅವನು ಶಿಷ್ಯರಿಗೆ ತತ್ತ್ವವನ್ನು ಉಪದೇಶಿಸುವದು ಹೇಗೆ ? - ಎಂಬ ಸಂಶಯಗಳು ತಲೆಯೆತ್ತಿ ವೇದಾಂತಿಗಳಲ್ಲಿ ಮುಕ್ತಿಯ ವಿಷಯಕ್ಕೆ ಎರಡು ಭಿನ್ನಭಿನ್ನಮತಗಳನ್ನು ಹುಟ್ಟಿಸಿರುತ್ತವೆ. ಜ್ಞಾನಿಗೂ ಸ್ವಲ್ಪ ಅವಿದ್ಯೆಯಿರುತ್ತದೆ ; ಅವನು ಜೀವನ್ಮುಕ್ತನು. ಈ **ಗೌಣಮುಕ್ತಿ**ಯನ್ನು ಪಡೆದಿರುವವನೇ ಆಚಾರ್ಯನು, ಅವನಿಗೆ ಸತ್ತಬಳಿಕ **ವಿದೇಹಮುಕ್ತಿ** ಎಂಬ ಮುಖ್ಯಮುಕ್ತಿಯಾಗುವದು - ಎಂಬುದು ಒಂದು ಮತ. ಈ ಮತವನ್ನು ಆಗಲೆ (೧೬೨, ೨೧೧) ಖಂಡಿಸಿದ್ದಾಗಿದೆ. ಇನ್ನೊಂದು ಮತದವರು ಜ್ಞಾನದಿಂದ ಅಜ್ಞಾನವು ನಾಶವಾದರೆ ಕೂಡಲೆ ಶರೀರವು ಬಿದ್ದುಹೋಗಿ ಮುಕ್ತಿಯಾಗಿಬಿಡುತ್ತದೆ. ಅದಕ್ಕೆ ಸದ್ಯೋಮುಕ್ತಿಯೆಂದು ಹೆಸರು ಎಂದಿರುತ್ತಾರೆ. ಈ ಮತಕ್ಕೆ **ಸದ್ಯೋಮುಕ್ತಿವಾದ** ಎಂದು ಹೆಸರು. ಇದಂತೂ ಹಾಸ್ಯಾಸ್ಪದವಾದ ಮತ. ಏಕೆಂದರೆ ಶರೀರವಿರುವದು ಅವಿದ್ಯಾದೃಷ್ಟಿಯಿಂದಲೇ ಹೊರತು ನಿಜವಾಗಿ ಅಲ್ಲ ; ಆದ್ದರಿಂದ ಜ್ಞಾನವು ಹುಟ್ಟಿದ ಬಳಿಕ ಯಾವ ಶರೀರವೂ ಉಳಿದಿರುವದಿಲ್ಲ - ಎಂದು ಹಿಂದೆಯೇ (೧೩೭, ೧೬೨) ತಿಳಿಸಿರುತ್ತೇವೆ.

ಇಲ್ಲಿ ನಿಜವಾದ ಸಿದ್ಧಾಂತವೇನೆಂದರೆ, **ಜ್ಞಾನದಿಂದ ಅವಿದ್ಯೆಯು ಸಂಪೂರ್ಣವಾಗಿ ಬಾಧಿತವಾಗುತ್ತದೆ, ಎಂದರೆ ಅದು ನಿಜವಾಗಿ ಇಲ್ಲವೇ ಇಲ್ಲ ಎಂಬ**

**ನಿಶ್ಚಯವಾಗಿಬಿಡುತ್ತದೆ; ಇಷ್ಟೇ ಹೊರತು ಜ್ಞಾನವು ಅವಿದ್ಯೆಯನ್ನು -ಕೊಡಲಿಯು ಮರವನ್ನು ಕತ್ತರಿಸಿ ಹಾಕುವಂತೆ, ಅಥವಾ ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ - ನಾಶಮಾಡುವದಿಲ್ಲ.** ಆದ್ದರಿಂದ, ಜ್ಞಾನದಿಂದ ಬಾಧಿತವಾದಮೇಲೂ ಅವಿದ್ಯಾಕಾಮ ಕರ್ಮಗಳೂ ಅದಕ್ಕೆ ಆಶ್ರಯವಾದ ಪ್ರಾರಬ್ಧಕರ್ಮದಿಂದಾಗಿರುವ ದೇಹವೂ, ಕುಂಬಾರನು ತಿರುಗಿಸಿದ ತಿಗುರಿಯ ವೇಗವು ನಾಶವಾಗುವವರೆಗೆ ಸುತ್ತುತ್ತಲೇ 'ಇರುವಂತೆ, ತಮ್ಮ ವ್ಯಾಪಾರವನ್ನು ಮಾಡುತ್ತಿರುವದು ಸ್ವಾಭಾವಿಕ. ಜ್ಞಾನಬಾಧಿತವಾದ ಮಿಥ್ಯಾಜ್ಞಾನಾದಿಗಳು ದ್ವಿತೀಯಚಂದ್ರ, ಶುಕ್ತಿರಜತಾಭಾಸ, ದಿಙ್ಮೋಹ - ಮುಂತಾದವುಗಳಂತೆ ಕೆಲವುಕಾಲ ಇದ್ದುಕೊಂಡಿರುವಲ್ಲಿ. ಯಾವ ದೋಷವೂ ಇಲ್ಲ. ಈ ಬಾಧಿತಾನುವೃತ್ತಿಯಿಂದ ಜ್ಞಾನಿಯ ಕೃತಕೃತ್ಯತೆಗೆ ಯಾವ ಲೋಪವೂ ಇರುವದಿಲ್ಲ. ಆದ್ದರಿಂದ ನಾಶವಾಗುವದು ಎಂದರೆ ಹುರಿದ ಬೀಜದಂತೆ ಫಲವನ್ನು ಕೊಡಲಾರ ದಂತಾಗುವದು ಎಂಬರ್ಥವಾದರೆ, ಜ್ಞಾನಿಗೆ ಸಂಚಿತ ಪುಣ್ಯಾಪಾಪಕರ್ಮಗಳೆಲ್ಲ ಜ್ಞಾನದಿಂದ ನಾಶವಾಗುವವು, ಆಗಾಮಿಕರ್ಮದ ಫಲವು ಅಂಟದೆ ಇರುವದು - ಎಂದು ಹೇಳಬೇಕು ; ಪ್ರಾರಬ್ಧಕರ್ಮವು ತನ್ನ ಫಲವನ್ನು ಕೊಟ್ಟುಬಿಟ್ಟಿರುವದರಿಂದ ಆ ಫಲವನ್ನು ಅನುಭವಿಸಿ ಮುಗಿಸಬೇಕು. ಅಗ್ನಿಹೋತ್ರಾದಿನಿತ್ಯಕರ್ಮಗಳು ಮಾತ್ರ ಪರಂಪರೆಯಿಂದ ಮೋಕ್ಷಕ್ಕೇ ಕಾರಣವಾಗುವವು. ನಾಶವಾಗುವದೆಂದರೆ ಬಾಧಿತ ವಾಗುವದೆಂದೇ ಅರ್ಥವಾದರೆ, ಶರೀರವಾಗಲಿ ಕರ್ಮವಾಗಲಿ ಯಾವದೂ ಎಂದಿಗೂ ಇರುವದೇ ಇಲ್ಲ ಎಂದು ಜ್ಞಾನಿಗೆ ನಿಶ್ಚಯವಾಗಿಬಿಡುವದು ಎಂದು ಹೇಳಬೇಕು. **ನಾನು ಹಿಂದೆ ಕರ್ತೃಭೋಕ್ತೃವಾಗಿರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಕರ್ತೃ ಭೋಕ್ತೃವಾಗಿರುವದಿಲ್ಲ ಎಂಬ ನಿಶ್ಚಯದಿಂದ ಆಗುವ ಕರ್ಮಬಂಧದ ಬಿಡುಗಡೆ ಯನ್ನೇ ಆಚಾರ್ಯರು ಸದ್ಯೋಮುಕ್ತಿಯೆಂದು ಕರೆದಿರುತ್ತಾರೆ.**

(೧) ಇತರಸ್ಯಾಪಿ ಪುಣ್ಯಸ್ಯ ಕರ್ಮಣಃ, ಏವಮ್ ಅಘವದಸಂಶ್ಲೇಷೋ ವಿನಾಶಶ್ಚ ಜ್ಞಾನವತೋ ಭವತಃ । ..... ಅಕರ್ತ್ರಾತ್ಮತ್ವಬೋಧನಿಮಿತ್ತಸ್ಯ ಚ ಕರ್ಮಕ್ಷಯಸ್ಯ ॥ - ಸೂ. ಭಾ. ೪-೧-೧೪-೫೨೯

(೨) ಅಪ್ರವೃತ್ತಫಲೇ ಏವ ಪೂರ್ವೇ ಜನ್ಮಾನ್ತರಸಞ್ಚಿತೇ ಅಸ್ಮಿನ್ನಪಿ ಚ ಜನ್ಮನಿ ಪ್ರಾಗ್ಜ್ಞಾನೋತ್ಪತ್ತೇಃ ಸಞ್ಚಿತೇ ಸುಕೃತದುಷ್ಕೃತೇ ಜ್ಞಾನಾಧಿಗಮಾತ್ ಕ್ಷೀಯೇತೇ । ನ ತ್ವಾರಬ್ಧಕಾರ್ಯೇ ಸಾಮಿಭುಕ್ತಫಲೇ । .....ಕುತ ಏತತ್ ? '' ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ'' (ಛಾಂ. ೬-೧೪-೨) ಇತಿ ಶರೀರಪಾತಾವಧಿಕರಣಾತ್ ಕ್ಷೇಮಪ್ರಾಪ್ತೇಃ ॥ -ಸೂ. ಭಾ. ೪-೧-೧೫-೫೩೧.

(೩) ಯನ್ನಿತ್ಯಂ ಕರ್ಮ ವೈದಿಕಮ್ ಅಗ್ನಿಹೋತ್ರಾದಿ, ತತ್ ತತ್ಕಾರ್ಯಾಯೈವ ಭವತಿ । ಜ್ಞಾನಸ್ಯ ಯತ್ಕಾರ್ಯಂ ತದೇವ ಅಸ್ಯಾಪಿ ಕಾರ್ಯಮಿತ್ಯಭಿಪ್ರಾಯಃ ॥

- ಸೂ. ಭಾ. ೪-೧-೧೬-೫೩೩.

(೪) ನ ಹಿ ಸಾಕ್ಷಾದೇವ ಜ್ಞಾನಾಗ್ನಿಃ ಕರ್ಮಾಣೀನ್ಧನವದ್ಭಸ್ಮೀಕರ್ತುಂ ಶಕ್ನೋತಿ । ತಸ್ಮಾತ್ಸಮ್ಯಗ್ದರ್ಶನಂ ಸರ್ವಕರ್ಮಣಾಂ ನಿರ್ಬೀಜತ್ವಕಾರಣಮ್ ಇತ್ಯಭಿಪ್ರಾಯಃ। ಸಾಮರ್ಥ್ಯಾತ್, ಯೇನ ಕರ್ಮಣಾ ಶರೀರಮಾರಬ್ಧಂ ತತ್ ಪ್ರವೃತ್ತಫಲತ್ವಾದುಪಭೋಗೇನೈವ ಕ್ಷೀಯತೇ । ಅತೋಽ ಯಾನ್ಯಪ್ರವೃತ್ತಫಲಾನಿ ಜ್ಞಾನೋತ್ಪತ್ತೇಃ ಪ್ರಾಕ್ ಕೃತಾನಿ ಜ್ಞಾನಸಹಭಾವೀನಿ ಚ ಅತೀತಾನೇಕಜನ್ಮಕೃತಾನಿ ಚ, ತಾನ್ಯೇವ ಸರ್ವಾಣಿ ಭಸ್ಮಸಾತ್ಕುರುತೇ ॥ - ಗೀ. ಭಾ. ೪-೩೭-೩೦೮.

(೫) ನ ತಾವದನಾಶ್ರಿತ್ಯಾಽಽರಬ್ಧಕಾರ್ಯಂ ಕರ್ಮಾಶಯಂ ಜ್ಞಾನೋತ್ಪತ್ತಿರುಪಪದ್ಯತೇ। ಆಶ್ರಿತೇ ಚ ತಸ್ಮಿನ್ ಕುಲಾಲಚಕ್ರವತ್ ಪ್ರವೃತ್ತವೇಗಸ್ಯಾನ್ತರಾಲೇ ಪ್ರತಿಬನ್ಧಾಸಂಭವಾತ್, ಭವತಿ ವೇಗಕ್ಷಯಪ್ರತಿಪಾಲನಮ್ । ಅಕರ್ತ್ರಾತ್ಮಬೋಧೋಽಪಿ ಹಿ ಮಿಥ್ಯಾಜ್ಞಾನಬಾಧನೇನ ಕರ್ಮಾಣ್ಯುಚ್ಛಿನತ್ತಿ। ಬಾಧಿತಮಪಿ ತು ಮಿಥ್ಯಾಜ್ಞಾನಂ ದ್ವಿಚನ್ದ್ರಜ್ಞಾನವತ್ ಸಂಸ್ಕಾರವಶಾತ್ ಕಞ್ಚಿತ್ಕಾಲಮ್ ಅನುವರ್ತತ ಏವ । ಅಪಿ ಚ ನೈವಾತ್ರ ವಿವದಿತವ್ಯಂ ಬ್ರಹ್ಮವಿದಾ ಕಞ್ಚಿತ್ಕಾಲಂ ಶರೀರಂ ಧ್ರಿಯತೇ ನ ವಾ ಧ್ರಿಯತೇ ಇತಿ। ಕಥಂ ಹ್ಯೇಕಸ್ಯ ಸ್ವಹೃದಯಪ್ರತ್ಯಯಂ ಬ್ರಹ್ಮವೇದನಂ ದೇಹಧಾರಣಂ ಚ ಅಪರೇಣ ಪ್ರತಿಕ್ಷೇಪ್ತುಂ ಶಕ್ಯೇತ ? -ಸೂ. ಭಾ. ೪-೧-೧೫-೫೩೨.

(೬) ಕ್ವಚಿತ್ ವಿದ್ಯಾಯಾಃ ಪೂರ್ವೋತ್ಪನ್ನವಿಪರೀತಪ್ರತ್ಯಯಜನಿತಸಂಸ್ಕಾರೇಭ್ಯೋ ವಿಪರೀತಪ್ರತ್ಯಯಾವಭಾಸಾಃ ಸ್ಮೃತಯೋ ಜಾಯಮಾನಾಃ, ವಿಪರೀತಪ್ರತ್ಯಯಭ್ರಾನ್ತಿಮ್ ಅಕಸ್ಮಾತ್ ಕುರ್ವನ್ತಿ । ಯಥಾ ವಿಜ್ಞಾತದಿಗ್ವಿಭಾಗಸ್ಯಾಪಿ ಅಕಸ್ಮಾತ್ ದಿಗ್ವಿಪರ್ಯಯವಿಭ್ರಮಃ ॥

- ಬೃ. ಭಾ. ೧-೪-೧೦-೧೭೩.

(೭) ಪೂರ್ವಸಿದ್ಧಕರ್ತೃತ್ವಭೋಕ್ತೃತ್ವವಿಪರೀತಂ ಹಿ 'ತ್ರಿಷ್ವಪಿ ಕಾಲೇಷು ಅಕರ್ತೃತ್ವಾಭೋಕ್ತೃತ್ವ ಸ್ವರೂಪಂ ಬ್ರಹ್ಮಾಹಮಸ್ಮಿ, ನೇತಃ ಪೂರ್ವಮಪಿ ಕರ್ತಾ ಭೋಕ್ತಾ ವಾ ಅಹಮಾಸಮ್, ನೇದಾನೀಮ್, ನಾಪಿ ಭವಿಷ್ಯತ್ಕಾಲೇ' ಇತಿ ಬ್ರಹ್ಮವಿದವಗಚ್ಛತಿ । ಏವಮೇವ ಚ ಮೋಕ್ಷ ಉಪಪದ್ಯತೇ ॥ -ಸೂ. ಭಾ. ೪-೧-೧೩-೫೨೮.

(೮) ಸಮ್ಯಗ್ದರ್ಶನನಿಷ್ಠಾನಾಂ ಸಂನ್ಯಾಸಿನಾಂ ಸದ್ಯೋಮುಕ್ತಿರುಕ್ತಾ ॥

- ಗೀ. ಭಾ. ೫-೨೭-೩೭೨.

೨೧೩. ಜ್ಞಾನದಿಂದ ಕರ್ಮವು ಆತ್ಯಂತಿಕವಾಗಿ ನಾಶವಾಗಲು ನಿಷ್ಕ್ರಿಯನಾದ ಪರಮಾತ್ಮನೇ ತಾನೆಂಬ ಅರಿವಿನಲ್ಲಿ ನೆಲೆನಿಲ್ಲುವದೇ **ನಿಜವಾದ ಸರ್ವಕರ್ಮ ಸಂನ್ಯಾಸವು**. ಈ ಸಂನ್ಯಾಸವು ಗೃಹಸ್ಥರಿಗೂ ಉಂಟಾಗಬಹುದು ; ಅದು ಉಂಟಾದ ಬಳಿಕ ಅವರಿಗೆ ತಮ್ಮ ಆಶ್ರಮಕರ್ಮದಿಂದ ಆಗಬೇಕಾದ ಯಾವ ಪ್ರಯೋಜನವೂ ಇಲ್ಲದ್ದರಿಂದ ಅವರೂ ಅವಶ್ಯವಾಗಿ ಯಾಜ್ಞವಲ್ಕ್ಯಾದಿಗಳಂತೆ ಗೃಹಸ್ಥಕರ್ಮವನ್ನು ಬಿಟ್ಟುಬಿಡುವರೆಂಬುದು ತಾನೇ ಸಿದ್ಧವಾಗುತ್ತದೆ. ಆದರೆ ಯಾವದಾದರೂ ನಿಮಿತ್ತ ದಿಂದ ಅದು ಆಗದಿದ್ದರೆ, ಅವರು ಮೊದಲಿನಂತೆಯೇ ಕರ್ಮದಲ್ಲಿ ಪ್ರವೃತ್ತರಾಗಿರು ವಂತೆ ತೋರಿದರೂ ಅವರ ಕರ್ಮವು ಜ್ಞಾನದಿಂದ ಬಾಧಿತವಾಗಿ ಕರ್ಮಾಭಾಸವಾಗಿ ರುತ್ತದೆ ; ಅವರಿಗೆ ಕ್ರಿಯಾಕಾರಕಫಲವೆಲ್ಲವೂ ಬ್ರಹ್ಮವೇ ಎಂಬ ಅರಿವು ಉಂಟಾಗಿರು

ತ್ತದೆ. ಆಗ ಅವರು ಮಾಡುವ ಕರ್ಮವು **ಲೋಕಸಂಗ್ರಹಕ್ಕಾಗಿ,** ಎಂದರೆ ಅಜ್ಞರಿಗೆ ಮಾರ್ಗದರ್ಶನಕ್ಕಾಗಿ. ಆದ್ದರಿಂದ ಅವರು ಯಾವ ಆಶ್ರಮದಲ್ಲಿದ್ದರೂ ಕೃತಕೃತ್ಯರೇ. ಜ್ಞಾನಿಗಳಾದವರೂ ಕರ್ಮದಿಂದ **ಪ್ರಯೋಜನವಿಲ್ಲದ್ದರಿಂದ ಮಾಡುವ ಸಂನ್ಯಾಸ ವನ್ನು ಈಗಿನ ವೇದಾಂತಿಗಳು ವಿದ್ವತ್ಸಂನ್ಯಾಸವೆಂದು ಕರೆಯುತ್ತಾರೆ. ಅಜ್ಞರಾಗಿದ್ದರೂ ಕರ್ಮದಿಂದ** ಆಗುವ ಚಿತ್ತಶುದ್ಧಿಯಾಗಿರುವದರಿಂದ ಮುಂದೆ ಶಮಾದಿಗಳನ್ನಳವಡಿಸಿ ಕೊಂಡು ಧ್ಯಾನಮಾಡುವದಕ್ಕಾಗಿ ಗೃಹಸ್ಥಕರ್ಮಗಳನ್ನು ಸಂನ್ಯಾಸಮಾಡುವರಲ್ಲ, ಅಂಥ ಕರ್ತೃತ್ವವಿಜ್ಞಾನಪೂರ್ವಕವಾದ **ಕರ್ಮಸಂನ್ಯಾಸವನ್ನು ವಿವಿದಿಷಾಸಂನ್ಯಾಸವೆಂದು** ಕರೆಯುತ್ತಾರೆ. ಈ ವಿವಿದಿಷಾಸಂನ್ಯಾಸಕ್ಕೆ ಯಾರು ಇನ್ನೂ ಅರ್ಹರಾಗಿಲ್ಲವೋ ಅವರಿಗೆ ಕರ್ಮಯೋಗವೇ ಕರ್ಮಫಲಸಂನ್ಯಾಸವೇ **ಒಳ್ಳೆಯದೆಂದು ಗೀತೆಯಲ್ಲಿ ಹೇಳಿರುತ್ತದೆ. ಹೀಗೆ ಕರ್ಮಫಲಸಂನ್ಯಾಸ, ಕರ್ಮಸಂನ್ಯಾಸ, ಸರ್ವಕರ್ಮ ಸಂನ್ಯಾಸ- ಎಂದು ಸಂನ್ಯಾಸವು ಮೂರು** ಬಗೆಯಾಗಿರುತ್ತದೆ. ಇವುಗಳಲ್ಲಿ ಸರ್ವಕರ್ಮ ಸಂನ್ಯಾಸವು ಜ್ಞಾನಿಯೊಬ್ಬನಿಗೇ ಸಾಧ್ಯವಾಗಿರುತ್ತದೆ. ಈ ಸಂನ್ಯಾಸಪ್ರಕಾರಗಳ ಹೊರತು ಮಿಕ್ಕ ಯಾವದೂ ನಿಜವಾದ ಸಂನ್ಯಾಸವಲ್ಲ. ಉದಾಹರಣೆಗೆ **ಕ್ರಿಯಾಕಾರಕ ಫಲಗಳನ್ನು ಸತ್ಯವೆಂದು ತಿಳಿದವರು, ಶೂನ್ಯವಾದಿಗಳು, ಅಥವಾ ಸೋಮಾರಿಗಳು ಕರ್ಮವನ್ನು ಬಿಡುವದು ಎಂದಿಗೂ ಸಂನ್ಯಾಸವಾಗಲಾರದು.**

(೧) ಜನ್ಮಾದಿಸರ್ವವಿಕ್ರಿಯಾರಹಿತತ್ವೇನ ನಿಷ್ಕ್ರಿಯಮ್ ಆತ್ಮಾನಮ್ ಆತ್ಮತ್ವೇನ ಯೋ ವೇತ್ತಿ ತಸ್ಯ ಆತ್ಮವಿದಃ ಸಮ್ಯಗ್ದರ್ಶನೇನ ಅಪಾಸ್ತಮಿಥ್ಯಾಜ್ಞಾನಸ್ಯ ನಿಷ್ಕ್ರಿಯಾತ್ಮಸ್ವರೂಪಾವಸ್ಥಾನ-ಲಕ್ಷಣಂ ಸರ್ವಕರ್ಮಸಂನ್ಯಾಸಮ್ ಉಕ್ತ್ವಾ, ತದ್ವಿಪರೀತಸ್ಯ ಮಿಥ್ಯಾಜ್ಞಾನಮೂಲಕರ್ತೃತ್ವಾ-ಭಿಮಾನಪುರಃಸರಸ್ಯ ಸಕ್ರಿಯಾತ್ಮಸ್ವರೂಪಾವಸ್ಥಾನರೂಪಸ್ಯ ಕರ್ಮಯೋಗಸ್ಯ ಇಹ ಶಾಸ್ತ್ರೇ ತತ್ರ ತತ್ರ ಆತ್ಮಸ್ವರೂಪನಿರೂಪಣಪ್ರದೇಶೇಷು ಸಮ್ಯಗ್ಜ್ಞಾನಮಿಥ್ಯಾಜ್ಞಾನತತ್ಕಾರ್ಯವಿರೋಧಾತ್ ಽಭಾವಃ ಪ್ರತಿಪಾದ್ಯತೇ ॥ - ಗೀ. ಭಾ. ೫ ಅವತರಣಿಕೆ - ಭಾ-೩೨೩.

(೨) ತಸ್ಮಾತ್ ಅನಾತ್ಮವಿತ್ಕರ್ತೃಕಯೋರೇವ ಸಂನ್ಯಾಸಕರ್ಮಯೋಗಯೋಃ ನಿಃಶ್ರೇಯಸಕರತ್ವವಚನಮ್, ತದೀಯಾಚ್ಚ ಕರ್ಮಸಂನ್ಯಾಸಾತ್ ಪೂರ್ವೋಕ್ತಾತ್ಮವಿತ್ಕರ್ತೃಕ-ಸರ್ವಕರ್ಮಸಂನ್ಯಾಸವಿಲಕ್ಷಣಾತ್ ಸತ್ಯೇವ ಕರ್ತೃತ್ವವಿಜ್ಞಾನೇ ಕರ್ಮೈಕದೇಶವಿಷಯಾತ್ ಯಮನಿಯಮಾದಿಸಹಿತತ್ವೇನ ಚ ದುರನುಷ್ಠೇಯತ್ವಾತ್ ಸುಕರತ್ವೇನ ಚ ಕರ್ಮಯೋಗಸ್ಯ ವಿಶಿಷ್ಟತ್ವಾಭಿಧಾನಮ್ ॥ -ಗೀ. ಭಾ. ೫, ಅವತರಣಿಕೆ ಭಾ-೩೨೫.

(೩) ಯಸ್ತು ಪ್ರಾರಬ್ಧಕರ್ಮಾ ಸನ್ ಉತ್ತರಕಾಲಮ್ ಉತ್ಪನ್ನಾತ್ಮಸಮ್ಯಗ್ದರ್ಶನಃ ಸ್ಯಾತ್ ಸ ಸರ್ವಕರ್ಮಣಿ ಪ್ರಯೋಜನಮಪಶ್ಯನ್ ಸಸಾಧನಂ ಕರ್ಮ ಪರಿತ್ಯಜತ್ಯೇವ, ಸಃ ಕುತಶ್ಚಿತ್ ನಿಮಿತ್ತಾತ್ ಕರ್ಮಪರಿತ್ಯಾಗಾಸಂಭವೇ ಸತಿ ಕರ್ಮಣಿ ತತ್ಫಲೇ ಚ ಸಙ್ಗರಹಿತತಯಾ ಸ್ವಪ್ರಯೋಜನಾಭಾವಾತ್ ಲೋಕಸಙ್ಗ್ರಹಾರ್ಥಂ ಪೂರ್ವವತ್ ಕರ್ಮಣಿ ಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ । ಜ್ಞಾನಾಗ್ನಿದಗ್ಧಕರ್ಮತ್ವಾತ್ ತದೀಯಂ ಕರ್ಮ ಅಕರ್ಮೈವ ಸಂಪದ್ಯತೇ ॥

- ಗೀ. ಭಾ ೪-೨೦-೨೬೩.

(೪) ಯದಿ ವಸ್ತುಭೂತಾ ಗುಣಾಃ, ಯದಿ ವಾ ಅವಿದ್ಯಾಕಲ್ಪಿತಾಃ, ತದ್ಧರ್ಮಃ ಕರ್ಮ । ತತ್ ಆತ್ಮನಿ ಅವಿದ್ಯಾಧ್ಯಾರೋಪಿತಮೇವ ಇತಿ ಅವಿದ್ವಾನ್ '' ನ ಹಿ ಕಶ್ಚಿತ್ ಕ್ಷಣಮಪಿ ಅಶೇಷತಸ್ತ್ಯಕ್ತುಂ ಶಕ್ನೋತಿ'' (ಗೀ. ೩.೫) ಇತ್ಯುಕ್ತಮ್ । ವಿದ್ವಾಂಸ್ತು ಪುನರ್ವಿದ್ಯಯಾ ಅವಿದ್ಯಾಯಾಂ ನಿವೃತ್ತಾಯಾಂ ಶಕ್ನೋತ್ಯೇವ ಅಶೇಷತಃ ಕರ್ಮ ಪರಿತ್ಯಕ್ತುಮ್ । ಅವಿದ್ಯಾಧ್ಯಾರೋಪಿತಸ್ಯ ಶೇಷಾನುಪಪತ್ತೇಃ । ನ ಹಿ ತೈಮಿರಿಕದೃಷ್ಟ್ಯಾ ಅಧ್ಯಾರೋಪಿತಸ್ಯ ದ್ವಿಚನ್ದ್ರಾದೇಃ । ತಿಮಿರಾಪಗಮೇ ಶೇಷಃ ಅವತಿಷ್ಠತೇ ॥ - ಗೀ. ಭಾ. ೧೮-೪೮-೧೨೯೧.

(೫) ಯತ್ತು ಸಾಙ್ಖ್ಯೈಃ ಕರ್ಮತ್ಯಾಗೋಽಭ್ಯುಪಗಮ್ಯತೇ, ಕ್ರಿಯಾಕಾರಕಫಲಭೇದಬುದ್ಧೇಃ ಸತ್ಯತ್ವಾಭ್ಯುಪಗಮಾತ್ ತನ್ಮೃಷಾ । ಯಚ್ಚ ಬೌದ್ಧೈಃ ಶೂನ್ಯತಾಽಭ್ಯುಪಗಮಾತ್ ಅಕರ್ತೃತ್ವಮ್ ಅಭ್ಯುಪಗಮ್ಯತೇ ತದಪಿ ಅಸತ್ । ತದಭ್ಯುಪಗನ್ತುಃ ಸತ್ತ್ವಾಭ್ಯುಪಗಮಾತ್ । ಯಚ್ಚ ಅಜ್ಞೈರಲಸತಯಾ ಅಕರ್ತೃತ್ವಾಭ್ಯುಪಗಮಃ, ಸೋಽಪ್ಯಸತ್ । ಕಾರಕಬುದ್ಧೇರನಿವರ್ತಿತತ್ವಾತ್ ಪ್ರಮಾಣೇನ । ತಸ್ಮಾತ್ ವೇದಾನ್ತಪ್ರಮಾಣಜನಿತೈಕತ್ವಪ್ರತ್ಯಯವತ ಏವ ಕರ್ಮನಿವೃತ್ತಿಲಕ್ಷಣಂ ಪಾರಿವ್ರಾಜ್ಯಂ ಬ್ರಹ್ಮಸಂಸ್ಥತ್ವಂ ಚ ಇತಿ ಸಿದ್ಧಮ್ ॥

- ಛಾಂ. ಭಾ. ೨-೨೩-೧-೧೮೫.

೨೧೪. ಜ್ಞಾನವು ಯಾವಾಗ ಬೇಕಾದರೂ ಉಂಟಾಗಬಹುದು. ವಾಮದೇವನಿಗೆ ಗರ್ಭದಲ್ಲಿರುವಾಗಲೇ ಆಯಿತು ; ಪ್ರಜಾಪತಿಗೆ ಕಲ್ಪಾದಿಯಲ್ಲಿ ತಾನು ಒಬ್ಬನೇ ಇದ್ದರೂ ಯಾರ ಉಪದೇಶವೂ ಇಲ್ಲದೆಯೇ ಉಂಟಾಯಿತು. ಇದಕ್ಕೆ ಹಿಂದಿನ ಜನ್ಮದಲ್ಲಿ ಮಾಡಿದ್ದ ಕರ್ಮೋಪಾಸನಾದಿಗಳೇ ಕಾರಣ. ಇಲ್ಲಿ ಒಂದು ಶಂಕೆ : ಜ್ಞಾನಿಗೆ ಕರ್ಮದಿಂದ ಪ್ರಯೋಜನವಿಲ್ಲವೆಂಬುದೊಂದೇ ಸಂನ್ಯಾಸಕ್ಕೆ ಕಾರಣವಾಗಿರುವದರಿಂದ ಅದು ಅವನಿಗೆ ವಿಹಿತವಲ್ಲವೆಂದಾಯಿತು ; ಆದ್ದರಿಂದ ಗೃಹಸ್ಥಾಶ್ರಮದಲ್ಲಿಯೇ ಜ್ಞಾನವುಂಟಾದವನು ಸಂನ್ಯಾಸವನ್ನು ಮಾಡಿ ಅರಣ್ಯಕ್ಕೇ ಹೋಗಬೇಕಾದದ್ದೇನು ? ಕೃತಕೃತ್ಯನಾದ್ದರಿಂದ ಇನ್ನುಮೇಲೆ ಯಾವ ಕರ್ಮವನ್ನೂ ಮಾಡದೆ ಮನೆಯಲ್ಲಿಯೇ ಇರಬಹುದಲ್ಲವೆ ? ಅಥವಾ ಅವನು ವಿಧಿನಿಷೇಧಗಳಿಗೆ ಬದ್ಧನಲ್ಲವಾದ್ದರಿಂದ ತನಗೆ ಇಚ್ಛೆಬಂದಂತೆಯೂ ನಡೆಯಬಹುದೆಂದಾಗುವದಲ್ಲ ! ಈ ಶಂಕೆಗೆ ಪರಿಹಾರವೇನೆಂದರೆ : ಮನೆಯಲ್ಲಿಯೇ ಇರುವೆನೆಂದು ಇಚ್ಛಿಸುವದು ಕಾಮವಾಗುತ್ತದೆ ; ಜ್ಞಾನಿಗೆ ಕಾಮವಿಲ್ಲದ್ದರಿಂದ ಅವನು ಗೃಹದಲ್ಲಿಯೇ ಇರುವೆನೆಂದು ಸಂಕಲ್ಪಿಸಲಾರನು. ಇದರಂತೆ ಬ್ರಹ್ಮಚಾರಿಯಾಗಲಿ, ವಾನಪ್ರಸ್ಥನಾಗಿರಲಿ, ಜ್ಞಾನವುಂಟಾದರೆ ಆಮೇಲೂ ಅದೇ ಆಶ್ರಮದಲ್ಲಿರುವೆನೆಂದು ಸಂಕಲ್ಪಿಸುವ ಸಂಭವವಿಲ್ಲ. ಅವನಿಗೆ ಆಯಾ ಆಶ್ರಮಗಳ ಕರ್ಮದಲ್ಲಿ ಯಾವ ಪ್ರಯೋಜನವೂ ಕಾಣಿಸದೆ ಇರುವದರಿಂದ **ಏಷಣಾವ್ಯುತ್ಥಾನರೂಪವಾದ ಪಾರಿವ್ರಾಜ್ಯವೇ ಪ್ರಾಪ್ತವಾಗುವದು. ಪಾರಿವ್ರಾಜ್ಯವೆಂಬುದು ಏಷಣಾತ್ಯಾಗರೂಪವಾದ ಅಭಾವವೇ ಹೊರತು ಕ್ರಿಯೆಯಲ್ಲವಾದ್ದರಿಂದ**

''ಪಾರಿವ್ರಾಜ್ಯವೇ ಏಕೆ?'' ಎಂದು ಆಕ್ಷೇಪಿಸುವದಕ್ಕಾಗಲಿ ಇತರಕರ್ಮಗಳಿಗೆ ಅದನ್ನು ಹೋಲಿಸುವದಕ್ಕಾಗಲಿ ಬರುವದಿಲ್ಲ. ಏನಾದರೊಂದು ಕಾರಣದಿಂದ ಪಾರಿವ್ರಾಜ್ಯಕ್ಕೆ ಅಡ್ಡಿಯಾದರೂ **ಜ್ಞಾನಿಯು ಲೋಕಸಂಗ್ರಹಕ್ಕಾಗಿ ಆಯಾ ಕರ್ಮವನ್ನು ಮಾಡಿಕೊಂಡಿರುವನೇ ಹೊರತು ಯಥೇಷ್ಟಚೇಷ್ಟೆಯಲ್ಲಿರಲಾರನು.** ಏಕೆಂದರೆ ಯಥೇಷ್ಟ ಪ್ರವೃತ್ತಿಗೆ ದೇಹಾಭಿಮಾನವೇ ಕಾರಣವಾಗಿರುತ್ತದೆ ; ಆದರೆ ಜ್ಞಾನಿಗೆ ದೇಹಾಭಿಮಾನ ವಿರುವದಿಲ್ಲ. ಧರ್ಮವನ್ನೇ ಬಹಳ ಭಾರವೆಂದು ಬಿಟ್ಟಿರುವ ಜ್ಞಾನಿಯು ಅಧರ್ಮಕ್ಕೇಕೆ ಕೈಹಾಕುವನು ? ಮುಮುಕ್ಷುವಾದಾಗಲೇ ಧರ್ಮವನ್ನೂ ಅಧರ್ಮವನ್ನೂ ತ್ಯಜಿಸಿದಾತನು ಜ್ಞಾನತೃಪ್ತನಾದ ಬಳಿಕ ಮತ್ತೆ ಅಧರ್ಮವನ್ನು ಮಾಡಿಯಾನೆಂದು ಶಂಕಿಸುವದು ಎಂದಿಗೂ ಸರಿಯಲ್ಲ. ಹಸಿವು ಇರುವಾಗಲೇ ವಿಷಾನ್ನವನ್ನು ತಿನ್ನುವದಿಲ್ಲ ; ಮಿಷ್ಟಾನ್ನಭೋಜನದಿಂದ ಹಸಿವನ್ನಡಗಿಸಿಕೊಂಡವನು ತಿಂದಾನೆಯೆ ?' ರಾತ್ರಿಯಲ್ಲಿಯೇ ಭಾವಿಗೆ ಬೀಳದವನು ಸೂರ್ಯೋದಯವಾದ ಬಳಿಕ ಬಿದ್ದಾನೆಯೆ ? ಲೋಕಸಂಗ್ರಹಕ್ಕಾಗಿ ಮಾಡುವ ಕರ್ಮವೂ ನಿಜವಾಗಿ ಕರ್ಮವಲ್ಲ ; ಏಕೆಂದರೆ ಆಗ ಜ್ಞಾನಿಗೆ ಅಹಂಕಾರಫಲಾಭಿಸಂಧಿಗಳು ಇರುವದಿಲ್ಲ. ಕಾಮ್ಯಾಗ್ನಿಹೋತ್ರವನ್ನು ಮಾಡುತ್ತಿದ್ದವನಿಗೆ ಅರ್ಧಕರ್ಮವನ್ನು ಮಾಡಿದಾಗ ಕಾಮವು ಹೋದರೆ ಮುಂದಿನ ಕರ್ಮವು ಹೇಗೆ ಕಾಮ್ಯವಲ್ಲದೆಹೋಗುವದೋ ಹಾಗೆ ತತ್ತ್ವಜ್ಞಾನವಾದ ಬಳಿಕ ಮಾಡುವ ನಿತ್ಯಕರ್ಮವು ಕರ್ಮವಲ್ಲದೆಹೋಗುವದು. **ಆದ್ದರಿಂದ ಜ್ಞಾನಿಯು ಮಾಡುವ ಕರ್ಮವು ವೈದಿಕಕರ್ಮವಾಗಲಿ ಲೌಕಿಕಕರ್ಮವಾಗಲಿ ಅವನಿಗೆ ಅದರಲ್ಲಿ ಕರ್ತೃತ್ವಬುದ್ಧಿಯೇ ಇಲ್ಲದಿರುವದರಿಂದಲೂ ಸರ್ವತ್ರ ಬ್ರಹ್ಮಬುದ್ಧಿಯಿರುವದರಿಂದಲೂ ಅದು ಎಂದಿಗೂ ಕರ್ಮವೆನಿಸುವದಿಲ್ಲ.**

(೧) ಗರ್ಭಸ್ಥ ಏವ ಚ ವಾಮದೇವಃ ಪ್ರತಿಪೇದೇ ಬ್ರಹ್ಮಭಾವಮ್ ಇತಿ ವದನ್ತೀ ಜನ್ಮಾನ್ತರಸಞ್ಚಿತಾತ್ ಸಾಧನಾತ್ ಜನ್ಮಾನ್ತರೇ ವಿದ್ಯೋತ್ಪತ್ತಿಂ ದರ್ಶಯತಿ । ನ ಹಿ ಗರ್ಭಸ್ಥಸ್ಯೈವ ಐಹಿಕಂ ಕಿಂಚಿತ್ ಸಾಧನಂ ಸಂಭಾವ್ಯತೇ ॥ -ಸೂ. ಭಾ. ೩-೪-೫೧ -೪೯೮.

(೨) ಯಥಾ ಪುಣ್ಯಕರ್ಮೋದ್ಭವೈಃ ವಿವಿಕ್ತೈಃ ಕಾರ್ಯಕರಣೈಃ ಸಂಯುಕ್ತೇ ಜನ್ಮನಿ ಸತಿ ಪ್ರಜ್ಞಾಮೇಧಾಸ್ಮೃತಿವೈಶಾರದ್ಯಂ ದೃಷ್ಟಮ್ । ತಥಾ ಪ್ರಜಾಪತೇಃ ಧರ್ಮಜ್ಞಾನವೈರಾಗ್ಯೈಶ್ವರ್ಯವಿಪರೀತಹೇತುಸರ್ವಪಾಪ್ಮದಾಹಾತ್ ವಿಶುದ್ಧೈಃ ಕಾರ್ಯಕರಣೈಃ ಸಂಯುಕ್ತಮ್ ಉತ್ಕೃಷ್ಟಂ ಜನ್ಮ । ತದುದ್ಭವಂ ಚ ಅನುಪದಿಷ್ಟಮೇವ ಯುಕ್ತಮ್ ಏಕತ್ವದರ್ಶನಂ ಪ್ರಜಾಪತೇಃ ॥

- ಬೃ. ಭಾ. ೧-೪-೨-೧೦೪.

(೩) ಯಸ್ಯೈವ ಪುರುಷಸ್ಯ ಉಪಮರ್ದಿತಃ ಪ್ರತ್ಯಯೋ ಬ್ರಹ್ಮಕ್ಷತ್ರಾದ್ಯಾತ್ಮವಿಷಯಃ । ತಸ್ಯ ತತ್ಪ್ರತ್ಯಯಸಂನ್ಯಾಸಾತ್ ತತ್ಕೃತಾಕಾರ್ಯಾಣಾಂ ಕರ್ಮಣಾಂ ಕರ್ಮಸಾಧನಾನಾಂ ಚ ಅರ್ಥಪ್ರಾಪ್ತಶ್ಚ ಸಂನ್ಯಾಸಃ॥ - ಬೃ. ಭಾ. ೨-೪-೧-೩೫೩.

(೪) ವ್ಯುತ್ಥಾನಂ ತರ್ಹಿ ಅರ್ಥಪ್ರಾಪ್ತತ್ವಾತ್ ನ ಚೋದನಾರ್ಹಮಿತಿ । ಗಾರ್ಹಸ್ಥ್ಯೇ ಚೇತ್ ಪರಂ ಬ್ರಹ್ಮವಿಜ್ಞಾನಂ ಜಾತಂ ತತ್ರೈವಾಸ್ತು ಅಕುರ್ವತಃ ಆಸನಂ ನ ತತೋಽನ್ಯತ್ರ ಗಮನಮ್ ಇತಿ ಚೇತ್ । ನ । ಕಾಮಪ್ರಯುಕ್ತತ್ವಾತ್ ಗಾರ್ಹಸ್ಥ್ಯಸ್ಯ ॥ ''ಏತಾವಾನ್ ವೈ ಕಾಮಃ'' ಇತಿ, ''ಉಭೇ ಹ್ಯೇತೇ ಏಷಣೇ ಏವ '' ಇತ್ಯವಧಾರಣಾತ್ । ಕಾಮನಿಮಿತ್ತ ಪುತ್ರವಿತ್ತಾದಿ-ಸಂಬನ್ಧನಿಯಮಾಭಾವಮಾತ್ರಮ್, ನ ಹಿ ತತೋಽನ್ಯತ್ರ ಗಮನಂ ವ್ಯುತ್ಥಾನಮುಚ್ಯತೇ । ಅತೋ ನ ಗಾರ್ಹಸ್ಥ್ಯ ಏವ ಅಕುರ್ವತ ಆಸನಮ್ ಉತ್ಪನ್ನವಿದ್ಯಸ್ಯ । ಏತೇನ ಗುರುಶುಶ್ರೂಷಾತಪಸೋರಪಿ ಅಪ್ರತಿಪತ್ತಿರ್ವಿದುಷಃ ಸಿದ್ಧ ಃ । ...... ಸ್ವಗೃಹ ವಿಶೇಷಪರಿಗ್ರಹಾಭಾವೇ ಚ ಶರೀರಧಾರಣಮಾತ್ರಪ್ರಯುಕ್ತಾಶನಾಚ್ಛಾದನಾರ್ಥಿನಃ, ಸ್ವಪರಿಗ್ರಹ ವಿಶೇಷಾಭಾವೇ ಅರ್ಥಾತ್ ಭಿಕ್ಷುತ್ವಮೇವ ॥ - ಐ. ಭಾ. ಅವತರಣಿಕೆ-೧೪.

(೫) ಏವಂ ತರ್ಹಿ ಸರ್ವಃ ಸ್ವಾಶ್ರಮಸ್ಥಃ ಉತ್ಪನ್ನೈಕತ್ವಪ್ರತ್ಯಯಃ ಪರಿವ್ರಾಟ್ ಇತಿ ಚೇತ್ । ನ । ಸ್ವಸ್ವಾಮಿತ್ವಭೇದಬುದ್ಧ್ಯನಿವೃತ್ತಕರ್ಮಾರ್ಥತ್ವಾಚ್ಚ ಇತರಾಶ್ರಮಾಣಾಮ್ । 'ಅಥ ಕರ್ಮ ಕುರ್ವೀಯ ' ಇತಿ ಶ್ರುತೇಃ ॥ - ಛಾಂ. ಭಾ. ೨-೨೩-೧-೧೮೧.

(೬) ಯಥಾಕಾಮಿತ್ವಂ ತು ವಿದುಷೋಽತ್ಯನ್ತಮಪ್ರಾಪ್ತಮ್ । ಅತ್ಯನ್ತಮೂಢ ವಿಷಯತ್ವೇನ ಅವಗಮಾತ್ । ತಥಾ ಶಾಸ್ತ್ರಚೋದಿತಮಪಿ ಕರ್ಮ 'ಆತ್ಮವಿದೋಽಪ್ರಾಪ್ತಂ ಗುರುಭಾರತಯಾ ಅವಗಮ್ಯತೇ । ಕಿಮುತ ಅತ್ಯನ್ತಾವಿವೇಕನಿಮಿತ್ತಂ ಯಥಾಕಾಮಿತ್ವಮ್ । ನ ಹಿ ಉನ್ಮಾದತಿಮಿರ ದೃಷ್ಟ್ಯುಪಲಬ್ಧಂ ವಸ್ತು ತದಪಗಮೇಽಪಿ ತಥೈವ ಸ್ಯಾತ್ ।। ಉನ್ಮಾದ-ತಿಮಿರದೃಷ್ಟಿನಿಮಿತ್ತತ್ವಾದೇವ ತಸ್ಯ ॥ - ಐ. ಭಾ. ಅವತರಣಿಕೆ-೨೫.

(೭) ನ ಚ ಪ್ರತಿಷಿದ್ಧಸೇವಾಪ್ರಾಪ್ತಿಃ, ಏಕತ್ವಪ್ರತ್ಯಯೋತ್ಪತ್ತೇಃ ಪ್ರಾಗೇವಾಪ್ರತಿಷಿದ್ಧತ್ವಾತ್। ನ ಹಿ ರಾತ್ರೌ ಕೂಪೇ ಕಣ್ಟಕೇ ವಾ ಪತಿತಃ ಉದಿತೇಽಪಿ ಸವಿತರಿ ಪತತಿ ತಸ್ಮಿನ್ನೇವ ॥

- ಛಾಂ. ಭಾ. ೨-೨೩-೧-೧೮೨.

(೮) ಯೋ ಹಿ ಯಸ್ಮಾದ್ವಿರಕ್ತಃ ಸ್ಯಾತ್ ನಾಸೌ ತಸ್ಮೈ ಪ್ರವರ್ತತೇ ।

ಲೋಕತ್ರಯಾದ್ವಿರಕ್ತತ್ವಾತ್ ಮುಮುಕ್ಷುಃ ಕಿಮಿತೀಹತೇ ॥

ಕ್ಷುಧಯಾ ಪೀಡ್ಯಮಾನೋಽಪಿ ನ ವಿಷಂ ಹ್ಯತ್ತುಮಿಚ್ಛತಿ ।

ಮಿಷ್ಟಾನ್ನಧ್ವಸ್ತತೃಡ್ಜಾನನ್ನಾಮೂಢಸ್ತಜ್ಜಿಘತ್ಸತಿ ॥ - ಉಪ. ೧೮-೨೯, ೨೨೦.

(೯) ಯಸ್ಯ ತು ಅಜ್ಞಾನಾತ್ ರಾಗದಿದೋಷತೋ ವಾ ಕರ್ಮಣಿ ಪ್ರವೃತ್ತಸ್ಯ ಯಜ್ಞೇನ ದಾನೇನ ತಪಸಾ ವಾ ವಿಶುದ್ಧಸತ್ತ್ವಸ್ಯ ಜ್ಞಾನಮುತ್ಪನ್ನಮ್ ಪರಮಾರ್ಥತತ್ತ್ವವಿಷಯಮ್ 'ಏಕಮೇವೇದಂ, ಸರ್ವಂ ಬ್ರಹ್ಮ ಅಕರ್ತೃಚ ' ಇತಿ ತಸ್ಯ ಕರ್ಮಣಿ ಕರ್ಮಪ್ರಯೋಜನೇ ಚ ನಿವೃತ್ತೇಽಪಿ ಲೋಕಸಙ್ಗ್ರಹಾರ್ಥಂ ಯತ್ರ ಪೂರ್ವಂ ಯಥಾ ಪ್ರವೃತ್ತಃ ತಥೈವ ಕರ್ಮಣಿ ಪ್ರವೃತ್ತಸ್ಯ ಯತ್ ಪ್ರವೃತ್ತಿ ರೂಪಂ ದೃಶ್ಯತೇ ನ ತತ್ ಕರ್ಮ, ಯೇನ ಬುದ್ಧೇಃ ಸಮುಚ್ಚಯಃ ಸ್ಯಾತ್। ಯಥಾ ಭಗವತೋ ವಾಸುದೇವಸ್ಯ ಕ್ಷತ್ರಧರ್ಮಚೇಷ್ಟಿತಂ ನ ಜ್ಞಾನೇನ ಸಮುಚ್ಚೀಯತೇ

ನಾಪಿ ಪುರುಷಾರ್ಥಸಿದ್ಧಯೇ, ತದ್ವತ್ । ತತ್ಫಲಾಭಿಸನ್ಧ್ಯಹಙ್ಕಾರಾಭಾವಸ್ಯ ತುಲ್ಯತ್ವಾತ್ ವಿದುಷಃ । ತತ್ತ್ವವಿತ್ತು ನಾಹಂ ಕರೋಮೀತಿ ಮನ್ಯತೇ, ನ ಚ ತತ್ಫಲಮ್ ಅಭಿಸನ್ಧತ್ತೇ । ಯಥಾ ಚ ಸ್ವರ್ಗಾದಿಕಾಮಾರ್ಥಿನಃ ಅಗ್ನಿಹೋತ್ರಾದಿಕರ್ಮಲಕ್ಷಣಧರ್ಮಾನುಷ್ಠಾನಾಯ ಆಹಿತಾಗ್ನೇಃ । ಕಾಮ್ಯೇ ಏವ ಅಗ್ನಿಹೋತ್ರಾದೌ ಪ್ರವೃತ್ತಸ್ಯ ನಾಮಿ ಕೃತೇ ವಿನಷ್ಟೇಽಪಿ ಕಾಮೇ ತದೇವ ಅಗ್ನಿಹೋತ್ರಾದಿ ಅನುತಿಷ್ಠತೋಽಪಿ ನ ತತ್ ಕಾಮ್ಯಮಗ್ನಿಹೋತ್ರಾದಿ ಭವತಿ ॥

-ಗೀ. ಭಾ. ೨-೧೦-೧೨.

(೧೦) ನೈವ ಕಿಂಚಿತ್ ಕರೋಮಿ ಇತಿ ಯುಕ್ತಃ ಸಮಾಹಿತಃ ಸನ್ ಮನ್ಯೇತ ಚಿನ್ತಯೇತ್ ತತ್ತ್ವವಿತ್ ಆತ್ಮವಿತ್ । ಆತ್ಮನೋ ಯಾಥಾತ್ಮ್ಯಂ ತತ್ತ್ವಂ ವೇತ್ತಿ ಇತಿ ತತ್ತ್ವವಿತ್ । ಪರಮಾರ್ಥದರ್ಶೀ ಇತ್ಯರ್ಥಃ ....... ತಸ್ಯೈವಂ ತತ್ತ್ವವಿದಃ ಸರ್ವಕಾರ್ಯಕರಣಚೇಷ್ಟಾಸು ಕರ್ಮಸು ಅಕರ್ಮೈವ ಪಶ್ಯತಃ ಸಮ್ಯಗ್ದರ್ಶಿನಃ ಸರ್ವಕರ್ಮಸಂನ್ಯಾಸೇ ಏವ ಅಧಿಕಾರಃ । ಕರ್ಮಣೋಽಭಾವದರ್ಶನಾತ್। ನ ಹಿ ಮೃಗತೃಷ್ಣಿಕಾಯಾಮ್ ಉದಕಬುದ್ಧ್ಯಾ ಪಾನಾಯ ಪ್ರವೃತ್ತಃ ಉದಕಾಭಾವಜ್ಞಾನೇಽಪಿ ತತ್ರೈವ ಪಾನಪ್ರಯೋಜನಾಯ ಪ್ರವರ್ತತೇ ॥ - ಗೀ. ಭಾ. ೫-೮-೩೪೨.

೨೧೫. ಜ್ಞಾನಿಗಳಾದ ಸಂನ್ಯಾಸಿಗಳಿಗೆ ಮತ್ತೆ ಯಾವ ಕರ್ಮವೂ ಇಲ್ಲದಿದ್ದರೂ ಭಿಕ್ಷಾಚರಣ, ಶೌಚ- ಮುಂತಾದವುಗಳಿರುತ್ತವೆ. ಅವರು ಭೋಜನಾದಿಗಳನ್ನಾದರೂ ಮಾಡಿಯೇ ತೀರುತ್ತಾರೆ. ಹಾಗೆಯೇ ಗೃಹಸ್ಥಾದಿಗಳೂ ಜ್ಞಾನವಾದ ಬಳಿಕ ಅಗ್ನಿಹೋತ್ರಾದಿಕರ್ಮಗಳನ್ನು ಮಾಡುತ್ತಿರಬಹುದಲ್ಲ ? ಸಂನ್ಯಾಸಿಗಳಿಗೆ ಹೇಗೆ ಭೋಜನಾದಿಗಳಲ್ಲಿ ಪ್ರವೃತ್ತಿಯುಂಟಾಗಿಯೇ ತೀರುವದೋ ಹಾಗೆಯೇ ಗೃಹಸ್ಥರಿಗೂ ತಮ್ಮ ಕರ್ಮಗಳಲ್ಲಿ ಪ್ರವೃತ್ತಿಯುಂಟಾಗುವದು ಎಂದೇಕೆ ಒಪ್ಪಬಾರದು ? - ಎಂಬುದೊಂದು ಜ್ಞಾನಕರ್ಮಸಮುಚ್ಚಯವಾದಿಗಳ ಶಂಕೆ.

ಇದಕ್ಕೆ ಉತ್ತರವನ್ನು ಹೇಳಿದಂತೆಯೇ ಆಗಿದೆಯಾದರೂ ಆ ಉತ್ತರವನ್ನು ಇನ್ನಷ್ಟು ಸ್ಪಷ್ಟಪಡಿಸುವದಕ್ಕಾಗಿ ಇಲ್ಲಿ ಮತ್ತೆ ಹೇಳುವೆವು. ಸಂನ್ಯಾಸಿಯಲ್ಲಿ ಕಾಣಬರುವ ಭಿಕ್ಷಾಟನಾದಿನಿಯಮವು ಪ್ರತಿಪತ್ತಿಕರ್ಮದಂತೆ , ಹೋಮಮಾಡಿದಮೇಲೆ ಭಕ್ಷಣ ಮಾಡಬೇಕು ಎಂಬ ರೀತಿಯ ಕರ್ಮವು. ಪ್ರತಿಪತ್ತಿಕರ್ಮದಿಂದ ಪುರುಷಸಂಸ್ಕಾರವಾಗುತ್ತದೆ, ಆದರೆ ಭಿಕ್ಷಾಟನಾದಿಗಳಿಂದ ಅಂಥ ಸಂಸ್ಕಾರವೇನೂ ಇಲ್ಲ. ಇದಲ್ಲದೆ ಭಿಕ್ಷುವಿನ ಭಿಕ್ಷಾಟನಾದಿಗಳು ನಿಯಮಕ್ರಿಯೆಯಲ್ಲ ; ಭಿಕ್ಷಾಟನಾದಿಗಳನ್ನು ಮಾಡಿಯೇತೀರಬೇಕೆಂಬುದೇನೂ ಇಲ್ಲ ; ಅದು ಹಸಿವು ಮುಂತಾದ ಕೇವಲ ದೋಷದಿಂದಾಗುವ ಪ್ರವೃತ್ತಿ. ಶಾಸ್ತ್ರೀಯಪ್ರವೃತ್ತಿಯಂತೆ ದೇಶಕಾಲಾದಿಗಳ ಕಟ್ಟಿಗೆ ಒಳಪಟ್ಟಿಲ್ಲ. ಆದ್ದರಿಂದ **ಭಿಕ್ಷಾಟನಾದಿಗಳನ್ನು ಕಾಮಾದಿಪ್ರಯುಕ್ತವಾಗಿರುವ ಗೃಹಸ್ಥನ ಪ್ರವೃತ್ತಿಗೆ ದೃಷ್ಟಾಂತವಾಗಿ ಕೊಡುವದಕ್ಕೆ ಬರುವದಿಲ್ಲ.**

(೧) ಪರಿವ್ರಾಜಕಾನಾಂ ಭಿಕ್ಷಾಚರಣಾದಿವತ್ ಉತ್ಪನ್ನೈಕತ್ವಪ್ರತ್ಯಯಾನಾಮಪಿ ಗೃಹಸ್ಥಾದೀನಾಮ್ ಅಗ್ನಿಹೋತ್ರಾದಿಕರ್ಮಾನಿವೃತ್ತಿಃ ಇತಿ ಚೇತ್ । ನ । ಪ್ರಾಮಾಣ್ಯಚಿನ್ತಾಯಾಂ ಪುರುಷಪ್ರವೃತ್ತೇಃ ಅದೃಷ್ಟಾನ್ತತ್ವಾತ್ । ನ ಹಿ ನಾಭಿಚರೇತ್ ಇತಿ ಪ್ರತಿಷಿದ್ಧಮಪಿ ಅಭಿಚರಣಂ ಕಶ್ಚಿತ್ ಕುರ್ವನ್ ದೃಷ್ಟಃ ಇತಿ ಶತ್ರೌ ದ್ವೇಷರಹಿತೇನಾಪಿ ವಿವೇಕಿನಾ ಅಭಿಚರಣಂ ಕ್ರಿಯತೇ । ನ ಚ ಕರ್ಮ ವಿಧಿಪ್ರವೃತ್ತಿನಿಮಿತ್ತೇ ಭೇದಪ್ರತ್ಯಯೇ ಬಾಧಿತೇ ಅಗ್ನಿಹೋತ್ರಾದೌ ಪ್ರವರ್ತಕಂ ನಿಮಿತ್ತಮಸ್ತಿ । ಪರಿವ್ರಾಜಕಸ್ಯೇವ ಭಿಕ್ಷಾಚರಣಾದೌ ಬುಭುಕ್ಷಾದಿಪ್ರವರ್ತಕಮ್ ॥

- ಛಾಂ. ಭಾ. ೨-೨೩-೧-೧೮೧.

(೨) ನ ಹಿ ದೇಶಕಾಲಾದ್ಯನವಚ್ಛಿನ್ನಾಸ್ಥೂಲಾದ್ವಯಾದಿಬ್ರಹ್ಮಪ್ರತ್ಯಯಧಾರಿಣಃ ಕರ್ಮಾವಸರೋಽಸ್ತಿ । ಭೋಜನಾದಿಪ್ರವೃತ್ತ್ಯವಸರವತ್ ಸ್ಯಾತ್ ಇತಿ ಚೇತ್ । ನ । ಅವಿದ್ಯಾದಿಕೇವಲ-ದೋಷನಿಮಿತ್ತತ್ವಾತ್ ಭೋಜನಾದಿಪ್ರವೃತ್ತೇಃ ಅವಶ್ಯಕತ್ವಾನುಪಪತ್ತೇಃ । ನ ತು ತಥಾ ಅನಿಯತಂ ಕದಾಚಿತ್ ಕ್ರಿಯತೇ ಕದಾಚಿತ್ ನ ಕ್ರಿಯತೇ ಚ ಇತಿ ನಿತ್ಯಂ ಕರ್ಮ ಉಪಪದ್ಯತೇ । ಕೇವಲದೋಷನಿಮಿತ್ತತ್ವಾತ್ತು ಭೋಜನಾದಿಕರ್ಮಣಃ ಅನಿಯತತ್ವಂ ಸ್ಯಾತ್ । ದೋಷೋದ್ಭವಾಭಿಭವಯೋಃ ಅನಿಯತತ್ವಾತ್ ಕಾಮಾನಾಮಿವ ಕಾಮ್ಯೇಷು । ಶಾಸ್ತ್ರನಿಮಿತ್ತಕಾಲಾದ್ಯಪೇಕ್ಷತ್ವಾಚ್ಚ ನಿತ್ಯಾನಾಮ್ ಅನಿಯತತ್ವಾನುಪಪತ್ತಿಃ । ದೋಷನಿಮಿತ್ತತ್ವೇ ಸತ್ಯಪಿ ಯಥಾ ಕಾಮ್ಯಾಗ್ನಿಹೋತ್ರಸ್ಯ ಶಾಸ್ತ್ರವಿಹಿತತ್ವಾತ್ ಸಾಯಂಪ್ರಾತಃಕಾಲಾದ್ಯಪೇಕ್ಷತ್ವಮ್ ಏವಮ್ ॥

- ಬೃ. ಭಾ. ೧-೩-೧-೫೬.

(೩) ತತ್ಭೋಜನಾದಿಪ್ರವೃತ್ತೌ ನಿಯಮವತ್ ಸ್ಯಾತ್ ಇತಿ ಚೇತ್ । ನ । ನಿಯಮಸ್ಯ ಅಕ್ರಿಯಾತ್ವಾತ್ । ಕ್ರಿಯಾಯಾಶ್ಚ ಅಪ್ರಯೋಜಕತ್ವಾತ್ ನಾಸೌ ಜ್ಞಾನಸ್ಯ ಅಪವಾದಕರಃ ॥

- ಬೃ. ಭಾ. ೧-೩-೧-೫೬.

(೪) ಅಥಾಪಿ ಸ್ಯಾತ್ ಏಷಣಾಭ್ಯೋ ವ್ಯುತ್ಥಾನಂ ವಿಧಾಯ ಪುನಃ ಏಷಣೈಕದೇಶಂ ಭಿಕ್ಷಾಚರ್ಯಂ ಗ್ರಾಹಯನ್ತೀ ತತ್ಸಂಬದ್ಧಮ್ ಅನ್ಯದಪಿ ಗ್ರಾಹಯತಿ ಇತಿ ಚೇತ್ । ನ । ಭಿಕ್ಷಾಚರ್ಯಸ್ಯ ಅಪ್ರಯೋಜಕತ್ವಾತ್ ಹುತಶೋತ್ತರಕಾಲಭಕ್ಷಣವತ್ । ಶೇಷಪ್ರತಿಪತ್ತಿ-ಕರ್ಮತ್ವಾತ್ ಅಪ್ರಯೋಜಕಂ ಹಿ ತತ್ । ಅಸಂಸ್ಕಾರಕತ್ವಾಚ್ಚ । ಭಕ್ಷಣಂ ಪುರುಷಸಂಸ್ಕಾರಕಮಪಿ ಸ್ಯಾತ್ ; ನ ತು ಭಿಕ್ಷಾಚರ್ಯಮ್ । ನಿಯಮಾದೃಷ್ಟಸ್ಯಾಪಿ ಬ್ರಹ್ಮವಿದೋಽನಿಷ್ಟತ್ವಾತ್ । ನಿಯಮಾದೃಷ್ಟಸ್ಯ ಅನಿಷ್ಟತ್ವೇ ಕಿಂ ಭಿಕ್ಷಾಚರ್ಯೇಣ ಇತಿ ಚೇತ್ । ನ । ಅನ್ಯಸಾಧನಾತ್ ವ್ಯುತ್ಥಾನಸ್ಯ ವಿಹಿತತ್ವಾತ್ । ತಥಾಪಿ ಕಿಂ ತೇನ ಇತಿ ಚೇತ್ । ಯದಿ (ನ) ಸ್ಯಾತ್ ಬಾಢಮ್, ಅಭ್ಯುಪಗಮ್ಯತೇ ಹಿ ತತ್ ॥ - ಬೃ ಭಾ. ೩-೫-೧-೬೧.

೨೧೬. ಸಂನ್ಯಾಸಿಗಳಿಗೂ ಅಧ್ಯಯನ, ದೇವತಾರ್ಚನ - ಇವೇ ಮುಂತಾದ ಕರ್ಮಗಳು ವಿಹಿತವಾಗಿರುವದು ಸ್ಮೃತಿಯಲ್ಲಿ ಕಂಡುಬರುತ್ತದೆ. ಆದರೆ ಗುರೂಪಾಸನೆ, ಅಧ್ಯಯನ, ಭೋಜನ, ಆಚಮನ- ಮುಂತಾದ ಕರ್ಮಗಳಲ್ಲಿ ಯಜ್ಞೋಪವೀತಾದಿಸಾಧನಗಳು ಅವಶ್ಯವೆಂದು ಸ್ಮೃತಿಯಲ್ಲಿ ಹೇಳಿರುತ್ತದೆ. ಆದ್ದರಿಂದ

ಯಜ್ಞೋಪವೀತಾದಿಸಾಧನಗಳು - ಅವುಗಳಿಂದಾಗಬೇಕಾಗಿರುವ ಕರ್ಮಗಳು, ಆಶ್ರಮದ ಲಿಙ್ಗ- ಇವುಗಳನ್ನು ಬಿಟ್ಟೇ ಏಷಣಾತ್ಯಾಗವನ್ನು ಮಾಡಬೇಕೇ ಹೊರತು ಶ್ರುತಿಸ್ಮೃತಿವಿಹಿತವಾದ ಎಲ್ಲಾ ಕರ್ಮಗಳನ್ನೂ ಕರ್ಮಸಾಧನಗಳನ್ನೂ ಬಿಡತಕ್ಕದ್ದು ಯುಕ್ತವಲ್ಲ ಎಂದು ಕೆಲವರು ವಾದಿಸಿದ್ದರು. ಆದರೆ **ಏಷಣೆಗಳನ್ನೆಲ್ಲ ಸಂನ್ಯಾಸ ಮಾಡುವ ಪಾರಿವ್ರಾಜ್ಯವಲ್ಲದೆ, ಸಂನ್ಯಾಸಾಶ್ರಮರೂಪವಾದ ಪಾರಿವ್ರಾಜ್ಯವೊಂದು ಬೇರೆ ಇದೆ. ಅದಕ್ಕೆ ಬ್ರಹ್ಮಲೋಕವೇ ಮುಂತಾದ ಫಲವಿದೆ. ಆ ಆಶ್ರಮದಲ್ಲಿ ಯಜ್ಞೋಪ-ವೀತ, ನಿವೀತ, ಪ್ರಾಚೀನಾವೀತಗಳೂ ಅವುಗಳಿಂದಾಗುವ ದೈವಮಾನುಷಪಿತ್ರ್ಯ ಕರ್ಮಗಳೂ ಸಂನ್ಯಾಸಾಶ್ರಮಲಿಂಗದ ಧಾರಣವೂ ಅವಶ್ಯವಾಗಿರುತ್ತದೆ.** ಆದರೆ ಆತ್ಮಜ್ಞಾನಕ್ಕೆ ಅಂಗವಾಗಿರುವದು ಪರಮಹಂಸಪಾರಿ ವ್ರಾಜ್ಯವೇ ; ಅದರಲ್ಲಿ ಎಲ್ಲಾ ಏಷಣೆಗಳನ್ನೂ ಬಿಟ್ಟುಬಿಡಬೇಕು. ಏಕೆಂದರೆ ಏಷಣೆಯೆಂಬುದೆಲ್ಲವೂ ಅವಿದ್ಯಾ ವಿಷಯವಾಗಿರುತ್ತದೆ. ಆದ್ದರಿಂದ **ಯಜ್ಞೋ ಪವೀತಾದಿಸಾಧನಗಳನ್ನು ಆಶ್ರಯಿಸು ವದೂ ಸಂನ್ಯಾಸಲಿಂಗವನ್ನು ಧರಿಸುವದೂ ಅಮುಮುಕ್ಷುಗಳಾದ ಅವಿದ್ವತ್ಕರ್ತೃಕವಾದ ಪಾರಿವ್ರಾಜ್ಯಾಂತರ** ವಿಷಯವು ಎಂದು ಆಚಾರ್ಯರು ಸಮಾಧಾನವನ್ನು ಹೇಳಿರು ತ್ತಾರೆ. ಆದ್ದರಿಂದ ಮುಮುಕ್ಷುಗಳಾದವರು ಯಾರೇ ಆಗಲಿ, ಈ ಪರಮಹಂಸ ಪಾರಿವ್ರಾಜ್ಯವನ್ನೇ ಅಂಗೀಕರಿಸಬೇಕು , ಜ್ಞಾನವನ್ನು ಪಡೆದ ಬಳಿಕವಂತೂ ಮಾಡ ಬೇಕಾದದ್ದು ಯಾವದೂ ಇರುವದಿಲ್ಲ - ಎಂಬುದೇ ಕಟ್ಟಕಡೆಯ ಸಿದ್ಧಾಂತ.

(೧) ''ವ್ಯುತ್ಥಾಯ ಭಿಕ್ಷಾಚರ್ಯಂ ಚರನ್ತಿ'' ಇತ್ಯನೇನ ಪಾರಿವ್ರಾಜ್ಯಂ ವಿಧೀಯತೇ । ಪಾರಿವ್ರಾಜ್ಯಾಶ್ರಮೇ ಚ ಯಜ್ಞೋಪವೀತಾದಿಸಾಧನಾನಿ ವಿಹಿತಾನಿ । ಲಿಙ್ಗಂ ಚ ಶ್ರುತಿಭಿಃ ಸ್ಮೃತಿಭಿಶ್ಚ । ಅತಃ ತದ್ವರ್ಜಯಿತ್ವಾ ಅನ್ಯಸ್ಮಾತ್ ವ್ಯುತ್ಥಾನಂ ಏಷಣಾತ್ವೇಽಪಿ ಇತಿ ಚೇತ್ । ನ । ವಿಜ್ಞಾನಸಮಾನಕರ್ತೃಕಾತ್ ಪಾರಿವ್ರಾಜ್ಯಾತ್ ಏಷಣಾವ್ಯುತ್ಥಾನಲಕ್ಷಣಾತ್ ಪಾರಿವ್ರಾಜ್ಯಾನ್ತರೋಪಪತ್ತೇಃ ಯದ್ಧಿ ತದೇಷಣಾಭ್ಯೋ ವ್ಯುತ್ಥಾನಲಕ್ಷಣಂ ಪಾರಿವ್ರಾಜ್ಯಂ ತತ್ ಆತ್ಮಜ್ಞಾನಾಙ್ಗಮ್ । ಆತ್ಮಜ್ಞಾನವಿರೋಧ್ಯೇಷಣಾಪರಿತ್ಯಾಗರೂಪತ್ವಾತ್ । ಅವಿದ್ಯಾವಿಷಯತ್ವಾಚ್ಚ ಏಷಣಾಯಾಃ । ತದ್ವ್ಯತಿರೇಕೇಣ ಚ ಅಸ್ತಿ ಆಶ್ರಮರೂಪಂ ಪಾರಿವ್ರಾಜ್ಯಂ ಬ್ರಹ್ಮಲೋಕಾದಿಫಲಪ್ರಾಪ್ತಿಸಾಧನಮ್ । ಯದ್ವಿಷಯಂ ಯಜ್ಞೋಪವೀತಾದಿಸಾಧನವಿಧಾನಮ್, ಲಿಙ್ಗವಿಧಾನಂ ಚ । ನ ಚ ಏಷಣಾರೂಪಸಾಧನೋ-ಪಾದಾನಸ್ಯ ಆಶ್ರಮಧರ್ಮಮಾತ್ರೇಣ ಪಾರಿವ್ರಾಜ್ಯಾನ್ತರೇ ವಿಷಯೇ ಸಂಭವತಿ ಸತಿ ಸರ್ವೋಪನಿಷದ್ವಿಹಿತಸ್ಯ ಆತ್ಮಜ್ಞಾನಸ್ಯ ಬಾಧನಂ ಯುಕ್ತಮ್ । ಯಜ್ಞೋಪವೀತಾದ್ಯವಿದ್ಯಾ-ವಿಷಯೈಷಣಾರೂಪಸಾಧನೋಪಾದಿತ್ಸಾಯಾಂ ಚ ಅವಶ್ಯಮ್ ಅಸಾಧನಫಲರೂಪಸ್ಯ ಅಶನಾಯಾದಿಸಂಸಾರಧರ್ಮವರ್ಜಿತಸ್ಯ 'ಅಹಂ ಬ್ರಹ್ಮಾಸ್ಮಿ' ಇತಿ ವಿಜ್ಞಾನಂ ಬಾಧ್ಯತೇ । ನ ಚ ತದ್ಬಾಧನಂ ಯುಕ್ತಮ್ । ಸರ್ವೋಪನಿಷದಾಂ ತದರ್ಥಪರತ್ವಾತ್ ॥

- ಬೃ. ಭಾ. ೩-೫-೧-೬೦, ೬೧.

(೨) ಅವಿದುಷಾಪಿ ಮುಮುಕ್ಷುಣಾ ಪಾರಿವ್ರಾಜ್ಯಂ ಕರ್ತವ್ಯಮೇವ । ತಥಾ ಚ 'ಶಾನ್ತೋ ದಾನ್ತಃ' ಇತ್ಯಾದಿವಚನಂ ಪ್ರಮಾಣಮ್ । ಶಮದಮಾದೀನಾಂ ಚ ಆತ್ಮದರ್ಶನಸಾಧನಾನಾಮ್ ಅನ್ಯಾಶ್ರಮೇಷು ಅನುಪಪತ್ತೇಃ ॥ - ಐ. ಭಾ. ಅವತರಣಿಕೆ -೧೮.

(೩) ''ನಿರಾಶಿಷಮನಾರಮ್ಭಂ ನಿರ್ನಮಸ್ಕಾರಮಸ್ತುತಿಮ್ । ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ'' ॥ ಇತಿ ಸರ್ವಕರ್ಮಾಭಾವಂ ದರ್ಶಯತಿ ಸ್ಮೃತಿರ್ವಿದುಷಃ । 'ವಿದ್ವಾಲ್ಲಿಙ್ಗವರ್ಜಿತಃ' 'ತಸ್ಮಾದಲಿಙ್ಗೋ ಧರ್ಮಜ್ಞಃ' ಇತಿ ಚ । ತಸ್ಮಾತ್ ಪರಮಹಂಸಪಾರಿವ್ರಾಜ್ಯಮೇವ ವ್ಯುತ್ಥಾನಲಕ್ಷಣಂ ಪ್ರತಿಪದ್ಯೇತ ಆತ್ಮವಿತ್ ಸರ್ವಕರ್ಮಸಾಧನಪರಿತ್ಯಾಗರೂಪಮ್ ಇತಿ॥ - ಬೃ.ಭಾ. ೩-೫-೧-೬೧.

(೪) ಸರ್ವಾಣಿ ಕರ್ಮಾಣಿ ಸರ್ವಕರ್ಮಾಣಿ ಮನಸಾ ಸಂನ್ಯಸ್ಯ ಪರಿತ್ಯಜ್ಯ । ನಿತ್ಯಂ ನೈಮಿತ್ತಿಕಂ ಕಾಮ್ಯಂ ಪ್ರತಿಷಿದ್ಧಂ ಚ ತಾನಿ ಸರ್ವಾಣಿ ಕರ್ಮಾಣಿ ಮನಸಾ ವಿವೇಕಬುದ್ಧ್ಯಾ ಕರ್ಮಾದಾವಕರ್ಮಸಂದರ್ಶನೇನ ಸಂತ್ಯಜ್ಯ ಇತ್ಯರ್ಥಃ। ಆಸ್ತೇ ತಿಷ್ಠತಿ ಸುಖಮ್ । ತ್ಯಕ್ತವಾಙ್ಮನಃಕಾಯಚೇಷ್ಟೋ ನಿರಾಯಾಸಃ ಪ್ರಸನ್ನಚಿತ್ತಃ ಆತ್ಮನೋಽನ್ಯತ್ರ ನಿವೃತ್ತಸರ್ವಬಾಹ್ಯಪ್ರಯೋಜನಃ ಇತಿ 'ಸುಖಮ್ ಆಸ್ತೇ' ಇತ್ಯುಚ್ಯತೇ । ವಶೀ ಜಿತೇನ್ದ್ರಿಯ ಇತ್ಯರ್ಥಃ ॥ - ಗೀ. ಭಾ. ೫-೧೩-೩೪೯.

(೫) ಯದ್ಯಪಿ ಕಾರ್ಯಕರಣಕರ್ಮಾಣಿ ಅವಿದ್ಯಯಾ ಆತ್ಮನಿ ಅಧ್ಯಾರೋಪಿತಾನಿ ಸಂನ್ಯಸ್ಯ ಆಸ್ತೇ ಇತ್ಯುಕ್ತಮ್, ತಥಾಪಿ ಆತ್ಮಸಮವಾಯಿ ತು ಕರ್ತೃತ್ವಂ ಕಾರಯಿತೃತ್ವಂ ಚ ಸ್ಯಾತ್ ಇತ್ಯಾಶಙ್ಕ್ಯ ಆಹ 'ನೈವ ಕುರ್ವನ್ ಸ್ವಯಮ್, ನ ಚ ಕಾರ್ಯಕರಣಾನಿ ಕಾರಯನ್ ಕ್ರಿಯಾಸು ಪ್ರವರ್ತಯನ್'॥ -ಗಿ. ಭಾ. ೫-೧೩-೩

೨೧೭. **ಜ್ಞಾನಿಯಾದವನಿಗೆ ಯಾವ ಲೌಕಿಕವೈದಿಕವ್ಯವಹಾರವೂ ಇರುವದಿಲ್ಲ; ಏಕೆಂದರೆ ವ್ಯವಹಾರವೆಲ್ಲವೂ ಅವಿದ್ಯಾಕಾರ್ಯವಾಗಿರುತ್ತದೆ.** ಅವನು ನಿತ್ಯತೃಪ್ತನಾಗಿರುವದರಿಂದ ಜಿತೇಂದ್ರಿಯನಾಗಿ ಮಣ್ಣು ಹೆಂಟೆ, ಕಲ್ಲು, ಚಿನ್ನ - ಎಲ್ಲವುಗಳಲ್ಲಿಯೂ ಸಮಬುದ್ಧಿಯಿಂದಿರುವನು ; ಅದ್ವೇಷ, ಮೈತ್ರಿ, ಕರುಣೆ - ಇವುಗಳಿಂದ ಕೂಡಿರುವನು. ಅವನಲ್ಲಿ ಯಾವ ಕಳವಳವಾಗಲಿ ಅಂಜಿಕೆಯಾಗಲಿ ಇರುವದಿಲ್ಲ. ಅವನು ಗುಣತ್ರಯವನ್ನು ಮೀರಿರುವದರಿಂದ ಗುಣಗಳ ವ್ಯಾಪಾರವು ಅವನ ಮೇಲೆ ಪರಿಣಾಮವನ್ನುಂಟುಮಾಡುವದಿಲ್ಲ. ಅವನ ಮನಸ್ಸು ಪರಮಾತ್ಮಸ್ವರೂಪದಲ್ಲಿಯೇ ನೆಲೆನಿಂತಿರುತ್ತದೆ. **ಸ್ಥಿತಪ್ರಜ್ಞ, ಯುಕ್ತ, ಭಕ್ತ, ತ್ರಿಗುಣಾತೀತ- ಎಂಬ ಹೆಸರಿನಿಂದ ಗೀತೆಯಲ್ಲಿ ಜ್ಞಾನಿಯನ್ನೇ ವರ್ಣಿಸಿ ಲಕ್ಷಣಗಳನ್ನು ತಿಳಿಸುತ್ತದೆ. ಆ ಲಕ್ಷಣಗಳೇ ಮುಮುಕ್ಷುಗಳಾದವರಿಗೆ ಸಾಧನವಾಗಿರುತ್ತವೆ.**

(೧) ಯೋಽಯಂ ಲೌಕಿಕೋ ವೈದಿಕಶ್ಚ ವ್ಯವಹಾರಃ ಸ ಉತ್ಪನ್ನಾತ್ಮವಿವೇಕಜ್ಞಾನಸ್ಯ ಸ್ಥಿತಪ್ರಜ್ಞಸ್ಯ ಅವಿದ್ಯಾಕಾರ್ಯತ್ವಾತ್ ಅವಿದ್ಯಾನಿವೃತ್ತೌ ನಿವರ್ತತೇ । ಅವಿದ್ಯಾಯಾಶ್ಚ ವಿದ್ಯಾವಿರೋಧಾತ್ ನಿವೃತ್ತಿಃ ॥ - ಗೀ. ಭಾ. ೨-೬೯-೧೩೨.

(೨) ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಞ್ಚನಃ ॥ -ಗೀ. ಭಾ. ೬-೮.

(೩) ತಸ್ಮಾತ್ ಅಕ್ಷರೋಪಾಸಕಾನಾಂ ಸಮ್ಯಗ್ದರ್ಶನನಿಷ್ಠಾನಾಂ ಸಂನ್ಯಾಸಿನಾಂ ತ್ಯಕ್ತಸರ್ವೈಷಣಾನಾಮ್ 'ಅದ್ವೇಷ್ಟಾ ಸರ್ವಭೂತಾನಾಮ್ ' ಇತ್ಯಾದಿಧರ್ಮಪೂಗಂ ಸಾಕ್ಷಾದಮೃತತ್ವಕಾರಣಂ ವಕ್ಷ್ಯಾಮಿ ಇತಿ ಪ್ರವರ್ತತೇ ॥ - ಗೀ. ಭಾ. ೧೨-೧೩-೭೪೩.

(೪) ಯೋಽಹಿ ಆದಿತ ಏವ ಸಂನ್ಯಸ್ಯ ಕರ್ಮಾಣಿ ಜ್ಞಾನಯೋಗನಿಷ್ಠಾಯಾಂ ಪ್ರವೃತ್ತಃ, ಯಶ್ಚ ಕರ್ಮಯೋಗೇನ, ತಯೋಃ ಪ್ರಜಹಾತೀತ್ಯಾರಭ್ಯ ಆ ಅಧ್ಯಾಯಪರಿಸಮಾಪ್ತಿಪರ್ಯನ್ತಂ ಸ್ಥಿತಪ್ರಜ್ಞ ಲಕ್ಷಣಂ ಸಾಧನಂ ಚ ಉಪದಿಶ್ಯತೇ । ಸರ್ವತ್ರೈವ ಹಿ ಅಧ್ಯಾತ್ಮಶಾಸ್ತ್ರೇ ಕೃತಾರ್ಥಲಕ್ಷಣಾನಿ ಯಾನಿ, ತಾನ್ಯೇವ ಸಾಧನಾನಿ ಉಪದಿಶ್ಯನ್ತೇ । ಯತ್ನಸಾಧ್ಯತ್ವಾತ್ ॥ - ಗೀ. ಭಾ. ೨-೫೪-೧೦೮.

(೫) ತಸ್ಮಾತ್ ಇದಂ ಧರ್ಮ್ಯಾಮೃತಂ ಮುಮುಕ್ಷುಣಾ ಯತ್ನತೋಽನುಷ್ಠೇಯಂ ವಿಷ್ಣೋಃ ಪ್ರಿಯಂ ಪರಂ ಧಾಮ ಜಿಗಮಿಷುಣಾ ಇತಿ ವಾಕ್ಯಾರ್ಥಃ । - ಗೀ. ಭಾ. ೧೨-೨೦-೭೫೨.

(೬) 'ಉದಾಸೀನವತ್' ಇತ್ಯಾದಿ 'ಗುಣಾತೀತಃ ಸ ಉಚ್ಯತೇ' ಇತ್ಯೇತದನ್ತಮುಕ್ತಂ ಯಾವತ್ ಯತ್ನಸಾಧ್ಯಂ ತಾವತ್ ಸಂನ್ಯಾಸಿನಃ ಅನುಷ್ಠೇಯಂ ಗುಣಾತೀತತ್ವಸಾಧನಂ ಮುಮುಕ್ಷೋಃ । ಸ್ಥಿರೀಭೂತಂ ತು ಸ್ವಸಂವೇದ್ಯಂ ಸತ್ ಗುಣಾತೀತಸ್ಯ ಯತೇರ್ಲಕ್ಷಣಂ ಭವತೀತಿ॥ -ಗೀ. ಭಾ. ೧೪-೨೬-೮೮೭.

೨೫೮. ಜ್ಞಾನಿಯು ಸರ್ವಥಾ ಕೃತಕೃತ್ಯನಾದರೆ ಅವನು ಇನ್ನು ಮುಂದೆ ಮಾಡತಕ್ಕದ್ದು ಏನೂ ಇರುವದಿಲ್ಲವಾದ್ದರಿಂದ ಅವನ ಶರೀರವು ಕೂಡಲೇ ಬಿದ್ದುಹೋಗಬೇಕು; ಆಗ ಗುರುಸಂಪ್ರದಾಯವೇ ಇಲ್ಲದಂತೆ ಆಗುವದು. ಆದ್ದರಿಂದ ಗುರುಸಂಪ್ರದಾಯವು ಉಳಿಯುವದಕ್ಕಾಗಿ ಜ್ಞಾನಿಗೂ ಮಾಡತಕ್ಕದ್ದು ಉಳಿದಿದೆ ಎನ್ನಬೇಕಲ್ಲವೆ ? ಗೃಹಸ್ಥಾಶ್ರಮಿಗಳು ಶಿಷ್ಯರಿಗೆ ತತ್ತ್ವವನ್ನು ಉಪದೇಶಿಸಿದರೆಂದು ಶ್ರುತಿಸ್ಮೃತಿಗಳಲ್ಲಿರುವದರಿಂದಲೂ ಜ್ಞಾನಿಗಳಿಗೆ ಮಾಡತಕ್ಕ ಕರ್ಮವು ಉಳಿದಿದೆ ಎಂದಾಗುತ್ತದೆ. ಇದೂ ಅಲ್ಲದೆ ಜ್ಞಾನಿಗಳಿಗೂ ಕೆಲವರಿಗೆ ಪುನರುತ್ಪತ್ತಿಯುಂಟಾಯಿತೆಂದು ಶ್ರುತಿಸ್ಮೃತಿಪುರಾಣಗಳಲ್ಲಿ ಹೇಳಿರುವದರಿಂದ ಜ್ಞಾನಮಾತ್ರದಿಂದಲೇ ಪರಮಪುರುಷಾರ್ಥಪ್ರಾಪ್ತಿಯಾಗಲಾರದೆಂದು ಹೇಳಬೇಕಾಗುತ್ತದೆಯಲ್ಲ! - ಎಂದು ಕೆಲವರು ಶಂಕಿಸುವದುಂಟು.

ಆದರೆ ಈ ಶಂಕೆಗೆ ಆಧಾರವಿಲ್ಲ. ಏಕೆಂದರೆ **ಶರೀರವು ಇರುವದೂ ಬಿದ್ದುಹೋಗುವದೂ ಮಿಥ್ಯಾಜ್ಞಾನದೃಷ್ಟಿಯಿಂದ. ಜ್ಞಾನಿಗೆ ಮಿಥ್ಯಾಜ್ಞಾನವು. ಬಾಧಿತವಾಗಿದ್ದರೂ ದ್ವಿಚಂದ್ರಾದಿಜ್ಞಾನದಂತೆ ಅನುವೃತ್ತವಾಗಬಹುದೆಂದು ಆಗಲೇ (೨೧೨) ತಿಳಿಸಿರುತ್ತೇವೆ. ಆದ್ದರಿಂದ ಬಾಧಿತಾನುವೃತ್ತಿಯಿಂದ ಗುರುಶಿಷ್ಯ ವ್ಯವಹಾರವು**

**ನಡೆದುಕೊಂಡು ಬರಬಹುದಾಗಿದೆ. ಜ್ಞಾನಿಗೆ ಕ್ರಿಯಾಕಾರಕಫಲಬುದ್ಧಿಯು** ಹೋಗಿರುವದರಿಂದ ಗೃಹಸ್ಥಾಶ್ರಮಿಗಳೂ ಗುರುಗಳಾಗಿದ್ದರೆಂದು ತಿಳಿಸುವ ಶ್ರುತಿಗಳು ಜ್ಞಾನಕರ್ಮಗಳಿಗೆ ಸಮುಚ್ಚಯವಿಲ್ಲ ಎಂಬ ನ್ಯಾಯವನ್ನು ಬಾಧಿಸಲಾರವು. ಜ್ಞಾನಿಗಳು ಕರ್ಮಪ್ರಯೋಜನವನ್ನು ಬಯಸದೆ ಏಷಣಾತ್ಯಾಗವನ್ನೇ ಮಾಡಿದರೆಂಬ ಶ್ರುತಿಗಳೂ ಇರುವದರಿಂದ ಜ್ಞಾನಕ್ಕೆ ಕರ್ಮದ ಬಯಕೆಯಿಲ್ಲವೆಂದೇ ತಿಳಿಯಬೇಕಾಗಿದೆ. **ಉಪಾಸನಾರೂಪವಾದ ಜ್ಞಾನವು ಕ್ರಿಯೆಯೇ ಆಗಿರುವದರಿಂದ ಅದಕ್ಕೆ ಕರ್ಮದ ಸಹಾಯವು ಇರಲೂಬಹುದು. ಜ್ಞಾನಿಗಳು ಗೃಹಸ್ಥರಾಗಿರುವಾಗಲೂ ಅವರ ಕರ್ಮವು** ಅಕರ್ಮವಾಗಿರುವದರಿಂದ ಪರಮಾರ್ಥದೃಷ್ಟಿಯಿಂದ ಜ್ಞಾನದೊಡನೆ ಕರ್ಮವು ಇರುವದಿಲ್ಲ ಎಂದು (೨೧೪) ತಿಳಿಸಿರುತ್ತೇವೆ. ಇನ್ನು ಜ್ಞಾನಿಗಳಿಗೂ ಪುನರಾವೃತ್ತಿಯನ್ನು ಹೇಳುವ ಶ್ರುತಿಗಳ ಗತಿ ಏನೆಂದರೆ ಅವರೆಲ್ಲರೂ **ಆಧಿಕಾರಿಕಪುರುಷರು.** ವೇದಪ್ರವರ್ತನವೇ ಮುಂತಾದ ಅಧಿಕಾರದಲ್ಲಿ ನಿಯುಕ್ತರಾಗಿ ಅವರು ತಮ್ಮ ಪ್ರಾರಬ್ಧಕರ್ಮವು ಕ್ಷಯವಾಗುವವರೆಗೂ ತಮ್ಮ ತಮ್ಮ ಅಧಿಕಾರದಲ್ಲಿರುತ್ತಾರೆ ; ಅನೇಕ ದೇಹಗಳನ್ನು ಅವನೇ ನಾನೆಂಬ ಸ್ಮೃತಿಯಿಂದ ಕೂಡಿಕೊಂಡೇ ಪಡೆಯುತ್ತಾರೆ. ಅವರಿಗೆ ಯಾರಿಗೂ ಒಂದು ಕರ್ಮವು ಮುಗಿದು ಮತ್ತೊಂದು ಕರ್ಮವು ಫಲವನ್ನು ಕೊಡುವದಕ್ಕೆ ಆರಂಭಿಸುವದಿಲ್ಲ. ಒಂದೇ ಕರ್ಮವೇ ಅನೇಕದೇಹಗಳನ್ನು ಕೊಡುತ್ತದೆ. ಆ ದೇಹವೂ ಕರ್ಮವೂ ಜ್ಞಾನದಿಂದ ಬಾಧಿತವಾಗಿ ಅಸತ್ಯವೆಂಬ ಬುದ್ಧಿಯೇ ಅವರಿಗಿರುತ್ತದೆ. ಆದ್ದರಿಂದ ಜ್ಞಾನವಾದರೂ ಕೃತಕೃತ್ಯನಾಗಲಾರನೆಂಬ ಶಂಕೆಗೆ ಅವಕಾಶವೇ ಇಲ್ಲ.

(೧) ಅಶರೀರಸ್ವಭಾವಸ್ಯ ಆತ್ಮನಃ ತದೇವಾಹಂ ಶರೀರಂ ಶರೀರಮೇವ ಚ ಅಹಮ್ ಇತ್ಯವಿವೇಕಾತ್ಮಭಾವಃ ನಶರೀರತ್ವಮ್ ॥ - ಛಾಂ. ಭಾ. ೮-೧೨-೧-೬೬೭.

(೨) ಯತ್ತು ಗೃಹಸ್ಥೇಷು ಬ್ರಹ್ಮವಿದ್ಯಾಸಂಪ್ರದಾಯಕರ್ತೃತ್ವಾದಿಲಿಙ್ಗಂ, ನ ತತ್ ಸ್ಥಿತಂ ನ್ಯಾಯಂ ಬಾಧಿತುಮ್ ಉತ್ಸಹತೇ । ನ ಹಿ ವಿಧಿಶತೇನಾಪಿ ತಮಃಪ್ರಕಾಶಯೋಃ ಏಕತ್ರ ಸದ್ಭಾವಃ ಶಕ್ಯತೇ ಕರ್ತುಮ್। ಕಿಮುತ ಲಿಙ್ಗೈಃ ಕೇವಲೈಃ ಇತಿ ॥ -ಮುಂ. ಭಾ. ಅವ. ೫.

(೩) ಯತ್ತೂಕ್ತಮ್ ಆಚಾರದರ್ಶನಾತ್ ಕರ್ಮಶೇಷೋ ವಿದ್ಯಾ ಇತಿ । ಅತ್ರ ಬ್ರೂಮಃ । ತುಲ್ಯಮಾಚಾರದರ್ಶನಮ್ ಅಕರ್ಮಶೇಷತ್ವೇಽಪಿ ವಿದ್ಯಾಯಾಃ । ತಥಾ ಹಿ ಶ್ರುತಿರ್ಭವತಿ ''ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುರ್ಋಷಯಃ ಕಾವಷೇಯಾಃ ಕಿಮರ್ಥಾ ವಯಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ । ಏತದ್ಧಸ್ಮ ವೈ ತತ್ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ ಜುಹವಾಂಚಕ್ರಿರೇ'', ''ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ '' (ಬೃ. ೩-೫-೧) ಇತ್ಯೇವಂಜಾತೀಯಕಾ । ಯಾಜ್ಞವಲ್ಕ್ಯಾದೀನಾಮಪಿ ಬ್ರಹ್ಮವಿದಾಮ್ ಅಕರ್ಮನಿಷ್ಠತ್ವಂ ದೃಶ್ಯತೇ

"ಏತಾವದರೇ ಖಲ್ವಮೃತತ್ವಮಿತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ" (ಬೃ. ೪-೫-೧೫) ಇತ್ಯಾದಿಶ್ರುತಿಭ್ಯಃ ॥ -ಸೂ. ಭಾ. ೩-೪-೯-೪೪೬.

(೪) ಸಂಭವತಿ ಚ ಸೋಪಾಧಿಕಾಯಾಂ ಬ್ರಹ್ಮವಿದ್ಯಾಯಾಂ ಕರ್ಮಸಾಹಿತ್ಯದರ್ಶನಮ್ ॥

- ಸೂ. ಭಾ. ೩-೪-೯-೪೪೬.

(೫) ಯಥಾ ಚ ವರ್ತಮಾನಾ ಬ್ರಹ್ಮವಿದಃ ಆರಬ್ಧಭೋಗಕ್ಷಯೇ ಕೈವಲ್ಯಮ್ ಅನುಭವನ್ತಿ । 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ' (ಛಾಂ. ೬-೧೪-೨) ಇತಿ ಶ್ರುತೇಃ । ಏವಮಪಾನ್ತರತಮಃಪ್ರಭೃತಯೋಽಪಿ ಈಶ್ವರಾಃ ಪರಮೇಶ್ವರೇಣ ತೇಷು ತೇಷು ಅಧಿಕಾರೇಷು ನಿಯುಕ್ತಾಃ ಸನ್ತಃ ಸತ್ಯಪಿ ಸಮ್ಯಗ್ದರ್ಶನೇ, ಕೈವಲ್ಯಹೇತೌ ಅಕ್ಷೀಣಕರ್ಮಾಣೋ ಯಾವದಧಿಕಾರಮ್ ಅವತಿಷ್ಠನ್ತೇ, ತದವಸಾನೇ ಚ ಅಪವೃಜ್ಯನ್ತೇ ಇತ್ಯವಿರುದ್ಧಮ್ । ಸಕೃತ್ಪ್ರವೃತ್ತಮೇವ ಹಿ ತೇ ಫಲದಾನಾಯ ಕರ್ಮಾಶಯಮ್ ಅತಿವಾಹಯನ್ತಃ ಸ್ವಾತನ್ತ್ರ್ಯೇಣೈವ ಗೃಹಾದಿವ ಗೃಹಾನ್ತರಮ್ ಅನ್ಯಮನ್ಯಂ ದೇಹಂ ಸಂಚರನ್ತಃ ಸ್ವಾಧಿಕಾರನಿರ್ವರ್ತನಾಯ ಅಪರಿಮುಷಿತಸ್ಮೃತಯ ಏವ ದೇಹೇನ್ದ್ರಿಯಪ್ರಕೃತಿವಶಿತ್ವಾತ್ ನಿರ್ಮಾಯ ದೇಹಾನ್ ಯುಗಪತ್ ಕ್ರಮೇಣ ವಾ ಅಧಿತಿಷ್ಠನ್ತಿ ॥ -ಸೂ. ಭಾ. ೩-೩-೩೨-೩೮೦.

(೬) ಅತಃ ಬ್ರಹ್ಮವಿದೋ ಜೀವನಾದಿಪ್ರಯೋಜನಾಭಾವೇಽಪಿ ಪ್ರವೃತ್ತಫಲಾನಾಂ ಕರ್ಮಣಾಮ್ ಅವಶ್ಯಮೇವ ಫಲೋಪಭೋಗಃ ಸ್ಯಾತ್ ಇತಿ ಮುಕ್ತೇಷುವತ್ ತಸ್ಯ ತಾವದೇವ ಚಿರಮಿತಿ ಯುಕ್ತಮೇವೋಕ್ತಮಿತಿ ಯಥೋಕ್ತದೋಷಚೋದನಾನುಪಪತ್ತಿಃ । ಜ್ಞಾನೋತ್ಪತ್ತೇರೂರ್ಧ್ವಂ ಚ ಬ್ರಹ್ಮವಿದಃ ಕರ್ಮಾಭಾವಮವೋಚಾಮ 'ಬ್ರಹ್ಮಸಂಸ್ಥೋಽಮೃತತ್ವಮೇತಿ' ಇತ್ಯತ್ರ । ತಚ್ಚ ಸ್ಮರ್ತುಮರ್ಹಸಿ॥ - ಛಾಂ. ಭಾ. ೬-೧೪-೨-೫೨೯.

# ೨೮. ಉಪಸಂಹಾರ

ನಮ್ಮ ದೇಶದಲ್ಲಿಯೂ ಪಾಶ್ಚಾತ್ಯದೇಶದಲ್ಲಿಯೂ ತತ್ತ್ವವಿಚಾರದ ಬಗ್ಗೆ ಬರೆದ ಹಲವು ಗ್ರಂಥಗಳು ಪ್ರಕಟವಾಗಿರುತ್ತವೆ. ಶ್ರೀ ಶಂಕರಭಗವತ್ಪಾದರವರ ಹಿಂದೆ ಅನೇಕ ಸಿದ್ಧಾಂತಗಳನ್ನು ಕುಶಲಮತಿಗಳಾದ ಆಚಾರ್ಯರುಗಳೂ ತತ್ತ್ವಶಾಸ್ತ್ರಜ್ಞರೂ ಜನರ ಮುಂದೆ ಇಟ್ಟಿದ್ದರು. ಅವುಗಳಲ್ಲಿ ಕೆಲವು ಈಗ ಆಗಲೆ ಕಣ್ಮರೆಯಾಗಿವೆ ; ಮಿಕ್ಕ ಕೆಲವು ವಿಚಿತ್ರವಸ್ತುಪ್ರದರ್ಶನ ಶಾಲೆಗಳಲ್ಲಿ ಸಂಗ್ರಹಿಸಿಟ್ಟಿರುವ ಪ್ರಾಚೀನಾವಶೇಷಗಳಂತೆ ಜನರ ಕುತೂಹಲ ನಿವೃತ್ತಿಗೆ ಮಾತ್ರ ಸಾಧನವಾಗಿರುತ್ತವೆ.

ಆದರೆ ಶ್ರೀಶಂಕರಾಚಾರ್ಯರವರು ಜಿಜ್ಞಾಸುಗಳ ಮುಂದಿಟ್ಟಿರುವ ಸಿದ್ಧಾಂತವು ಅವರು ಸಾವಿರಾರು ವರ್ಷಗಳ ಹಿಂದೆ ಪ್ರಸ್ಥಾನತ್ರಯದ ಆಧಾರದಿಂದ ಹೊರಗೆಡವಿರುವದಾದರೂ ಇಂದಿಗೂ ಅಚ್ಚಳಿಯದೆ ಇದೆ. ಇದರ ಉಪದೇಶವು

ಎಲ್ಲಾ ಕಾಲಕ್ಕೂ ಎಲ್ಲಾ ದೇಶಗಳಿಗೂ ಅನ್ವಯಿಸುವಂತೆ ಇರುತ್ತದೆ. ಇದಕ್ಕೆ ಕಾರಣವೇನೆಂದರೆ, **ಈ ಆಚಾರ್ಯರು ಪ್ರತಿಪಾದಿಸುವ ವೇದಾಂತದ ವಿಷಯವು ಕಾಲದೇಶಗಳ ಎಲ್ಲೆಕಟ್ಟನ್ನು ಮೀರಿರುವ, ಇಡಿಯ ಜಗತ್ತಿಗೇ ತಿರುಳಾಗಿರುವ, ಪರಬ್ರಹ್ಮವಾಗಿರುತ್ತದೆ. ಆ ಬ್ರಹ್ಮವು ಎಲ್ಲಾ ಕಾಲದ, ಎಲ್ಲಾ ದೇಶದ, ಎಲ್ಲಾ ಮನುಷ್ಯರಿಗೂ ಮತ್ತು ಮನುಷ್ಯೇತರಜೀವರಿಗೂ ಆತ್ಮನಾಗಿರುತ್ತದೆ. ಈ ಪರಮಾರ್ಥತತ್ತ್ವವನ್ನು ದೇಶಕಾಲಗಳಿಂದ ಮಾರ್ಪಡದ ಸಾರ್ವತ್ರಿಕಾನುಭವದ ಆಧಾರದಿಂದಲೇ ತಿಳಿಯ ಹೇಳಿಕೊಟ್ಟಿರುವದು ಆಚಾರ್ಯರ ಉಪದೇಶಕ್ರಮದ ಒಂದು ಅಸಾಧಾರಣ ಧರ್ಮವಾಗಿರುತ್ತದೆ.**

ಉಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರ- ಇವು ಭಾರತದೇಶದಲ್ಲಿ ಮೈದೋರಿರುವ ಗ್ರಂಥಗಳಾಗಿರುತ್ತವೆಯಾದರೂ ಅವು ಉಪದೇಶಿಸುವ ಪರಮಾರ್ಥತತ್ತ್ವವು ದೇಶಕಾಲಗಳ ಕಟ್ಟಿಲ್ಲದ್ದಾಗಿರುವದರಿಂದ ಅದರ ತಿಳಿವಳಿಕೆಗೆ ಯಾವ ಶಾಸ್ತ್ರದ ಹಂಗೂ ಇರುವದಿಲ್ಲ ಇದು ಸದ್ಗುರುವಿನ ವಿಶಿಷ್ಟೋಪದೇಶಕ್ರಮವಾದ ಆಗಮದಿಂದಲೇ ತಿಳಿಯಬರತಕ್ಕದ್ದಾದರೂ ಇದನ್ನು ಯಾವನೊಬ್ಬ ಆಚಾರ್ಯನೂ ತನ್ನ ಸ್ವತ್ತೆಂದು ರಹಸ್ಯವಾಗಿಟ್ಟುಕೊಳ್ಳುವದಕ್ಕೆ ಬರುವಂತಿಲ್ಲ. ವೇದಾಂತವು ವರ್ಣಾಶ್ರಮಧರ್ಮವನ್ನು ಅನುಷ್ಠಾನಮಾಡುವದರಿಂದಾಗುವ ಚಿತ್ತ ಶುದ್ಧಿಯ ಪ್ರಯೋಜನವನ್ನು ಕೊಂಡಾಡುವದಾದರೂ ಯಾವದೊಂದು ಜಾತಿ, ವರ್ಣ, ಆಶ್ರಮ, ಕಾಲ, ವರ್ಣ, ಲಿಂಗ, ವಯಸ್ಸು, ಧನ - ಮುಂತಾದ ವಿಶಿಷ್ಟೋಪಾಧಿಯಿದ್ದರೆ ಮಾತ್ರ ಬ್ರಹ್ಮಾತ್ಮತತ್ತ್ವದ ಅನುಭವವಾದೀತೆಂಬ ನಿರ್ಬಂಧವೇನೂ ಇರುವದಿಲ್ಲ.

ಈ ಸಿದ್ಧಾಂತದಲ್ಲಿ ಜನ್ಮಾಂತರ, ಲೋಕಾಂತರ - ಮುಂತಾದ ಸಾಂಪ್ರದಾಯಿಕ ಫಲಗಳನ್ನೇನೋ ಅಲ್ಲಗಳೆದಿಲ್ಲ. ಆದರೆ ಇದು ತಿಳಿಸಿಕೊಡುವ ಜ್ಞಾನವೂ ಅದರಿಂದಾಗುವ ಫಲವೂ ಈ ಜನ್ಮದಲ್ಲಿಯೇ ಆಗತಕ್ಕದ್ದಾಗಿರುವದರಿಂದ ಯಾವದೊಂದು ಮತದ ನಂಬಿಕೆಯನ್ನೂ ಇದು ಸಡಿಲಿಸುವಹಾಗಿಲ್ಲ. ಜ್ಞಾನಸಮಕಾಲದಲ್ಲಿಯೇ ಕಾಮಕರ್ಮಗಳ ಬಂಧವು ಬಿಚ್ಚಿಕೊಳ್ಳುವದು, ಮರ್ತ್ಯನು ಅಮೃತನಾಗುವನು - ಎಂಬ **ಸದ್ಯೋಮುಕ್ತಿಯ** ಮಂಗಲಕರವಾದ ಸಂದೇಶವು, ಈ ವೇದಾಂತಕ್ಕೆ ಮೀಸಲಾಗಿರುತ್ತದೆ.

ಮನುಷ್ಯನು ವೇದಾಂತಜ್ಞಾನದಿಂದ ಬದುಕಿರುವ ಕಾಲದಲ್ಲಿಯೇ ಸಂಸಾರದ ಎಲ್ಲಾ ದುಃಖಗಳಿಂದ ಬಿಡುಗಡೆಹೊಂದುವನೆಂಬ **ಜೀವನ್ಮುಕ್ತಿಯ** ಉಪದೇಶವು ಬಗೆಬಗೆಯ ಕ್ಲೇಶಗಳಿಂದ ವ್ಯಥೆಪಡುತ್ತಿರುವ ಈಗಿನ ಮಾನವಸಮಾಜಕ್ಕೆ

ಪರಮೋತ್ಕೃಷ್ಟವಾದ ಆಶಾವಾದವನ್ನು ಒದಗಿಸಿಕೊಡುತ್ತದೆ. ಜೀವನ್ಮುಕ್ತನಾದವನು ಎಲ್ಲರ ಆತ್ಮನೇ ನನ್ನ ಆತ್ಮನು ಎಂಬ ಶಿವತಮವಾದ ನಿಶ್ಚಯವನ್ನು ಪಡೆದಿರುವನಾದ್ದರಿಂದ, ಅವನು ಎಲ್ಲಾ ಮಾನವರಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಸಮಾನವಾದ ಪ್ರೇಮ ವುಳ್ಳವನಾಗಿರುತ್ತಾನೆ. ಈ ಸ್ಥಿತಿಯನ್ನು ಪಡೆದವನನ್ನು ಸ್ಥಿತಪ್ರಜ್ಞ, ಯುಕ್ತ, ತ್ರಿಗುಣಾತೀತ, ಪರಭಕ್ತ, ಅತಿವರ್ಣಾಶ್ರಮಿ, ಬ್ರಾಹ್ಮಣ - ಮುಂತಾದ ಹೆಸರುಗಳಿಂದ ಶಾಸ್ತ್ರದಲ್ಲಿ ಕರೆದಿರುತ್ತದೆ. ಶಾಸ್ತ್ರದಲ್ಲಿ ವರ್ಣಿಸಿರುವ ಜೀವನ್ಮುಕ್ತನ ಲಕ್ಷಣಗಳನ್ನು ಮನದಂದರೆ, ಅಂಥ ಜನರು ಎಷ್ಟು ಹೆಚ್ಚಿನ ಸಂಖ್ಯೆಯಲ್ಲಿದ್ದರೆ ಅಷ್ಟರಮಟ್ಟಿಗೆ ನಮ್ಮ ಈಗಿನ ಜನಜೀವನದ ಸಮಸ್ಯೆಗಳೆಲ್ಲ ಬಿಚ್ಚಿಕೊಳ್ಳುವವೆಂದೂ ಅಷ್ಟರಮಟ್ಟಿಗೆ ಸಮಾಜಕ್ಕೆ ಶಾಂತಿಸುಖಗಳು ಕಟ್ಟಿಟ್ಟಬುತ್ತಿಯಾಗುವವೆಂದೂ ಧೈರ್ಯದಿಂದ ಹೇಳ ಬಹುದಾಗುತ್ತದೆ.

ಸದಾಚಾರ, ಶಮದಮಾದಿಗಳು, ಉತ್ಕಟವಾದ ತತ್ತ್ವಜಿಜ್ಞಾಸೆ - ಇವುಗಳನ್ನು ಪಡೆದಿರುವವರೆಲ್ಲರೂ ಈ ವೇದಾಂತಸಿದ್ಧಾಂತದ ಜ್ಞಾನವನ್ನು ಸಂಪಾದಿಸಿಕೊಳ್ಳು ವದು ಸಾಧ್ಯವಾಗುತ್ತದೆ. ಆದ್ದರಿಂದ ಈಗಿನ ಕಾಲಕ್ಕೆ ತಕ್ಕಂತೆ ಭಾಷಾಸರಣಿಯನ್ನೂ ವಿಚಾರಸರಣಿಯನ್ನೂ ಹೊಂದಿಸಿಕೊಂಡು ಈ ಜ್ಞಾನದ ಪ್ರಸಾರವನ್ನು ಮಾಡಬಲ್ಲ ವ್ಯವಹಾರದಕ್ಷರೂ ಬ್ರಹ್ಮನಿಷ್ಠರೂ ಆದ ಆಚಾರ್ಯರುಗಳ ಅವಶ್ಯಕತೆಯು ಈಗ್ಗೆ ಬಹಳವಾಗಿರುತ್ತದೆ. ಸರ್ವಾತ್ಮನೂ ಕರುಣಾನಿಧಿಯೂ ಆಗಿರುವ ಶ್ರೀಮನ್ನಾ-ರಾಯಣನು ಅಂಥ ಮಹನೀಯರನ್ನು ಒದಗಿಸಿಕೊಟ್ಟು ನಮ್ಮೆಲ್ಲರನ್ನೂ ಅನುಗ್ರಹಿಸಲಿ!

**ಓಂ ತತ್ಸತ್**